# ಸ್ಥಳೀಯ ಸಾಹಿತ್ಯ - ಸಂಸ್ಕೃತಿ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು

**ಪಿಎಚ್.ಡಿ ಪದವಿಗಾಗಿ ತುಮಕೂರು ವಿಶ್ವವಿದ್ಯಾನಿಲಯದ**

**ಡಾ.ಡಿ.ವಿ.ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ**


ಸಂಶೋಧನೆ

ಎಸ್. ಗಂಗಾಂಬಿಕೆ

ನೋಂದಣಿ ಸಂಖ್ಯೆ

15 ಕೆಎ 006

ಮಾರ್ಗದರ್ಶನ

ಡಾ. ಡಿ. ವಿ. ಪರಮಶಿವಮೂರ್ತಿ

ಪ್ರಾಧ್ಯಾಪಕರು






ಡಾ.ಡಿ.ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ ಮತ್ತು ಸಂಶೋಧನಾ ಕೇಂದ್ರ

ಕಲಾನಿಕಾಯ

ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು


2020

**ಡಾ. ಡಿ. ವಿ. ಪರಮಶಿವಮೂರ್ತಿ**
**ಪ್ರಾಧ್ಯಾಪಕರು**
ಡಾ.ಡಿ.ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ ಮತ್ತು ಸಂಶೋಧನಾ ಕೇಂದ್ರ
ಕಲಾನಿಕಾಯ, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು




# ಮಾರ್ಗದರ್ಶಕರ ದೃಢೀಕರಣ ಪತ್ರ

**ಗಂಗಾಂಬಿಕೆ ಎಸ್,** ಇವರು ನನ್ನ ಮಾರ್ಗದರ್ಶನದಲ್ಲಿ **"ಸ್ಥಳೀಯ ಸಾಹಿತ್ಯ – ಸಂಸ್ಕೃತಿ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು"** ಎಂಬ ವಿಷಯವನ್ನು ಕುರಿತು ಸಂಶೋಧನಾ ಮಹಾಪ್ರಬಂಧವನ್ನು ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಡಾ. ಡಿ.ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ ಮತ್ತು ಸಂಶೋಧನ ಕೇಂದ್ರದ ಮೂಲಕ ತುಮಕೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದಾರೆ. ಈ ಮಹಾಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮದ ಮೂಲಕ ರೂಪುಗೊಂಡಿದೆ. ಪ್ರಸ್ತುತ ಮಹಾಪ್ರಬಂಧದ ವಿಷಯವನ್ನು ಹಾಗೂ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶಕ್ಕಾಗಲೀ ಅಥವಾ ಇತರೇ ಪದವಿಗಾಗಲೀ ಇವರು ಬಳಸಿಕೊಂಡಿಲ್ಲ. ಈ ಪ್ರಬಂಧದಲ್ಲಿ ಯಾವುದೇ ರೀತಿಯ ಕೃತಿಚೌರ್ಯ ಇರುವುದಿಲ್ಲ. ಹಾಗೂ ಸದರಿ ಪ್ರಬಂಧವು ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ತುಮಕೂರು

ದಿನಾಂಕ:

**ಪ್ರೊ. ಡಿ. ವಿ. ಪರಮಶಿವಮೂರ್ತಿ**

ಮಾರ್ಗದರ್ಶಕರು

# ಅಭ್ಯರ್ಥಿಯ ಪ್ರಮಾಣ ಪತ್ರ

**ಗಂಗಾಂಬಿಕೆ ಎಸ್** ಆದ ನಾನು ಪ್ರೊ. **ಡಿ. ವಿ. ಪರಮಶಿವಮೂರ್ತಿ,** ಪ್ರಾಧ್ಯಾಪಕರು, ಡಾ. ಡಿ. ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ ಮತ್ತು ಸಂಶೋಧನ ಕೇಂದ್ರ, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು ಇವರ ಮಾರ್ಗದರ್ಶನದಲ್ಲಿ **"ಸ್ಥಳೀಯ ಸಾಹಿತ್ಯ – ಸಂಸ್ಕೃತಿ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು"** ಎಂಬ ವಿಷಯವನ್ನು ಕುರಿತು ಸಂಶೋಧನ ಮಹಾಪ್ರಬಂಧವನ್ನು ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಡಾ. ಡಿ.ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ ಮತ್ತು ಸಂಶೋಧನ ಕೇಂದ್ರದ ಮೂಲಕ ತುಮಕೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಸ್ವಂತ ಪರಿಶ್ರಮದಿಂದ ಸಿದ್ಧಪಡಿಸಲಾಗಿದ್ದು ಪ್ರಸ್ತುತ ಮಹಾಪ್ರಬಂಧದ ವಿಷಯವನ್ನು ಹಾಗೂ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶಕ್ಕಾಗಲೀ ಅಥವಾ ಇತರೇ ಪದವಿಗಾಗಲೀ ನಾನು ಬಳಸಿಕೊಂಡಿಲ್ಲ. ಈ ಪ್ರಬಂಧದಲ್ಲಿ ಯಾವುದೇ ರೀತಿಯ ಕೃತಿಚೌರ್ಯ ಇರುವುದಿಲ್ಲ. ಹಾಗೂ ಸದರಿ ಪ್ರಬಂಧವು ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ತುಮಕೂರು — **ಗಂಗಾಂಬಿಕೆ ಎಸ್**

ದಿನಾಂಕ: — ಸಂಶೋಧಕರು

# ಕೃತಜ್ಞತೆಗಳು

ತುಮಕೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗವಾದ ಡಾ. ಡಿ. ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ ಮತ್ತು ಸಂಶೋಧನ ಕೇಂದ್ರದಲ್ಲಿ **ಪ್ರೊ. ಡಿ. ವಿ. ಪರಮಶಿವಮೂರ್ತಿ** ಅವರ ಮಾರ್ಗದರ್ಶನದಲ್ಲಿ ನನ್ನ ನೆಚ್ಚಿನ ವಿಷಯವಾದ **"ಸ್ಥಳೀಯ ಸಾಹಿತ್ಯ – ಸಂಸ್ಕೃತಿ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು"** ಎಂಬ ವಿಷಯವನ್ನು ಧ್ಯಾನಿಸಿ ಪಿಎಚ್.ಡಿ ಗಾಗಿ ಮಹಾಪ್ರಬಂಧವನ್ನು ಸಿದ್ಧಪಡಿಸಿದ ಈ ಸಂದರ್ಭದಲ್ಲಿ ಈ ವೃಕ್ಷ ಬೆಳೆದು ಫಲ ನೀಡುವಂತಾಗಲು ಸಹಕರಿಸಿದವರೆಲ್ಲರನ್ನೂ ತುಂಬು ಹೃದಯದಿಂದ ನೆನೆಯುವುದು ನನ್ನ ಆದ್ಯ ಕರ್ತವ್ಯವಾಗಿದೆ.

ನನ್ನಲ್ಲಿ ಶಿಕ್ಷಣ ಎನ್ನುವ ಬೀಜವನ್ನು ಬಿತ್ತಿ ನಾನು ನಿರಂತರವಾದ ಅಧ್ಯಯನಗಳಿಗೆ ಮೊದಲು ನೀರೆರೆದವರು ನನ್ನ **ಅಜ್ಜಿ ಶ್ರೀಮತಿ ಗೌರಮ್ಮನವರು.** ಅವರಿಲ್ಲದಿದ್ದರೆ ಒಂದು ಸೊಗಸಾದ ಆರಂಭವೇ ಇರುತ್ತಿರಲಿಲ್ಲ. ಅವರನ್ನು ನಾನು ತುಂಬು ಗೌರವದಿಂದ ನೆನೆಯುತ್ತೇನೆ. ಅವರೊಡನೆ ನನ್ನ ತಾಯಿ ತಂದೆಯರಾದ **ಲಲಿತಮ್ಮ, ಶಿವಕುಮಾರ್** ಇವರನ್ನು ಕೂಡ ಕೃತಜ್ಞತೆಯಿಂದ ನೆನೆಯುತ್ತೇನೆ.

ನನ್ನ ಓದಿನ ಹಸಿವಿಗೆ ಆರೋಗ್ಯಕರವಾದ ಪೋಷಣೆಯನ್ನು ನೀಡಿದ್ದು ನನ್ನ ಮಹಾರಾಣಿ ಕಾಲೇಜಿನಲ್ಲಿ ದೊರೆತ ಅಪರೂಪವಾದ ಶಿಕ್ಷಕ ಬಳಗ. ಅವರ ಸಹಕಾರವಿಲ್ಲದಿದ್ದರೆ ನನಗೆ ಓದಿನ ವ್ಯಾಪಕತೆಯ ಪರಿಚಯವಾಗುತ್ತಿರಲಿಲ್ಲ. ಅಲ್ಲಿನ ಎಲ್ಲ ನನ್ನ ಪ್ರಾಧ್ಯಾಪಕರಿಗೆ ಕೃತಜ್ಞತೆಗಳು.

ಇಂದಿಗೆ ನಾನೊಬ್ಬಳು ಸಂಶೋಧಕಿಯಾಗಿ ರೂಪುಗೊಂಡಿದ್ದರೆ ಅದರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಶಾಸನ ತರಗತಿ, ಬಿ.ಎಂ.ಶ್ರೀ ಪ್ರತಿಷ್ಠಾನದ ಹಸ್ತಪ್ರತಿ ಮತ್ತು ಹಳಗನ್ನಡ ತರಗತಿಗಳು ಹಾಗೂ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ವಿದ್ವತ್ ಸಮ್ಮೇಳನಗಳೇ ಕಾರಣ ಎಂದರೆ ಸ್ವಲ್ಪವೂ ಉತ್ಪ್ರೇಕ್ಷೆಯಿಲ್ಲ. ಇಲ್ಲಿನ ನಮ್ಮ ಗುರುಗಳಾದ **ಡಾ. ಕೆ. ವಸಂತಲಕ್ಷ್ಮಿ, ಡಾ. ಪಿವಿಕೆ, ಡಾ. ಕೆ. ಆರ್. ಗಣೇಶ್, ಡಾ. ಎಂ. ಜಿ. ನಾಗರಾಜ್, ಡಾ. ಎಸ್. ಎಲ್. ಶ್ರೀನಿವಾಸ ಮೂರ್ತಿ, ಡಾ. ಗೀತಾಚಾರ್ಯ, ಪ್ರೊ. ಜಿ. ಅಶ್ವತ್ಥನಾರಾಯಣ** ಇವರೆಲ್ಲರಿಗೂ ಎಷ್ಟು ನಮನಗಳನ್ನು ಅರ್ಪಿಸಿದರೂ ಸಾಲದು.

ನಾನು ಯಾವ ವಿಷಯದ ಮೇಲೆ ಸಂಶೋಧನೆಯನ್ನು ಮಾಡಬೇಕೆಂದು ಆರಂಭದಲ್ಲಿ ವಿಷಯಗಳನ್ನು ಹುಡುಕಾಡುತ್ತಿದ್ದಾಗ ಮರುಭೂಮಿಯಲ್ಲಿ ನೀರನ್ನು ತೋರಿಸಿದಂತೆ ಕರ್ನಾಟಕದಲ್ಲಿ ಮಹಾಮಂಡಳೇಶ್ವರರನ್ನು ಕುರಿತು ತಲಸ್ಪರ್ಶಿಯಾಗಿ ಅಧ್ಯಯನವನ್ನು ಕೈಗೊಳ್ಳಲು ನನ್ನನ್ನು ಹುರಿದುಂಬಿಸಿದವರು ಗುರುಗಳಾದ **ಡಾ. ಪಿ. ವಿ. ಕೃಷ್ಣಮೂರ್ತಿಯವರು.** ಅವರ ನಿರಂತರ ಪ್ರೋತ್ಸಾಹದಿಂದ ನಾನು ಒಂದು ನಿರ್ದಿಷ್ಟ ವಿಷಯವನ್ನು ಆರಿಸಿಕೊಂಡು ಸಂಶೋಧನೆಯನ್ನು ಕೈಗೊಳ್ಳಲು ಸಾಧ್ಯವಾಯಿತು. ಅವರ ಪ್ರೋತ್ಸಾಹ ಮತ್ತು ಮಾರ್ಗದರ್ಶನಗಳನ್ನು ಆಜೀವ ಪರ್ಯಂತ ನೆನೆಯುತ್ತೇನೆ.

ಶಾಸನಶಾಸ್ತ್ರ ವಿಭಾಗಕ್ಕೆ ಸೇರಿದ ಪ್ರಸ್ತುತ ವಿಷಯವನ್ನು ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಸಂವರ್ಧನೆಯಲ್ಲಿ ದುಡಿಸಿಕೊಳ್ಳುವಂತೆ ಸಹಕರಿಸಿದವರು ನನ್ನ ಮಹಾಪ್ರಬಂಧದ ಮಾರ್ಗದರ್ಶಕರಾದ **ಡಾ. ಡಿ. ವಿ. ಪರಮಶಿವಮೂರ್ತಿಯವರು.** ಅವರ ಮಾತುಗಳು ಸದಾ ನನ್ನನ್ನು ಬೌದ್ಧಿಕವಾಗಿ ಮಾತ್ರವಲ್ಲದೆ, ಪ್ರತೀ ಹಂತದಲ್ಲೂ ವಿಷಯವನ್ನು ಬಲಪಡಿಸಿದವು. ಕನ್ನಡ ಸಂಸ್ಕೃತಿ ಮತ್ತು ಸಾಹಿತ್ಯದ ವಿಸ್ತರಣೆಯಂತೆ ಈ ನಿಬಂಧವು ರೂಪುಗೊಳ್ಳಲು ಕಾರಣರಾದ ಗುರುಗಳಾದ **ಡಾ. ಡಿ. ವಿ. ಪರಮಶಿವಮೂರ್ತಿ ಸರ್** ಅವರನ್ನು ಗೌರವದಿಂದ ಸ್ಮರಿಸುತ್ತೇನೆ.

ನನ್ನ ಈ ಪ್ರಬಂಧವನ್ನು ತಮ್ಮ ಪ್ರಶ್ನೆಗಳ ಮೂಲಕ ಇನ್ನೂ ಚುರುಕುಗೊಳ್ಳುವಂತೆ ಅಧಿಕೃತಗೊಳಿಸಿದವರು **ಪ್ರೊ. ನಿತ್ಯಾನಂದ ಬಿ. ಶೆಟ್ಟಿ** ಅವರು. ಮತ್ತೆ ಮತ್ತೆ ಅನೇಕ ರೀತಿಯಲ್ಲಿ ವಿಷಯ ವಿಶ್ಲೇಷಣೆಯನ್ನು ಪ್ರಚೋದಿಸಿ ಪ್ರಬಂಧವು ಉತ್ತಮ ರೀತಿಯಲ್ಲಿ ರೂಪುಗೊಳ್ಳಲಿ ಎಂದು ಪ್ರಭಾವಿಸಿದ **ಪ್ರೊ. ನಿತ್ಯಾನಂದ ಬಿ. ಶೆಟ್ಟಿ ಸರ್** ಅವರಿಗೆ ವಿಶೇಷ ಕೃತಜ್ಞತೆಗಳು. ಇವರೊಂದಿಗೆ ವಿಭಾಗದ ಎಲ್ಲಾ ಗುರುಗಳ ಸಹಕಾರವೂ ಸ್ಮರಣೀಯ.

ನನ್ನ ಪತಿ ಗೋವರ್ಧನರವರು ಈ ಸಂಶೋಧನ ಪ್ರಬಂಧವು ರೂಪುಗೊಳ್ಳುವ ಪ್ರತೀಹಂತದಲ್ಲೂ ನನಗೆ ಬೇಕಾಗಿದ್ದ ಪರಾಮರ್ಶನ ಗ್ರಂಥಗಳನ್ನು ಒದಗಿಸಿ ನನ್ನೊಂದಿಗೆ ಚರ್ಚಿಸಿ ಸಹಕರಿಸುತ್ತಿದ್ದ ಪರಿಯನ್ನು ಮರೆಯಲಾಗದು. ನಾಡಿನ ಉತ್ತಮ ಸಂಶೋಧಕರಲ್ಲಿ ಒಬ್ಬರೂ ಆದ ಅವರ ಸಹಕಾರಕ್ಕೆ ಬೆಲೆ ಕಟ್ಟಲಾಗದು. ಅಮ್ಮನ ಓದಿಗೆ ಸಹಕರಿಸಿದ ಪುಟಾಣಿಗಳಾದ **ಚಿರಂಜೀವಿ ಲಿಖಿತ** ಮತ್ತು **ಚಿರಂಜೀವಿ ಸುಕೃತರಿಗೂ** ನನ್ನ ಪ್ರೀತಿಯ ಆಶೀರ್ವಾದಗಳು.

ಈ ಸಂಶೋಧನ ಪ್ರಬಂಧವು ರೂಪುಗೊಳ್ಳಬೇಕಾದರೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ನಮ್ಮ ಅನೇಕ ರೀತಿಯ ಗೊಂದಲಗಳನ್ನು ಪರಿಹರಿಸಿ ಸಮಸ್ಯೆಗಳು ಎದುರಾದಾಗ ಅದನ್ನು ಇಲ್ಲವಾಗಿಸಿ ವಿದ್ಯಾರ್ಥಿಗಳ ಬೆನ್ನೆಲುಬಾಗಿ ಅಧ್ಯಯನವು ಸಾಂಗವಾಗಿ ನಡೆಯುವಂತೆ ನೋಡಿಕೊಂಡವರು ಹಿಂದಿನ ಮತ್ತು ಈಗಿನ **ಕುಲಪತಿಗಳು, ಕುಲಸಚಿವರು, ಪಿಎಚ್.ಡಿ ವಿಭಾಗದ ಎಲ್ಲಾ ಸಿಬ್ಬಂದಿಗಳು.** ಇವರೆಲ್ಲರನ್ನೂ ವಿಶೇಷವಾಗಿ ನೆನಪಿಸಿಕೊಳ್ಳುತ್ತೇನೆ.

**ಗಂಗಾಂಬಿಕೆ ಎಸ್**

## ಪರಿವಿಡಿ

ಪುಟಗಳು

**ಅಧ್ಯಾಯ 1 : ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ಆಕರಗಳು.** **1–5**

1.1 ಪೀಠಿಕೆ

1.2 ಅಧ್ಯಯನದ ಉದ್ದೇಶ

1.3 ಅಧ್ಯಯನದ ಸ್ವರೂಪ

1.4 ಅಧ್ಯಯನದ ವ್ಯಾಪ್ತಿ

1.5 ಅಧ್ಯಯನದ ಆಕರಗಳು.

**ಅಧ್ಯಾಯ 2 : ಅಧ್ಯಯನದ ವೈಧಾನಿಕತೆ ಮತ್ತು ಈವರೆಗಿನ ಅಧ್ಯಯನಗಳ ಸಮೀಕ್ಷೆ** **6–10**

2.1 ಅಧ್ಯಯನದ ವೈಧಾನಿಕತೆ

2.2 ಇದುವರೆಗಿನ ಅಧ್ಯಯನಗಳ ಸಮೀಕ್ಷೆ

**ಅಧ್ಯಾಯ 3 : ಸ್ಥಳೀಯ ಆಡಳಿತದ ಸುಭಗತೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು** **11–57**

3.1 ಸೋಮೆಯ ಮತ್ತು ಅವನ ವಂಶೀಯರು

3.2 ಬೈಚಯ ಮತ್ತು ಅವನ ವಂಶೀಯರು

3.3 ಪೆರುಮಾಳೆದೇವ ಮತ್ತು ಅವನ ವಂಶೀಯರು

3.4 ಗೋವಿದೇವ ಮತ್ತು ಅವನ ವಂಶೀಯರು

3.5 ಚಂದ್ರಮೌಳಿ

3.6 ಮಹಾಪ್ರಚಂಡ ಗಂಗರಾಜ ಮತ್ತು ಅವನ ಮನೆತನದವರು

3.7 ಕಾಮಯ್ಯ ಮತ್ತು ಅವನ ವಂಶೀಯರು

3.8 ಕಬ್ಬಹುನಾಡಾಳ್ವರು

3.9 ಮತ್ತಿತರ ಕಿರುಮಂಡಳೇಶ್ವರರು

**ಅಧ್ಯಾಯ 4 : ಕನ್ನಡ ಭಾಷೆ, ಸಾಹಿತ್ಯ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು** **58–135**

4.1 ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳ ಲಿಪಿವಿನ್ಯಾಸ

4.2 ಹೊಯ್ಸಳ ಮಹಾಮಂಡಳೇಶ್ವರರಿಂದ ಸಂವರ್ಧನೆಗೊಂಡ ಕನ್ನಡ ಭಾಷೆಯ ಸ್ವರೂಪ

4.3 ಹೊಯ್ಸಳ ಮಹಾಮಂಡಳೇಶ್ವರರು ನಿರ್ವಚಿಸಿದ ಸಾಹಿತ್ಯ

4.3.1 : ಹೊಯ್ಸಳ ಮಹಾಮಂಡಳೇಶ್ವರರು ಆಶ್ರಯ ನೀಡಿದ ಕನ್ನಡ ಕವಿಗಳು

4.3.2 : ಹೊಯ್ಸಳ ಮಹಾಂಂಡಳೇಶ್ವರರು ಕಲಿಗಳು–ಕವಿಗಳು

4.3.3 : ಹೊಯ್ಸಳ ಮಹಾಮಂಡಳೇಶ್ವರರ ಶಾಸನ ಕವಿಗಳು ಮತ್ತು ಶಾಸನ ಸಾಹಿತ್ಯ

4.3.4 : ಹೊಯ್ಸಳ ಮಹಾಮಂಡಳೇಶ್ವರರ ಪೋಷಣೆಯಲ್ಲಿ ಶಾಸನ ಸಾಹಿತ್ಯ ಸಂವರ್ಧನೆ

**ಅಧ್ಯಾಯ 5: ಕುಶಲಕಲೆಗಳ ಅಭಿವೃದ್ಧಿ ಮತ್ತು ಸ್ಥಳೀಯ ಆರ್ಥಿಕ ಸಂವರ್ಧನೆ** **136–190**

5.1 ಕೃಷಿಯೇತರ ಭೂಮಿಗಳ ಪರಿವರ್ತನಾ ಪ್ರಕ್ರಿಯೆಗಳು

5.1.1 ಗೇಣಿ ಪದ್ಧತಿ

5.1.2 ನೀರಾವರಿ ಚಟುವಟಿಕೆಗಳಿಂದ ಸ್ಥಳೀಯ ಅಭಿವೃದ್ಧಿ

5.1.3 ಕುಶಲಕರ್ಮಿಗಳಾದ ಒಡ್ಡರಿಗೆ ಪ್ರೋತ್ಸಾಹ

5.2 ತೆರಿಗೆಯ ಮೂಲಕ ಆರ್ಥಿಕ ಸಂವರ್ಧನೆ

5.3 ಉತ್ಪಾದನಾ ಸಂವರ್ಧನೆ

5.3.1 ಊಳಿಗಮಾನ್ಯತೆ
5.3.2 ಭೂಮಾಲೀಕತ್ವ : ಭೂಮಾಲೀಕರು ಮತ್ತು ಕೃಷಿ ಕಾರ್ಮಿಕರು
5.3.2.1 ಮಹಿಳೆಯರಲ್ಲಿ ಭೂ ಒಡೆತನ
5.3.3 ಸಾಮಂತ ಅರಸರ ಪ್ರಾಬಲ್ಯ
5.3.4 ರಾಜಕೀಯ ಪ್ರೇರಿತ ನೂತನ ಸಂಬಂಧಗಳು
5.4 ಭೂದಾನ ಮಾಧ್ಯಮಗಳು
5.5 ನಗರೀಕರಣದ ಮುನ್ನುಡಿ
5.6 ವರ್ತಕರು ಮತ್ತು ವರ್ತಕ ಸಂಘಗಳು
5.7 ಕೈಗಾರಿಕೆ
5.8 ಬ್ಯಾಂಕಿಂಗ್ ವ್ಯವಸ್ಥೆ

**ಅಧ್ಯಾಯ 6 : ಜನಸಮುದಾಯಗಳ ಅಭ್ಯುದಯ ಮತ್ತು ಸ್ಥಳೀಯ ನವಸಮಾಜದ ಮಹಾ ಕನಸುಗಳು 191–272**

6.1 ಸಮಾಜ ರಚನೆಯನ್ನು ರೂಪಿಸಿದ ಲಕ್ಷಣಗಳು
6.1.1 ಅಂತಃಸಂಬಂಧಗಳು
6.1.2. ಹೋಲಿಕೆ ಅಥವಾ ಸಾಮ್ಯತೆಯ ಮೇಲಿನ ಅವಲಂಬನೆ
6.1.3 ಭಿನ್ನತೆ ಮತ್ತು ವ್ಯತ್ಯಾಸ
6.1.4 ಶ್ರಮವಿಭಜನೆ
6.2 ಸಮುದಾಯ–ಸಾಮುದಾಯಿಕ ಮೂಲಾಂಶಗಳು:
6.2.1 ಮುಖ್ಯ ಮೂಲಾಂಶವಾಗಿ ಸ್ಥಾನೀಯತೆ
6.2.2 ಸಾಪೇಕ್ಷ ಶಾಶ್ವತತೆ ಅಥವಾ ಸ್ಥಿರತೆ
6.2.3 ಸಂಘ
6.2.4 ಸಂಸ್ಥೆ
6.2.4.1 ವರ್ಣವ್ಯವಸ್ಥೆ, ಕುಲಕಟ್ಟಳೆಗಳು, ವಿಶಿಷ್ಟವಾದ ಕುಲಗಳು, ಕುಲಕೇಂದ್ರಿತ ನಿರ್ಮಿತಿಗಳು
6.2.4.2 ಕುಟುಂಬ : ಅನೌಪಚಾರಿಕ ನಿಯೋಗಿಯಾಗಿ ಕುಟುಂಬ : ಸ್ತ್ರೀಯರು ಸ್ಥಳೀಯ ಸಮಾಜದಲ್ಲಿನ ಅಸ್ಮಿತೆಯ ಆಯಾಮಗಳು, ನಾಯಕತ್ವ ಮತ್ತು ಸಾಮಾಜಿಕ ಅಸ್ಮಿತೆಯ ಕಾರ್ಯ ಕಾರಣಗಳು, ಮಹಾಮಂಡಳೇಶ್ವರರ ಮಡದಿಯರ ಆಡಳಿತ ಮತ್ತು ಅದರ ಸಾಮಾಜಿಕ ಪರಿಣಾಮಗಳು, ಮಹಿಳೆಯರ ಆತ್ಮಬಲದ ವಿಶಿಷ್ಟ ಮಾದರಿಗಳು, ಸೂಳೆಯರು : ಸ್ಥಳೀಯ ಸಮಾಜದ ಪ್ರಭಾವಿಗಳು, ಕುಟುಂಬ ಆಸ್ತಿಯ ವ್ಯವಸ್ಥಿತ ನಿರ್ವಹಣೆ ಮತ್ತು ಸ್ಥಳೀಯ ವಿನಿಯೋಗ
6.2.4.3 ಔಪಚಾರಿಕ ನಿಯೋಗಿಯಾಗಿ ಶಿಕ್ಷಣ : ಸ್ಥಳೀಯ ಸಮಾಜ ಮೌಲ್ಯಗಳನ್ನು ಸಂವರ್ಧಿಸಿದ ಸಾಂಸ್ಥಿಕತೆ, ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳು, ಮಠಗಳು, ದೇವಾಲಯಗಳು, ಅನೌಪಚಾರಿಕ ಶಿಕ್ಷಣ ಧಾರ್ಮಿಕ ಶಿಕ್ಷಣ, ಸಾಮೂಹಿಕ ಶಿಕ್ಷಣ, ಶಾರೀರಿಕಶಿಕ್ಷಣ, ಶೈಕ್ಷಣಿಕ ಸಾಧನಗಳು

6.3 ಸಾಮಾಜಿಕ ಅಂತಃಕ್ರಿಯೆ:
6.3.1 ಸಾಮಾಜಿಕ ಅಂತಃಕ್ರಿಯೆಯ ಮೂಲಾಂಶಗಳು: ಸಂಪರ್ಕ ಮತ್ತು ಸಮೂಹ :
6.3.2 ಸಾಮಾಜಿಕ ಪ್ರಕ್ರಿಯೆ:
6.3.2.1 ಸಹಕಾರ
6.3.2.2 ಸ್ಪರ್ಧೆ

6.3.2.3 ಸಂಘರ್ಷ
6.3.2.4 ಹೊಂದಾಣಿಕೆ
6.3.2.5 ಸ್ವಾಂಗೀಕರಣ:

6.4 ಸಾಮಾಜಿಕ ನಿಯಂತ್ರಣ :
6.4.1 ಸ್ಥಳೀಯ ಸಮಾಜದಲ್ಲಿನ ನಿಯಂತ್ರಣ ಪ್ರಕ್ರಿಯೆ
6.4.2 ಸಾಮಾಜಿಕ ಅನುವರ್ತನೆ

6.5 ಸಮಾಜದ ಪ್ರಭಾವಳಿ –ಸಂಸ್ಕೃತಿ ಪರಿಸೂಚಿ
6.5.1 ಭೌತ ಸಂಸ್ಕೃತಿ –ಸಾಮಾಜಿಕ ಅಸ್ಮಿತೆ ಮತ್ತು ಸ್ಥಳೀಯ ಸಾಮುದಾಯಿಕ ನಿರ್ಮಿತಿಗಳು :
6.5.2 ಅಭೌತ ಸಂಸ್ಕೃತಿ:
6.5.3 ಭೌತ ಮತ್ತು ಅಭೌತ ಸಂಸ್ಕೃತಿಗಳ ಸಮ್ಮಿಲನ : ಮರಣಪದ್ಧತಿಗಳು
6.5.3.1 ವೀರ ಪರಂಪರೆ : ಊರಳಿವು–ತುರುಗೋಳ್–ಪೆಣ್ಬುಯ್ಯಲ್, ಬಲಿದಾನ ಮರಣ ಪದ್ಧತಿ ಮತ್ತು ವೀರಗಲ್ಲುಗಳು, ಗರುಡಪದ್ಧತಿ: ಕೆಲವು ಹೊಸ ಸಂಗತಿಗಳು,
6.5.3.2 ಸತಿ ಸಹಗಮನ ಪದ್ಧತಿ ಮತ್ತು ಮಾಸ್ತಿಕಲ್ಲುಗಳು
6.5.3.3 ಸಮಾಧಿ ಮರಣ:

**ಅಧ್ಯಾಯ 7: ಯುಗಪ್ರವರ್ತಕ ಸಾಂಸ್ಥಿಕ ಪರಿಷ್ಕರಣೆಗಳು ಮತ್ತು ಧಾರ್ಮಿಕ ಸಂವರ್ಧನೆ** **273–325**

**7.1 ಬೌದ್ಧಧರ್ಮ**
**7.2 ಜೈನಧರ್ಮ**
7.2.1 ಜೈನಧರ್ಮದ ಸಂವರ್ಧನೆಗೆ ಮಹಿಳೆಯರ ಕೊಡುಗೆಗಳು

**7.3 ಶೈವಧರ್ಮ**
7.3.1 ಪಾಶುಪತ–ಲಕುಳೀಶ ಪಂಥ
7.3.2 ಕಾಪಾಲಿಕ ಪಂಥ
7.3.3 ಕಾಳಾಮುಖ ಪಂಥ
7.3.4 ಶಾಕ್ತಪಂಥ

**7.4 ವೈಷ್ಣವ ಧರ್ಮ**
**7.5 ರಾಮಾನುಜ ಪಂಥ ಅಥವಾ ಶ್ರೀವೈಷ್ಣವಮತ**
**7.6 ಧಾರ್ಮಿಕ ಪ್ರಭುತ್ವ**
7.6.1 ದೇಗುಲ ನಿರ್ಮಾಣ ಪ್ರಕ್ರಿಯೆಗಳು
7.6.2 ದೇಗುಲ ನಿರ್ವಹಣೆ
7.6.3 ಸ್ಮಾರಕಗಳು ಮೂಲಕ ಸ್ಥಳೀಯ ಸಂವರ್ಧನೆ

**ಅಧ್ಯಾಯ 8: ಸಮಾರೋಪ ಮತ್ತು ಸಂಶೋಧನ ಫಲಿತಗಳು** **326–336**
8.1 ಸಮಾರೋಪ
8.2 ಸಂಶೋಧನ ಫಲಿತಗಳು

**ಅನುಬಂಧಗಳು :** **337–346**

**ಗ್ರಂಥಸೂಚಿ**

**ಹೊಯ್ಸಳ ಮಹಾಮಂಡಳೇಶ್ವರರಿಂದ ರೂಪುಗೊಂಡ ಸ್ಮಾರಕಗಳು**

# ಸಂಕ್ಷೇಪಸೂಚಿ

| | |
|---|---|
| ಅ | : ಅಧ್ಯಾಯ |
| ಅಕೆ | : ಅರಸೀಕೆರೆ |
| ಅಗೂ | : ಅರಕಲಗೂಡು |
| ಆ | : ಆಶ್ವಾಸ |
| ಆನೇ | : ಆನೇಕಲ್ |
| ಆಲೂ | : ಆಲೂರು |
| ಇ.ದನ | : ಇತಿಹಾಸ ದರ್ಶನ |
| ಇ.ದಣ | : ಇತಿಹಾಸ ದರ್ಪಣ |
| ಎಕ | : ಎಪಿಗ್ರಾಫಿಯಾ ಕರ್ನಾಟಿಕಾ |
| ಎ ಆರ್ ಐ ಈ | : ಆರ್ಕಿಯಾಲಜಿಕಲ್ ಸರ್ವೇ ಆಫ್ ಇಂಡಿಯಾ ರಿಪೋರ್ಟ್ಸ್ |
| ಎಸ್ ಐ ಐ | : ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ |
| ಎಂ ಎ ಆರ್ | : ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್ಸ್ |
| ಕ | : ಕಡೂರು |
| ಕ ಸಾ ಪ | : ಕನ್ನಡ ಸಾಹಿತ್ಯ ಪರಿಷತ್ತು |
| ಕ.ವಿ.ಶಾ.ಸಂ | : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ |
| ಕೃಪೇ | : ಕೃಷ್ಣರಾಜಪೇಟೆ |
| ಕೊಗಾ | : ಕೊಳ್ಳೆಗಾಲ |
| ಕೋ | : ಕೋಲಾರ |
| ಗು | : ಗುಬ್ಬಿ |
| ಗುಂ | : ಗುಂಡ್ಲುಪೇಟೆ |
| ಗೌಬಿ | : ಗೌರಿಬಿದನೂರು |
| ಚಪ | : ಚನ್ನರಾಯಪಟ್ಟಣ |

| | |
|---|---|
| ಚಾನ | : ಚಾಮರಾಜನಗರ |
| ಚಿದು | : ಚಿತ್ರದುರ್ಗ |
| ಚಿನಾ | : ಚಿಕ್ಕನಾಯಕನಹಳ್ಳಿ |
| ಚಿಮ | : ಚಿಕ್ಕಮಗಳೂರು |
| ಚಿಂ | : ಚಿಂತಾಮಣಿ |
| ತಕೆ | : ತರೀಕೆರೆ |
| ತಿನ | : ತಿರುಮಕೂಡಲು ನರಸೀಪುರ |
| ತಿಪ | : ತಿಪಟೂರು |
| ತು | : ತುರುವೇಕೆರೆ |
| ತುಮ | : ತುಮಕೂರು |
| ದಾವ | : ದಾವಣಗೆರೆ |
| ದೇವ | : ದೇವನಹಳ್ಳಿ |
| ದೊಡ್ಡ | : ದೊಡ್ಡಬಳ್ಳಾಪುರ |
| ನಂಗೂ | : ನಂಜನಗೂಡು |
| ನಾಮಂ | : ನಾಗಮಂಗಲ |
| ಪ | : ಪದ್ಯ |
| (ಪ) | : ಪರಿಷ್ಕೃತ |
| ಪಾಪು | : ಪಾಂಡವಪುರ |
| ಪಿಪ | : ಪಿರಿಯಾಪಟ್ಟಣ |
| ಬಂಪೇ | : ಬಂಗಾರಪೇಟೆ |
| ಬಾಕೋ | : ಬಾಗಲಕೋಟೆ |
| ಬೆಂ | : ಬೆಂಗಳೂರು |
| ಬೇ | : ಬೇಲೂರು |
| ಮ | : ಮದ್ದೂರು |
| ಮಂ | : ಮಂಡ್ಯ |
| ಮದ್ದ | : ಮದ್ದಗಿರಿ(ಮಧುಗಿರಿ) |

| | |
|---|---|
| ಮವ | : ಮಳವಳ್ಳಿ |
| ಮಾ | : ಮಾಲೂರು |
| ಮುಳ | : ಮುಳಬಾಗಿಲು |
| ಮೂ | : ಮೂಡಗೆರೆ |
| ಮೈ | : ಮೈಸೂರು |
| ಯಳ | : ಯಳಂದೂರು |
| ರೈ | : ಬಿ.ಎಲ್.ರೈಸ್ |
| ಶಿಪು | : ಶಿಕಾರಿಪುರ |
| ಶಿವ | : ಶಿವಮೊಗ್ಗ |
| ಶ್ರೀಪ | : ಶ್ರೀರಂಗಪಟ್ಟಣ |
| ಶೃಂ | : ಶೃಂಗೇರಿ |
| ಶ್ರಬೆ | : ಶ್ರವಣಬೆಳಗೊಳ |
| ಸಪು | : ಸಕಲೇಶಪುರ |
| ಸೊ | : ಸೊರಬ |
| ಹಾ | : ಹಾಸನ |
| ಹುಣ | : ಹುಣಸೂರು |
| ಹೆಕೋ | : ಹೆಗ್ಗಡೆದೇವನಕೋಟೆ |
| ಹೊನ | : ಹೊಳೆನರಸೀಪುರ |
| ಹೊಸ | : ಹೊಸಕೋಟೆ |
| ಹೊಸನ | : ಹೊಸನಗರ |

# ಅಧ್ಯಾಯ 1

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ ಮತ್ತು ಆಕರಗಳು

### 1.1 ಪೀಠಿಕೆ :

ಸಾಹಿತ್ಯವು ಯಾವಾಗಲೂ ಸಮಕಾಲೀನ ಸಮಾಜದ ಆಗುಹೋಗುಗಳನ್ನು ನೇರವಾಗಿಯೂ ಒಮ್ಮೊಮ್ಮೆ ಪ್ರತಿಮಾತ್ಮಕವಾಗಿಯೂ ಪ್ರತಿಬಿಂಬಿಸುತ್ತದೆ ಮತ್ತು ಗತಿಬಿಂಬಿಸುತ್ತದೆ. ಇದಕ್ಕೆ ಕನ್ನಡ ಸಾಹಿತ್ಯವು ಹೊರತಲ್ಲ. ಕಥೆ, ಕವನ, ನಾಟಕ ಮೊದಲಾದ ಸಾಹಿತ್ಯ ಪ್ರಕಾರಗಳಿಗಿಂತ ಶಾಸನ ಸಾಹಿತ್ಯದಲ್ಲಿ ಈ ಪ್ರಕ್ರಿಯೆಗಳು ಹೆಚ್ಚು ನೇರವಾಗಿ ಮತ್ತು ಅಧಿಕೃತವಾಗಿ ದಾಖಲಾಗುತ್ತವೆ. ಅಂತೆಯೇ ಕನ್ನಡ ನಾಡಿನ ಅಸಂಖ್ಯಾತ ಶಾಸನಗಳಲ್ಲಿನ ಸೈನ್ಯ, ಯುದ್ಧ, ರಾಜವಂಶಗಳ ಸಾಧನೆಗಳಿಗಿಂತ ಸಾಮಾಜಿಕ ಅಧಿಕಾರ ಹಂಚಿಕೆಯ ಹಾಗೂ ಆರ್ಥಿಕ ಗಳಿಕೆಯ ವ್ಯವಸ್ಥೆಯನ್ನು ಅನುಲಕ್ಷಿಸುತ್ತಾ, ಬಹುತ್ವದ ಸಾಂಸ್ಕೃತಿಕ ಆಯಾಮಗಳನ್ನು ಪರಿಭಾವಿಸುತ್ತಾ ಹೆಚ್ಚಿನ ವೈಶಾಲ್ಯತೆಯ ಅರಿವು ಮತ್ತು ಪ್ರಜ್ಞೆಯೊಂದಿಗೆ ನನ್ನ ಅಧ್ಯಯನದಲ್ಲಿ ವಿವೇಚಿಸಲು ಹೊರಟಿದ್ದೇನೆ.

‘ರಾಜ್ಯ ಎಂಬುದು ಒಂದು ನಿರ್ದಿಷ್ಟ ಭೌಗೋಳಿಕ ಸೀಮೆಗೆ ಸಂಬಂಧಿಸಿದ ಪರಿಕಲ್ಪನೆ. ಇದರಲ್ಲಿ ರಾಜ ಮತ್ತು ರಾಜಮನೆತನ ಎಂಬುದು ಕೇವಲ ಈ ರಾಜ್ಯದ ಒಂದು ಭಾಗ ಮಾತ್ರ. ಉಳಿದಂತೆ ಮಂತ್ರಿ, ಅಧಿಕಾರಿಗಳು ಪ್ರಜೆಗಳು ಎಲ್ಲರೂ ಮುಖ್ಯರಾಗುತ್ತಾರೆ. ಅವರ ಸಂಬಂಧಗಳು ಪರಸ್ಪರ ಪೂರಕವಾಗಿದ್ದು, ಅವರವರ ಜವಾಬ್ದಾರಿಗಳಿಂದ ಸಹಸಂಬಂಧವನ್ನು ಹೊಂದಿರುತ್ತಾರೆ. ಹಾಗಾಗಿ ಕೆಳಸ್ತರದಲ್ಲಿನ ಸ್ಥಾನಿಕ ಪ್ರಭುಗಳು ಪ್ರಜೆಗಳೊಂದಿಗೆ ನೇರ ಮುಖಾಮುಖಿಯಾಗಿರುತ್ತಾರೆ. ಸಾಮಂತ, ಮಾಂಡಲಿಕ, ಮಹಾಮಂಡಳೇಶ್ವರ, ಸೇನಾನಾಯಕ ಮುಂತಾದ ಸ್ಥಾನಗಳನ್ನು ಹೊಂದಿದ್ದ ಅಧಿಕಾರಿಗಳು ನಿರ್ದಿಷ್ಟವಾದ ಪ್ರದೇಶದ ಆಳ್ವಿಕೆಯ ಜವಾಬ್ದಾರಿಗಳನ್ನು ಹೊತ್ತು ಇಡೀ ರಾಜ್ಯದ ಆಡಳಿತ ಮತ್ತು ಅಭಿವೃದ್ಧಿಯಲ್ಲಿ, ಸಾಂಸ್ಕೃತಿಕತೆಯನ್ನು ರೂಪಿಸುವಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತಿದ್ದರು. ಆದ್ದರಿಂದ ಇಂತಹ ಸ್ಥಳೀಯ ಅಧಿಕಾರಿಗಳು ಸಮಕಾಲೀನ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪ, ಸಾಹಿತ್ಯಿಕ ಸಂಗತಿಗಳು ಪ್ರಜಾಕೇಂದ್ರಿತವಾಗಿರುವಂತೆ ಸೃಷ್ಟಿಸುವುದರಲ್ಲಿ ಮಹತ್ವವನ್ನು ಪಡೆದಿದ್ದಾರೆ.

ನನ್ನ ಅಧ್ಯಯನದಲ್ಲಿ ಸಂಸ್ಕೃತಿ ಎಂಬ ಪದವನ್ನು ಅತ್ಯಂತ ಎಚ್ಚರಿಕೆಯಿಂದ ಬಳಸಲಾಗಿದೆ. ಈ ಪದವನ್ನು ನಾನು ಸಾಮಾಜಿಕ ಹಾಗೂ ಆರ್ಥಿಕ ಹಿನ್ನೆಲೆಯಿಂದ ವಿಶ್ಲೇಷಣೆ ಮಾಡಹೊರಟಿದ್ದೇನೆ. ಸಮಾಜದಲ್ಲಿ ವ್ಯಕ್ತಿ, ಸಮುದಾಯಗಳ ಬದುಕು, ಬದುಕಿಗೆ ಅನಿವಾರ್ಯವಾದ ವಿಷಯಗಳೊಂದಿಗಿನ ವ್ಯವಹಾರ, ನಡೆಸಿದ ಹೋರಾಟಗಳು ಮುಂತಾದವು ಇಲ್ಲಿ ಚರ್ಚೆಗೊಳಗಾಗುತ್ತವೆ. ಚರಿತ್ರೆಯ ವೈಭವೀಕರಣಕ್ಕೆ ಇಲ್ಲಿ ಈ ಪದವನ್ನು ನಾನು ಬಳಸುತ್ತಿಲ್ಲ. ಈ ನೆಲೆಗಟ್ಟಿನಿಂದ ನಾನು ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಹೊಯ್ಸಳ ಯುಗದ ಕನ್ನಡ ಮಣ್ಣಿನ ಸ್ಥಳೀಯ ಪರಂಪರೆಗಳಲ್ಲಿನ ಹೊಸ

ಹೊಳಹುಗಳನ್ನು ಹುಡುಕುತ್ತಾ, ವಿಮರ್ಶಿಸುತ್ತಾ ಸಾಗುತ್ತಿದ್ದೇನೆ. ಇದು ಒಂದು ಬಗೆಯಲ್ಲಿ ಮಧ್ಯಕಾಲೀನ ಕನ್ನಡ ನಾಡಿನ ಶಾಸನ ಮತ್ತು ಸಾಹಿತ್ಯ ಕೃತಿಗಳ ಮೂಲಕ ವಿವಿಧ ಪ್ರದೇಶಗಳ ಜನರ ಜೀವನ ಕೇಂದ್ರಿತವಾದ ಅಧ್ಯಯನ ಎಂದರೆ ಅಡ್ಡಿಯಿಲ್ಲ.

ಇದುವರೆಗೂ ಚರಿತ್ರೆಯ ಬರವಣಿಗೆಯಲ್ಲಿ ಅಲಕ್ಷ್ಯಕ್ಕೆ ಒಳಗಾಗಿರುವ ಪ್ರಾದೇಶಿಕ ಸಂಸ್ಕೃತಿಗೆ ಹೆಚ್ಚಿನ ಮಹತ್ವ ನೀಡುತ್ತಾ ಸ್ಥಳೀಯ ಸಂಸ್ಕೃತಿ ಎಂಬ ಪರಿಭಾಷೆಯಲ್ಲಿ ಲಕ್ಷ್ಯೀಕರಿಸುತ್ತ ಅನೇಕ ನೂತನ ಪರಿಪ್ರೇಕ್ಷೆಗಳನ್ನು ನೀಡುತ್ತಿದ್ದೇನೆ. ಪ್ರಸ್ತುತ ನನ್ನ ಅಧ್ಯಯನವು ಈ ಕಾಲಘಟ್ಟದಲ್ಲಿ ಕರ್ನಾಟಕ ಯಾವೆಲ್ಲ ಬಗೆಯ ಸ್ಥಿತ್ಯಂತರಗಳಿಗೆ ಸಂಚಲನಗಳಿಗೆ ಒಳಗಾಗುತ್ತಿತ್ತು ಎನ್ನುವುದನ್ನು ಪತ್ತೆಹಚ್ಚುವ ಉದ್ದೇಶವನ್ನು ಸಾಕಾರಗೊಳಿಸುತ್ತದೆ. ಈ ಅವಧಿಯಲ್ಲಿ ಸಮಾಜದ ವಿವಿಧ ಸ್ತರಗಳಾದ ಬೇಟೆ, ಪಶುಸಂಗೋಪನೆ, ಕೃಷಿ, ಉದ್ದಿಮೆ ಮುಂತಾದವು ಸ್ಪಷ್ಟವಾಗಿ ಕಾಣಿಸಿಕೊಳ್ಳುವ ಹಾಗೂ ಸಮಷ್ಠಿಯಾಗಿ ಮತ್ತು ವ್ಯಷ್ಠಿಯಾಗಿ ನಿಲ್ಲುವ ಸೂಚನೆಗಳನ್ನು ಕಂಡುಕೊಂಡಿದ್ದೇನೆ. ಇವುಗಳನ್ನು ಕುರಿತು ಅಧ್ಯಯನ ಮಾಡುವಾಗ ಅಂದಿನ ಸಮಾಜ ಏಕರೂಪದ್ದಾಗಿರಲಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಜೊತೆಗೆ ಸಾಮಾಜಿಕ ವಿಕಾಸದ ಪ್ರಕ್ರಿಯೆಗಳು ಬಹುತ್ವದ ವಿನ್ಯಾಸಗಳೊಂದಿಗೆ ಕಂಡುಬಂದುದು ಸಹ ನಿಚ್ಚಳವಾಗುತ್ತದೆ. ಇವುಗಳಿಂದ ಶ್ರೇಣೀಕೃತ ಸಮಾಜ ವ್ಯವಸ್ಥೆ ಇನ್ನಷ್ಟು ಬಿಗಿಗೊಂಡವು. ಇದಕ್ಕೆ ಜಾತಿ, ಕುಟುಂಬ, ಶಿಕ್ಷಣ ಆಡಳಿತವ್ಯವಸ್ಥೆಗಳು ಪೂರಕವಾಗಿಯೇ ಪರಿಣಮಿಸಿದ್ದು ವಿಪರ್ಯಾಸ. ಈ ಕಾಲಘಟ್ಟದಲ್ಲಿ ಭೂ ಆಧಾರಿತವಾದಂತಹ ಅರ್ಥವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಇದು ಊಳಿಗಮಾನ್ಯತೆ, ಭೂಮಾಲೀಕತ್ವ, ಮಧ್ಯವರ್ತಿಗಳು, ದಾನ ಮುಂತಾದ ವಿಚಾರಗಳ ಕುರಿತ ಚರ್ಚೆಗಳಿಗೆ ಅವಕಾಶ ಮಾಡಿಕೊಡುತ್ತದೆ. ಇದರಲ್ಲಿ ಉತ್ಪಾದನಾ ವ್ಯವಸ್ಥೆಯನ್ನು ಗ್ರಹಿಸುತ್ತಲೂ ಸ್ಥಳೀಯ ಅಧಿಕಾರಿಗಳು ಮತ್ತು ಪ್ರಜೆಗಳು ಹೊಂದಿದ್ದ ಸಂಬಂಧಗಳ ಸ್ವರೂಪವನ್ನು ಅರಹುತ್ತದೆ.

ಸ್ಥಳೀಯವಾಗಿ ಹುಟ್ಟಿಕೊಂಡ ಕಾವ್ಯಗಳು ಮತ್ತು ಕಥಾನಕಗಳು ಸಂಸ್ಕೃತಿ ಅಧ್ಯಯನಕ್ಕೆ ಯಾವಾಗಲೂ ಮುಖ್ಯವಾಗುತ್ತವೆ. ಈ ಕಾಲಘಟ್ಟದ ಲಿಖಿತ ಆಕರಗಳಲ್ಲಿ ಅಲೌಕಿಕ ಮತ್ತು ಆಧ್ಯಾತ್ಮಿಕ ಚಿಂತನೆಗಳು ಇವುಗಳಲ್ಲಿ ಹೊರ ಆವರಣವಷ್ಟೇ ಆಗಿದ್ದು, ಜನರ ಬದುಕಿನೊಂದಿಗೆ ಹುಟ್ಟಿಕೊಳ್ಳುವ ವಾಸ್ತವಾಂಶಗಳು ಆಳದಲ್ಲಿರುವ ನಿಜ ಹೂರಣ ಎಂಬುದನ್ನು ಮುನ್ನಲೆಗೆ ತರುವ ಧೈರ್ಯವನ್ನು ಈ ಅಧ್ಯಯನವು ಪ್ರಸ್ತುತಪಡಿಸುತ್ತದೆ.

ಕನ್ನಡ ನಾಡಿನ ಶಾಸನಗಳು ಪರಂಪರಾಗತವಾಗಿ ರೂಢಿಗತವಾದ ಮತ್ತು ಸಂವರ್ಧಿಸಿಕೊಂಡು ಬಂದ ಹಲವು ಹತ್ತು ಸಂಗತಿಗಳನ್ನು, ಘಟನೆಗಳನ್ನು, ವಿಷಯಗಳನ್ನು ಇತ್ಯಾದಿ ಅಂಶಗಳನ್ನು ಅರುಹುತ್ತವೆ. ಈ ದೃಷ್ಟಿಯಿಂದ ಶಾಸನಗಳ ಅಧ್ಯಯನ ಅಪೇಕ್ಷಣೀಯ; ಅತ್ಯಂತ ಕುತೂಹಲಕಾರಿ ಕೂಡ. ಅಂತೆಯೇ ಸ್ಥಳೀಯವಾಗಿ ರೂಪುಗೊಂಡ ಹಲವು ಸಾಂಸ್ಕೃತಿಕ ಆಯಾಮಗಳು ಒಟ್ಟು ಸಂಸ್ಕೃತಿಯ ಪೂರ್ಣ ಚಿತ್ರಕ್ಕೆ ಸುವರ್ಣದ ಚೌಕಟ್ಟನ್ನು ಒದಗಿಸುತ್ತವೆ. ಹಾಗಾಗಿ ನಿರ್ದಿಷ್ಟ ಕಾಲಘಟ್ಟಗಳಲ್ಲಿ ನಮ್ಮ ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆ ನಿಂತ ಹೊಯ್ಸಳ ಮಹಾಮಂಡಳೇಶ್ವರರು ಸ್ಥಳೀಯ ಸಾಹಿತ್ಯ ಮತ್ತು

ಸಾಂಸ್ಕೃತಿಕ ಸಂವರ್ಧನೆಯಲ್ಲಿ ವಹಿಸಿದ ಪಾತ್ರವು ಅತ್ಯಂತ ವಿಶಿಷ್ಟವೂ ವಿನೂತನವೂ ಆದದ್ದಾಗಿದೆ. ಹೊಯ್ಸಳರ ಪೂರ್ವದಲ್ಲಿ ಆಳ್ವಿಕೆ ನಡೆಸಿದ್ದ ಕಲ್ಯಾಣದ ಚಾಲುಕ್ಯ ಮಹಾಮಂಡಳೇಶ್ವರರ ಬಗ್ಗೆ The mahamandaleshwaras under the chalaukyas of kalyanani ಎಂಬ ಉತ್ಕೃಷ್ಟ ಸಂಶೋಧನಾ ಕೃತಿಯನ್ನು ದಿನಕರ ದೇಸಾಯಿಯವರು ರಚಿಸಿರುವರು. ಆದರೆ ಹೊಯ್ಸಳರನ್ನು ಕುರಿತು ನಡೆಸಿದ ಅಧ್ಯಯನಗಳಲ್ಲಿ ಹೊಯ್ಸಳ ಮಹಾಮಂಡಳೇಶ್ವರರ ಬಗ್ಗೆ ಅಲ್ಲಲ್ಲಿ ಕ್ವಚಿತ್ತಾಗಿ ವಿಷಯಗಳ ಉಲ್ಲೇಖವಷ್ಟೇ ಕಂಡುಬಂದಿದೆ. ಅಂತೆಯೇ ಕನ್ನಡ ಸಾಹಿತ್ಯವನ್ನು ಕುರಿತ ಸಾಂಸ್ಕೃತಿಕ ಅಧ್ಯಯನಗಳಲ್ಲಿಯೂ ಕೂಡ ಈ ಹೊಯ್ಸಳ ಮಹಾಮಂಡಳೇಶ್ವರರು ಸಂವರ್ಧಿಸಿದ ಕನ್ನಡ ಸಾಹಿತ್ಯ, ದೇಸಿಯ ನುಡಿ, ಛಂದೋವೈವಿಧ್ಯತೆಗಳು, ಸಮಾಜೋ–ಸಾಂಸ್ಕೃತಿಕ ಸಂಗತಿಗಳನ್ನು ಗ್ರಹಿಸಲಾಗಿಲ್ಲ. ಆದ್ದರಿಂದ ಈ ಎಲ್ಲ ನೆಲೆಗಟ್ಟುಗಳಿಂದ ಹೊಯ್ಸಳ ಮಹಾಮಂಡಳೇಶ್ವರರು ಕೊಡಮಾಡಿದ ಸ್ಥಳೀಯ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂವರ್ಧನೆಗಳನ್ನು ಗ್ರಹಿಸುವುದು ಪ್ರಕೃತ ಅಧ್ಯಯನದ ಬಹುಮುಖ್ಯ ಆಶಯವಾಗಿದೆ.

## 1.2 ಅಧ್ಯಯನದ ಉದ್ದೇಶ

ಮೂರು ಶತಮಾನಗಳಿಗಿಂತಲೂ ಹೆಚ್ಚು ಕಾಲಾವಧಿಗೆ ವಿಸ್ತರಿಸುವ ಹೊಯ್ಸಳರ ಆಳ್ವಿಕೆಯು ಮಧ್ಯಕಾಲೀನ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಬಹಳ ಮುಖ್ಯವಾದ ಅಧ್ಯಾಯವಾಗಿದೆ. ರಾಜಕೀಯವಾಗಿ ಕಲ್ಯಾಣದ ಚಾಲುಕ್ಯರ ಅಧೀನರಾಗಿದ್ದ ಹೊಯ್ಸಳರು, ಕಾಲಕ್ರಮದಲ್ಲಿ ಚಾಲುಕ್ಯರು ಅವನತಿ ಹೊಂದಿದಾಗ ತಮ್ಮ ಸ್ವಾತಂತ್ರ್ಯವನ್ನು ಸ್ಥಾಪಿಸಿಕೊಂಡರು. ವಿಷ್ಣುವರ್ಧನನ ಕಾಲದಿಂದ ಹೊಯ್ಸಳರ ಸಾಮ್ರಾಜ್ಯವು ವಿಸ್ತಾರವಾಗುತ್ತ ಹೋಯಿತು. ವಿಶಾಲ ಸಾಮ್ರಾಜ್ಯದ ಪರಿಧಿಯಲ್ಲಿ ಒಟ್ಟು ಕನ್ನಡ ನಾಡಿನ ಪರಂಪರೆಗೆ ಧಾರ್ಮಿಕ ಮತ್ತು ಸಾಮಾಜಿಕ, ಶೈಕ್ಷಣಿಕ, ಕಲೆ–ವಾಸ್ತುಶಿಲ್ಪ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ಹೊಯ್ಸಳರ ಸಾಧನೆಗಳು ಮತ್ತು ಕೊಡುಗೆಗಳು ಅಪೂರ್ವವಾದವುಗಳಾಗಿವೆ. ಸಾಮ್ರಾಜ್ಯದ ಚಕ್ರವರ್ತಿಯು ಜನರಿಂದ ದೂರ ನಿಂತು ಅಧಿಕಾರಿಗಳ ಮೂಲಕ ಆಡಳಿತ ನಡೆಸುತ್ತಿದ್ದನು. ಅವನ ಕೈಕೆಳಗಿನ ಮಹಾಮಂಡಳೇಶ್ವರರು, ಸಾಮಂತರು, ದಂಡನಾಯಕರು ಇವರುಗಳು ಜನರೊಡನೆ ಬೆರೆತು ಅವರ ಕಷ್ಟ–ನಷ್ಟಗಳಲ್ಲಿ ಪಾಲುದಾರರಾಗಿರುತ್ತಿದ್ದರು. ಹಾಗಾಗಿ ಸ್ಥಳೀಯ ಅವಶ್ಯಕತೆಗಳು ಮತ್ತು ಅವರ ಬದುಕಿನ ಹಲವು ಮುಖಗಳು ಈ ಎರಡನೆಯ ದರ್ಜೆಯ ಆಡಳಿತಾಧಿಕಾರಿಗಳಿಗೆ ಅರಿವಿರುತ್ತಿತ್ತು. ಹಾಗಾಗಿ ಜನತೆಯಿಂದ ದೂರ ನಿಂತ ಸಾಮ್ರಾಟರಿಗಿಂತ ಜನತೆಯೊಂದಿಗೆ ಬೆರೆತು, ನಿಜವಾದ ಇತಿಹಾಸವನ್ನು ಸೃಷ್ಟಿಸುತ್ತಿದ್ದ ಈ ಮಹಾಮಂಡಳೇಶ್ವರರನ್ನು ಕುರಿತು ಅವರ ಸ್ಥಳೀಯ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಸಾಧನೆಗಳನ್ನು ಕುರಿತು ಪ್ರತ್ಯೇಕವಾಗಿ ಹಾಗೂ ವಿಶೇಷವಾಗಿ ಅಧ್ಯಯನ ನಡೆಸುವುದೇ ಈ ಸಂಪ್ರಬಂಧದ ಮುಖ್ಯವಾದ ಉದ್ದೇಶವಾಗಿದೆ.

## 1.3 ಅಧ್ಯಯನದ ಸ್ವರೂಪ

ವಿಜ್ಞಾನ ಕ್ಷೇತ್ರಗಳಲ್ಲಿ ವಿಷಯಗಳನ್ನು ಪ್ರಾಯೋಗಿಕವಾಗಿ ಬಿಡಿಸಬಹುದು, ನಿಖರವಾಗಿ ಇಂಥದ್ದೇ ಎಂದು ಪ್ರಮಾಣೀಕರಿಸಬಹುದು, ಸಂಶೋಧನಾ ಫಲವನ್ನು ನಿರ್ದಿಷ್ಟಗೊಳಿಸಬಹುದು. ಆದರೆ ಸಾಹಿತ್ಯಕ್ಕೆ ಸಂಬಂಧಿಸಿದ ಸಂಶೋಧನೆಯಲ್ಲಿ ಲಿಖಿತ ದಾಖಲೆಗಳೇ ಆಧಾರ. ವಿದ್ವಾಂಸರು ಹಾಗೂ ಅವರು ಸೃಜಿಸಿದ ಗ್ರಂಥಗಳೇ ಆಕರ. ಹಾಗಾಗಿ ಒಂದು ವಿಷಯದ ಬಗ್ಗೆ ಹೀಗೆ ಎಂದು ತೀರ್ಮಾನಕ್ಕೆ ಬರುವುದಕ್ಕಿಂತ ಉಚಿತ ಪ್ರಮೇಯಗಳನ್ನಿಡಬಹುದು, ಸಿದ್ಧಾಂತಗಳನ್ನು ರೂಪಿಸಬಹುದು. ಹಾಗಾಗಿ ಪ್ರಸ್ತುತ ಸಂಪ್ರಬಂಧದ ಅಧ್ಯಯನದ ಸ್ವರೂಪವು ಸಾಹಿತ್ಯ ಸಂಶೋಧನೆಯ ಸ್ವರೂಪದ್ದಾಗಿದೆ. ವಸ್ತುನಿಷ್ಠ ವಿಮರ್ಶೆ ಮತ್ತು ವಿಶ್ಲೇಷಣೆಗಳಿಗಾಗಿ ಪ್ರಾಥಮಿಕ ಆಕರಗಳಾದ ಶಾಸನ ಮತ್ತು ಸಾಹಿತ್ಯ ಕೃತಿಗಳನ್ನು ಆನುಷಂಗಿಕ ಆಕರಗಳಾಗಿ ಹೊಯ್ಸಳರ ಬಗ್ಗೆ ನಡೆದ ವಿವಿಧ ಸಂಶೋಧನಾ ಕೃತಿಗಳನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗುವುದು.

## 1.4 ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಈ ಕೆಳಕಂಡ ಅಂಶಗಳನ್ನು ಮೇಳೈಸಿರುತ್ತವೆ:

1. ಹೊಯ್ಸಳರು ಚಾಲುಕ್ಯರ ಅಧೀನವರ್ತಿಯಾದಾಗಿನಿಂದ ಹಿಡಿದು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯವರೆಗೂ ಹೊಯ್ಸಳ ಸಾಮ್ರಾಜ್ಯಕ್ಕೆ ಚರಿತ್ರೆಯಲ್ಲಿ ಮಹೋನ್ನತ ಸ್ಥಾನ ಕಲ್ಪಿಸಲು ಅಕ್ಷರಶಃ ದುಡಿದ ಹೊಯ್ಸಳ ಮಹಾಮಂಡಳೇಶ್ವರರನ್ನು ಕುರಿತು ಅರಿಯುವುದು ಈ ಅಧ್ಯಯನದ ಪ್ರಧಾನ ವ್ಯಾಪ್ತಿ.
2. ಹೊಯ್ಸಳ ಮಹಾಮಂಡಳೇಶ್ವರರು ಇಡೀ ಸಾಮ್ರಾಜ್ಯವನ್ನು ಪಸರಿಸಿದ್ದುದನ್ನು ಸಮಗ್ರವಾಗಿ ಗುರುತಿಸುವ ಸಲುವಾಗಿ ಕನ್ನಡ ನಾಡಿನ, ಈಗಿನ ತಮಿಳುನಾಡಿನ ಉತ್ತರ ಭಾಗಗಳು, ಆಂಧ್ರದ ಪಶ್ಚಿಮ ಭಾಗಗಳಲ್ಲಿ ದೊರೆತ ಶಾಸನಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ಸೇರಿಸಲಾಗಿದೆ.
3. ಪ್ರಕೃತ ಅಧ್ಯಯನದಲ್ಲಿ ಸ್ಥಳೀಯವಾಗಿ ಹೊಯ್ಸಳ ಮಹಾಮಂಡಳೇಶ್ವರರು ಆಡಳಿತ ನಡೆಸಿದ ರೀತಿ–ನೀತಿಗಳು, ಆರ್ಥಿಕ ಚಟುವಟಿಕೆಗಳಿಗೆ ನೀಡಿದ ಬೆಂಬಲ, ಸಾಮಾಜಿಕ ಸಾಮರಸ್ಯಗಳನ್ನು ಮುನ್ನಡೆಸಿದ ಬಗೆಗಳು, ಕನ್ನಡ ಭಾಷೆ, ಸಾಹಿತ್ಯ, ಛಂದಸ್ಸುಗಳಲ್ಲೂ ಕಂಡುಬಂದ ಸೂಕ್ಷ್ಮ ಆಯಾಮಗಳನ್ನು ಪರಿಕಲ್ಪನಾತ್ಮಕ ರೀತಿಯಲ್ಲಿ ಚರ್ಚಿಸಿ ವಿಶ್ಲೇಷಿಸಲಾಗಿದೆ.
4. ಕದಂಬರು, ಆಳುಪರು, ಚಂಗಾಳ್ವರು, ಸಾಂತರರು, ನೊಳಂಬರು, ಪಾಂಡ್ಯರು ಮುಂತಾದ ಸಮಕಾಲೀನ ಅರಸರುಗಳನ್ನು ಹೊರತುಪಡಿಸಿ, ಎರಡನೆಯ ಶ್ರೇಣಿಯ ಅಧಿಕಾರಿ ವರ್ಗದಲ್ಲಿ

ಬರುವ ಹೊಯ್ಸಳ ಮಹಾಮಂಡಳೇಶ್ವರ ಪದವಿಯನ್ನು ಗ್ರಹಿಸಿದ್ದ ಸಾಮಂತರು, ದಂಡನಾಯಕರು, ಮಹಾಪ್ರಧಾನರು, ಸಂಧಿವಿಗ್ರಹಿಗಳು, ಮಹಾಪಸಾಯಿತರನ್ನು ಈ ಅಧ್ಯಯನವು ತನ್ನ ವ್ಯಾಪ್ತಿಯಲ್ಲಿರಿಸಿಕೊಂಡಿದೆ.

**1.5 ಅಧ್ಯಯನದ ಆಕರಗಳು**

ಈ ನನ್ನ ಅಧ್ಯಯನದಲ್ಲಿ ಪ್ರಧಾನ ಆಕರಗಳಾಗಿ ಬಿ.ಎಲ್.ರೈಸ್ ರವರ ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳು, ಮೈಸೂರು ವಿಶ್ವವಿದ್ಯಾನಿಲಯದ ಪರಿಷ್ಕೃತ ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳು, ಕೆಲವು ಬಿಡಿ ಶಾಸನ ಸಂಪುಟಗಳು– ಇವುಗಳಲ್ಲಿನ ಹೊಯ್ಸಳರ ಮತ್ತು ಅವರ ಕಾಲಘಟ್ಟದ ಶಾಸನಗಳನ್ನು ಮತ್ತು ಈ ಸಂಪುಟಗಳ ಪ್ರಸ್ತಾವನೆಯಲ್ಲಿ ಘನ ವಿದ್ವಾಂಸರು ಮಂಡಿಸಿರುವ ಚರ್ಚೆಗಳನ್ನು ಬಳಸಿಕೊಳ್ಳಲಾಗಿದೆ. ಜೊತೆಗೆ ಇತಿಹಾಸ ದರ್ಶನ, ಇತಿಹಾಸ ದರ್ಪಣ, ಸಾಧನೆ, ಕರ್ನಾಟಕ ಲೋಚನ, ಗತಕಥನ, ಶೋಧ, ಶಾಸನ ಅಧ್ಯಯನ, ಚರಿತ್ರೆ ಅಧ್ಯಯನ, ಪ್ರಬುದ್ಧ ಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಇವುಗಳಲ್ಲಿ ಪ್ರಕಟಗೊಂಡ ಇದುವರೆಗೂ ಅಸಂಖಲಿತವಾಗಿದ್ದ ಅನೇಕ ಶಾಸನಗಳನ್ನು ಒಂದೆಡೆ ತಂದು ಅಧ್ಯಯನಕ್ಕೆ ಒಳಗುಮಾಡಿದ್ದೇನೆ. ಇವುಗಳೊಂದಿಗೆ ನಾಡಿನ ಅನೇಕ ಶಾಸನತಜ್ಞರು, ಇತಿಹಾಸಕಾರರು, ಸಾಹಿತ್ಯ ಸಂಶೋಧಕರು ರಚಿಸಿರುವ ಮತ್ತು ಸಂಕಲಿಸಿರುವ ಗ್ರಂಥಗಳು ಮತ್ತು ಲೇಖನಗಳಲ್ಲಿನ ಚರ್ಚೆಗಳನ್ನು ಅನುಲಕ್ಷಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಅತ್ಯಂತ ಮುಖ್ಯವಾಗಿ ಶಾಸನಗಳನ್ನು ಹೊರತುಪಡಿಸಿದರೆ ಹೊಯ್ಸಳರ ಕಾಲದಲ್ಲಿ ರೂಪುಗೊಂಡ ಸಾಹಿತ್ಯ ಕೃತಿಗಳನ್ನು ವ್ಯಾಪಕವಾಗಿ ಬಳಸಿಕೊಳ್ಳಲಾಗಿದೆ.

# ಅಧ್ಯಾಯ 2

## ಅಧ್ಯಯನದ ವೈಧಾನಿಕತೆ ಮತ್ತು ಈವರೆಗಿನ ಅಧ್ಯಯನಗಳ ಸಮೀಕ್ಷೆ

### 2.1 ಅಧ್ಯಯನದ ವೈಧಾನಿಕತೆ:

ನನ್ನ ಅಧ್ಯಯನವು ಸಾಹಿತ್ಯ ಸಂಶೋಧನೆಯ ವಿಧಾನವಾಗಿದ್ದು, ಈ ನಿಟ್ಟಿನಲ್ಲಿ ನಾನು ಲಭ್ಯ ಆಕರಗಳನ್ನು ಸೂಕ್ತವಾಗಿ ಬಳಸಿಕೊಂಡು ಈ ಕೆಳಕಂಡ ವಿಧಾನದಲ್ಲಿ ಸಾಗಿಬಂದಿದ್ದೇನೆ ಎಂದು ಹೇಳಬಯಸುತ್ತೇನೆ:

1. ಪ್ರಧಾನ ಆಕರಗಳಾಗಿ ಬಿ.ಎಲ್ ರೈಸ್ ರವರು ಸಂಪಾದಿಸಿರುವ ಎಪಿಗ್ರಾಫಿಯ ಕರ್ನಾಟಿಕದ 12 ಶಾಸನ ಸಂಪುಟಗಳು, ಎಂ.ಎಚ್.ಕೃಷ್ಣ, ಕೆ.ಎ.ನೀಲಕಂಠಶಾಸ್ತ್ರಿ, ಎಂ.ಶೇಷಾದ್ರಿ –ಈ ವಿದ್ವಾಂಸರಿಂದ ಸಂಪಾದಿಸಲ್ಪಟ್ಟ ಎಪಿಗ್ರಾಫಿಯಾ ಕರ್ನಾಟಿಕದ 5 ಶಾಸನ ಸಂಪುಟಗಳು,ಮೈಸೂರು ವಿ.ವಿ. ಯಿಂದ ಪರಿಷ್ಕೃತಗೊಂಡ ಎಪಿಗ್ರಾಫಿಯ ಕರ್ನಾಟಿಕದ 13 ಶಾಸನ ಸಂಪುಟಗಳು, ವಿವಿಧ ವಿದ್ವಾಂಸರಿಂದ ಸಂಪಾದಿಸಲ್ಪಟ್ಟ ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ ಶಾಸನ ಸಂಪುಟಗಳು , ಹಂಪಿ ಕನ್ನಡ ವಿ.ವಿಯ ಶಾಸನ ಸಂಪುಟಗಳು,ಎಪಿಗ್ರಾಫಿಯಾ ಆಂಧ್ರಿಕ ಶಾಸನ ಸಂಪುಟಗಳು, ತಿರುಪತಿ ದೇವಾಲಯದ ಶಾಸನ ಸಂಪುಟಗಳು,ಬಿಡಿ ಶಾಸನ ಸಂಪುಟಗಳು, ಮೈಸೂರು ಆರ್ಕಿಯಲಾಜಿಕಲ್ ರಿಪೋರ್ಟ್ಸ್‌ಗಳಲ್ಲಿನ ಶಾಸನ ಸಂಬಂಧಿತ ಬರಹಗಳು ಇವುಗಳನ್ನು ಸಂಗ್ರಹಿಸಿಕೊಂಡೆನು. ನಂತರ ಈ ಸಂಪುಟಗಳಲ್ಲಿರುವ ಹೊಯ್ಸಳರ ಮತ್ತು ಅವರ ಕಾಲಘಟ್ಟದ ಶಾಸನಗಳನ್ನು ಸೂಕ್ಷ್ಮವಾದ ಅಧ್ಯಯನಕ್ಕೆ ಒಳಪಡಿಸಿದೆನು. ಈ ಶಾಸನಗಳಲ್ಲಿನ ಹತ್ತು ಹಲವು ಹೊಯ್ಸಳ ಮಹಾಮಂಡಳೇಶ್ವರರನ್ನು ಕುರಿತಾದ ಆಡಳಿತ, ಸಾಹಿತ್ಯಿಕ, ಸಾಮಾಜಿಕ, ಆರ್ಥಿಕ, ಇತ್ಯಾದಿ ಆಯಾಮಗಳಿಂದ ಮಾಹಿತಿಗಳನ್ನು ಒಂದು ಕ್ರಮದಲ್ಲಿ ಹೊಂದಿಸಿ ಸಮನ್ವಯಗೊಳಿಸಿದೆನು. ಆನಂತರ ಇವುಗಳಲ್ಲಿನ ಅಂಶಗಳನ್ನು, ಆ ಕಾಲದ ಸಾಹಿತ್ಯಿಕ ಆಕರಗಳೊಂದಿಗೆ ತುಲನೆ ಮಾಡುತ್ತ ,ವಿದ್ವಾಂಸರೊಂದಿಗೆ ಚರ್ಚಿಸುತ್ತಾ ಅಧ್ಯಯನವನ್ನು ಮುನ್ನಡೆಸಿದೆನು.
2. ಹೊಯ್ಸಳ ಮಹಾಮಂಡಳೇಶ್ವರರ ಸುಸ್ಥಿತಿಯಲ್ಲಿರುವ ಶಾಸನಗಳು ಮತ್ತು ಸ್ಮಾರಕಗಳು ಇರುವೆಡೆಗಳಲ್ಲಿ ಆದಷ್ಟೂ ಕೇತ್ರಕಾರ್ಯಗಳನ್ನು ಕೈಗೊಂಡು ಮಾಹಿತಿಗಳನ್ನು ಕಲೆಹಾಕುವ ಪ್ರಯತ್ನವನ್ನು ಮಾಡಲಾಗಿದೆ.
3. ಸಂಗ್ರಹಿಸಿದ ಮಾಹಿತಿಗಳನ್ನು ತರ್ಕಬದ್ದವಾಗಿ ವಿಶ್ಲೇಷಿಸುತ್ತಾ ಮತ್ತು ವಿಮರ್ಶಿಸುತ್ತಾ ನನ್ನ ಅಧ್ಯಯನದ ವಿಷಯಗಳನ್ನು ನಿರೂಪಿಸತೊಡಗಿದೆನು. ಹೀಗಾಗಿ ನನ್ನ ಅಧ್ಯಯನವು ವಿಶ್ಲೇಷಣಾತ್ಮಕ ಸಂಶೋಧನ ವಿಧಾನದಲ್ಲಿಯೂ ಮೂಡಿಬಂದಿದೆ.

4. ಶಾಸನ ಮತ್ತು ಸಾಹಿತ್ಯಕೃತಿಗಳಲ್ಲಿನ ಪಠ್ಯವನ್ನು ಸುಲಭವಾಗಿ ಒಪ್ಪಿಕೊಳ್ಳದೆ ಆ ಪಠ್ಯಗಳ ಅರ್ಥದ ಸರಿಯಾದ ಗಡಿಗಳನ್ನು ಗುರುತಿಸಿದ್ದೇನೆ. ಹಾಗೂ ಅವುಗಳನ್ನು ಕುರಿತು ಈಗಾಗಲೇ ಕೆಲವು ವಿದ್ವಾಂಸರು ಸೃಷ್ಟಿಸಿರುವ ಗೊಂದಲಗಳನ್ನು ಪರಿಹರಿಸುತ್ತಾ ಹಾಗೂ ಸತ್ಯಾಸತ್ಯತೆಯನ್ನು ಇನ್ನಿತರ ಆಕರಗಳೊಂದಿಗೆ ಪರಿಶೀಲಿಸಿ ವಸ್ತುನಿಷ್ಠವಾಗಿ ನನ್ನ ಸಂಶೋಧನೆಯ ವಿಷಯವನ್ನು ಬೆಳೆಸತೊಡಗಿದೆನು. ಇದರಿಂದ ನನ್ನ ಸಂಶೋಧನೆಯ ವಿಧಾನವು ಒಂದು ರೀತಿಯಲ್ಲಿ ಹೊಸತನ್ನು ಹೇಳತ್ತಲೂ ಮತ್ತು ಪುನರ್ರಚನ ಮಾದರಿಯಲ್ಲಿಯೂ ಇದೆ.

## 2.2 ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಸಾಮಾನ್ಯವಾಗಿ ಹೊಯ್ಸಳರ ಬಗೆಗಿನ ಅಧ್ಯಯನಗಳಲ್ಲಿ ಹೊಯ್ಸಳ ದೊರೆಗಳಿಗೆ ನೀಡಿರುವ ಪ್ರಾಮುಖ್ಯತೆಯನ್ನು ಅವರ ಅಧೀನತೆಯಲ್ಲಿ ಆಳಿದ ಮಹಾಮಂಡಳೇಶ್ವರರ ಬಗ್ಗೆ ನೀಡದಿರುವುದು ಶೋಚನೀಯವಾದ ಸಂಗತಿಯಾಗಿದೆ. ಹೊಯ್ಸಳರ ಬಗ್ಗೆ ನಡೆದಿರುವ ಅಧ್ಯಯನಗಳನ್ನು ಅರಸು ಕೇಂದ್ರಿತ ಅಧ್ಯಯನಗಳೆಂದು ಕರೆಯಬಹುದು. ಬಿ ಎಲ್ ರೈಸ್ ಅವರಿಂದ ಆರಂಭಗೊಂಡು ಅನೇಕ ಚರಿತ್ರೆಕಾರರು ಹೊಯ್ಸಳ ಅರಸರ ಬಗ್ಗೆ ಬರೆಯುವಾಗ ಪ್ರಾಸಂಗಿಕವಾಗಿ ಅವರಿಗೆ ಸಹಾಯ ಮಾಡಿದ ಮಹಾಮಂಡಳೇಶ್ವರರು, ದಂಡನಾಯಕರು, ಸಾಮಂತರು ಮುಂತಾದ ಅಧಿಕಾರಿ ವರ್ಗಗಳನ್ನು ಸ್ಮರಿಸಿರುವುದನ್ನು ಬಿಟ್ಟರೆ ಉಳಿದಂತೆ ಅವರನ್ನೇ ಕುರಿತಾದ ನೇರವಾದ ಅಧ್ಯಯನಗಳು ನಡೆದಿರುವುದಿಲ್ಲ.

ಫ್ಲೀಟ್ ಅವರ "ಡೈನಸ್ಟೀಸ್ ಆಫ್ ದಿ ಕಾನರೀಸ್ ಡಿಸ್ಟ್ರಿಕ್ಸ್", ಬಿ.ಎಲ್ ರೈಸ್ ಅವರ ಮೈಸೂರ್ ಅಂಡ್ ಕೂರ್ಗ್, ಪಾಂಡುರಂಗ ದೇಸಾಯಿ, ಶ್ರೀನಿವಾಸ ರಿತ್ತಿ, ಬಾ.ರಾ.ಗೋಪಾಲ್ ಅವರ "ಪ್ರಾಚೀನ ಭಾರತದ ಚರಿತ್ರೆ", ಬಿ.ಷೇಕ್ ಅಲಿ ಮತ್ತು ಜಿ.ಆರ್. ರಂಗಸ್ವಾಮಯ್ಯನವರು ಬರೆದಿರುವ "ದಕ್ಷಿಣ ಭಾರತದ ಇತಿಹಾಸ", ಬಿ.ಎ.ಸಾಲತ್ತೊರೆ ಮತ್ತು ದೇಸಾಯಿ ಪಾಂಡುರಂಗ ದೇಸಾಯಿ ಅವರ "ಕನ್ನಡ ನಾಡಿನ ಚರಿತ್ರೆ ಭಾಗ 1" ಸೂರ್ಯನಾಥ ಕಾಮತ್ ಅವರ "ಕರ್ನಾಟಕದ ಸಂಕ್ಷಿಪ್ತ ಇತಿಹಾಸ" ಕೃತಿ, ಷೇಕ್ ಅಲಿಯವರ ಪ್ರಧಾನ ಸಂಪಾದಕತ್ವದಲ್ಲಿ ಹೊರಬಂದ ಹಂಪಿ ಕನ್ನಡ ವಿಶ್ವವಿದ್ಯಾಲಯದವರು ಹೊರತಂದಿರುವ "ಕರ್ನಾಟಕದ ಚರಿತ್ರೆ"ಯ ಸಂಪುಟಗಳಲ್ಲಿ ನೆಯ ಸಂಪುಟ ಇವೆಲ್ಲವೂ ಹೊಯ್ಸಳರ ಚರಿತ್ರೆಯನ್ನು ಒಳಗೊಂಡಿದೆ. ಆದರಲ್ಲಿ ಇದರಲ್ಲಿ ಹೊಯ್ಸಳ ಮಹಾಮಂಡಳೇಶ್ವರರ ಬಗ್ಗೆ ವಿಫುಲವಾದ ಮಾಹಿತಿಯಿರುವುದಾದರೂ ಅವರ ಸಾಹಿತ್ಯಕ ಕೊಡುಗೆಗಳನ್ನುಕುರಿತು ಹೆಚ್ಚಿನ ಸಂಗತಿಗಳಿಲ್ಲ. ಇವೆಲ್ಲವೂ ರಾಜಕೀಯ ಚರಿತ್ರೆಗಳೇ ಆಗಿವೆ.

ಚರಿತ್ರೆ ಪುಸ್ತಕಗಳನ್ನು ಹೊರತುಪಡಿಸಿದರೆ ಹೊಯ್ಸಳರನ್ನೇ ಕೇಂದ್ರೀಕರಿಸಿಕೊಂಡು ಬರೆದಿರುವ ಕೃತಿಗಳಲ್ಲಿ ಎರಡು ಪುಸ್ತಕಗಳಿಗೆ ವಿಶೇಷವಾದ ಮಹತ್ವವಿದೆ. ಇದರಲ್ಲಿ ಮೊದಲನೆಯದು ವಿಲಿಯಂ ಕೋಹಿಲೋ ಅವರ "ದಿ ಹೊಯ್ಸಳ ವಂಶ" ಮತ್ತು ಎರಡನೆಯದು ಡಂಕನ್ ಡೆರೆಟ್ ಅವರ ದಿ ಹೊಯ್ಸಳಾಸ್ ಎ ಮಿಡಿವಲ್ ಇಂಡಿಯನ್ ರಾಯಲ್ ಫ್ಯಾಮಿಲಿ" ಈ ಎರಡೂ ಕೃತಿಗಳಲ್ಲಿ ಅತ್ಯಂತ

ದೀರ್ಘವಾಗಿ ಹೊಯ್ಸಳರ ಬಗ್ಗೆ ಚರ್ಚಿಸಲಾಗಿದೆ. ಹೊಯ್ಸಳರ ಯುದ್ದಗಳು, ಹೊಯ್ಸಳರ ರಾಜಕೀಯ ಚರಿತ್ರೆಯ ಅನೇಕ ಏಳುಬೀಳುಗಳನ್ನು ಅದ್ಭುತವಾಗಿ ಕಟ್ಟಿಕೊಡುವ ಈ ಕೃತಿಗಳು ಹೊಯ್ಸಳ ಮಹಾಮಂಡಳೇಶ್ವರರನ್ನು ಕುರಿತು ಅನೇಕ ವಿವರಗಳನ್ನು ನೀಡುವುದಾದರೂ ಅವರು ಸಾಹಿತ್ಯಕ್ಕೆ ನೀಡಿರುವ ಕೊಡುಗೆಯನ್ನು ಇವು ಮೌನ ತಾಳಿವೆ. ಇನ್ನು ಹೊಯ್ಸಳರ ಬಗ್ಗೆ ಬಂದ ಬಹಳ ಒಳ್ಳೆಯ ಕೃತಿಗಳಲ್ಲಿ ಶೇಕ್ ಅಲಿ ಅವರು ಸಂಪಾದಿಸಿರುವ "ದಿ ಹೊಯ್ಸಳಾಸ್' ಕೃತಿ ಕೂಡ ವಿಶೇಷವಾದದ್ದು.

ಹೊಯ್ಸಳರಿಗಿಂತ ಹಿಂದಿನ "ದಿ ಮಹಾಮಂಡಳೇಶ್ವರಾಸ್ ಅಂಡರ್ ದಿ ಚಾಳುಕ್ಯಾಸ್ ಆಫ್ ಕಲ್ಯಾಣಿ" ಪುಸ್ತಕವು ಈ ರೀತಿಯ ಸಂಶೋಧನೆಗಳಿಗೆ ಆಕರ ಕೃತಿಯಾದರೂ ಇದರಲ್ಲಿ ಹೊಯ್ಸಳ ಮಹಾಮಂಡಳೇಶ್ವರರ ಬಗ್ಗೆ ಏನೂ ವಿಷಯವಿಲ್ಲ. ಆದರೆ ಚಾರಿತ್ರಿಕ ಅಧ್ಯಯನದ ವಿಶಿಷ್ಟ ಆಕರಕೃತಿಯಾಗಬಲ್ಲ ಈ ಕೃತಿಯೂ ಕೂಡ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಕೊಡುಗೆಗಳನ್ನು ಕುರಿತು ಹೆಚ್ಚಿನ ವಿವರಗಳನ್ನು ಒಳಗೊಂಡಿಲ್ಲ.

ಆರ್.ಗೋಪಾಲ್ ಅವರ "ಕಲ್ಚರಲ್ ಸ್ಟಡಿ ಆಫ್ ಹೊಯ್ಸಳ ಇನ್ಸ್ಕ್ರಿಪ್ಶನ್ಸ್" ಕೃತಿಯಲ್ಲಿ ಹೊಯ್ಸಳರ ಕಾಲದ ಕಲೆಯನ್ನು ಕುರಿತು ವಿವರಗಳಿವೆಯಾದರೂ ಅದೂ ಕೂಡ ಹೊಯ್ಸಳ ಮಹಾಮಂಡಳೇಶ್ವರರ ಬಗ್ಗೆ ಯಾವುದೇ ರೀತಿಯಲ್ಲೂ ನನ್ನ ಪ್ರಬಂಧಕ್ಕೆ ಉಪಯೋಗವಾಗಿಲ್ಲ.

ರಾಧಾ ಪಟೇಲ್ ಅವರ "ಲೈಫ್ ಅಂಡ್ ಟೈಂಸ್ ಆಫ್ ಹೊಯ್ಸಳ ನರಸಿಂಹ 3" ಕೃತಿಯಲ್ಲಿ ನರಸಿಂಹನಿಗೆ ಸಂಬಂಧಿಸಿದ ಅನೇಕ ವಿಚಾರಗಳಿವೆ. ಅವರ ಕಾಲದ ಅಧಿಕಾರಿಗಳ ಕುರಿತು ಒಳ್ಳೆಯ ಮಾಹಿತಿಗಳಿವೆ. ಆದರೆ ಇಲ್ಲಿ ಕೇವಲ ನರಸಿಂಹನ ಅಧಿಕಾರಿಗಳ ಬಗ್ಗೆ ಮಾಹಿತಿ ಮಾತ್ರವಿದೆ.
ರಾಜಕೀಯ ಅಧ್ಯಯನಗಳನ್ನು ಹೊರತುಪಡಿಸಿದರೆ ನಮಗೆ ಅತ್ಯಂತ ಮುಖ್ಯವಾದ ಕೃತಿಗಳೆಂದರೆ ಸಾಂಸ್ಕೃತಿಕ ಅಧ್ಯಯನಗಳು. ಇದರಲ್ಲಿ ಮೊಟ್ಟಮೊದಲು ಉಲ್ಲೇಖಿಸಲೇ ಬೇಕಾದ ಕೃತಿಯೆಂದರೆ ಎಂ ಚಿದಾನಂದ ಮೂರ್ತಿಯವರ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ", ಆರ್. ಶೇಷಶಾಸ್ತ್ರಿಗಳ "ಕರ್ನಾಟದಕ ವೀರಗಲ್ಲುಗಳು" ಲೀಲಾ ಶಾಂತಕುಮಾರಿಯವರಮ "ಹಿಸ್ಟರಿ ಆಫ್ ಅಗ್ರಹಾರಾಸ್ ಇನ್ ಕರ್ನಾಟಕ", ಬಸವರಾಜ ಕಲ್ಗುಡಿ ಅವರ "ಮಹಾಸತಿ ಆಚರಣೆ" ಕೃತಿಗಳನ್ನು ಉಲ್ಲೇಖಿಸಬಹುದು.

ಷ.ಶೆಟ್ಟರ್ ಅವರ "ಸಾವಿಗೆ ಆಹ್ವಾನ" ಮತ್ತು "ಸಾವನ್ನು ಸ್ವಾಗತಿಸಿ" ಹಂಪ ನಾಗರಾಜಯ್ಯ ಅವರ "ಯಪನೀಯ ಸಂಘ" ಕಪಟರಾಳ ಕೃಷ್ಣರಾಯರ "ಕರ್ನಾಟಕದ ಲಾಕುಳಶೈವರ ಇತಿಹಾಸ" ಲಾರ್ರೈಂಜನ್ ಅವರ "ಕಾಪಾಲಿಕ ಮತ್ತು ಕಾಳಾಮುಖ", ವಸುಂಧರಾ ಫಿಲಿಯೋಜಾ ಅವರ "ಕರ್ನಾಟಕದಲ್ಲಿ ಲಾಕುಳಶೈವ ಜಕ್ಕಣಾಚಾರ್ಯರು", ಬಾ ರಾ ಗೋಪಾಲರ "ಕರ್ನಾಟಕದಲ್ಲಿ ರಾಮಾನುಜರು", ಚೆನ್ನಕ್ಕ ಎಲಿಗಾರರ "ಕರ್ನಾಟಕದಲ್ಲಿ ಸ್ತ್ರೀ ಸಮಾಜ" ಕೃತಿಗಳು ಕರ್ನಾಟಕದ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಡುವುದಾದರೂ ಇಲ್ಲೆಲ್ಲಾ ಹೊಯ್ಸಳ ಮಹಾಮಂಡಳೇಶ್ವರರನ್ನು ಕುರಿತು ಸಮಗ್ರವಾದ ಅಧ್ಯಯನಗಳಾಗಿಲ್ಲ. ಇಲ್ಲೆಲ್ಲಾ ಪ್ರಾಸಂಗಿಕವಾಗಿ ಹೊಯ್ಸಳ ಮಹಾಮಂಡಳೇಶ್ವರರ ಬಗ್ಗೆ ಕ್ವಚಿತ್ತಾದ ಮಾಹಿತಿಗಳಿವೆ.

ಚರಿತ್ರೆ, ಸಂಸ್ಕೃತಿಗಳನ್ನು ಹೊರತುಪಡಿಸಿದರೆ ಹೊಯ್ಸಳ ಯುಗದ ಅತ್ಯಂತ ಮುಖ್ಯ ಕೃತಿಗಳೆಂದರೆ ವಾಸ್ತುಶಿಲ್ಪವನ್ನು ಕುರಿತ ಕೃತಿಗಳು. ಇದರಲ್ಲಿ ಷ ಶೆಟ್ಟರ್ ಅವರ "ದಿ ಹೊಯ್ಸಳ ಟೆಂಪಲ್ಸ್" ಎರಡು ಸಂಪುಟಗಳು, ಎಸ್. ಶ್ರೀಕಂಠ ಶಾಸ್ತ್ರಿ ಅವರ "ಹೊಯ್ಸಳ ವಾಸ್ತುಶಿಲ್ಪ", ಎಲ್. ನರಸಿಂಹಾಚಾರ್ ಅವರ "ಬೇಲೂರು", ಎಸ್.ಗಂಗಾಂಬಿಕೆ ಅವರ "ಬೇಲೂರು", ಕೆ ವಸಂತಲಕ್ಷ್ಮಿ ಅವರ "ಹೊಯ್ಸಳ ಶಿಲ್ಪಕಲೆ" ಮತ್ತು "ಹಾಸನ ಜಿಲ್ಲೆಯ ಹೊಯ್ಸಳ ಬಸದಿಗಳು", ಕೃತಿಗಳು. ಷ. ಶೆಟ್ಟರ್ ಅವರ "ಸೋಮನಾಥಪುರ", ದೇವರಾಜ್ ಅವರ "ಹಿಸ್ಟರಿ ಆಫ್ ಸೋಮನಾಥ ಪುರ ಟೆಂಪಲ್ ಕಾಂಪ್ಲೆಕ್ಸ್" ಇವೆಲ್ಲವೂ ಹೊಯ್ಸಳ ವಾಸ್ತುಶಿಲ್ಪವನ್ನು ಕುರಿತು ಮಾನತಾಡುವಾಗ ಹೊಯ್ಸಳ ಮಹಾಮಂಡಳೇಶ್ವರರು ಈ ದೇವಾಲಯಗಳಿಗೆ ನೀಡಲಾಗಿರುವ ದಾನಗಳನ್ನು ಕುರಿತು ಮಾತನಾಡುತ್ತವೆಯೇ ಹೊರತು ಅವರ ಇನ್ನಿತರ ಸಾಹಿತ್ಯಕ ಕೊಡುಗೆಗಳನ್ನು ಕುರಿತು ಮಾತನಾಡುವುದಿಲ್ಲ.

ಚರಿತ್ರೆ, ಸಂಸ್ಕೃತಿ, ವಾಸ್ತುಶಿಲ್ಪಗಳನ್ನು ಹೊರತುಪಡಿಸಿದರೆ ಉಳಿದಂತೆ ಹೊಯ್ಸಳರ ಕಾಲದಲ್ಲಿ ರಚಿತವಾದ ಕೃತಿಗಳನ್ನು ಕುರಿತು ಸಂಗ್ರಹಗೊಂಡಿರುವ ಸಾಹಿತ್ಯಕ ಕೃತಿಗಳಿಗೆ ವಿಶೇಷವಾದ ಸ್ಥಾನವಿದೆ. ಈ ಗ್ರಂಥಗಳೇ ನನಗೆ ನಿಜವಾದ ಆಕರಕೃತಿಗಳಾಗಿರುವುದು. ಡಾ. ಡಿ.ಎಲ್. ನರಸಿಂಹಾಚಾರ್ ಅವರಯ ಸಂಪಾದಿಸಿದ ಶಬ್ಧಮಣಿದರ್ಪಣ, ಶ್ಯಾಮಾಶಾಸ್ತ್ರಿ. ಆರ್. ಅವರು ಸಂಪಾದಿಸಿದ ರುದ್ರಭಟ್ಟ ವಿರಚಿತಮಾದ ಜಗನ್ನಾಥ ವಿಜಯ, ಮರಿಯಪ್ಪ ಭಟ್ಟ ಎಂ ಅವರು ಸಂಪಾದಿಸಿದ ವ್ಯವಹಾರಗಣಿತ, ಮಂಜುನಾಥನ್. ಜಿ. ಜಿ ಅವರು ಸಂಪಾದಿಸಿದ ಆಚಣ್ಣ–ಅಗ್ಗಳ ಸಂಪುಟ {ಸಮಗ್ರ ಕನ್ನಡ ಜೈನ ಸಾಹಿತ್ಯ ಮಾಲೆ 12}, ಸಿ. ಪಿ. ಕೃಷ್ಣಕುಮಾರ್ ಅವರು ಸಂಪಾದಿಸಿದ ಜನ್ನ ಸಂಪುಟ {ಸಮಗ್ರ ಕನ್ನಡ ಜೈನ ಸಾಹಿತ್ಯ ಮಾಲೆ

13}, ಹೆಂಡಿ ಬಿ. ಬಿ.(ಸಂ) ಅವರು ಸಂಪಾದಿಸಿದ ದೀಕ್ಷಾಬೋದೆ, ಹಿರೇಮಠ. ಆರ್. ಸಿ. ಅವರು ಸಂಪಾದಿಸಿದ ಪದ್ಮರಾಜ ಪುರಾಣ, ಬಸಪ್ಪ. ಎಸ್ ಅವರು ಸಂಪಾದಿಸಿದ ಸಾನಂದ ಚರಿತೆ, ಎಸ್.ಎಂ ಹರದಗಟ್ಟಿ ಅವರು ಬರೆದಿರುವ ಕವಿರಾಘವಾಂಕ ಮತ್ತು ಅವನ ಕೃತಿಗಳು, ಮಾಳವಾಡ. ಸ. ಸ ಅವರು ಸಂಪಾದಿಸಿದ ರಾಘವಾಂಕ ಚಾರಿತ್ರ್ಯ, ಶಿವಮೂರ್ತಿಶಾಸ್ತ್ರಿ ಅವರು ಸಂಪಾದಿಸಿದ ವೀರೇಶಚರಿತೆ, ಹೆಂಡಿ ಬಿ. ಬಿ. ಅವರು ಸಂಪಾದಿಸಿದ ದೀಕ್ಷಾಬೋಧೆ, ಕುಲಕರ್ಣಿ. ಬಿ. ಎಸ್. ಅವರು ಸಂಪಾದಿಸಿದ ನೇಮಿನಾಥ ಪುರಾಣಂ,

ಬೆಳ್ಳಿಕೋಟೆ ರಾಮಚಂದ್ರಶರ್ಮ ಅವರು ಸಂಪಾದಿಸಿದ ನಾನಾರ್ಥ ರತ್ನಮಾಲಾ ಆಫ್ ಇರುಗಪ್ಪ ದಂಡನಾಥ: ಎಂ. ಎನ್. ಶ್ರೀನಿವಾಸ ಅಯ್ಯಂಗಾರ್ ಅವರು ಬರೆದಿರುವ ಸಂಸ್ಕೃತ ಕವಿ ಚರಿತ್ರೆ ಸಂಪುಟ 1 ಮತ್ತು 2, ನರಸಿಂಹಾಚಾರ್ಯ.ಆರ್ ಅವರ ಕರ್ನಾಟಕ ಕವಿ ಚರಿತೆ ಸಂ 1, 2, 3 ಈ ಎಲ್ಲಾ ಕೃತಿಗಳನ್ನು ಸಂಪಾದಿಸಿರುವ ಸಂಪಾದಕರುಗಳು ಕನ್ನಡ ಸಾಹಿತ್ಯದ ಹಿನ್ನೆಲೆಯಿರುವ ವಿದ್ವಾಂಸರು. ಆದರೂ ಇವರೆಲ್ಲರೂ ಈ ಸಾಹಿತ್ಯ ಕೃತಿಗಳ ಪೋಷಕರನ್ನು ಹೊಯ್ಸಳ ದೊರೆಗಳು ಎಂತಲೇ ಪ್ರತಿಪಾದಿಸುತ್ತಾರೆ. ಈ ಕೃತಿಯಲ್ಲಿ ಕವಿಯ ಬಗ್ಗೆ ಬರೆಯುವಾಗ ಅವನ ದೇಶ, ಕಾಲ, ಸಾಹಿತ್ಯದ ಪ್ರಸ್ತುತತೆ, ವಿಶೇಷತೆ, ಸಾಹಿತ್ಯದ ಪೋಷಕರು, ಸಾಹಿತ್ಯ ಚರಿತ್ರೆಯಲ್ಲಿ ಈ ಕವಿಗಳ ಸ್ಥಾನಮಾನ ಎಲ್ಲವನ್ನೂ ಕುರಿತು

ಚಿಂತಿಸಿರುವರಾದರೂ ಈ ಎಲ್ಲಾ ಸಾಧನೆಗಳಿಗೆ ಪೋಷಕರಾದ ಹೊಯ್ಸಳ ದೊರೆಗಳಿಗೆ ಎಲ್ಲಾ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಈ ಸಾಹಿತ್ಯ ಕೃತಿಗಳನ್ನು ಹೊಯ್ಸಳ ಯುಗದ ಸಾಮಾಜಿಕ ಸಂಗತಿಗಳಿಗೆ ಮತ್ತು ಸಾಹಿತ್ಯಿಕ ಸಾಧನೆಗಳಿಗೆ ನಾನು ಬಳಸಿಕೊಳ್ಳುತ್ತಿರುವೆನೇ ಹೊರತು ಇಲ್ಲೂ ಕೂಡ ಹೊಯ್ಸಳ ಮಹಾಮಂಡಳೇಶ್ವರರ ಬಗೆಗಿನ ಮಾಹಿತಿಯಿಲ್ಲ. ಇಂತಹ ಎಷ್ಟೋ ಕವಿಗಳ ಪೋಷಕರು ದಂಡನಾಯಕರೂ, ಮಹಾಮಂಡಳೇಶ್ವರರೇ ಹೊರತು ರಾಜಮಹಾರಾಜರಲ್ಲ.

ಇದುವರೆಗೂ ನಡೆದಿರುವ ಹೊಯ್ಸಳರ ಬಗೆಗಿನ ಅಧ್ಯಯನಗಳಲ್ಲಿ ಅಲ್ಲೊಮ್ಮೆ ಇಲ್ಲೊಮ್ಮೆ ಕೆಲವೇ ಬೆರಳೆಣಿಕೆಯ ಮಹಾಮಂಡಳೇಶ್ವರರನ್ನು ಉಲ್ಲೆಖಿಸಿದ್ದಾರಷ್ಟೆ. ಆದ್ದರಿಂದ ಈ ಕೊರತೆಯನ್ನು ತುಂಬುತ್ತಲೇ, ಕನ್ನಡ ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆ ನಿಂತು ಆ ಪ್ರದೇಶಗಳನ್ನು ಸಂಪೂರ್ಣವಾಗಿ ತಮ್ಮ ಹದ್ದುಬಸ್ತಿನಲ್ಲಿಟ್ಟುಕೊಂಡು ಅಲ್ಲಿನ ಸರ್ವಾಂಗೀಣ ಸಂವರ್ಧನೆಗೆ ಕಾರಣೀಭೂತರಾದ ಮತ್ತು ಆ ಮೂಲಕ ನಮ್ಮ ನಾಡಿನ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಔನ್ನತ್ಯಕ್ಕೇರಿಸಿದ್ದ ಹೊಯ್ಸಳ ಮಹಾಮಂಡಳೇಶ್ವರರನ್ನು ಕುರಿತು ಅಧ್ಯಯನ ನಡೆಸಲಾಗಿದೆ.

# ಅಧ್ಯಾಯ 3

## ಸ್ಥಳೀಯ ಆಡಳಿತದ ಸುಭಗತೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು

ನಾಡಿನ ಚರಿತ್ರೆಯೆಂದರೆ ಕೇವಲ ಚಕ್ರವರ್ತಿಗಳ ರಾಜಕೀಯ ಮೇಲಾಟಗಳಾಗಲಿ, ಅವರು ನಿರ್ಮಿಸಿದ ದೇವಾಲಯಗಳು ಮತ್ತು ಅದರ ಭವ್ಯ ಕಲಾಸೌಧಗಳಾಗಲೀ, ಅವರ ವೈಭೋಗದ ಜೀವನಕ್ರಮವಾಗಲೀ, ಯುದ್ಧಚಿತ್ರಣಗಳಲ್ಲಿ ಕಂಡುಬರುವ ಶೌರ್ಯ ಸಾಹಸಗಳಾಗಲೀ ಅಷ್ಟೇ ಅಲ್ಲ. ಇದರೊಂದಿಗೆ ಒಂದು ಕಾಲಘಟ್ಟದಲ್ಲಿ ಆ ನಾಡಿನ ಸಾಮಾನ್ಯ ಜನರ ಬದುಕಿನಲ್ಲಿ ಆದ ತಲ್ಲಣಗಳೇನು? ಅವರಲ್ಲಿ ಇದ್ದ ತವಕಗಳೇನು? ಅಧಿಕಾರದ ಯಾವ ಪರಿಕ್ರಮಗಳಿಂದ ಅವರ ಬದುಕಿನಲ್ಲಿ ಹಸನು ಮೂಡಿತು? ಇದಕ್ಕೆ ಕಾರಣಕರ್ತರಾದ ಅಧಿಕಾರಿಗಳಾರು? ಅವರ ರಾಜಕೀಯ ನಡೆಗಳಿಗೆ ಹೊಂದಿಕೊಳ್ಳುವ ವಾತಾವರಣ ಅಂದಿನ ಸಮಾಜದಲ್ಲಿ ಇತ್ತೇ? ಮುಂತಾಗಿ ಕೇಳಿಕೊಳ್ಳಬೇಕಾಗುತ್ತದೆ. ಕೇವಲ ರಾಜಕೀಯ ಸಂಗತಿಗಳು ಆಂಶಿಕ ಬದುಕನ್ನು ಮಾತ್ರ ಪ್ರತಿಫಲಿಸುತ್ತದೆ. ಇದರೊಂದಿಗೆ ಸಮಕಾಲೀನ ಸಮಾಜದ ಆಗುಹೋಗುಗಳನ್ನು ಅರ್ಥ ಮಾಡಿಕೊಳ್ಳಬೇಕಾದರೆ ನಮಗೆ ಮುಖ್ಯವಾಗಿ ಬೇಕಾಗಿದ್ದು ಸಾಮಾನ್ಯ ಜನರೊಂದಿಗೆ ಬೆರೆತು ಅವರ ಬೇಕು ಬೇಡಗಳನ್ನೆಲ್ಲಾ ಅರಿತು ಆಡಳಿತದ ಯಂತ್ರಕ್ಕೆ ಸಮವರ್ತಿಯಾಗಿ ಸಾಗುತ್ತಿದ್ದ ಎರಡನೆಯ ಹಂತದ ಅಧಿಕಾರಿಗಳಾದ ಮಹಾಮಂಡಳೇಶ್ವರರನ್ನು ಅರ್ಥ ಮಾಡಿಕೊಳ್ಳುವುದರಿಂದ ಮಾತ್ರ. ಅವರು ಹುಟ್ಟುಹಾಕಿದ ಆರ್ಥಿಕ ಹಾಗೂ ಸಾಮಾಜಿಕ ವಿಷಯಗಳು ನಾಡಿನಲ್ಲಿ ಸ್ಥಳೀಯತೆಯನ್ನೂ ಹಾಗೂ ಸಾಂಸ್ಕೃತಿಕ ಚರಿತ್ರೆಯ ವಿವಿಧ ಆಯಾಮಗಳನ್ನು ಕನ್ನಡಿಯಂತೆ ತೋರುತ್ತದೆ ಎಂದರೆ ತಪ್ಪಲ್ಲ.

ಈ ನೆಲೆಗಟ್ಟಿನಿಂದ ಯೋಚಿಸಿದರೆ, ಅರಸರಿಗಿಂತ ಅವರ ಅಧೀನತೆಯಲ್ಲಿರುವ ಆಡಳಿತಗಾರರೇ ನಾಡಿನ ಇತಿಹಾಸವನ್ನು ನೇರವಾಗಿ ಪ್ರಭಾವಿಸಿದವರು. ಕಾರಣ ಇವರಿಗೆ ಸಮಕಾಲೀನ ಘಟ್ಟದಲ್ಲಿ ಸಮಾಜದಲ್ಲಿ ಅವಶ್ಯವಿರುವ ಸಂಗತಿಗಳು ಯಾವುವು ಎಂಬುದರ ಅರಿವು ಸಮಗ್ರವಾಗಿತ್ತು. ವಿವಿಧ ಮಜಲುಗಳಲ್ಲಿ, ಪದವಿಗಳಲ್ಲಿ, ಸ್ಥಾನಮಾನಗಳಲ್ಲಿ ನಿಯುಕ್ತರಾಗಿದ್ದ ಆಡಳಿತಾಧಿಕಾರಿಗಳು ನಿಜವಾದ ಕಾರ್ಯಾಂಗವಾಗಿ ಮಾನ್ಯರಾಗಿದ್ದಾರೆ. ಸಾಮಾಜಿಕ ರಚನೆಯಲ್ಲಿ ಆಡಳಿತವು ಮಹತ್ವದ ಅಂಗ. ಒಂದು ಪ್ರದೇಶದ ಆಡಳಿತ ವ್ಯವಸ್ಥೆಯ ಸಂಪೂರ್ಣ ಚಿತ್ರ ಸಿಗಬೇಕಾದರೆ ಆಡಳಿತಗಾರರು ಹಾಗೂ ಸಾಮಾನ್ಯ ಪ್ರಜೆಗಳ ನಡುವೆ ಇದ್ದ ಸಂಬಂಧಗಳ ಸ್ವರೂಪವನ್ನು ಕುರಿತಾದ ಅಧ್ಯಯನಗಳು ನಡೆಯಬೇಕು.

ಈ ನಿಟ್ಟಿನಲ್ಲಿ ಈ ಅಧ್ಯಾಯವು ಹೆಚ್ಚಿನ ಬೆಳಕನ್ನು ಚೆಲ್ಲಲಿದೆ. ಅರಸನಿಂದ ನೇಮಿಸಲ್ಪಟ್ಟ ಮಹಾಮಂಡಳೇಶ್ವರ ಎಂಬ ಅಧಿಕಾರಿವರ್ಗವು ಅರಸರೊಂದಿಗೆ ನಿಷ್ಠೆಯನ್ನು ಹೊಂದಿಯೂ ಪ್ರಾಂತ್ಯಾಡಳಿತದಲ್ಲಿ ಮತ್ತು ಸ್ಥಳೀಯ ಆಡಳಿತದಲ್ಲಿ ಮುಖ್ಯ ಪರಿಷ್ಕಾರಗಳನ್ನು ಮಾಡುತ್ತಿತ್ತು. ತಮ್ಮ

ಅಧೀನದಲ್ಲಿದ್ದ ಬಹಳ ಮುಖ್ಯ ಪ್ರಭಾವಶಾಲಿ ನಾಗರಿಕರಾದ ವರ್ತಕರು, ಗಾವುಂಡರು, ಮಹಾಜನರು, ಮೊದಲಾದವರನ್ನು ತಮ್ಮ ನಿರ್ದೇಶನದಂತೆ ಕಾರ್ಯನಿರ್ವಹಿಸುವ ಕಾರ್ಯಕ್ಷಮತೆಯನ್ನು ಹೊಂದಿರುತ್ತಿದ್ದರು. ಈ ಮೂಲಕ ಚಕ್ರವರ್ತಿಗೂ ಹಾಗೂ ಸಾಮಾನ್ಯ ಪ್ರಜೆಗಳಿಗೂ ನಡುವೆ ಬಹಳ ಮುಖ್ಯವಾದ ಕೊಂಡಿಯಾಗಿದ್ದರು.

ಹೊಯ್ಸಳರ ರಾಜ್ಯಾಡಳಿತವು ವಿಕೇಂದ್ರೀಕರಣವಾಗಿತ್ತು. ಆಡಳಿತವು ಪಂಚ ಪ್ರಧಾನ ಪರಿಷತ್ತಿನಲ್ಲಿ ಸಮಾವೇಶಗೊಂಡಿತ್ತು. ಇದರಲ್ಲಿದ್ದ ಪ್ರಧಾನರೆಂದರೆ ಸಂಧಿವಿಗ್ರಹಿ, ಶ್ರೀಕರಣಾಧಿಕಾರಿ, ಹಿರಿಯ ಭಂಡಾರಿ, ಸೇನಾಧಿಪತಿ, ಮಹಾಪಸಾಯತ ಎಂಬ ಅಧಿಕಾರಿ ವರ್ಗ. ಕೆಲವು ಪ್ರದೇಶಗಳು ಅರಸನ ನೇರ ಹತೋಟಿಗೆ ಒಳಪಟ್ಟಿದ್ದು ಇದನ್ನು ರಾಜಮನೆತನದ ಸದಸ್ಯರು, ಮಹಾಮಂಡಳೇಶ್ವರರು ಅಥವಾ ದಂಡನಾಯಕರು ನೋಡಿಕೊಳ್ಳುತ್ತಿದ್ದರು. ತಲಕಾಡು, ಗಂಗವಾಡಿ, ಕೊಂಗುನಾಡು, ನೊಳಂಬವಾಡಿ, ಪುನ್ನಾಡು, ನಂಗಲಿ ಮುಂತಾದವು ಅಂದು ಪ್ರಚಲಿತವಾಗಿದ್ದ ರಾಜ್ಯದ ಬಹಳ ಮುಖ್ಯವಾದ ಪ್ರಾಂತಗಳು. ಈ ಪ್ರಾಂತಗಳು ಮತ್ತು ಇವುಗಳ ಒಳಗಿರುವ ನಾಡುಗಳು ಬಹುಪಾಲು ಮಹಾಮಂಡಳೇಶ್ವರರ ಅಧೀನಕ್ಕೆ ಒಳಪಡುತ್ತಿದ್ದವು. ಇದು ಆಡಳಿತದಲ್ಲಿನ ಶ್ರೇಣೀಕೃತ ವ್ಯವಸ್ಥೆಯನ್ನು ಹೇಗೆ ಸೂಚಿಸುತ್ತದೆ ಎಂಬುದನ್ನು ಕಂಡುಕೊಂಡಿರುವುದೇ ಈ ಅಧ್ಯಯನದ ವಿಶೇಷವಾಗಿದೆ.

ಮಹಾ ಎಂಬುದಕ್ಕೆ ದೊಡ್ಡ, ವಿಸ್ತಾರ ಇತ್ಯಾದಿ ಅರ್ಥಗಳಿವೆ. ಮಂಡಳ ಪದವು ಭೂಮಿ, ಪ್ರದೇಶ ಎಂಬ ಅರ್ಥಗಳನ್ನು ಒಳಗೊಂಡಿದೆ. ಒಟ್ಟಾರೆಯಾಗಿ ಈ ಮಹಾಮಂಡಳೇಶ್ವರ ಎಂಬ ಪದಕ್ಕೆ ವಿಸ್ತಾರವಾದ ಭೂಭಾಗದ ಒಡೆಯ ಎಂದು ಅರ್ಥ ಹೇಳಬಹುದು. ಪ್ರಸ್ತುತ ಅಧ್ಯಯನದ ಕಾಲಘಟ್ಟವಾದ ಹೊಯ್ಸಳರಿಗೆ ಅನ್ವಯಿಸಿ ಈ ವಿಶೇಷವಾದ ಮಾತನ್ನು ಒಂದು ಪ್ರಮುಖವಾದ ಪಾರಿಭಾಷಿಕವಾಗಿ ಗ್ರಹಿಸಬೇಕಾಗುತ್ತದೆ. ಅರಸನು ಇಡೀ ಸಾಮ್ರಾಜ್ಯದ ಒಡೆಯನಾದರೆ ಈ ಮಹಾಮಂಡಲೇಶ್ವರರು ಸಾಮ್ರಾಜ್ಯವನ್ನು ವಿಭಾಗಿಸಲ್ಪಟ್ಟ ವಿಸ್ತಾರವಾದ ಆಡಳಿತ ವಿಭಾಗಗಳನ್ನು ನೋಡಿಕೊಳ್ಳುವ ಅಧಿಕಾರಿವರ್ಗದವರಾಗಿದ್ದರು. ಇದುವರೆಗೂ ಯಾವ ಸಂಶೋಧಕರಿಗೂ ಸೂಕ್ಷ್ಮ ಅಧ್ಯಯನಕ್ಕೆ ದಕ್ಕದ ವಿಷಯವೊಂದನ್ನು ಪ್ರಸ್ತುತ ಅಧ್ಯಯನವು ಮುನ್ನಲೆಗೆ ತರುವ ಪ್ರಯತ್ನವನ್ನು ಮಾಡಿದೆ. ಅದೆಂದರೆ ಬಹುತೇಕ ಪ್ರಮುಖ ನಾಡುಗಳನ್ನೇ ಕೇಂದ್ರವಾಗಿಟ್ಟುಕೊಂಡು ಮಹಾಮಂಡಳೇಶ್ವರರ ಆಡಳಿತವು ಕೇಂದ್ರೀಕರಣಗೊಂಡಿತ್ತು. ಅಕ್ಕಪಕ್ಕದ ನಾಡುಗಳನ್ನೂ ಈ ಅಧಿಕಾರಕೇಂದ್ರಕ್ಕೆ ಒಳಪಡಿಸಿಕೊಳ್ಳುವ ನಿರಂತರ ಪ್ರಯತ್ನಗಳು ನಡೆಯುತ್ತಲೇ ಇದ್ದುದನ್ನು ನಾವು ವಿಶೇಷವಾಗಿ ಗಮನಿಸಬಹುದು. ನಾಡುಗಳ ವ್ಯಾಪ್ತಿಯೇ ಅವರನ್ನು ಮಂಡಳೇಶ್ವರರೋ ಅಥವಾ ಮಹಾಮಂಡಳೇಶ್ವರರೋ ಎಂಬುದನ್ನು ನಿರ್ಧರಿಸುತ್ತಿತ್ತು.

ಕೆಲವೊಮ್ಮೆ ಈ ಮಹಾಮಂಡಳೇಶ್ವರರು ಪ್ರಬಲರಾಗಿದ್ದ ಪಕ್ಷದಲ್ಲಿ ವಂಶಪಾರಂಪರ್ಯವಾಗಿ ಅಧಿಕಾರದಲ್ಲಿ ಮುಂದುವರಿಯುತ್ತಿದ್ದರು. ದುರ್ಬಲರಾದ ಮಂಡಳೇಶ್ವರರನ್ನು ಅರಸನೇ ಅಧಿಕಾರದಿಂದ ಬದಲಾಯಿಸಿ ಹೊಸ ಮಂಡಲೇಶ್ವರರನ್ನು ನೇಮಿಸುತ್ತಿದ್ದನು. ಈ ಅಧಿಕಾರಿಗಳು ಚಕ್ರವರ್ತಿಗಳಿಗೆ ಅಧೀನರಾಗಿ

ಆಳುತ್ತಿರಬೇಕಾಗಿತ್ತು. ಆದರೂ ಇವರಿಗೆ ಸಾಕಷ್ಟು ಅಧಿಕಾರ ಸ್ವಾತಂತ್ರ್ಯವಿತ್ತು. ಪ್ರತಿಯೊಬ್ಬ ಮಹಾಮಂಡಳೇಶ್ವರರ ಬಹಳ ಮುಖ್ಯವಾದ ಕಾರ್ಯಚಟುವಟಿಕೆಗಳೆಂದರೆ ಮಂತ್ರಿಮಂಡಲದ ಸರಿಯಾದ ನಿರ್ವಹಣೆ, ರಾಜಾದಾಯದ ಮುಖ್ಯವಾದ ಕೇಂದ್ರಗಳಾದ ಮಾರುಕಟ್ಟೆ, ದೇವಾಲಯಗಳು, ಸಾರ್ವಜನಿಕ ಸೇವೆಗಳನ್ನು ಬಲಿಷ್ಠಗೊಳಿಸುವುದು ಹಾಗೂ ಕಂದಾಯ ವ್ಯವಸ್ಥೆಯನ್ನು ಸುಬಲಗೊಳಿಸುವುದು ಮತ್ತು ಸೈನ್ಯದ ನಿರ್ವಹಣೆಯಲ್ಲಿ ಹೊಸಹೊಸ ಆವಿಷ್ಕಾರಗಳನ್ನು ಮಾಡುವುದೇ ಆಗಿರುತ್ತಿದ್ದವು.

ಈ ಮಹಾಮಂಡಳೇಶ್ವರರು ತಮ್ಮ ವೃತ್ತಿ ಬದುಕಿನಲ್ಲಿ ಹಂತಹಂತವಾಗಿ ಮೇಲೇರಿರುವುದು ಪ್ರಸ್ತುತ ಅಧ್ಯಯನದಿಂದ ಸಾಬೀತಾಗಿದೆ. ಅವರು ಅತ್ಯುನ್ನತ ಪದವಿಯನ್ನು ಪಡೆಯುವ ಮೊದಲು ಅತ್ಯಂತ ನಿಷ್ಠೆಯನ್ನು ಅಪೇಕ್ಷಿಸುವ ಹಲವಾರು ಹುದ್ದೆಗಳಲ್ಲಿದ್ದು ನಂಬಿಕೆಯನ್ನು ಸಂಪಾದಿಸಿ, ದಕ್ಷತೆಯನ್ನು ಪ್ರದರ್ಶಿಸಿ ರಾಜನಿಗೆ ಸಮೀಪವರ್ತಿಗಳಾದುದನ್ನು ಈ ಅಧ್ಯಯನದಲ್ಲಿ ಉದಾಹರಣೆಗಳ ಸಮೇತ ವಿವರಿಸಲಾಗಿದೆ. ಅಂತವುಗಳಲ್ಲಿ ಅಂತಃಪುರಾಧ್ಯಕ್ಷರು, ಪೆರ್ಗಡೆಗಳು, ದಂಡನಾಯಕರು ಆಗಿದ್ದವರು ಕ್ರಮೇಣ  ಮಹಾಮಾತ್ಯ–ಮಹಾಪ್ರಧಾನ, ಪಸಾಯತ–ಮಹಾಪಸಾಯತ, ರಾಜಾಧ್ಯಕ್ಷರು ಆಗಿ ಮುಂದೆ ಮಹಾಮಂಡಳೇಶ್ವರ ಪದವಿಯನ್ನು ಅಲಂಕರಿಸಿದವರಾಗಿದ್ದಾರೆ. ಕೇಂದ್ರಾಡಳಿತದಲ್ಲಿ ಉನ್ನತ ಅಧಿಕಾರಿಗಳಾಗಿದ್ದು ಕೇಂದ್ರದ ತೆರಿಗೆ, ಸೈನ್ಯ ಮೊದಲಾದ ವ್ಯವಸ್ಥೆಗಳ ಮೇಲ್ವಿಚಾರಕರಾಗಿರುತ್ತಿದ್ದರು. ಇವರಲ್ಲಿ ಕೆಲವರು ದಂಡನಾಯಕ/ ಸೇನಾಪತಿಗಳು ಆಗಿದ್ದು ಕೆಲವರು ಸುಂಕಕ್ಕೆ, ಕೆಲವರು ಸೈನ್ಯಕ್ಕೆ, ಕೆಲವರು ವಿದೇಶಾಂಗಕ್ಕೆ ಹೀಗೆ ವಿವಿಧ ಇಲಾಖೆಗಳಿಗೆ ಸಂಬಂಧಪಟ್ಟವರಾಗಿದ್ದರು. ಇವರು ಕೆಲವೊಮ್ಮೆ ಪ್ರಾಂತ್ಯಗಳ ಪ್ರಭುಗಳು ಆಗಿದ್ದರು. ಪ್ರಮುಖವೂ ನಿರ್ಣಾಯಕವೂ ಆದ ಯುದ್ಧದಲ್ಲಿ ಜೀವದ ಹಂಗು ತೊರೆದು ಚಕ್ರವರ್ತಿಗೆ ನಿಷ್ಠೆಯಿಂದ ಹೋರಾಡಿ ಜಯ ತಂದುಕೊಟ್ಟಂತವರನ್ನು ಅರಸನು ಮಹಾಮಂಡಳೇಶ್ವರ ಎಂದು ಗೌರವಿಸಿ ಆಯಕಟ್ಟಿನ ಜಾಗಗಳಿಗೆ ನಿಯಮಿಸುತ್ತಿದ್ದನು. ಈ  ಅಧಿಕಾರಿಗಳು (ನನ್ನ ಮಹಾಪ್ರಬಂಧದಲ್ಲಿ ಇಂತಹ 50ಕ್ಕೂ ಹೆಚ್ಚು ಅಧಿಕಾರಿಗಳನ್ನು ಕುರಿತು ವಿವರಿಸಲಾಗಿದೆ.) ತಮ್ಮ ಅಧಿಕಾರಾವಧಿಯಲ್ಲಿ ಕೆಲವು ಕಾಲ ಮಹಾಪ್ರಧಾನರಾಗಿಯೂ, ದಂಡನಾಯಕರಾಗಿಯೂ ಮತ್ತು ತಮ್ಮ ಆಡಳಿತದ ಅತ್ಯುಚ್ಚ ಹಂತದಲ್ಲಿ ಮಹಾಮಂಡಳೇಶ್ವರರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಇದುವರೆಗಿನ ಅಧ್ಯಯನಗಳಲ್ಲಿ ಹೊಯ್ಸಳರ ಬಗ್ಗೆ ಪ್ರಸ್ತಾಪಿಸುವಾಗ ಇಂತಹ ಮಹಾಮಂಡಳೇಶ್ವರರನ್ನು ಸಾಮಾನ್ಯ ಅಧಿಕಾರಿಯಂತೆಯೇ ಉಲ್ಲೇಖಿಸಲಾಗುತ್ತಿತ್ತು. ಆ ಮಹಾಮಂಡಳೇಶ್ವರರ ಬಗ್ಗೆ ಇದುವರೆಗಿನ ಯಾವ ಸಂಶೋಧನೆಗಳೂ ವಿಶೇಷವಾಗಿ ನಡೆದಿಲ್ಲ. ಅಲ್ಲೊಮ್ಮೆ ಇಲ್ಲೊಮ್ಮೆ ಕ್ವಚಿತ್ತಾಗಿ ಅಥವಾ ಪ್ರಾಸಂಗಿಕವಾಗಿ ಈ ಹೊಯ್ಸಳ ಮಹಾಮಂಡಳೇಶ್ವರರನ್ನು ಉಲ್ಲೇಖಿಸಲಾಗಿದೆಯೇ ವಿನಃ  ಪ್ರತ್ಯೇಕವಾಗಿ, ಸೂಕ್ಷ್ಮವಾಗಿ ಅವರ ಅಧಿಕಾರವ್ಯಾಪ್ತಿ, ಪ್ರಾದೇಶಿಕ ವ್ಯಾಪ್ತಿಗಳನ್ನು ಅನುಲಕ್ಷಿಸಿ ವಿವರಣೆ ಮತ್ತು ವಿಶ್ಲೇಷಣೆ ನಡೆದಿಲ್ಲ. ಹಾಗಾಗಿ ಪ್ರಕೃತ ನನ್ನ ಅಧ್ಯಯನವು ಹೊಯ್ಸಳ ಮಹಾಮಂಡಳೇಶ್ವರರ ರಾಜಕೀಯ ಮಾತ್ರವೇ ಅಲ್ಲದೇ ಕನ್ನಡ ನಾಡನ್ನು ಪ್ರಾದೇಶಿಕತೆಯ ಹಿನ್ನೆಲೆಯಿಂದ ಕಟ್ಟಿ ಬೆಳೆಸಿದ ಬಗೆಯನ್ನು ಮತ್ತು ಆಡಳಿತದಲ್ಲಿ ತಂದ ಸುಭಗ ವಾತಾವರಣವನ್ನು ಮುನ್ನೆಲೆಗೆ ತರುತ್ತಿದೆ. ಈ ಮಹಾಮಂಡಳೇಶ್ವರರು ಹೊಯ್ಸಳ ಅರಸರ

ಆಡಳಿತಾವಧಿಯಲ್ಲಿ ನಿರ್ವಹಿಸಿದ ಬಹಳ ಪ್ರಮುಖವಾದ ರಾಜತಾಂತ್ರಿಕ ಜಾಣ್ಮೆ, ಶೌರ್ಯ, ಪರಾಕ್ರಮಗಳು ಹಾಗೂ ನಾಡಿಗೆ ಮತ್ತು ಸ್ಥಳೀಯ ಆಡಳಿತಕ್ಕೆ ಅವರು ನೀಡಿರುವ ಕಾಣಿಕೆಯ ಪೂರ್ವಪೀಠಿಕೆಯಂತೆ ಸಾಮಾನ್ಯವಾದ ವೈಯಕ್ತಿಕ ವಿಷಯಗಳನ್ನು ಈ ಮುಂದಿನಂತೆ ಅರಿಯಬಹುದು. ಮುಂದಿನ ಅಧ್ಯಾಯಗಳಲ್ಲಿ ಕೇವಲ ಉಲ್ಲೇಖಿತಗೊಳ್ಳುವ ಮಂಡಲೇಶ್ವರರ ಸ್ಥೂಲ ರಾಜಕೀಯ ಚಿತ್ರಣವನ್ನು ಈ ಅಧ್ಯಾಯದಲ್ಲಿ ನೋಡಬಹುದಾಗಿದೆ.

### 3.1 ಸೋಮೆಯ ಮತ್ತು ಅವನ ವಂಶೀಯರು

**ಸೋಮಯದಂಡನಾಯಕ :** "ಶ್ರೀಲಕ್ಷ್ಮೀನಾಭೀನಳಿನಜನಾದ ಬ್ರಹ್ಮನ ಪಾದಕಮಲಗಳಿಂದ...." ಉದಿಸಿದ ವಂಶದಲ್ಲಿ ದುದ್ದಿಯ ನಾಯಕನೆಂಬುವವನು 'ಪರಹಿತಾಕಾಂಕ್ಷಿ', 'ಸ್ವಾಮಿಸಂರಕ್ಷದಕ್ಷ', 'ಶಿಲಾಚಾರಾಗ್ರಗಣ್ಯ', 'ವೀರಲಕ್ಷ್ಮೀಲೋಲ'ನೆಂದು ಖ್ಯಾತಿವೆತ್ತಿದ್ದನು. ಈ ದುದ್ದಿಯ ನಾಯಕನ ಮಡದಿ ನಂನವೆ ನಾಯಕಿ. ಈ ದಂಪತಿಗಳ ಕುವರ ಮೈಲೆಯನಾಯಕ. ಈ ಮೈಲೆಯನಾಯಕನು ಕೀರ್ತಿವಾಂತ ಕಲ್ಯಾಣ ಚಾಲುಕ್ಯ ಸಾಮ್ರಾಜ್ಯಾಧಿಪನಾದ ಜಗದೇಕಮಲ್ಲ (2ನೆಯ ಜಯಸಿಂಹ)ನ ಆಳ್ವಿಕೆಯ ಅವಧಿಯಲ್ಲಿ 'ಸಾತ್ವಿಕಂ', 'ಸಾಹಸಿ', 'ಗಂಡಪೆಂಡಾರಂ', 'ಗಾಯಿ ಗೋವಳಂ' ಎಂಬ ಬಿರುದುಗಳಿಂದ ಕೀರ್ತಿ ಪಡೆದಿದ್ದನು. ಇವನ ಸತಿ ರೆಬ್ಬಲಾ ನಾಯಕಿ. ಇವರ ಮಗನಾದ ಪೆರ್ಗಡೆನಾಯಕನು "ಅದ್ರಿಗಳಲ್ಲಿ ಹೇಮಾಚಲವಿರುವಂತೆ" ಅಸಮಾನ ಕೀರ್ತಿಯನ್ನು ಸಂಪಾದಿಸಿದ್ದನು. ಪೆರ್ಗಡೆನಾಯಕನ ಮಡದಿ ರೇಕವೆನಾಯಕಿ. ಈ ದಂಪತಿಗಳ ಹಿರಿಯಮಗ ಮೇಳಯನಾಯಕ, ಕಿರಿಯ ಮಗ ಸೋಮೆಯದಂಡನಾಯಕ. ಗಂಗಾಧರಾರ್ಯ ಎಂಬಾತನು ಸೋಮೆಯದಂಡನಾಯಕನಿಗೆ ಗುರುವಾಗಿದ್ದನು. ಸೋಮೆಯ ದಂಡನಾಯಕನ ಪೂರ್ವಿಕರ ಬಗ್ಗೆ ಈ ಶಾಸನವೊಂದನ್ನು[1] ಹೊರತುಪಡಿಸಿದರೆ, ಸದ್ಯಕ್ಕೆ ಇನ್ಯಾವ ಮಾಹಿತಿಯೂ ತಿಳಿದುಬಂದಿಲ್ಲ.

ಸೋಮೆಯದಂಡನಾಯಕನ ಉಲ್ಲೇಖಗಳು ಮೈಸೂರು, ಮಂಡ್ಯ, ಬೆಂಗಳೂರು, ತುಮಕೂರು, ಚಿತ್ರದುರ್ಗ, ಹಾಸನ, ಚಿಕ್ಕಮಗಳೂರು ಜಿಲ್ಲೆಗಳ ಒಟ್ಟು 13 ಶಾಸನಗಳಲ್ಲಿ ಕಂಡುಬರುತ್ತದೆ. ಮೂರನೆಯ ನರಸಿಂಹನ ಆಳ್ವಿಕೆಯಲ್ಲಿ[2] ಸೋಮಯದಂಡನಾಯಕನು 'ಪಂಚಪ್ರಧಾನ' ಸಮಿತಿ ಎನಿಸಿದ ಮಂತ್ರಿ ಪರಿಷತ್ತಿನಲ್ಲಿ ಮಹಾಪ್ರಧಾನಿ, ಸಂಧಿವಿಗ್ರಹಿಯೂ ಆಗಿದ್ದುದು ಸ್ಪಷ್ಟವಾಗುತ್ತದೆ.

ಕ್ರಿ.ಶ. 1276ರ ಸೋಮನಾಥಪುರದ ಶಾಸನದಲ್ಲಿ[3] ಸೋಮಯ ದಂಡನಾಯಕನನ್ನು ವೀರನರಸಿಂಹ (3ನೆಯ ನರಸಿಂಹ)ನ 'ಪ್ರಿಯಪುತ್ರ' ಎಂದು ಕರೆದಿದೆ. ಮನೆಮಗ ಎಂಬರ್ಥದಲ್ಲಿ ಈ ಪದ ಪ್ರಯೋಗವಾಗಿರುವಂತೆ ತೋರುತ್ತದೆ. ಸೋಮಯದಂಡನಾಯಕನನ್ನು ಕೆಲವು ಶಾಸನಗಳಲ್ಲಿ 'ಪಾಡಿ' ಸೋಮೆಯದಂಡನಾಯಕ ಎಂತಲೂ ಉಲ್ಲೇಖಗೊಂಡಿದೆ. 'ಪಾಡಿ' ಎಂಬುದಕ್ಕೆ 'ಪ್ರಾಂತ್ಯ' ಎಂಬ ಅರ್ಥವಿರುವುದರಿಂದ,[4] ಈ ಅರ್ಥಗ್ರಹಿಕೆಯ ಮೇರೆಗೆ ಸೋಮಯದಂಡನಾಯಕನು ಬೆಮ್ಮತ್ತೂರು ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕ್ರಿ.ಶ.1295ರ ವೇಳೆಗೆ ಪ್ರಾಂತ್ಯಾಧಿಕಾರಿಯಾಗಿದ್ದನೆಂದು ತೋರುತ್ತದೆ. ಕ್ರಿ.ಶ.

1303[5] ಹಾಗೂ ಕ್ರಿ.ಶ.1322ರ ಬಾಗಿವಾಳಿನ ಶಾಸನಗಳು[6] ಸೋಮೆಯದಂಡನಾಯಕನನ್ನು 3ನೆಯ ಬಲ್ಲಾಳನ ಮೈದುನನೆಂದು ಸ್ಪಷ್ಟವಾಗಿ ತಿಳಿಸುತ್ತವೆ. ಮೂರನೆಯ ಬಲ್ಲಾಳನ ಸೋದರಿಯನ್ನು ವರಿಸಿದ ಸೋಮೆಯ ದಂಡನಾಯಕನು ಹಾಗೂ ಮೂರನೆಯ ನರಸಿಂಹನ ಅಧೀನದಲ್ಲಿದ್ದ ಸೋಮೆಯ ದಂಡನಾಯಕ ಒಬ್ಬನೇ ಎಂಬುದಾಗಿ ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ. ಈತನ ಅಂತ್ಯವನ್ನು ಕ್ರಿ.ಶ. 1303ರ ಬಾಗಿವಾಳಿನ ಶಾಸನ ತಿಳಿಸುತ್ತದೆ. ಇದರ ಪ್ರಕಾರ, ಬೆಮ್ಮತ್ತೂರಿನ ಪ್ರಾಂತ್ಯಾಧಿಕಾರಿಯಾಗಿದ್ದ ಸೋಮೆಯದಂಡನಾಯಕನು ಹೊಳಲ್ಕೆರೆಯಲ್ಲಿ ಕಂಪಿಲದೇವ(ಸೇವುಣರ ದಂಡನಾಯಕನಾದ 3ನೆಯ ಸಿಂಗೆಯ ದಂಡನಾಯಕನ ಮಗ) ನೊಂದಿಗೆ ಹೋರಾಡಿ, ಅವನನ್ನು ಸೋಲಿಸಿ ತಾನು ಮಡಿದನು. ಈ ಕದನದಲ್ಲಿಯೇ ಚಿಟ್ಟನಹಳ್ಳಿಯ ವೀರ ಹಡಪದ ಸಾಯಣ್ಣನು ಸೋಮೆಯ ದಂಡನಾಯಕನೊಂದಿಗೆ ಕೂಡಿ ಕಾದಿ, ಶತ್ರುಗಳನ್ನು ಹೊಡೆದುರುಳಿಸುವ ಸಂದರ್ಭದಲ್ಲಿ ಸಾವನ್ನಪ್ಪಿದುದನ್ನು ಕ್ರಿ.ಶ. 1303ರ ಚಿಟ್ಟನಹಳ್ಳಿಯ ಶಾಸನ [7] ತಿಳಿಸುತ್ತದೆ. ಇವನಿಗೆ ನಿಯೋಗಯೋಗಂಧರ, ಗಾಯಿಗೋವಳಂ, ನೀತಿಚಾಣಕ್ಯಂ ಎಂಬಿತ್ಯಾದಿ ಬಿರುದುಗಳಿದ್ದವು. ತನ್ನ ಅಂತ್ಯಕಾಲದಲ್ಲಿಯೂ ತನ್ನಧಿರಾಜರಿಗೆ ಉಪದ್ರವ ನೀಡುತ್ತಲೇ ಬಂದಿದ್ದ ಸೇವುಣರನ್ನು ಬಗ್ಗುಬಡಿಯುವಲ್ಲಿ ಯಶಸ್ವಿಯಾಗಿ, ಈ ಬಡಿದಾಟದಲ್ಲಿಯೇ ಅಸುನೀಗಿದನು.

**ಸಿಂಗೆಯ ದಂಡನಾಯಕ (ಕ್ರಿ.ಶ. 1297–1322)** : ಸಿಂಗೆಯ ದಂಡನಾಯಕ ಸೋಮೆಯ ದಂಡನಾಯಕನ ಹಿರಿಯ ಮಗ. ಇವನು ಕೆಲಕಾಲ ಹೊಸಕೋಟೆ ಮತ್ತು ಬೆಂಗಳೂರು ಪ್ರದೇಶಗಳನ್ನು ಆಳುತ್ತಿದ್ದನು. ನಂತರ ಬಹಳ ಮುಖ್ಯವಾಗಿ ಕ್ರಿ.ಶ. 1302ರ ಆನೇಕಲ್‌ನ ಶಾಸನವು[8] ತಿಳಿಸುವಂತೆ ಸಿಂಗಯದಂಡನಾಯಕನು ಜಿಗುಣಿ ಪ್ರದೇಶವನ್ನು ಆಳುತ್ತಿದ್ದನು. 3ನೆಯ ಬಲ್ಲಾಳನು ತನ್ನ ಅಧಿಕಾರ ವಿಕೇಂದ್ರಿಕರಣದ ಹೊಸ ಆಡಳಿತಾತ್ಮಕ ತಂತ್ರ ಪ್ರಯೋಗದಲ್ಲಿ ದಂಡನಾಯಕರನ್ನು ನಾಡುಗಳ ಕಾರ್ಯಪಾಲಕರಾಗಿ ನೇಮಿಸುತ್ತಿದ್ದನು. ಇಂತಹ ಒಂದು ನಾಡಾದ ಹೊಮ್ಮಳಿಗೆ ನಾಡು (ಜಿಗುಣಿ, ಆನೆಕಲ್, ಬನ್ನೇರುಘಟ್ಟ ಪ್ರದೇಶ) ಸಿಂಗಯದಂಡನಾಯಕನ ಆಳ್ವಿಕೆಗೆ ಕೆಲಕಾಲ ಒಳಪಟ್ಟಿತ್ತೆಂದು ಈ ಶಾಸನದಿಂದ ವೇದ್ಯವಾಗುತ್ತದೆ.

**ಬಲ್ಲಪ್ಪದಂಡನಾಯಕ (ಕ್ರಿ.ಶ. 1307–1361)** : ಈತ ಸೋಮಯದಂಡನಾಯಕನ ಕಿರಿಯ ಮಗ ಮತ್ತು ಸಿಂಗಯ ದಂಡನಾಯಕನ ತಮ್ಮ. ಬಲ್ಲಪ್ಪದಂಡನಾಯಕನ ಮೊದಲ ಉಲ್ಲೇಖ ನಮಗೆ ಸಿಗುವುದು. ಕ್ರಿ.ಶ. 1307ರ ವಿಭೂತಿಪುರದ ಶಾಸನದಲ್ಲಿ.[9] ಈ ಶಾಸನದಲ್ಲಿ ನೀಡಲಾದ ದತ್ತಿಯನ್ನು "ಬಲ್ಲಾಳನ ಬಾಳಿಗೂ ತೋಳಿಗೂ ಜಯವಾಗಲಿ ಮತ್ತು ಬಲ್ಲಪ್ಪದಂಡನಾಯಕನಿಗೆ ಶುಭವಾಗಲಿ" ಎಂದು ಹಾರೈಸಿ ನೀಡಿರುವುದು ಶಾಸನೋಕ್ತವಾಗಿದೆ. ಈ ಶಾಸನದ ಕಾಲಕ್ಕೆ ಬಲ್ಲಪ್ಪದಂಡನಾಯಕನು ದಂಡನಾಯಕ ಪದವಿಯಲ್ಲಿದ್ದುಕೊಂಡು 3ನೆಯ ಬಲ್ಲಾಳನು ತಮಿಳುನಾಡಿನಲ್ಲಿ ಹೊಯ್ಸಳರ ಪ್ರಭಾವವನ್ನು ಸ್ಥಾಪಿಸುವ ನಿಟ್ಟಿನಲ್ಲಿ ನಡೆಸಿದ ಯಾವುದೋ ಯುದ್ಧದಲ್ಲಿ ಅರಸನೊಂದಿಗೆ ಭಾಗಿಯಾಗಿದ್ದನೆಂದು ಊಹಿಸಬಹುದು.

ಈ ಶಾಸನದ ನಂತರ ಕ್ರಿ.ಶ. 1328ರವರೆಗೂ ಬಲ್ಲಪ್ಪ ದಂಡನಾಯಕನ ಉಲ್ಲೇಖವಿರುವ ಯಾವ ಶಾಸನವೂ ಸದ್ಯಕ್ಕೆ ಲಭಿಸಿರುವುದಿಲ್ಲ. ಏಕೆಂದರೆ ಈ ಅವಧಿಯಲ್ಲಿ ಬೆಂಗಳೂರು, ಆನೇಕಲ್, ಹೊಸಕೋಟೆ ಭಾಗಗಳಲ್ಲಿ ಬಲ್ಲಪ್ಪ ದಂಡನಾಯಕನ ಹಿರಿಯ ಸಹೋದರ ಸಿಂಗಯದಂಡನಾಯಕನು ಆಡಳಿತ ಯಂತ್ರದ ಜವಾಬ್ದಾರಿ ಹೊತ್ತಿರುತ್ತಾರೆ. ಕಾಲದ ಉಲ್ಲೇಖವಿರದ ಸೇಲಂ ಜಿಲ್ಲೆಯ ಶಂಕಗಿರಿ ತಾಲೂಕಿನ ಶಾಸನವು[10] ಬಲ್ಲಪ್ಪದಂಡನಾಯಕನು ನಿರ್ಮಿಸಿದ ಅಗ್ರಹಾರದ ವಿಷಯವನ್ನು ಪ್ರಸ್ತಾಪಿಸುತ್ತದೆ. ಈ ಎಲ್ಲ ಶಾಸನಾಧಾರಗಳಿಂದ 1307 ರಿಂದ 1328ರ ಅವಧಿಯಲ್ಲಿ ಬಲ್ಲಪ್ಪದಂಡನಾಯಕನು ತಮಿಳುನಾಡಿನಲ್ಲಿ 3ನೆಯ ಬಲ್ಲಾಳನು ನಡೆಸುತ್ತಿದ್ದ ಯುದ್ಧಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದನೆಂದು ತೋರುತ್ತದೆ.

ಕ್ರಿ.ಶ. 1328ರ ತೇಕಲ್‌ನ ಎರಡು ಶಾಸನಗಳಲ್ಲಿ[11] ಬಲ್ಲಪ್ಪದಂಡನಾಯಕನು 3ನೆಯ ಬಲ್ಲಾಳನ ಬಾಳಿಗೂ ತೋಳಿಗೂ ಜಯವಾಗಲಿ ಎಂದು ಆಶಿಸುತ್ತಾ ಕೈವಾರನಾಡಿನ ಕಱುಪಳ್ಳಿ ಮತ್ತು ಕೊಡಮ್ಬಲಿಯೂರಿನ ಪೂವೈಪಳ್ಳಿಯೊಳಗಣ ಸಕಲ ಸಂಪತ್ತನ್ನು ತೇಕಲ್‌ನ ವರದರಾಜಸ್ವಾಮಿಯ ವಿವಿಧ ಸೇವೆಗಳಿಗೆಂದು ದಾನವಾಗಿ ನೀಡಿದುದು ಉಲ್ಲೇಖಗೊಂಡಿದೆ. ಬಹುಶಃ ದಕ್ಷಿಣಭಾರತವನ್ನು ಮಹಮ್ಮದೀಯರ ದಾಳಿಯಿಂದ ರಕ್ಷಿಸಲು ಬಲ್ಲಾಳನು ನಡೆಸುತ್ತಿದ್ದ ಯುದ್ಧಗಳಲ್ಲಿ ಅವನಿಗೆ ವಿಜಯ ಲಭಿಸಲೆಂದು ಬಲ್ಲಪ್ಪದಂಡನಾಯಕನು ಈ ಶಾಸನಗಳಲ್ಲಿ ಹಾರೈಸಿರುವಂತಿದೆ.

ಕ್ರಿ.ಶ. 1337ರ ಚಿಂತಾಮಣಿಯ ಶಾಸನವು[12] ಬಲ್ಲಪ್ಪದಂಡನಾಯಕನ ಬಾಹುಬಲದ ನೆರವಿನಿಂದ ವೀರಬಲ್ಲಾಳನು ವಿಜಯ ಸಾಧಿಸಿದ ಸಂದರ್ಭದಲ್ಲಿ, ವೀರಬಲ್ಲಾಳನೊಡಗೂಡಿ ಶತೃಗಳೊಂದಿಗೆ ಕಾದಿ ಮಡಿದ ವೀರಪಂಮಣನ ಹೆಸರಿನಲ್ಲಿ ಕೈವಾರನಾಡಿನ ನಿವಾಸಿಗಳು ಕೆಲವು ಭೂದಾನಗಳನ್ನು ನೀಡಿದ ವಿಚಾರವನ್ನು ಒಳಗೊಂಡಿದೆ. ಕ್ರಿ.ಶ.1338ರ ಕೋಲಾರದ ಶಾಸನವು[13] ವಲ್ಲಪದಂಡನಾಯಕನ ಬಾಳಿಗೂ ತೋಳಿಗೂ ಜಯವಾಗಲಿ ಎಂದು ಹಾರೈಸಿ ಚೊಕ್ಕಪೆರುಮಾಳದಾಸನು ನೀಡಿದ ಭೂದಾನಗಳನ್ನು ತಿಳಿಸುತ್ತದೆ. ಈ 2 ಶಾಸನಗಳನ್ನು ಅವಲೋಕಿಸಿದರೆ, ಕ್ರಿ.ಶ. 1330ರ ನಂತರದಲ್ಲಿ ಮಧುರೆಯಲ್ಲಿ ಮಹ್ಮದೀಯರ ಆಳ್ವಿಕೆ ಸ್ಥಾಪನೆಗೊಂಡಿತ್ತು. ಅಲ್ಲಿ ಹಲವು ವರ್ಷಗಳಲ್ಲಿ ಅನೇಕ ಸುಲ್ತಾನರು ಅಧಿಕಾರ ಲಾಲಸೆಯಿಂದ ಕೊಲೆಗೀಡಾಗುತ್ತಿದ್ದರು. ಸುಲ್ತಾನರ ಉಪದ್ರವದಿಂದ ಮಧುರೆಯ ಪ್ರಾಂತ್ಯದಲ್ಲಿ ಶಾಂತಿ ನೆಲೆಸುವಂತೆ ಮಾಡಲು 3ನೆಯ ಬಲ್ಲಾಳನೊಂದಿಗೆ ಬಲ್ಲಪ್ಪದಂಡನಾಯಕನು ಯುದ್ಧಗಳಲ್ಲಿ ಭಾಗವಹಿಸಿದ್ದಿರಬೇಕೆಂದು ಊಹಿಸಬಹುದು.

ಕ್ರಿ.ಶ. 1342ರ ಹೊಸಕೋಟೆ ಶಾಸನದಿಂದ[14] ಬಲ್ಲಪ್ಪದಂಡನಾಯಕನು ಈ ವೇಳೆಗೆ 3ನೆಯ ಬಲ್ಲಾಳನಿಗೆ **'ಮಹಾಪ್ರಧಾನ'** ನಾಗಿದ್ದನೆಂಬುದು ತಿಳಿದುಬರುತ್ತದೆ. ಹೊಸಕೋಟೆಯ ಮತ್ತೊಂದು ಶಾಸನವು (ಕ್ರಿ.ಶ.1343)[15] ಸ್ಪಷ್ಟವಾಗಿ ಬಲ್ಲಪ್ಪದಂಡನಾಯಕನನ್ನು ಮುಖ್ಯಮಂತ್ರಿ ಎಂತಲೇ ಕರೆದಿದೆ. ತನ್ನ ಶೌರ್ಯ, ದಕ್ಷತೆಯಿಂದ ಬಲ್ಲಪ್ಪ ದಂಡನಾಯಕನು ಈ ಪದವಿಗಳನ್ನು ಅಲಂಕರಿಸಿದನೆಂದು ಹೇಳಬಹುದಾಗಿದೆ.

ಕ್ರಿ.ಶ. 1343ರ ಹಲಸುಬಾಳು ಗ್ರಾಮದ ಶಾಸನವು[16] 3ನೆಯ ಬಲ್ಲಾಳನ ಮಗ ವೀರವಿರೂಪಾಕ್ಷ ಬಲ್ಲಾಳನ ಪಟ್ಟಾಭಿಷೇಕವನ್ನು ಉಲ್ಲೇಖಿಸುತ್ತದೆ. 4ನೆಯ ಬಲ್ಲಾಳ ಹಾಗೂ ಬಲ್ಲಪ್ಪದಂಡನಾಯಕರು ಒಟ್ಟುಗೂಡಿಯೇ ಹಳ್ಳಿಹಿರಿಯೂರಿನ ಕೆಲವು ಗೌಡ ಪ್ರಜೆಗಳಿಗೆ ಭೂದಾನಗಳನ್ನು ನೀಡಿರುವುದು ಪ್ರಸ್ತುತ ಶಾಸನದಲ್ಲಿ ಉಲ್ಲೇಖಿಗೊಂಡಿದೆ. ಈ ಹೊತ್ತಿಗಾಗಲೇ ಮಧುರೆಯಲ್ಲಿ ಸುಲ್ತಾನರನ್ನು ಬಡಿದೋಡಿಸುವ ಸಲುವಾಗಿ ತಿರುಚನಾಪಳ್ಳಿಯ ಕಾಳಗದಲ್ಲಿ 3ನೆಯ ಬಲ್ಲಾಳನು ಹತನಾಗಿರುತ್ತಾನೆ. ಮುಂದೆ (ಕ್ರಿ.ಶ. 1346ರಲ್ಲಿ ವೀರವಿರೂಪಾಕ್ಷ ಬಲ್ಲಾಳ ಅಥವಾ ನಾಲ್ಕನೆಯ ಬಲ್ಲಾಳನು ಮರಣ ಹೊಂದುವವರೆಗೂ ಹೊಯ್ಸಳ ಸಾಮ್ರಾಜ್ಯದಲ್ಲಿ 1ನೇ ಹರಿಹರನು ಸ್ವತಂತ್ರನಾಗುವುದಿಲ್ಲ. ಮೂರನೆಯ ಬಲ್ಲಾಳನ ಸೋದರಳಿಯನಾದ ಬಲ್ಲಪ್ಪ ದಂಡನಾಯಕನು ಒಂದನೆಯ ಹರಿಹರನ ಮಗಳನ್ನು ವರಿಸಿದ್ದನು. ಹೀಗಾಗಿ 3ನೆಯ ಬಲ್ಲಾಳನಿಗೆ ಬಂಧುಗಳೇ ಆದ ಬಲ್ಲಪ್ಪದಂಡನಾಯಕ ಮತ್ತು ಒಂದನೆಯ ಹರಿಹರರು ಮಹಮ್ಮದೀಯರಿಂದ ರಾಜ್ಯರಕ್ಷಿಸಬೇಕೆಂಬ 3ನೆಯ ಬಲ್ಲಾಳನ ಸಂಕಲ್ಪಕ್ಕೆ ಬದ್ಧರಾಗಿ ಹೊಯ್ಸಳ ಸಾಮ್ರಾಜ್ಯದಲ್ಲಿ ಶಾಂತಿಸ್ಥಾಪನೆಯ ಹೊಣೆಗಾರಿಕೆಯನ್ನು ಸುಕ್ಷೇಮವಾಗಿ ನಿರ್ವಹಿಸಿದ್ದರೆಂದು ತೋರುತ್ತದೆ. ಕ್ರಿ.ಶ. 1346ರಲ್ಲಿ ನಾಲ್ಕನೆಯ ಬಲ್ಲಾಳನ ಮರಣದ ತರುವಾಯ ಒಂದನೆಯ ಹರಿಹರನು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸುವ ಮೂಲಕ 3ನೆಯ ಬಲ್ಲಾಳನ ಸಂಕಲ್ಪವನ್ನು ನೆರವೇರಿಸುತ್ತಾನೆ. ಈ ರೀತಿಯಲ್ಲಿ 1ನೆಯ ಹರಿಹರನು ಅಧಿಕಾರವನ್ನು ಕ್ರೋಢೀಕರಿಸಿಕೊಳ್ಳಲು ಬಲ್ಲಪ್ಪದಂಡನಾಯಕನ ನೆರವು ಅವಶ್ಯವಾಗಿ ಇದ್ದೇ ಇದ್ದಿತು. ಈ ವಿಜಯೋತ್ಸವವನ್ನು ಆಚರಿಸಲು 1ನೆಯ ಹರಿಹರನು ತನ್ನ ಸಹೋದರರೊಡನೆ, ತನ್ನ ಅಳಿಯ ಬಲ್ಲಪ್ಪದಂಡನಾಯಕ, ಕುಮಾರ ಸೋಮಣ್ಣೊಡೆಯರೊಡನೆ ಶೃಂಗೇರಿಯ ವಿದ್ಯಾಪೀಠಕ್ಕೆ ಬಂದು ವಿದ್ಯಾರಣ್ಯರ ಉತ್ತರಾಧಿಕಾರಿಯಾಗಿದ್ದ ಭಾರತೀತೀರ್ಥ ಗುರುಗಳಿಗೆ, ಅವರಲ್ಲಿ ಪರಿಚಾರಕರಾಗಿರುವ 40 ಜನ ಬ್ರಾಹ್ಮಣರಿಗೆ ಸಾಂತಳಿಗೆ ನಾಡಿನಲ್ಲಿರುವ ಕೆಲವು ಹಳ್ಳಿಗಳನ್ನು ಧಾರಾಪೂರ್ವಕವಾಗಿ ದತ್ತಿ ಬಿಟ್ಟನೆಂಬುದನ್ನು ಶೃಂಗೇರಿಯ ಕ್ರಿ.ಶ. 1346ರ ಶಾಸನವು[17] ತಿಳಿಸುತ್ತದೆ.

"ಮೂರನೆಯ ಬಲ್ಲಾಳನ ಪ್ರಸಿದ್ಧ ದಂಡನಾಯಕರಲ್ಲಿ ಒಬ್ಬನಾದ ಬಲ್ಲಪ್ಪದಂಡನಾಯಕನು ಚಕ್ರವರ್ತಿಗೆ ಅತ್ಯಂತ ಆಪ್ತನಾಗಿದ್ದು ಆಡಳಿತದಲ್ಲಿ ವಿಶೇಷ ನೆರವನ್ನು ನೀಡುತ್ತಿದ್ದನು. ಅನೇಕ ಕ್ಷೋಭೆಗಳನ್ನು ಹತೋಟಿಗೆ ತಂದು ಪರಿಸ್ಥಿತಿಯನ್ನು ಸುಧಾರಿಸಿ ರಾಜ್ಯದಲ್ಲಿ ಶಾಂತಿ ಸ್ಥಾಪನೆಯನ್ನು ಮಾಡಿದ್ದನು" ಎಂಬ ಅಭಿಪ್ರಾಯ[18] ಉಲ್ಲೇಖಾರ್ಹ. ಬೆಂಗಳೂರು, ಚಿಂತಾಮಣಿ, ಕೋಲಾರ, ಬಂಗಾರಪೇಟೆ, ಮಾಲೂರು ಸುತ್ತಮುತ್ತಲಿನ ಭಾಗಗಳಲ್ಲಿ 3ನೆಯ ಬಲ್ಲಾಳನ ಅನುಪಸ್ಥಿತಿಯಲ್ಲಾಗಲೀ ಮತ್ತು ಅವನ ಮರಣದ ತರುವಾಯವಾಗಲೀ ಈ ಪ್ರದೇಶಗಳಲ್ಲಿ ಅರಾಜಕತೆ ತಲೆದೋರದಂತೆ ಬಲ್ಲಪ್ಪದಂಡನಾಯಕನು ನೋಡಿಕೊಂಡಿದ್ದನೆಂಬುದರಲ್ಲಿ ಸಂಶಯವಿಲ್ಲ.

**ಮಲ್ಲಿದೇವ ದಂಡನಾಯಕ** : ಈತ ಸೋಮಯದಂಡನಾಯಕನ ಅಳಿಯ. ಇವನ ಕೆಲವೇ ಕೆಲವು ಲಭ್ಯ ಶಾಸನಗಳಿಂದ ಈತ ಬೇಲೂರು ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳ ಮೇಲೆ ರಾಜಕೀಯ ಹಿಡಿತವನ್ನು ಹೊಂದಿದ್ದನು. ಕ್ರಿ.ಶ. 1273ರ ಬೇಲೂರಿನ ಶಾಸನವು[19] ಈತನನ್ನು 3ನೆಯ ನರಸಿಂಹನ

'ಮನೆಮಗ' ಎಂದು ಕರೆದಿದೆ. ಈತನಿಗೆ ಗಾಯಿಗೋವಳಂ, ಗಂಡಪೆಂಡಾರಂ, ಮಾಂಡಳಿಕಜೂಬು ಮುಂತಾದ ಬಿರುದುಗಳಿದ್ದವು. ಕ್ರಿ.ಶ.1276ಕ್ಕೆ ಸಲ್ಲುವ ಬೇಲೂರಿನ ಮತ್ತೆರಡು ಶಾಸನಗಳು[20] ಮಲ್ಲಿದೇವ ದಂಡನಾಯಕ ಮತ್ತು ಚಿಕ್ಕಕೇತಯದಂಡನಾಯಕರು ಸೇವುಣ ರಾಮದೇವನ ಸೇನಾಪತಿ ಸಾಳುವ ತಿಕ್ಕಮನೊಂದಿಗೆ ಯುದ್ಧ ಮಾಡಿದರೆಂದೂ ಸೇವುಣ ಸೈನ್ಯವನ್ನು ದೋರಸಮುದ್ರದಿಂದ ಬೆಳವಾಡಿಯವರೆಗೆ ಓಡಿಸಿದರೆಂದು ದಾಖಲಿಸಿವೆ. ಈ ಅಂಶವನ್ನು ಲಕ್ಷಿಸಿದರೆ, ಸೋಮಯ ದಂಡನಾಯಕ ಮತ್ತು ಸಿಂಗಯದಂಡನಾಯಕ ಮಾತ್ರವಲ್ಲದೆ ಸೋಮಯ ದಂಡನಾಯಕನ ಅಳಿಯಂದಿರು ಸಹ ಹೊಯ್ಸಳ ಸಾಮ್ರಾಜ್ಯಕ್ಕೆ ಎದುರಾಗುತ್ತಲೇ ಇದ್ದ ಸೇವುಣರ ಪ್ರಬಲ ದಾಳಿಯನ್ನು ನಿರಂತರವಾಗಿ ಎದುರಿಸುತ್ತ ರಾಜ್ಯರಕ್ಷಣೆಗೆ ಕಟಿಬದ್ಧರಾಗಿದ್ದರೆಂದು ತೋರುತ್ತದೆ.

**ಚಿಕ್ಕಕೇತಯ ದಂಡನಾಯಕ** : ಈತನು ಸಹ ಸೋಮಯದಂಡನಾಯಕನ ಅಳಿಯ. ಇವನ ಮೊದಲ ಉಲ್ಲೇಖವಿರುವ ಶಾಸನ ಕ್ರಿ.ಶ. 1269ಕ್ಕೆ ಸಲ್ಲುತ್ತದೆ. ತುಮಕೂರಿನಲ್ಲಿ ದೊರೆತ ಈ ಶಾಸನದ ಪ್ರಕಾರ[21],3ನೆಯ ನರಸಿಂಹನು ದೋರಸಮುದ್ರದ ನೆಲೆವೀಡಿನಲ್ಲಿದ್ದಾಗ, ಚಿಕ್ಕಕೇತಯದಂಡನಾಯಕನು ಆನೆಬಿದ್ದಸಜ್ಜಿಯನಾಡು (ದೇವರಾಯನ ದುರ್ಗ) ದಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಈತನಿಗೆ ಗಾಯಿಗೋವಳು, ಗಂಡಪೆಂಡಾರಂ, ಪ್ರಜೆಮೆಚ್ಚೆಗಂಡ ಎಂಬಿತ್ಯಾದಿ ಬಿರುದುಗಳಿದ್ದವು. ಸೇವುಣರಿಗೆ ಸಹಕಾರ ನೀಡುತ್ತಿದ್ದ ನಿಡುಗಲ್ ರಾಜ್ಯಾಧಿಪ ಇರುಂಗೋಳದೇವನ ಸೈನ್ಯ ಸಮೇತನಾಗಿ ಗೂಳೆಯನಾಯಕನು ಆನೆಬಿದ್ದಸಜ್ಜಿಯನಾಡಿನ ಮೇಲೆ ದಾಳಿ ಮಾಡಿ ಗೋಗ್ರಹಣವನ್ನು ಮಾಡಲು, ಚಿಕ್ಕಕೇತಯ ದಂಡನಾಯಕನ ಪಾದಪದ್ಮೋಪಜೀವಿಯಾದ ಅಪ್ಪೆಯ ನಾಯಕನು ವೈರಿಯೊಡನೆ ಹೋರಾಡಿ, ಅವರನ್ನು ಸದೆಬಡಿದು ತುರುಗಳನ್ನು ರಕ್ಷಿಸಿ ತಾನು ಶಿವೈಕ್ಯನಾದನು. ಇಷ್ಟು ಹೊತ್ತಿಗಾಗಲೇ ಹೊಯ್ಸಳ ಸಾಮ್ರಾಜ್ಯ 3ನೆಯ ನರಸಿಂಹ ಮತ್ತು ರಾಮನಾಥರಲ್ಲಿ ವಿಭಜನೆಯಾಗಿತ್ತು; ಭ್ರಾತೃ ಕಲಹದಿಂದ ಬಲಹೀನವಾಗಿದ್ದ ಸಾಮ್ರಾಜ್ಯವನ್ನು ಸೇವುಣ ಮತ್ತು ನಿಡುಗಲ್ ಚೋಳರು ಆಕ್ರಮಿಸಲು ಉದ್ಯುಕ್ತರಾಗಿದ್ದರೆಂದು ಈ ಘಟನೆಯಿಂದ ಊಹಿಸಬಹುದಾಗಿದೆ.

ಕ್ರಿ.ಶ. 1276ರ ಬೇಲೂರಿನ ಶಾಸನದ ಪ್ರಕಾರ[22] ಚಿಕ್ಕಕೇತಯ ದಂಡನಾಯಕನು ಮಹಾಪ್ರಧಾನನಾಗಿದ್ದನೆಂದು, ಹಿಂದೆಯೇ ತಿಳಿಸಿದಂತೆ ಮಲ್ಲಿದೇವ ದಂಡನಾಯಕನೊಡಗೂಡಿ ಸೇವುಣ ಸೈನ್ಯವನ್ನು ಹಿಮ್ಮೆಟ್ಟಿಸಿದ್ದನು. ಕ್ರಿ.ಶ. 1278ರ ಯಲಿಯೂರು ಗ್ರಾಮದ ಶಾಸನವು[23] ಇವನನ್ನು ಮಹಾಪ್ರಧಾನ ಎಂದೇ ಸಂಬೋಧಿಸಿದೆ. ಕ್ರಿ.ಶ. 1279ರ ಶೀತಕಲ್ ಶಾಸನವು[24] ಚಿಕ್ಕಕೇತಯದಂಡನಾಯಕನಿಗೆ ವೀರಸಿಂಗೆಯದಂಡನಾಯಕನೆಂಬ ಮಗನಿದ್ದುದಾಗಿಯೂ, ಆತನು ಮಋುಗಲನಾಡ ಸೀತಕಲ ರಾಮನಾಥ ದೇವರಿಗೆ ಕೆಲವು ಭೂದಾನಗಳನ್ನು ಇತ್ತುದಾಗಿಯೂ ತಿಳಿಸುತ್ತದೆ. ಕ್ರಿ.ಶ. 1279ರ ಯಲಿಯೂರು ಗ್ರಾಮದ ಶಾಸನವು[25] ಚಿಕ್ಕಕೇತಯ ದಂಡನಾಯಕನಿಗೆ ಅಂಕೆಯ ದಂಡನಾಯಕನೆಂಬ ಮಗನಿದ್ದುದನ್ನು ತಿಳಿಸುತ್ತದೆ. ಕ್ರಿ.ಶ. 1276ರ ಬೇಲೂರಿನ ಶಾಸನವು[26] ಸೇವುಣರ

ರಾಮದೇವನ ಸೇನಾಧಿಪತಿ ಸಾಳುವ ತಿಕ್ಕಮ ಬೆಳವಾಡಿಗೆ ಬಂದು ಬೀಡುಬಿಟ್ಟಿದ್ದಾಗ, ವಿಜಯದೇವ ಮತ್ತು ಹರಿಪಾಳರು ದೋರಸಮುದ್ರವನ್ನು ಮುತ್ತಿದ ಸಂದರ್ಭದಲ್ಲಿ ಅಂಕೆಯ ದಂಡನಾಯಕನು ಅವರನ್ನು ಸೋಲಿಸಿ ಓಡಿಸಿದುದನ್ನು ತಿಳಿಸುತ್ತದೆ.

### 3.2 ಬೈಚಯ ಮತ್ತು ಅವನ ವಂಶೀಯರು

**ಮೊದಲನೇ ಬೈಚಯ ದಂಡನಾಯಕ :** ಬೈಚಯ ದಂಡನಾಯಕನು ಹೊಯ್ಸಳ ಮೂರನೆಯ ಬಲ್ಲಾಳ ಹಾಗೂ ವಿಜಯನಗರದ ಸಂಗಮ ದೊರೆ ಒಂದನೆಯ ಬುಕ್ಕರಾಯನ ಕಾಲದಲ್ಲಿ ಸಮರ್ಥವಾಗಿ ಆಳ್ವಿಕೆ ನಡೆಸಿದ್ದನು. ಇವನ ಪ್ರಥಮ ಉಲ್ಲೇಖ ನಮಗೆ ಹೊಸಾಳದ ಕ್ರಿ.ಶ. 1333ರ ಶಾಸನದಲ್ಲಿ[27] ದೊರೆಯುತ್ತದೆ. ಈ ತ್ರುಟಿತ ಶಾಸನದನ್ವಯ ಪಟ್ಟದ ಪಿರಿಯರಸಿಯಾದ ಕಿಕ್ಕಾಯಿತಾಯಿಯ ಸಮ್ಮುಖದಲ್ಲಿ ಮಹಾಪ್ರಧಾನ ಬಯಿಚಯ ದಂಡನಾಯಕನು ಅಜ್ಜಣ್ಣ ಸಾಹಣಿ ಮತ್ತಿತರರೊಡಗೂಡಿ ವೀರೇಶ್ವರ ದೇಗುಲಕ್ಕೆ ಕೆಲವು ಭೂದಾನಗಳನ್ನು ನೀಡಿದನು. ಈ ದಂಡನಾಯಕನು ನೀಡಿರುವ ಹಲವಾರು ದಾನಶಾಸನಗಳಲ್ಲಿನ ಆಂತರಿಕ ಆಧಾರಗಳಿಂದ ಮತ್ತು ಸಮಕಾಲೀನ ಇತರೆ ಶಾಸನಾಧಾರಗಳಿಂದ ತುಳುನಾಡಿನಲ್ಲಿ ಪ್ರಬಲನಾಗಿದ್ದು ಇದರ ರಾಜಕೀಯ ಸುಭಗತೆಗೆ ಕಾರಣಕರ್ತನಾಗಿದ್ದನೆಂಬುದು ಸುವ್ಯಕ್ತವಾಗುತ್ತದೆ.

ಕ್ರಿ.ಶ. 1359ರ ಸಖರಾಯಪಟ್ಟಣದ ಶಾಸನವು[28] ಬೈಚಯ ದಂಡನಾಯಕನು ತನ್ನ ಪರಿವಾರದವರೆಲ್ಲರನ್ನು ಕೂಡಿಕೊಂಡು ನಿಶಿಧಿಯಾದುದನ್ನು ದಾಖಲಿಸುತ್ತದೆ. ಹೊಯ್ಸಳ ಸಾಮ್ರಾಟ ಮೂರನೆಯ ಬಲ್ಲಾಳನ ಪತ್ನಿ ಕಿಕ್ಕಾಯಿತಾಯಿಗೆ ಆಡಳಿತದಲ್ಲಿ ಬಲಗೈ ಭಂಟನಾಗಿದ್ದ ಬೈಚಯ ದಂಡನಾಯಕನು ಮುಂದೆ ವಿಜಯನಗರದ ಸಂಗಮ ದೊರೆ ಒಂದನೇ ಬುಕ್ಕರಾಯನ ಆಳ್ವಿಕೆಯ ಕಾಲದಲ್ಲಿ ತನ್ನ ಶೌರ್ಯ, ದಕ್ಷತೆ ಮತ್ತು ಆಡಳಿತಾತ್ಮಕ ನೈಪುಣ್ಯತೆಯ ಫಲವಾಗಿ ಮಂಗಳೂರು–ಬಾರಕೂರುಗಳ ಅಧಿಪನಾಗುತ್ತಾನೆ. ಈ ಅಂಶವನ್ನು ಮತ್ತೂ ಸೂಕ್ಷ್ಮವಾಗಿ ಪರಿಭಾವಿಸಿದರೆ, ಮೂರನೆಯ ಬಲ್ಲಾಳನ ಪಿರಿಯರಸಿ ಕಿಕ್ಕಾಯಿ ತಾಯಿಯು ಬಲ್ಲಾಳನ ಪರವಾಗಿಯೂ ಅವನ ಮರಣಾನಂತರ ಸ್ವತಂತ್ರವಾಗಿಯೂ ತುಳುನಾಡನ್ನು ಆಳುತ್ತಿದ್ದಳು. ಅವಳ ತರುವಾಯ ತುಳುನಾಡು ಅಲ್ಲನ ಸಮಸ್ತ ಸ್ವರೂಪವನ್ನು ಅರಿತಿದ್ದ ಬೈಚಯದಂಡನಾಯಕನ ವಶದಲ್ಲೇ ಉಳಿಯುತ್ತದೆ. ಮತ್ತೊಂದು ಸೂಕ್ಷ್ಮ ಲಕ್ಷ್ಯಸಂಗತಿಯೆಂದರೆ ಈ ಬೈಚಯದಂಡನಾಯಕನು ಕುಮ್ಮಟ ದುರ್ಗದ ಬೈಚಯ ದಂಡನಾಯಕನಿಗಿಂತ ಭಿನ್ನನು. ಪ್ರಸ್ತುತ ಬೈಚಯ ದಂಡನಾಯಕನು ಜೈನ ಮತೀಯನಾಗಿದ್ದ ಸಂಗತಿ ನಮಗೆ ಶಾಸನಗಳಿಂದ ತಿಳಿದುಬರುತ್ತದೆ.

**ಮೊದಲನೇ ಇರುಗಪ್ಪ ದಂಡನಾಯಕ** : ಈತ ಮೊದಲನೆಯ ಬೈಚಯದಂಡನಾಯಕನ ಮಗ. ಗಂಗಾವತಿಯ ಕ್ರಿ.ಶ. 1342ರ ಶಾಸನವು[29] ಇವನ ಬಗ್ಗೆ ಮೊದಲ ಬಾರಿಗೆ ಮಾಹಿತಿ ನೀಡುತ್ತದೆ. ಅದರ

ಪ್ರಕಾರ ಇರುಗಪ್ಪನು ಆನೆಗೊಂದಿಯಲ್ಲಿ ಕಲ್ಲಿನಲ್ಲಿ ಬಸದಿಯನ್ನು ನಿರ್ಮಿಸುತ್ತಾನೆ. ಇದಕ್ಕೆ ಅವನ ತಂದೆ ಬೈಚಯ ದಂಡನಾಯಕನು ದಾನ ನೀಡುತ್ತಾನೆ. ಈ ಶಾಸನದಲ್ಲಿ ಇರುಗಪ್ಪನನ್ನು ಹೀಗೆ ಹೊಗಳಿದೆ:

ಹರಿಹರಧರಣೀ ತ್ರಿಪ್ರಾಜ್ಯಾ ಸಾಮ್ರಾಜ್ಯಾ ಲಕ್ಷ್ಮೀ ಕುವಲಯ

ಹಿಮಧಾಮಾ ಶೌರ್ಯ ಗಾಂಭೀರ್ಯಾ ಸೀಮಾ ಇರುಗಪ ಧರಣೀಶ

ಚಿತ್ತೂರಿನ ಶಾಸನವೊಂದು[30] ಬಹಳ ಮುಖ್ಯಸಂಗತಿಯನ್ನು ತಿಳಿಸುತ್ತದೆ. ತಿಪ್ಪಿಸೆಟ್ಟಿ ಮತ್ತು ತಿಮ್ಮಾಯಿ ಎಂಬ ಅಣ್ಣತಂಗಿಯರು ತಮ್ಮ ತಂದೆ–ತಾಯಿಗಳಿಗೆ ಪುಣ್ಯವಾಗಲಿ ಎಂದು ಉದ್ದಗಿರಿಯ ತಿರುವೇಂಗಳನಾಥನಿಗೆ ಕೆಲವು ಭೂದಾನಗಳನ್ನು ನೀಡಿದರು. ಈ ದಾನ ನೀಡಿದ ಕಾಲದಲ್ಲಿ ಇವನು ಪೆನುಗೊಂಡ ರಾಜ್ಯದ ಕೆಲಭಾಗಗಳಿಗೆ ಪ್ರಾಂತ್ಯಾಧಿಕಾರಿಯಾಗಿದ್ದನು. ಇದು ಇರುಗಪ್ಪ ದಂಡನಾಯಕನು ಪರಮೋಚ್ಛ ಸ್ಥಿತಿಗೇರಿದುದನ್ನು ತಿಳಿಸುತ್ತದೆ.

ಕ್ರಿ.ಶ. 1342 ರಿಂದ ಕ್ರಿ.ಶ. 1397 ಅಥವಾ 14ನೆಯ ಶತಮಾನದ ಅತ್ಯಂತ ಕೊನೆಯ ಭಾಗದವರೆಗಿನ ಕಾಲದ ಉಲ್ಲೇಖವಿರುವ ಶಾಸನಗಳು ಇರುಗಪ್ಪ ದಂಡನಾಯಕನು ಹೊಯ್ಸಳರ ಕಾಲದಲ್ಲಿ ದಂಡನಾಯಕ ಪದವಿಯಲ್ಲಿದ್ದವನು ಕ್ರಮೇಣ ಮಹಾಪ್ರಧಾನನಾಗಿ, ಪ್ರಾಂತ್ಯಾಧಿಕಾರಿಯಾಗಿ ಸಂಗಮ ದೊರೆಗಳ ಕಾಲದಲ್ಲಿ ವಿಶೇಷ ಸ್ಥಾನವನ್ನು ಪಡೆದಿದ್ದನಲ್ಲದೆ ವಿಸ್ತಾರವಾದ ಹಲವು ಭೂಪ್ರದೇಶಗಳ ಒಡೆಯನಾಗಿಯೂ ಎಲ್ಲಿಯೂ ಯುದ್ಧಾದಿ ಹಿಂಸಾಕೃತ್ಯಗಳು ನಡೆಯದ ಹಾಗೆ ಶಾಂತಿ–ಸೌಹಾರ್ದತೆಗಳಿಂದ ರಾಜ್ಯಾಡಳಿವನ್ನು ನಿರ್ವಹಿಸುತ್ತಿದ್ದನೆಂಬುದನ್ನು ತಿಳಿಸುತ್ತವೆ.

### 3.3 ಪೆರುಮಾಳೆದೇವ ಮತ್ತು ಅವನ ವಂಶೀಯರು

ಕೊತ್ತಲವಾಡಿ, ಬೆಳ್ಳೂರು, ಬಾಳಗಂಟಿ, ಹೊಳೆನರಸೀಪುರ, ಹಾನುಗಲ್ಲು, ತಡಿಮಾಲಂಗಿ, ಆಲತ್ತೂರು, ಗೇರಹಳ್ಳಿ, ನರಸಮಂಗಲ, ಚಿತ್ರದುರ್ಗಗಳಲ್ಲಿ ದೊರೆತಿರುವ ಶಾಸನಗಳು ಪೆರುಮಾಳೆದಂಡನಾಯಕ ಮತ್ತು ಅವನ ಪೂರ್ವಿಕರ ಬಗ್ಗೆ ಮಾಹಿತಿಯೊದಗಿಸುತ್ತವೆ. ಆ ಪ್ರಕಾರ, ಆತ್ರೇಯಗೋತ್ರದ ಮೊಡಕುಲದ ವಿಷ್ಣುದೇವ ಮತ್ತು ಮಂಚಾಂಬಿಕೆಯರ ಪುತ್ರ ಪೆರುಮಾಳೆದೇವದಂಡನಾಯಕ. ರಾಮಕೃಷ್ಣ ಎಂಬಾತ ಈತನ ಗುರು. ಈ ಪೆರುಮಾಳೆದೇವದಂಡನಾಯಕನ ಮೊದಲ ಮಗನೇ ಮಾಧವದಂಡನಾಯಕ. ಮಾಧವದಂಡನಾಯಕನಿಗೆ ಭರತಜೀಯ ದಂಡನಾಯಕ, ಕೇತೆಯ ದಂಡನಾಯಕ, ಸಿಂಗೆಯದಂಡನಾಯಕ ಎಂಬ ಮೂವರು ಮಕ್ಕಳಿದ್ದರೆಂಬುದು ಶಾಸನಗಳಿಂದ ತಿಳಿದುಬರುತ್ತದೆ.

**ಪೆರುಮಾಳೆದೇವ ದಂಡನಾಯಕ :** ಪೆರುಮಾಳೆದೇವ ದಂಡನಾಯಕನ ಉಲ್ಲೇಖವು ಕೊಯಮತ್ತೂರು, ಬೇಲೂರು, ಹಾಸನ, ನಾಗಮಂಗಲ, ಚನ್ನರಾಯಪಟ್ಟಣ, ಮೈಸೂರು, ಹೊಳೆನರಸೀಪುರ, ಹಾನುಗಲ್ಲು, ನಂಜನಗೂಡು, ಟಿ.ನರಸೀಪುರ, ಗುಂಡ್ಲುಪೇಟೆ, ಚಾಮರಾಜನಗರ, ಚಿತ್ರದುರ್ಗಗಳಲ್ಲಿನ ಶಾಸನಗಳಲ್ಲಿ ಕಂಡುಬಂದಿದೆ. ಈ ಪ್ರದೇಶಗಳಲ್ಲಿನ ಶಾಸನಗಳಲ್ಲಿ ಪೆರುಮಾಳೆ ದೇವದಂಡನಾಯಕನ ಹೆಸರು

ಪೆರುಮಾಳೆದಂಡನಾಯಕನ, ಪೆರುಮಾಳೆದೇವ ದಣ್ಣಾಯಕ, ಪೆರುಮಾಳೆದೇವದಣ್ಣಾಯ್ಕ, ಪೆರುಮಾಳದಣ್ಣಾಯಕ, ಪೆರುಮಾಳದೇವರು, ಪೆರುಮಾಳದಂಡನಾಯಕ, ಪೆರುಮಾಳೆಮಂತ್ರಿ, ಪೆರುಮಾಳೆದೇವ ಸಚಿವ, ಪೆರುಮಾಳೆ ದೇವದಣ್ನಾಯಕ, ಪೆರುಮಾಳೆಚಮೂಪತಿ, ಪೆರುಮಾಳಾದೇವದಣ್ನಾಯಕ ಎಂಬುದಾಗಿ ಉಲ್ಲೇಖ ಗೊಂಡಿದೆ.

ಪೆರುಮಾಳೆದೇವದಂಡನಾಯಕನ ಪ್ರಥಮ ಉಲ್ಲೇಖ ಕಂಡುಬರುವುದು ದಾವಣಗೆರೆ ತಾಲ್ಲೂಕಿನ ಹರಿಹರದ ಕಾಳಭೈರವ ದೇಗುಲದ ಮಂಟಪದಲ್ಲಿನ ಕ್ರಿ.ಶ. 1255ರ ಶಾಸನದಲ್ಲಿ[31] ಈ ಶಾಸನದ ಪ್ರಕಾರ, ಹರಿಹರದೇವರಿಗೆ ಪೆರುಮಾಳೆ ದೇವದಂಡನಾಯಕನ ಇಚ್ಛೆಯಂತೆ ಅಣ್ಣಮ ವೆಗ್ಗಡೆ (=ಅಣ್ಣಪ್ಪವೆಗ್ಗಡೆ) ಯ ಮಗಳು ಹೊನ್ನಿಯವ್ವೆಯು ಸೇವಾರ್ಥವಾಗಿ 1 ಗದ್ಯಾಣವನ್ನು ವನಮಾಲೆಗೆಂದು, 3 ಗದ್ಯಾಣಗಳನ್ನು ನಂದಾದೀವಿಗೆಗೆಂದು ಮಹಾಜನಗಳಿಗೆ ನೀಡಿದಳು.

ವೀರಸೋಮೇಶ್ವರನು ತನ್ನ ಇಬ್ಬರು ಮಕ್ಕಳಾದ 3ನೆಯ ನರಸಿಂಹ ಮತ್ತು ರಾಮನಾಥರು ಸಿಂಹಾಸನಕ್ಕಾಗಿ ಕಾದಾಡುತ್ತಿದ್ದುದನ್ನು ಸಹಿಸದಾದನು. ಅದೇ ಸಂದರ್ಭದಲ್ಲಿ ತಮಿಳುನಾಡಿನ ರಾಜಕೀಯದಲ್ಲುಂಟಾದ ಪರಾಜಯ ಮತ್ತು ತನ್ನ ಅನಾರೋಗ್ಯದಿಂದ ಅವನು ಮತ್ತಷ್ಟು ಬಳಲುವಂತಾಯಿತು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಸಂದರ್ಭದ ಸೂಕ್ಷ್ಮತೆಯನ್ನರಿತು ಹೊಯ್ಸಳ ಸಾಮ್ರಾಜ್ಯವನ್ನು 3ನೆಯ ನರಸಿಂಹ ಮತ್ತು ರಾಮನಾಥರಲ್ಲಿ ಹಂಚಿ ಕ್ರಿ.ಶ. 1255ರಲ್ಲಿ ಮರಣ ಹೊಂದಿದನು. ಅವನ ಮರಣದ ತರುವಾಯ ದೋರಸಮುದ್ರದಲ್ಲಿ 3ನೆಯ ನರಸಿಂಹನು ಮತ್ತು ತಮಿಳುನಾಡಿನಲ್ಲಿ ರಾಮನಾಥನು ಅಧಿಕಾರಾರೂಢರಾದರು. ಸಾಮ್ರಾಜ್ಯ ವಿಭಜನೆಯಾದ ತರುವಾಯವೂ ಈ ಈರ್ವರಲ್ಲಿ ಕಲಹಗಳು ನಡೆಯುತ್ತಲೇ ಇದ್ದವು. ಇಂತಹ ಪರಿಸ್ಥಿತಿಯಲ್ಲಿಯೇ 3ನೆಯ ನರಸಿಂಹನ ಸಾಮ್ರಾಜ್ಯವನ್ನು ಆಕ್ರಮಿಸಲು ಸೂಕ್ತ ಸಮಯ ಸಾಧಿಸಿ ಅನ್ಯರು ಮೇಲೆರಗುತ್ತಿದ್ದರು. ಇಂತಹ ಒಂದು ಪ್ರಯತ್ನವೇ ಕ್ರಿ.ಶ. 1271ರ ಕದನ. ಈ ಕದನವನ್ನು ಚಿತ್ರದುರ್ಗ[32] ಮತ್ತು ಚನ್ನರಾಯಪಟ್ಟಣ[33]ದ ಶಾಸನಗಳು ಪೆರುಮಾಳೆ ದೇವ ದಂಡನಾಯಕನು 3ನೆಯ ನರಸಿಂಹನ ಪರವಾಗಿ ನಿಂತು ಹೋರಾಡಿ ಸೇವುಣರ ಮೇಲೆ ಸಾಧಿಸಿದ ವಿಜಯವನ್ನು ಅದ್ಭುತವಾಗಿ ವರ್ಣಿಸಿದೆ. ಸೇವುಣ ಮಹಾದೇವನ ಪರವಾಗಿ ಬಂದ ರತ್ನಪಾಳನು ಚಿತ್ರದುರ್ಗದವರೆಗೂ ಮುನ್ನಡೆದಾಗ ಪೆರುಮಾಳೆದೇವದಂಡನಾಯಕನು ರತ್ನಪಾಳನನ್ನು ಸೋಲಿಸಿ ಹಿಮ್ಮೆಟ್ಟಿಸಿದುದನ್ನು ಈ ಎರಡೂ ಶಾಸನಗಳು ರಮ್ಯವಾಗಿ ಬಣ್ಣಿಸಿವೆ.

ಈ ಪ್ರಕಾರವಾಗಿ ಯುದ್ಧದಿಂದ ಸಂದ ವಿಜಯದಿಂದ ಸಂಪ್ರೀತನಾದ 3ನೆಯ ನರಸಿಂಹನು ಪೆರುಮಾಳೆದಂಡ ನಾಯಕನಿಗೆ 'ಜವನಿಕೆ ನಾರಾಯಣ', 'ರಾವುತರಾಯ' ಎಂಬ ಬಿರುದುಗಳನ್ನು ಹಾಗೂ ಭೂದಾನಗಳನ್ನು ನೀಡಿ ಗೌರವಿಸಿದನು. ಈ ಶಾಸನದಿಂದ ಪೆರುಮಾಳೆಯು ಹೊಯ್ಸಳರ ಬದ್ಧವೈರಿಗಳಾದ ಸೇವುಣರನ್ನು ಸದೆಬಡಿದು ರಾಜ್ಯರಕ್ಷಣೆಯ ಹೊಣೆಯನ್ನು, ಪ್ರಾಣದ ಹಂಗು ತೊರೆದು ಹೋರಾಡಿದ ಸ್ವಾಮಿನಿಷ್ಠೆಯನ್ನು ತಿಳಿಯಬಹುದು.

**ಮಾಧವದಂಡನಾಯಕ**: ಮಾಧವದಂಡನಾಯಕನು 3ನೆಯ ನರಸಿಂಹನಲ್ಲಿ ಮಹಾಪ್ರಧಾನನಾಗಿದ್ದ ಪೆರುಮಾಳೆದೇವದಂಡನಾಯಕನ ಮಗ, ಇವನ ಜನ್ಮಸ್ಥಳ ಎಣ್ಣೆನಾಡಿಗೆ ಸೇರಿದ ಮಗ್ಗೆಯ ಎಂಬ ಗ್ರಾಮ. ಇದು ಈಗಿನ ಚಾಮರಾಜನಗರ ಜಿಲ್ಲೆಯ ಹರದನಹಳ್ಳಿಯೇ ಆಗಿದೆ. ಮಾಧವದಂಡನಾಯಕನ ಪ್ರಥಮ ಉಲ್ಲೇಖವು ಕ್ರಿ.ಶ. 1282ರ ಅವಿನಾಸಿ ಗ್ರಾಮದ (ಕೊಯಮತ್ತೂರು ಜಿಲ್ಲೆ, ಅವಿವಾಸಿ ತಾಲ್ಲೂಕಿನ) ಶಾಸನದಲ್ಲಿ[34] ಕಂಡುಬರುತ್ತದೆ ಇದರಲ್ಲಿ, ಮಾಧವದಂಡನಾಯಕನು ಮೊಡೆಯಕುಲದ ಪೆರುಮಾಳ ದಂಡನಾಯಕನ ಮಗನೆಂತಲೂ ಮತ್ತು ಈತನು ಅವಿನಾಸಿಯಲುಡೈಯನಾಯನಾರ್ ದೇವರಿಗೆ ಸಿತಕರಗಂಡ ನಲ್ಲೂರೆನಿಸಿದ ತೆನ್ವಳ್ಳಿನಾಡಿನ ಹಳ್ಳಿಯನ್ನು ದಾನ ನೀಡಿದ ವಿಚಾರವಿದೆ. ಈ ಶಾಸನವು 'ಮೂರನೆಯ ಬಲ್ಲಾಳ ದೊರೆಯ ಕಾಲದಲ್ಲಿ' ಎಂಬುದನ್ನು ಪ್ರಸ್ತಾಪಿಸಿರುವುದು ಲಕ್ಷ್ಯಾರ್ಹ. ಬಹುಶಃ ಕ್ರಿ.ಶ. 1291ರವರೆಗೆ ಮೂರನೆಯ ಬಲ್ಲಾಳನು ಹೊಯ್ಸಳ ಸಾಮ್ರಾಟನಾಗುವ ಪೂರ್ವದಲ್ಲಿ ತನ್ನ ತಂದೆ 3ನೆಯ ನರಸಿಂಹನ ಆಳ್ವಿಕೆಯ ಕಾಲಘಟ್ಟದಲ್ಲಿಯೇ ತಮಿಳುನಾಡಿನ ಕೆಲಪ್ರದೇಶಗಳಲ್ಲಿ ಯುವರಾಜನಾಗಿ ತನ್ನ ಪ್ರಭಾವ ಮುದ್ರೆಯನ್ನೊತ್ತಿದ್ದ ಹಾಗೂ ಆಡಳಿತ ಮತ್ತು ಯುದ್ಧಗಳಲ್ಲಿ ಪಾಲ್ಗೊಳ್ಳುತ್ತಿದ್ದಾಗ ಮಾಧವದಂಡನಾಯಕನು ಅರಸನಿಗೆ ಪ್ರಧಾನಿಯಾಗಿ ಕಾರ್ಯನಿರ್ವಹಿಸುತ್ತಿದ್ದನು.

ಮಾಧವದಂಡನಾಯಕನ ಮುಂದಿನ ಉಲ್ಲೇಖ ಕ್ರಿ.ಶ. 1303ರ ಕೊತ್ತಲವಾಡಿ ಶಾಸನದಲ್ಲಿ[35] ದೊರೆಯುತ್ತದೆ. ಈ ಶಾಸನದನ್ವಯ, ಮಹಾಮಾಂಡಲಿಕ ಮಾಧವದಂಡನಾಯಕನು ತೆರಕಣಾಂಬಿಯನ್ನು ರಾಜಧಾನಿಯಾಗಿರಿಸಿ ಹದಿನಾಲ್ಕು ನಾಡನ್ನು ಆಳುತ್ತಿದ್ದನು. ಇಲ್ಲಿ ಒಂದು ವಿಚಾರವನ್ನು ಗಮನಿಸಬೇಕು. ಈಗಾಗಲೇ ಹೇಳಿರುವ ಅವಿನಾಸಿ ಗ್ರಾಮದ ಶಾಸನದ ಪ್ರಕಾರ ಮಾಧವದಂಡನಾಯಕನು ಕೊಯಮತ್ತೂರು ಮತ್ತು ಸುತ್ತಣ ಪ್ರದೇಶಗಳಲ್ಲಿ ಪ್ರಬಲನಾಗಿದ್ದನು. ಈತನೇ ಕ್ರಿ.ಶ. 1303ರ ವೇಳೆಗೆ ಪದಿನಾಲ್ಕು ನಾಡಿನ ಅಧಿಪತಿಯಾದುದನ್ನು ಮೇಲೆ ಹೇಳಿರುವ ಕೊತ್ತಲವಾಡಿ ಶಾಸನವು ದೃಢಪಡಿಸುತ್ತದೆ. ಮೂರನೆಯ ಬಲ್ಲಾಳನಿಗೆ ತಮಿಳುನಾಡಿನ ಪ್ರಕ್ಷುಬ್ದ ರಾಜಕೀಯ ಸಮಸ್ಯೆಗಳ ಸಂದರ್ಭದಲ್ಲಿ ನೆರವಾಗಿ ನಿಂತ ಮಾಧವದಂಡನಾಯ್ಕನು ತನ್ನ ದಕ್ಷತೆ, ಸ್ವಾಮಿನಿಷ್ಠೆ, ಹೊಯ್ಸಳ ಪ್ರಾಬಲ್ಯದ ಪುನರುಜ್ಜೀವನಕ್ಕೆ ಶ್ರಮಿಸಿದುದರಿಂದ ಮೂರನೆಯ ಬಲ್ಲಾಳನು ಪಟ್ಟಕ್ಕೆ ಬಂದ ಮೇಲೆ ಪದಿನಾಲ್ಕನಾಡು ಎಂಬ ವಿಶಾಲವಾದ ಹೊಯ್ಸಳ ನಾಡಿನ ನಾಡಾಧಿಪತಿಯಾಗಿ ಪ್ರವರ್ಧಮಾನಕ್ಕೆ ಬಂದನು. 'ಪದಿನಾಲ್ಕುನಾಡು' ಎಂಬ ಹೆಸರಿನ ಉಲ್ಲೇಖ ಕ್ರಿ.ಶ. 1210ರ ನಂತರದ ಶಾಸನಗಳಲ್ಲಿ ಕಂಡುಬರುವುದನ್ನು ಗಮನಿಸಿದರೆ, ಪ್ರತ್ಯೇಕವಾಗಿದ್ದ ಕುಡುಗುನಾಡು, ಕಾರೆನಾಡು, ಹೊರನಾಡು, ಅಂಣೆನಾಡು, ಹಿರಿಯನಾಡು, ಎಡತಲೆನಾಡು, ತೊರೆನಾಡು, ಹುಲ್ಲನಹಳ್ಳಿಯನಾಡು, ಹೊದೆನಾಡು, ಎಡೆಯಾಲನಾಡು, ಕಣ್ಣಾಲನಾಡು, ನುಗುನಾಡು, ನವಿಲೆನಾಡು, ಬಯಲ್ನಾಡು–ಈ 14 ನಾಡುಗಳನ್ನು 'ಪದಿನಾಲ್ಕು ನಾಡು' ಎಂದು ಕರೆಯಲಾಗಿತ್ತು. ಈ ಪದಿನಾಲ್ಕು ನಾಡನ್ನು 'ಸಮಸ್ತನಾಡು' ಎಂತಲೂ ಕರೆಯಲಾಗುತ್ತಿತ್ತು. 1303ರವರೆಗೂ ಪ್ರತ್ಯೇಕವಾಗಿ ತಮ್ಮ ಅಸ್ತಿತ್ವ ಉಳಿಸಿಕೊಂಡಿದ್ದ ನಾಡುಗಳನ್ನು ತನ್ನ ಧೀಶಕ್ತಿಯಿಂದ ಇಡಿಯಾಗಿ ಪದಿನಾಲ್ಕುನಾಡಾಗಿಸಿ, ತೆರಕಣಾಂಬಿಯನ್ನು ಅದರ ರಾಜಧಾನಿಯನ್ನಾಗಿಸಿಕೊಂಡು ಮಾಧವದಂಡ ನಾಯಕನು ತನ್ನ ಮುಖ್ಯ

ಆಡಳಿತ ಛತ್ರದೆಡೆಗೆ ತಂದನೆಂದೇ ನನ್ನ ಅಭಿಪ್ರಾಯ. ಕ್ರಿ.ಶ. 1303ರ ಕೊತ್ತಲವಾಡಿಯ ಶಾಸನದ ನಂತರದ ಶಾಸನಗಳಲ್ಲಿ ಮಾದವದಂಡನಾಯಕನ ವಂಶೀಯರನ್ನು 'ಪದಿನಾಲ್ಕು ನಾಡರಸರು' ಎಂದು ಉಲ್ಲೇಖಿಸಿರುವುದು ಗಮನಿಸಬೇಕು.

**ಭರತಜೀಯ ದಂಡನಾಯಕ–ಕೇತೆಯ ದಂಡನಾಯಕ** : ಕ್ರಿ.ಶ.1320ರ ರಾಘವಾಪುರದ ಶಾಸನದಲ್ಲಿ[36] ಮಾಧವದಂಡನಾಯಕನ ಮಕ್ಕಳಾದ ಭರತಜೀಯ ದಂಡನಾಯಕ ಮತ್ತು ಕೇತೆಯದಂಡನಾಯಕನ ಆಳ್ವಿಕೆಯ ವಿಚಾರ ವ್ಯಕ್ತವಾಗಿದೆ. ಮಾಧವದಂಡನಾಯಕನಿಂದ ಹಿಂದೆ ಎಂದೋ ಪಡೆದಿದ್ದ ಭೂಮಿಯನ್ನು ಮಾದಜೀಯನೆಂಬಾತನೋರ್ವ ದಾನ ನೀಡಿದುದು ಈಗಾಗಲೇ ನಾನು ಉಲ್ಲೇಖಿಸಿರುವ ಕ್ರಿ.ಶ. 1321ರ ಶಾಸನದಲ್ಲಿ ಕಂಡು ಬಂದಿದೆ. 1320ರ ರಾಘವಪುರ ಶಾಸನದಲ್ಲಿ ಭರತಜೀಯ ದಂಡನಾಯಕನು ಪದಿನಾಲ್ಕುನಾಡನ್ನು ಪರಿಪಾಲಿಸುತ್ತಿದ್ದುದು ನಿಚ್ಚಳವಾಗಿರುವುದರಿಂದ ಮಾಧವದಂಡನಾಯಕನು ಕ್ರಿ.ಶ. 1320ಕ್ಕೆ ಪೂರ್ವದಲ್ಲಿಯೇ ಗತಿಸಿರುವ ಸಾಧ್ಯತೆಗಳು ಹೆಚ್ಚಿವೆ. ಈ ಶಾಸನದ ತರುವಾಯ ಶಾಸನಗಳಲ್ಲಿ ಅವನ ಮಕ್ಕಳ ಮತ್ತು ಕೆಲವು ಪದಿನಾಲ್ಕು ನಾಡಿನ ದಾನಿಗಳು ನೀಡಿರುವ ದಾನಶಾಸನಗಳಲ್ಲಿ ಕೇವಲ ಅವನ ಹೆಸರು ಮಾತ್ರವೇ ಉಲ್ಲೇಖಗೊಂಡಿರುವುದು ಲಕ್ಷ್ಯಾರ್ಹ. ಹೀಗಾಗಿ ಮಾಧವದಂಡನಾಯಕನ ತರುವಾಯ ಭರತಜೀಯ ಪದಿನಾಲ್ಕುನಾಡಿನ ನಾಡಾಧಿಪತಿಯಾಗುತ್ತಾನೆ. ಇವನಿಗೆ ನೆರವಾಗಿ ಮಾಧವದಂಡನಾಯಕನ ಇನ್ನೋರ್ವ ಮಗ ಕೇತೆಯದಂಡನಾಯಕನು ಇರುತ್ತಾನೆ.

2–4–1327ರ ಹೆಗ್ಗವಾಡಿಯ ಶಾಸನದಲ್ಲಿ[37] ಶ್ರೀಮನ್ಮಹಾಪ್ರಧಾನ ಕೇತೆಯದಂಡನಾಯಕನು ಪದಿನಾಲ್ಕು ನಾಡಿನಲ್ಲಿ ಪೃಥ್ವಿರಾಜ್ಯಂಗೆಯುತ್ತಿರುವ ಉಲ್ಲೇಖವಿರುವುದನ್ನು ಗಮನಿಸಿದರೆ, ಈ ವೇಳೆಗೆ ಭರತಜೀಯನು ಆಗಿಹೋಗಿರಬಹುದು. ಮತ್ತೊಂದು ವಿಚಾರವೆಂದರೆ, ಮಾಧವದಂಡನಾಯಕ ಹಾಗೂ ಭರತಜೀಯರ ಚಟುವಟಿಕೆಗಳು ತಮಿಳುನಾಡಿನ ಕೊಯಮತ್ತೂರು, ಉತ್ತರ ಆರ್ಕಾಡು ಹಾಗೂ ಇನ್ನುಳಿದ ಭಾಗಗಳಲ್ಲಿ ಕಂಡುಬರದೇ ಇರುವುದರಿಂದ ಕೇತೆಯದಂಡನಾಯಕನ ಈ ಶಾಸನವು ಸ್ಪಷ್ಟವಾಗಿ ಅವನ ಪೂರ್ವಿಕರು ಗತಿಸಿರುವಿಕೆಯ ಸಾಧ್ಯತೆಯನ್ನು ಎತ್ತಿಹಿಡಿಯುತ್ತದೆ.

**ಸಿಂಗೆಯದಂಡನಾಯಕ:** ಮಾಧವದಂಡನಾಯಕನ ಮಕ್ಕಳಲ್ಲಿ ಅತ್ಯಂತ ಪ್ರಬಲನಾದವನು ಸಿಂಗೆಯದಂಡನಾಯಕ. 25–8–1338ರ ಹಳಗನಹಳ್ಳಿಯ ಶಾಸನವೊಂದು[38] ಮಾತ್ರ ಕನ್ನಡನಾಡಿನ ಭಾಗದಲ್ಲಿ ದೊರೆತಿರುವ ಏಕೈಕ ಶಾಸನವಾಗಿದೆ. ಈ ಶಾಸನದ ಪ್ರಕಾರ, ಸಿಂಗೆಯದಂಡನಾಯಕನು ಹಳಗನಹಳ್ಳಿ ಮತ್ತು ಇತರೆ ಗ್ರಾಮಗಳನ್ನು ವೀರಭದ್ರದೇವರಿಗೆ ದಾನ ನೀಡಿದನು. ಈತ ತಮಿಳುನಾಡಿನ ರಾಜಕೀಯದಲ್ಲಿ ಹೊಯ್ಸಳರ ಪರವಾಗಿ ಪ್ರಬಲ ಸೇನಾನಿಯಾಗಿ ಕಾರ್ಯನಿರ್ವಹಿಸುತ್ತಿದ್ದನು. ಹೊಯ್ಸಳರು ತೊಂಡಮಂಡಲವನ್ನು ಗೆದ್ದಮೇಲೆ ಅಲ್ಲಿನ ಯಾದವರಾಯರೆಂಬ ವಂಶದ ದೊರೆ ತಿರುವೇಂಕಟನಾಥನು ಹೊಯ್ಸಳರಿಗೆ ಶರಣಾಗತನಾಗಿ ಅವರ ಸಾಮಂತನಾದನು. ಈ ತಿರುವೇಂಕಟನಾಥನಲ್ಲಿ ಪ್ರಧಾನಿಯಾಗಿದ್ದ ಪೆರುಮಾಳೆದೇವದಂಡನಾಯಕನ ಸಂಬಂಧಿಯೇ ಆಗಿದ್ದ ರೇಚಯ್ಯದಂಡನಾಯಕನು ತೀರಿ ಹೋದ

ಮೇಲೆ ತಿರುವೇಂಕಟನಾಥನಿಗೆ ಮಾಧವದಂಡನಾಯಕನ ಕಿರಿಯ ಮಗ ಸಿಂಗೆಯದಂಡನಾಯಕನು ಅಲ್ಲಿಯ ಹೊಯ್ಸಳ ಬಲವನ್ನು ಕಾಯಲು ಪ್ರಧಾನಿಯಾಗುತ್ತಾನೆ. ಮುಂದೆ ವೀರಬಲ್ಲಾಳನು 1347ರಲ್ಲಿ ಮರಣ ಹೊಂದಲು ಸಿಂಗೆಯದಂಡನಾಯಕನು ಅಲ್ಲಿ ಪ್ರವರ್ಧಮಾನಕ್ಕೆ ಬರುತ್ತಾನೆ.

ಸುಮಾರು 1 ಶತಮಾನದ ತುಂಬ (ಕ್ರಿ.ಶ. 1255–1356) ಹೊಯ್ಸಳ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ದಂಡನಾಯಕರಾಗಿ, ಮಹಾಪ್ರಧಾನಿಗಳಾಗಿ, ನಾಡಾಧಿಪತಿಗಳಾಗಿ ಸೇವೆ ಸಲ್ಲಿಸಿದ ಪೆರುಮಾಳೆ ದೇವದಂಡನಾಯಕನ ವಂಶೀಯರು ವೈರಿಬಲವನ್ನು ಮಟ್ಟ ಹಾಕಿ ಮೂರನೆಯ ಬಲ್ಲಾಳನ ಕಾಲದಲ್ಲಿ ಹೊಯ್ಸಳರ ಘನತೆ ಗೌರವ, ಸಾರ್ವಭೌಮತ್ವಗಳ ಪುನಃ ಸ್ಥಾಪನೆಯ ಪ್ರಯತ್ನದಲ್ಲಿ ನೆರವಾಗಿ ಮಹೋನ್ನತ ಸಾಧನೆ ಮಾಡಿದ್ದಾರೆ. ಮಾಧವದೇವದಂಡನಾಯಕನ ಶಾಸನಗಳಲ್ಲಿ ವಿಶೇಷವಾಗಿ 'ತಾವು ಸ್ವಸ್ತಿ ಪುರವರಾಧೀಶ್ವರರು' ಎಂದು ಕರೆದುಕೊಂಡಿರುವುದು ತಿಳಿದುಬರುತ್ತದೆ. ಮಾಧವದಂಡನಾಯಕನಾದರೋ ತೆರಕಣಾಂಬಿಯನ್ನು ರಾಜಧಾನಿಯನ್ನಾಗಿಸಿ ಕೊಂಡು ಆಳುತ್ತಿದ್ದುದರಿಂದ ತೆರಕಾಣಾಂಬಿಯೇ ಸ್ವಸ್ತಿಪುರವಾಗಿರಬಹುದೇ? ಪೆರುಮಾಳೆದೇವದಂಡನಾಯಕನು ಕ್ರಿ.ಶ. 1255 ರಿಂದ 1280 ರವರೆಗೂ ಚಿತ್ರದುರ್ಗ, ಹಾಸನ, ಮಂಡ್ಯದ ಸುತ್ತಮುತ್ತಲ ಪ್ರದೇಶಗಳಲ್ಲಿ ಪ್ರಾಂತ್ಯಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುತ್ತಾನೆ. 3ನೆಯ ನರಸಿಂಹ ಮತ್ತು 3ನೆಯ ಬಲ್ಲಾಳನಲ್ಲಿ ಪ್ರಧಾನಿಯಾಗಿದ್ದ ಸೋಮೆಯ ದಂಡನಾಯಕನು ಚಿತ್ರದುರ್ಗ, ಹಾಸನದ ಪ್ರದೇಶಗಳಿಗೆ ಪ್ರಾಂತ್ಯಾಧಿಕಾರಿಯಾಗಿ ಬಂದ ಮೇಲೆ ಪೆರುಮಾಳೆಯು ಮೈಸೂರು, ಚಾಮರಾಜನಗರ ಪ್ರದೇಶಗಳ ಪ್ರಾಂತ್ಯಾಧಿಕಾರಿಯಾಗಿ ನಿಯೋಜನೆಗೊಳ್ಳುತ್ತಾನೆ. ಕ್ರಿ.ಶ.1303ರ ವೇಳೆಗೆ ಚಾಮರಾಜನಗರ, ಮೈಸೂರು, ಗುಂಡ್ಲುಪೇಟೆ, ಕೊಳ್ಳೇಗಾಲ, ನಂಜನಗೂಡು ಪ್ರದೇಶಗಳನ್ನೊಳಗೊಂಡ ಹದಿನಾಲ್ಕು ನಾಡನ್ನು ಸುಭದ್ರವಾಗಿ ಕಟ್ಟಿ ತನ್ನ ಮಗ ಮಾಧವದಂಡನಾಯಕನನ್ನು ಈ ನಾಡಿನ ಅಧಿಪತಿಯನ್ನಾಗಿಸುವಲ್ಲಿ ಪೆರುಮಾಳೆದೇವದಂಡನಾಯಕನ ಇಚ್ಛಾಶಕ್ತಿ ಗೋಚರಿಸುತ್ತದೆ. ಪೆರುಮಾಳೆಯ ಪ್ರಯತ್ನದ ಫಲವಾಗಿ ತೆರಕಣಾಂಬಿಯು ರಾಜಧಾನಿಯಾಗಿ ಮುಂದೆ ತೆರಕಣಾಂಬಿ ರಾಜ್ಯವಾಗಿ ರೂಪುಗೊಳ್ಳಲು ಸಾಧ್ಯವಾಗುತ್ತದೆ.

ಸೋಮೆಯದಂಡನಾಯಕನು ಕ್ರಿ.ಶ. 1303ರಲ್ಲಿಯೇ ಸೇವುಣರೊಂದಿಗೆ ಹೋರಾಡುತ್ತ ಮರಣಹೊಂದಿದ ತರುವಾಯ ಅವನ ಮೊದಲ ಮಗ ಸಿಂಗೆಯದಂಡನಾಯಕನು ಹೊಸಕೋಟೆ, ಆನೇಕಲ್, ಕನಕಪುರ, ಬೆಂಗಳೂರು ಪ್ರದೇಶಗಳನ್ನು ಮಹಾಪ್ರಧಾನಿಯಾಗಿ ನೋಡಿಕೊಂಡರೆ, ಮಾಧವ ದಂಡನಾಯಕನು ಹೊಯ್ಸಳ ಸಾಮ್ರಾಜ್ಯದ ದಕ್ಷಿಣಭಾಗದ ಹೊಣೆ ಹೊತ್ತಿರುತ್ತಾನೆ. ಮಾಧವದಂಡನಾಯಕನ ತರುವಾಯ ಕೇತೆಯದಂಡ ನಾಯಕನು ಪದಿನಾಲ್ಕುನಾಡನ್ನು ನೋಡಿಕೊಳ್ಳುತ್ತಿದ್ದರೆ ಬೆಂಗಳೂರು, ಕೋಲಾರ, ಮಾಲೂರು, ಬಂಗಾರಪೇಟೆ ಪ್ರದೇಶಗಳು ಸೋಮೆಯದಂಡನಾಯಕನ ಕಿರಿಯ ಮಗ ಬಲ್ಲಪ್ಪದಂಡನಾಯಕನು ಪ್ರಧಾನಿಯಾಗಿ ಆಳುತ್ತಿರುತ್ತಾನೆ.

ಒಟ್ಟಿನಲ್ಲಿ ವೈರಿಬಲವು ವೃದ್ಧಿಸದಂತೆ ಮತ್ತು ಆಂತರಿಕವಾಗಿಯೂ ಶಾಂತಿ ಸುಭದ್ರತೆಗಳು ಹೊಯ್ಸಳ ಸಾಮ್ರಾಜ್ಯದಲ್ಲಿ ನೆಲೆಸುವಂತೆ ಮಾಡುವಲ್ಲಿ ಪೆರುಮಾಳೆದೇವದಂಡನಾಯಕನ ವಂಶೀಯರು ಮುಖ್ಯಪಾತ್ರ ವಹಿಸುತ್ತಾರೆ.

### 3.4 ಗೋವಿದೇವ ಮತ್ತು ಅವನ ವಂಶೀಯರು

**ಹೊ**ಯ್ಸಳ ರಾಜ್ಯಾಡಳಿತದ ಕ್ರಿ.ಶ. 11ನೆಯ ಶತಮಾನದಿಂದ 13ನೆಯ ಶತಮಾನದ ಆರಂಭದವರೆಗೆ ಸಾಮ್ರಾಜ್ಯದ ದಕ್ಷಿಣ ಮತ್ತು ಪೂರ್ವಭಾಗಗಳಲ್ಲಿ ಸುಸ್ಥಿರವೂ ಸಂಪದ್ಭರಿತವೂ ಆದಂತಹ ಸ್ಥಳೀಯ ಆಡಳಿತ ನಡೆಸಿದವರು ಗೋವಿದೇವ ಮತ್ತು ಅವನ ವಂಶೀಯರು. ಮಲೆನಾಡಿನಿಂದ ಬಯಲುನಾಡಿಗೆ ಹೊಯ್ಸಳ ಸಾಮ್ರಾಜ್ಯದ ಮಹಾರಥವು ಸಂಚರಿಸುವ ಘಟ್ಟದಲ್ಲಿ ಅನೇಕ ವೈರಿಪಡೆಗಳನ್ನು ಹೊಯ್ಸಳರು ಎದುರಿಸ ಬೇಕಾಯಿತು. ಚೆಂಗಾಳ್ವರು, ಕೊಂಗಾಳ್ವರು, ಚೋಳರು, ಪಾಂಡ್ಯರು ಮುಂತಾದವರ ಉಪಟಳಗಳ ನಡುವೆ ತಮ್ಮ ಅಸ್ಮಿತೆಯನ್ನು ರಾಜಕೀಯ ಮಹತ್ವಾಕಾಂಕ್ಷೆಯನ್ನು ಪೋಷಿಸಿಕೊಳ್ಳುವ ಅಗತ್ಯತೆ ಇದ್ದುದರಿಂದ ಸಾಮಂತ ಮನೆತನಗಳನ್ನು ಕೆಲವೆಡೆ ಭದ್ರವಾಗಿ ನೆಲೆಯೂರುವಂತೆ ಮಾಡಿ ಈ ಮೂಲಕ ಸ್ಥಳೀಯವಾಗಿ ಅರಾಜಕತೆಯು ಉಂಟಾಗದಂತೆ ನೋಡಿಕೊಳ್ಳುವುದು ಹೊಯ್ಸಳರ ಮುಖ್ಯ ರಾಜನೀತಿಗಳಲ್ಲಿ ಒಂದಾಗಿದ್ದಿತು. ಅಂತೆಯೆ ಅವರು (ಇಂದಿನ ಚಿಕ್ಕನಾಯಕನಹಳ್ಳಿಯ ಹುಳಿಯಾರು) ಹುಳಿಯೇರು, (ಇಂದಿನ ಅರಸೀಕೆರೆ ತಾಲ್ಲೂಕಿನ ಕಣಿಕಟ್ಟೆ) ಕಳಿಕಟ್ಟೆ, (ಕಡೂರು ತಾಲೂಕಿನ ನೀರಗುಂದ) ನೀರ್ಗುಂದ ಮತ್ತು ಇವುಗಳ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಗೋವಿದೇವ ಮತ್ತು ಅವನ ವಂಶೀಯರನ್ನು ನೆಲೆಗೊಳಿಸಿದ್ದರು. ಈ ವಂಶೀಯರು ತಮ್ಮ ಅಧಿರಾಜರ ರಾಜನೀತಿಗೆ ಸಂಪೂರ್ಣ ಬದ್ಧರಾಗಿದ್ದುಕೊಂಡು ಆಗಾಗ ಎದುರಾಗುವ ಎದುರಾಳಿಗಳನ್ನು ಸದೆಬಡಿದು ತಮ್ಮ ರಾಜನಿಷ್ಠೆಯನ್ನು ತೋರುತ್ತಲೇ ಸ್ಥಳೀಯ ಸಾಂಸ್ಕೃತಿಕ ಚರಿತ್ರೆಗೆ ಮಿಗಿಲಾದ ಕೊಡುಗೆಗಳನ್ನು ಸಲ್ಲಿಸಿದ್ದಾರೆ.

ಸಾಮಂತ ಕರಿಯಬೊಮ್ಮನ ಅಗ್ರತನುಜ ಆಹವಮಲ್ಲ ಮತ್ತು ಅವನ ಮಕ್ಕಳು, ಮೊಮ್ಮಕ್ಕಳೆಲ್ಲರು ವಂಶಪಾರಂಪರ್ಯವಾಗಿ ಹುಳಿಯಾರು ಪ್ರದೇಶದಲ್ಲಿ ಸಾಮಂತ ಪದವಿಯಿಂದ ಆಳಿದರೆ, ಕರಿಯಬೊಮ್ಮನ ದ್ವಿತೀಯ ಪುತ್ರ ಕೆಚ್ಚನೆ ಮಾಚಯನಾಯಕ ಮತ್ತು ಅವನ ಮಗ, ಮೊಮ್ಮಗ ಕಣಿಕಟ್ಟೆ ಪ್ರದೇಶದಲ್ಲಿ ಸಾಮಂತ ಪದವಿಯಿಂದ ಆಳಿದ್ದಾರೆ. ಆಹವಮಲ್ಲನ ಎರಡನೆಯ ಮೊಮ್ಮಗನಾದ ಸಾಮಂತ ಚಟ್ಟಯ್ಯನು ಹುಳಿಯಾರಿನಲ್ಲಿ ತನ್ನ ಮನೆತನದ ಭದ್ರಪ್ರಭಾವ ಅಸ್ಥಿಭಾರವನ್ನು ಹಾಕಿ ನೀರ್ಗುಂದಕ್ಕೆ ತೆರಳಿ ಅಲ್ಲಿಯೂ ಸಾಮಂತ ಪದವಿಯಿಂದ ಆಡಳಿತ ನಡೆಸುತ್ತಾನೆ. ಚಟ್ಟಯ್ಯನ ತರುವಾಯ ಹುಳಿಯಾರಿನಲ್ಲಿ ಅವನ ತಮ್ಮ ಸಾಮಂತ ಗೋವಿದೇವ ಮತ್ತು ಅವನ ಮಗ, ಮೊಮ್ಮಕ್ಕಳು ವಂಶಪಾರಂಪರ್ಯವಾಗಿ ಹುಳಿಯೆರಪುರವರಾಧೀಶ್ವರರಾಗಿ ಆಳ್ವಿಕೆ ನಡೆಸಿದ್ದಾರೆ. ನಡುವೆ ಕೆಲಕಾಲ ಚಟ್ಟನ ಮಗ ಬಿಟ್ಟಿದೇವ ಹುಳಿಯಾರನ್ನು ಆಳುತ್ತಾನೆ. ಅತ್ತ ನಿರ್ಗುಂದದಲ್ಲಿ ಚಟ್ಟಯ್ಯನ ಮರಣದ ತರುವಾಯ ಚಟ್ಟನ ಅಣ್ಣನಾದ ಮಾಚನ ಮಗ ಮಲ್ಲನು ಪ್ರವರ್ಧಮಾನನಾಗುತ್ತಾನೆ.

ಹುಳಿಯಾರು, ನೀರ್ಗುಂದ, ಕಣಿಕಟ್ಟೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳೇ ಏಕೆ ಈ ಸಾಮಂತರ ಮುಖ್ಯ ಆಡಳಿತಕ್ಕೆ ಒಳಪಟ್ಟಿತ್ತು? ಎಂಬ ಪ್ರಶ್ನೆಗೆ ಉತ್ತರ ಹುಡುಕ ಹೊರಟರೆ, ಈ ಪ್ರದೇಶಗಳ ಭೂದಾನಗಳನ್ನು ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ. ಈ ಭೂದಾನಗಳು ಪದೇ ಪದೇ ಅನೇಕ ಅನೇಕ ಊರುಗಳ ಕೆರೆ, ಹಿರಿಯಕೆರೆ, ದಕ್ಷಿಣದ ಕೆರೆ, ಕೆರೆಯ ಮೊದಲೇರಿ, ಉತ್ತರದ ಕೆರೆ, ದೊಡ್ಡ ಆಲದ ಮರದ ದಕ್ಷಿಣದ ಕೆರೆ ಇತ್ಯಾದಿಯಾಗಿ ಫಲವತ್ತಾದ ಸೀಮೆಗಳೆಂಬುದನ್ನು ಸೂಕ್ಷ್ಮವಾಗಿ ಧ್ವನಿಸುತ್ತವೆ. ಸಹಜವಾಗಿಯೇ ಕೆರೆಯಿದ್ದ ಎಡೆಗಳಲ್ಲಿ ಕೃಷಿ, ಕೃಷಿಯಿಂದ ವ್ಯಾಪಾರ, ವ್ಯಾಪಾರದಿಂದ ಹಣದ ಸಂಚಯನ, ಆ ಮೂಲಕ ಪುಟ್ಟ ಪಟ್ಟಣಗಳ ನಿರ್ಮಿತಿ, ಪಟ್ಟಣಗಳ ನಡುವೆ ನಡೆಯುವ ಒಳನಾಡಿನ ದೇಶೀಯ ವ್ಯವಹಾರಗಳು ಸುಭಗವಾಗಿರುತ್ತವೆ. ಹೀಗಾಗಿ ಈ ಪ್ರದೇಶಗಳು ಸಂಪದ್ಭರಿತವಾಗಿದ್ದವು ಮಾತ್ರವಲ್ಲದೆ ಹೊಯ್ಸಳ ಸಾಮ್ರಾಜ್ಯದ ಆರ್ಥಿಕತೆಯಲ್ಲಿ ವಿಶಿಷ್ಟವಾದ ಸ್ಥಾನ ಗಳಿಸಿದ್ದ ವ್ಯಾಪಾರಿ ಮಾರ್ಗಗಳಾಗಿದ್ದವು. ಆದ್ದರಿಂದ ಇಲ್ಲಿ ಇಂತಹ ಬಲಿಷ್ಠ ಸಾಮಂತರು ಹೊಯ್ಸಳರ ಅವಧಿ ಮುಗಿಯುವವರೆಗೂ ನೆಲೆಗೊಂಡಿದ್ದರು. ಗೋವಿದೇವನ ವಂಶೀಯರು ಎಂತಹ ಬಲಿಷ್ಠರೆಂದರೆ ಇವರ ಎಷ್ಟೋ ಶಾಸನ ಪದ್ಯಗಳು ಇವರೆಂತಹ ಅಸಹಾಯ ಶೂರರೆಂಬುದನ್ನು ಶ್ರುತಪಡಿಸುತ್ತವೆ.

**ಮಗರೆ ನಾಡು**: ಮಗರೆ ನಾಡು ಅಥವಾ ಮಕರನಾಡು ಒಂದು ಆಡಳಿತ ವಿಭಾಗವಾಗಿ ಗಂಗರ ಕಾಲದಿಂದಲೂ ಅಸ್ತಿತ್ವದಲ್ಲಿದ್ದಿತು.[39] ಇದು ಹೊಯ್ಸಳ ಸಾಮ್ರಾಜ್ಯದಲ್ಲಿ ಒಂದು ಪ್ರಮುಖ ಆಡಳಿತ ವಿಭಾಗವಾಗಿದ್ದು ಮಗರೆ 300 ಎಂದು ಹೆಸರಾಗಿದ್ದಿತು. ಮಗರೆ ನಾಡನ್ನು ಹೆಸರಿಸುವ ಎಲ್ಲ ಶಾಸನಗಳು ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿ ಗುರುತಿಸುವುದು ಸಾಧ್ಯವಿದ್ದುದರಿಂದ ಈ ವಿಭಾಗವು ಈ ತಾಲೂಕಿನ ಬಹುಭಾಗವನ್ನು ಒಳಗೊಂಡಿದ್ದಿತ್ತೆಂದು ಹೇಳಬಹುದು. ಹುಳಿಯಾರು ಗ್ರಾಮವು ಈ ವಿಭಾಗದ ಮುಖ್ಯಸ್ಥಳವಾಗಿದ್ದಿತು. ಮಗರೆನಾಡು ಕೆಲವೊಮ್ಮೆ ಹುಳಿಯರ ನಾಡು ಎಂದು ಕರೆಯಲ್ಪಟ್ಟುದ್ದು ಕಂಡುಬರುತ್ತದೆ. ಈ ವಿಭಾಗದಲ್ಲಿ ಕಾಡನೂರು–70, ಹೆಜ್ಜಾಜಿ–12, ಮೊರಸೂರು–36, ಕಿರವನೂರು–12 ಮುಂತಾದ ಚಿಕ್ಕ ಚಿಕ್ಕ ವಿಭಾಗಗಳಿದ್ದವು. ಇಂಥ ವಿಭಾಗಗಳಲ್ಲಿ ಇದ್ದ ಹಲವಾರು ಗ್ರಾಮಗಳ ಹೆಸರುಗಳು ಶಾಸನಗಳಲ್ಲಿ ದೊರೆಯುತ್ತವೆ. ಇಂಥವುಗಳಲ್ಲಿ ಎಷ್ಟೋ ಗ್ರಾಮಗಳನ್ನು ಇಂದಿನ ಗ್ರಾಮಗಳೊಂದಿಗೆ ಗುರುತಿಸುವುದು ಕಠಿಣವಾಗುತ್ತದೆ. ಆದರೂ ಕೆಲವನ್ನು ಗುರುತಿಸಬಹುದು. ಡಿಂಕನಹಳ್ಳಿ, ಬಿದರೆ (ಇಂದಿನ ದೊಡ್ಡ ಬಿದರೆ), ಹಿರಿಯಚೇಂಡಿ, ಚಿಕ್ಕ ಚೇಂಡಿ, ಹೆಗ್ಗರೆ (ಇಂದಿನ ಹೆಗ್ಗೆರೆ), ಬೇವಿಹಾಳು, ನೀರಲಕೆರೆ (>ನೇರಲಕೆರೆ) ಅಣುವಗೆರೆ ಮಾರುಹೊಳೆ (>ಮೊರುಳೆ / ಮಾರುಹೊಳೆ), ಬರಿಗೆಯಹಳ್ಳಿ (>ಬರಗೀಹಳ್ಳಿ), ಬೆಣ್ಣಬ್ಬೆಗುಡ್ಡೆ, ಕೋರಗೆರೆ (>ಕೋರಗೆರೆ), ತೇಕುರವಟಿ (>ದೊಡ್ಡ ತೇಕಲವಟ್ಟಿ), ಹೊಂದಲಗೆರೆ, ಎಡೆಯಕಟ್ಟಿ. ಹೊಯ್ಸಳ ಸಾಮ್ರಾಜ್ಯದಲ್ಲಿ ಪ್ರಮುಖ ಮಾಂಡಲಿಕರಿಂದ ಆಳಲ್ಪಡುತ್ತಿದ್ದ ಮಗರೆನಾಡು ವಿಜಯನಗರ ಕಾಲದಲ್ಲಿ ಇದೇ ಸ್ಥಾನದಲ್ಲಿ ಮುಂದುವರೆಯಿತು.

**ಮಹಾಸಾಮಂತ ಗೋವಿದೇವ** : ಮಹಾಸಾಮಂತ ಗೋವಿದೇವನು ಹೊಯ್ಸಳ ವಿಷ್ಣುವರ್ಧನ ಮತ್ತು ಒಂದನೆಯ ನರಸಿಂಹನ ಆಳ್ವಿಕೆಯ ಅವಧಿಯಲ್ಲಿ ಮಗರೆ–300ರ ಭೌಗೋಳಿಕ ವ್ಯಾಪ್ತಿಯಲ್ಲಿ

ಅತ್ಯಂತ ಪ್ರಭಾವಶಾಲಿಯಾಗಿದ್ದ ಮಹಾಸಾಮಂತನಾಗಿದ್ದನು. ಸಾಮಂತ ಭೀಮ ಮತ್ತು ಚಟ್ಟಿಯಕ್ಕ ದಂಪತಿಗಳ 4ನೆಯ ಮಗನೀತ. ಕರಿಯಬೊಮ್ಮನ ವಂಶೀಯರಲ್ಲಿ ಚಟ್ಟಯ್ಯನ ತರುವಾಯ ಅತ್ಯಂತ ಪ್ರಸಿದ್ಧನಾದವನು ಈ ಗೋವಿದೇವ. ಕ್ರಿ.ಶ. 23.04.1143ರ ಕಣಿಕಟ್ಟೆಯ ಶಾಸನವು[40] ಇವನನ್ನು ಪ್ರಥಮವಾಗಿ ಉಲ್ಲೇಖಿಸುತ್ತದೆ. ಈ ಶಾಸನದ ಹೊತ್ತಿಗಾಗಲೇ ಹೊಯ್ಸಳ ಸಾಮ್ರಾಜ್ಯದಲ್ಲಿ ಗಣ್ಯಸ್ಥಾನವನ್ನು ಪಡೆಯುತ್ತಿದ್ದು ಕ್ರಿ.ಶ. 1143ರಲ್ಲಿ ಮಗರೆನಾಡು–300ರ ಮೊದಲಬಾಡವಾದ ಕಣಿಕಟ್ಟೆಯನ್ನು ಸರ್ವಭಾದಾ ಪರಿಹಾರವಾಗಿ ಆಳುತ್ತಿದ್ದನು.

ಈತ ಅಪಾರ ಬಿರುದುಗಳಿಗೆ ಆಳರಸನೋಪಾದಿಯಂತೆ ಪಾತ್ರನಾಗಿರುವುದು ಅತ್ಯಂತ ಗಮನಾರ್ಹ. ಕ್ರಿ.ಶ. 1143ರ ವೇಳೆಗಾಗಲೇ ಆತ ರಾಜಕೀಯವಾಗಿ ಆಡಳಿತಾತ್ಮಕ ಸಾಧನೆಗಳನ್ನು ಗೈದಂತೆ ತೋರುತ್ತದೆ. ಅವಿಧೇಯ, ಅಹಿತ, ಗರ್ವಿಷ್ಟ ಸಾಮಂತರನ್ನು ಈತ ಬಗ್ಗು ಬಡಿದು ನರಸಿಂಹ ದೊರೆಯ ಬಲಗೈಭಂಟನಾಗಿ ರಾಜನಿಷ್ಠೆಯನ್ನು ತೋರಿಸಿದ್ದುದು, ನಿರ್ಮಲವಾದ ಕೀರ್ತಿಯನ್ನು ಹೊಂದಿದ್ದುದು, ನೋಡಲು ಕೂಡ ಸುಲಕ್ಷಣವಾಗಿದ್ದುದು ಈ ಬಿರುದುಗಳಿಂದ ತಿಳಿದುಬರುತ್ತದೆ. ಮತ್ತೂರಿನ ಶಾಸನವು[41] ಸಹ ಈತನನ್ನು ಬಹಳ ಸೊಗಸಾಗಿ ಕೀರ್ತಿಸಿದೆ. ಈ ಶಾಸನೋಕ್ತ ಬಿರುದುಗಳು ಒಂದೆಡೆ ಆಳರಸನ ಜೊತೆಗೂಡಿ ಶತ್ರುಗಳೊಂದಿಗೆ ಹೋರಾಡಿ ವಿಕ್ರಮ ಸಾಧಿಸಿದ್ದರ ಕುರುಹುಗಳನ್ನು ತಿಳಿಸಿದರೆ, ಇನ್ನೊಂದೆಡೆ ಅವನ ರೂಪ–ಲಾವಣ್ಯ–ರಸಿಕತೆಗಳನ್ನು, ಮತ್ತೊಂದೆಡೆ ಅವನ ಧಾರ್ಮಿಕ ಪ್ರವೃತ್ತಿ ಆಸಕ್ತಿಗಳನ್ನು, ಮಗದೊಂದೆಡೆ ಅವನ ಒಟ್ಟು ವ್ಯಕ್ತಿತ್ವದ ಉನ್ನತಿಕೆಯನ್ನು ಸೂಕ್ಷ್ಮವಾಗಿ ಬಿಂಬಿಸುತ್ತವೆ. ಈ ಆರಂಭಿಕ ಶಾಸನಗಳಲ್ಲಿಯೇ ಆತ 'ಹುಳಿಯೆಱಪುರವರಾಧೀಶ್ವರ' ಎಂದು ಕರೆದುಕೊಂಡಿರುವುದನ್ನು ಗಮನಿಸಿದಾಗ, ಅವನ ನಿಜವಾದ ಆಡಳಿತದ ಕೇಂದ್ರಸ್ಥಾನವು ಹುಳಿಯೇರು ಆಗಿದ್ದು, ರಾಜತಾಂತ್ರಿಕ ಕಾರ್ಯಗಳಿಗಾಗಿ ಆಗಾಗ ಕಣಿಕಟ್ಟೆ, ಕಡೂರು ಮತ್ತು ಸುತ್ತಲಿನ ಪ್ರದೇಶಗಳಲ್ಲಿ ಕಾರ್ಯಭಾರ ನಿರ್ವಹಿಸುತ್ತಿದ್ದಿರಬೇಕು ಎಂದೆನಿಸುತ್ತದೆ.

'ಅಂಣ್ಣನ ಗಂಧವಾರಣ' (ಚಟ್ಟನ ಪ್ರಿಯನಾದ) ಗೋವಿದೇವನು ಅಣ್ಣನಂತೆ ವೀರಾಗ್ರಣಿಯಾಗಿದ್ದುದಕ್ಕೆ ಈ ಶಾಸನೋಕ್ತ ಪದ್ಯಗಳು ಸಾಕ್ಷಿಯಾಗಿವೆ :

**ಹರಿಯಂ ವಾರಣವಟ್ಟೆವಾರಣಘಟಾನೀಕಂಗಳು ಕೋಪದಿಂ**
**ತುರಗಾನೀಕವದಟ್ಟಲುರ್ವ್ವಿಸೆ ಹಯಾನೀಕಂ ನರಾನೀಕಮ**
**ಮರಳುಟ್ಟುತ್ತಿರೆ ನಾರದಂ ನಲಿಯಲಾಜಿಕ್ಷೋಣಿಯೊಳು ಕೊಸ್ದು**
**ದುರ್ದ್ಧರ ಕೋಪಂ ನಲಿಯುತ್ತಮಿರ್ಪ್ಪುದಂ ಭುಜಂ ಸಾಮನ್ತಗೋವಿಂದನಂ**[42]

**ಚಂಗಾಳುವನೇಱಿಕಿದ ಮಾ**
**ತಂಗದ ಮೊಗದೊಡ್ಡಿನಲ್ಲಿ ಸಬಳದ ಮಸೆಗಳು**
**ಪಿಂಗದೆ ಪೋಲ್ತೆಸದಿರ್ದ್ದುವು**
**ಸಂಗತಗುಣ ಗೋವಿಯಿಱಿದ ಸಾಸನಲಿಪಿಯಂ**[43]

ಚೆಂಗಾಳ್ವ ದೊರೆಯನ್ನು ಸೋಲಿಸಿದುದು ಗೋವಿದೇವನ ಬಹುದೊಡ್ಡ ಸಾಧನೆ. ಈ ಶಾಸನೋಕ್ತ ಸಾಲಿನ ಅರ್ಥವೇನೆಂದರೆ, ಗೋವಿದೇವನು ಚೆಂಗಾಳ್ವ ಅರಸನೊಡನೆ ಯುದ್ಧ ಮಾಡುತ್ತಿದ್ದಾಗ, ಆ ಅರಸನು ಕುಳಿತಿದ್ದ ಆನೆಯ ಮುಖದ ಮೇಲೆ ಭರ್ಜಿಯಿಂದ ಇರಿದು ಮಾಡಿದ ಗಾಯಗಳು ಗೋವಿದೇವನ ಶೌರ್ಯವನ್ನು ವರ್ಣಿಸುವ ಶಾಸನದ ಅಕ್ಷರಗಳಂತಿದ್ದವು. ಈ ಶಾಸನದ ಕಾಲ ಕ್ರಿ.ಶ. 1169, ಈ ವೇಳೆಗೆ ಆಳುತ್ತಿದ್ದ ಚಂಗಾಳ್ವ ದೊರೆ ಮಹಾದೇವ, ಹೊಯ್ಸಳರಿಗೂ–ಚೆಂಗಾಳ್ವರಿಗೂ ನಡೆಯುತ್ತಿದ್ದ ಯುದ್ಧಗಳಲ್ಲಿ ಒಂದು ಉದಾಹರಣೆಯನ್ನು ಈ ಶಾಸನ ಯಥೋಚಿತವಾಗಿ ತಿಳಿಸಿದೆ.

**ಗೋವಿದೇವನ ಅಧೀನ ಅಧಿಕಾರಿಗಳು** :

ಬೇರೆಯ ಮಹಾಮಂಡಳೇಶ್ವರರಿಗಿಂತ ಗೋವಿದೇವನಿಗೆ ಇರುವ ವಿಶೇಷವೆಂದರೆ ಅವನ ಆಡಳಿತಾಧಿಕಾರಿಗಳ ಉಲ್ಲೇಖವು ಶಾಸನಗಳಲ್ಲಿ ಹೆಚ್ಚಿಗೆ ಕಂಡುಬರುತ್ತದೆ. ಅವರುಗಳಲ್ಲಿ ಪೆರ್ಗಡೆ ಕೇತಣ್ಣ, ದೊಡ್ಡಬಿದಿರೆಯ ಮಸಣಗೌಡ, ತಂಡಗದ ಮಾಚರಸ, ಮನ್ನೆಯ ಮನಹರಸ ಪ್ರಮುಖರು. ಗೋವಿಯ ಪ್ರಾದೇಶಿಕ ಆಡಳಿತದಲ್ಲಿ ಅವನ ಈ ಅಧೀನ ಅಧಿಕಾರಿಗಳು ವಿಶೇಷವಾಗಿ ನೆರವು ನೀಡುತ್ತಿದ್ದರು.

**ಸಾಮಂತ ಬಲ್ಲದೇವರಸ ಅಥವಾ ಬಲ್ಲಾಳ** : ಸಾಮಂತ ಗೋವಿದೇವ ಮತ್ತು ಶ್ರಿಯಾದೇವಿ ದಂಪತಿಗಳ ಪುತ್ರನೀತ. ತನ್ನ ತಂದೆ ಗೋವಿದೇವನ ತರುವಾಯ ಹುಳಿಯೆರನ್ನು ಆಳುತ್ತಿದ್ದನು. ಚಿಕ್ಕನಾಯಕನಹಳ್ಳಿಯ ನೇರ್ಲಕೆರೆ ಗ್ರಾಮದ ಕ್ರಿ.ಶ. 1172ರ ಶಾಸನದಲ್ಲಿ[44] ಬಲ್ಲಿದೇವರಸನ ಪ್ರಥಮ ಉಲ್ಲೇಖ ಕಂಡುಬರುತ್ತದೆ. ಬಲ್ಲಿದೇವರಸನು ತನ್ನ ಪೂರ್ವ ವಂಶೀಯರಂತೆ ಮಿಗಿಲಾದ ಶೌರ್ಯ ಹಲವು ಪರಾಕ್ರಮಗಳನ್ನು ಹೊಂದಿದ್ದನೆಂಬುದನ್ನು ಶಾಸನಗಳು [45]ಶಾಸನ ಪೃಥಕ್ಕರಿಸುತ್ತವೆ. ಬಹುಶಃ ಹೊಯ್ಸಳರು ನಡೆಸಿದ ಪ್ರಮುಖ ಯುದ್ಧಗಳಲ್ಲಿ ವೀರಾಗ್ರಣಿಯಾಗಿ ಹೋರಾಡಿದುದನ್ನು, ಅವನ ಕಲಿತನದ ಪೆರ್ಮ್ಮೆಯನ್ನು, ಶೌರ್ಯೋನ್ನತಿಯನ್ನು ಶಾಸನ ಪದ್ಯಗಳು ಸುವ್ಯಕ್ತಗೊಳಿಸುತ್ತವೆ. ಇಷ್ಟೆಲ್ಲ ಪರಾಕ್ರಮವನ್ನು ಪಡೆದಿದ್ದರಿಂದಲೇ ಕ್ರಿ.ಶ. 1188ರಲ್ಲಿ ಬಲ್ಲಿದೇವನು ಮಂಡಳಿಕ ಪದವಿಯ ಗ್ರಹಣ ಮಾಡುತ್ತಾನೆ.[46] ಇದು ಅವನ ಬಹುದೊಡ್ಡ ರಾಜಕೀಯ ಸಾಧನೆಯಾಗಿದೆ. ಇದುವರೆಗೂ ಸಾಮಂತ, ಮಹಾಸಾಮಂತ ಪದವಿಯನ್ನಲಂಕರಿಸಿದ್ದ ಬಲ್ಲನು ಮುಂದಿನ ಹಲವು ಶಾಸನಗಳಲ್ಲಿ 'ಬಲ್ಲಾಳ' ಮಾಂಡಳಿಕ ಎಂದು ಹೆಸರಾಂತನಾಗುತ್ತಾನೆ.

ಆಡಳಿತಾತ್ಮಕವಾಗಿ ಬಲ್ಲಿದೇವರಸನಿಗೆ ಸಹಾಯಕವಾಗಿ ಬೋಚಿಗೌಡ, ಮಾಚಿಗೌಡ, ಕೇತಗೌಡ, ನಾಗಗೌಡನ ಕುಟುಂಬ, ಚೂಚಿಗಲ್ಲಿನ ಜಕ್ಕಗೌಡನ ಕುಟುಂಬಗಳು ದುಡಿಯುತ್ತಿದ್ದವು. ಈ ಗೌಡಪ್ರಜೆಗಳ ವಿಸ್ತಾರವಾದ ವಂಶಾವಳಿಯನ್ನು ಸಹ ಶಾಸನಗಳಿಂದ ತಿಳಿಯಬಹುದಲ್ಲದೆ ಅವರುಗಳ ಮೂಲಕ ಸ್ಥಳೀಯವಾಗಿ ಬಲ್ಲಿದೇವರಸನು ಸಾಮಾಜಿಕ, ಧಾರ್ಮಿಕ, ಆರ್ಥಿಕ ಚಟುವಟಿಕೆಗಳಿಗೆ ಮುಕ್ತವಾದ ಪ್ರೋತ್ಸಾಹಕರ ವಾತಾವರಣವನ್ನು ಕಲ್ಪಿಸಿದ್ದನೆಂಬುದನ್ನು ಅರಿಯಬಹುದು.

ಬಲ್ಲಿದೇವರಸನಿಗೆ ಇಬ್ಬರು ಮಡದಿಯರು; ಸೋವಲದೇವಿ ಮತ್ತು ಮಾರಲದೇವಿ (=ಮಾದರದೇವಿ) ಈ ಇರ್ವರಲ್ಲಿ ಮಾರಲದೇವಿ ಹಿರಿಯರಸಿ.[47] ಈಕೆಗೆ ಚಿಕ್ಕಬಲ್ಲಯ್ಯನಾಯಕ ಮತ್ತು ನಾರಸಿಂಹ ಎಂಬ ಇಬ್ಬರು ಪುತ್ರರಿದ್ದರು. ಸೋವಲ ದೇವಿಯನ್ನು ಬೂದಿಹಾಳಿನ ಶಾಸನವು[48] ವರ್ಣಿಸಿದೆ. ಬಲ್ಲನ ಹಿರಿಯರಸಿ ಮತ್ತು ಅವಳ ಮಕ್ಕಳ ಬಗ್ಗೆ ಶಾಸನಗಳು ಮೌನತಾಳಿರುವುದರಿಂದ ಅವರ ಹೆಸರಿನ–ಸಂಬಂಧಗಳ ಆಂಶಿಕ ವಿಚಾರವನ್ನು ಹೊರುತುಪಡಿಸಿ ಉಳಿದ ಮಾಹಿತಿಗಳು ಸದ್ಯಕ್ಕೆ ಲಭ್ಯವಿಲ್ಲ.

**ಕಪ್ಪಯ್ಯನಾಯಕ** : ಕಪ್ಪಯ್ಯನಾಯಕನು 'ನಾಯಕಶಿಖಾಮಣಿ' ಎನಿಸಿದ್ದ ಚಿಕ್ಕಬಲ್ಲೆಯ ನಾಯಕನ ಸುಪುತ್ರ. ಇವನ ಕೌಟುಂಬಿಕ ವಿವರಗಳು ಸದ್ಯಕ್ಕೆ ಲಭ್ಯವಿಲ್ಲ. ಹೆಗ್ಗೆರೆಯ ಶಾಸನವೊಂದರಲ್ಲಿ[49] ಮಾತ್ರ ಇವನ ಉಲ್ಲೇಖ ಬಂದಿದೆ. 2ನೆಯ ನರಸಿಂಹನ ಆಳ್ವಿಕೆಯ ಅವಧಿಯ ಕ್ರಿ.ಶ. 22–11–1232ರ ಈ ಶಾಸನದನ್ವಯ, ಕಪ್ಪಯ್ಯನಾಯಕನು 'ಆಶ್ರಿತಜನಕಲ್ಪವೃಕ್ಷ', 'ಶರಣಾಗತವಜ್ರಪಂಜರ' ಎಂದು ಬಿರುದಾಂಕಿತನಾಗಿದ್ದು ಹುಳಿಯೆಱವನ್ನು ಆಳುತ್ತಿದ್ದನು..

**ಲಕುಮಯ್ಯನಾಯಕ** : ಈತ ಕಪ್ಪಯ್ಯನಾಯಕರ ತಮ್ಮ. "ಮಹಾಸಾಮಂತ ಕಪ್ಪಯ್ಯನಾಯಕರ ತಂಮ ಲಕುಮಯ್ಯನಾಯಕರು ಹುಳಿಯಱ ನೆಲೆವೀಡಿನಲ್ಲಿ ರಾಜ್ಯಗೆಯ್ಯುತ್ತಮಿರೆ" ಎಂಬ ಮಾತು ಕ್ರಿ.ಶ. 1235ರ ಮೊಚೀಹಳ್ಳಿಯ ಶಾಸನೋಕ್ತವಾಗಿದೆ.[50] ಕಪ್ಪಯ್ಯನ ತರುವಾಯ ಹುಳಿಯಱವು ಲಕುಮಯ್ಯನ ಸುಪರ್ದಿಗೆ ಬಂದಿತ್ತೆಂಬುದನ್ನು ತಿಳಿಸುತ್ತದೆ. ಮುದ್ದೇನಹಳ್ಳಿಯ ಮತ್ತೊಂದು ಶಾಸನವು[51] ಲಕುಮಯ್ಯ ನಾಯಕನ 'ಮಹಾಸಾಮಂತಾಧಿಪತಿ' 'ಸಿತಗರಗಂಡ' 'ಮಂಡಳಿಕರವಿರಾಹು' 'ಮರೆವೊಕ್ಕರ ಕಾವ' 'ಶರಣಾಗತವಜ್ರಪಂಜರ' 'ಏಕಾಂಗವೀರ' 'ಅಸಹಾಯಶೂರ' 'ಮನ್ನೆಯ ಬೇಂಟೆಕಾರ', 'ಅಣ್ಣನ ಗಂಧವಾರಣ', 'ಶ್ರೀವಾಸುದೇವರ ದಿವ್ಯಶ್ರೀಪಾದಾರಾಧಕ' 'ಪರಬಳಸಾಧಕ'–ಬಿರುದುಗಳನ್ನು ಹೇಳಿದೆ. ಈ ಬಿರುದುಗಳು ಅವನಿಗೆ ವಂಶಪಾರಂಪರ್ಯವಾಗಿ ಬಂದಿದೆ ಎನ್ನುವುದಕ್ಕಿಂತ ಅವನ ಪರಾಕ್ರಮದ ಅನನ್ಯತೆಯಿಂದ ಬಂದಿದೆ ಎನ್ನುವುದು ಉಚಿತ. ಏಕೆಂದರೆ ಈತನು ತನ್ನ ಪೂರ್ವಜರಂತೆ ಮಹಾಸಾಮಂತ ಪದವಿಯಲ್ಲಿದ್ದವನು.

**ಕೆಚ್ಚನ ಮಾಚೆಯನಾಯಕ** : ಕ್ರಿ.ಶ. 1095ರ ಕಣಿಕಟ್ಟೆಯ ಶಾಸನದಲ್ಲಿ[52] ಇವನ ಪ್ರಥಮ ಉಲ್ಲೇಖವಿದೆ. ಈತನು ಮಹಾಸಾಮಂತ ಪದವಿಯಿಂದ ಕಣಿಕಟ್ಟೆಯಿಂದ ಆಳುತ್ತಿದ್ದನು. ಕರಿಯಬೊಮ್ಮನಿಗೆ ಆಹವಮಲ್ಲ ಎಂಬ ಮಗನಿದ್ದುದು ಈಗಾಗಲೇ ಶಾಸನೋಕ್ತವಾದ ಸಂಗತಿ. ಆಹವಮಲ್ಲನನ್ನು ಶಾಸನಗಳು ಕರಿಯಬೊಮ್ಮನ 'ಅಗ್ರತನುಜ' ಎಂದು ಕರೆದಿರುವುದು ಸರಿಯಷ್ಟೇ. ಅಗ್ರತನುಜ ಎಂದು ಉಲ್ಲೇಖಗೊಂಡಿರುವ ವಿಚಾರವು ಸೂಕ್ಷ್ಮವಾಗಿ ಕರಿಯಬೊಮ್ಮನಿಗೆ ಇನ್ನೊಬ್ಬ ಮಗನಿರುವುದನ್ನು ಧ್ವನಿಸುತ್ತದೆಯಲ್ಲವೇ! ಕೆಚ್ಚನ ಮಾಚೆಯನಾಯಕನಿಗೆ ಕರಿಯಬೊಮ್ಮನ ವಂಶೀಯರಿಗಿರುವಂತೆಯೇ "ಸಿತಗರಗಂಡ" ಎಂಬ ಬಿರುದೂ ಕರಿಯಬೊಮ್ಮನ ವಿಶೇಷ ಬಿರುದಾದಂತಹ "ದೊಡ್ಡಂಕಬಡಿವ" ಎಂಬ ಹೆಸರು ಇರುವುದರಿಂದ ಈತನು ಕರಿಯಬೊಮ್ಮನ ದ್ವಿತೀಯ ಪುತ್ರ ಎಂದು ನಿರ್ಧರಿಸಬಯಸುತ್ತೇನೆ.

ಇದೇ ವಂಶದಲ್ಲಿ ಬರುವ ಸಾಮಂತ ಭೀಮ ಮತ್ತು ಚೆಟ್ಟಿಯಕ್ಕ ದಂಪತಿಗಳ ನಾಲ್ವರು ಪುತ್ರರಲ್ಲಿ 'ಮಾಚ' ಎಂಬ ಮಗನಿರುವುನಾದರೂ ಈತ ಕೆಚ್ಚನ ಮಾಚೆಯನಾಯಕನಿಗಿಂತ ಭಿನ್ನನಾಗಿದ್ದಾನೆ. ಹೇಗೆಂದರೆ ಭೀಮನ ಮಗ ಮಾಚನ ಉಲ್ಲೇಖವಿರುವ ಶಾಸನಗಳು ಹುಳಿಯಾರು ಮತ್ತು ಅದರ ಸುತ್ತಮುತ್ತಲಿನಲ್ಲಿಯೇ ಅಂದರೆ ಚಿಕ್ಕನಾಯಕನಹಳ್ಳಿಯಲ್ಲಿ ಮಾತ್ರ ಕಂಡುಬರುತ್ತವೆ. ಜೊತೆಗೆ ಇವನ ಶಾಸನಗಳ ಕಾಲ ಕ್ರಿ.ಶ. 1170ರ ನಂತರದವು. ಅಲ್ಲದೆ ಈ ಮಾಚನಿಗಿರುವ ಬಿರುದುಗಳು ಕೆಚ್ಚನ ಮಾಚಯನಾಯಕನ ಬಿರುದುಗಳಿಗಿಂತ ಸಂಪೂರ್ಣ ಭಿನ್ನವಾಗಿದೆ. ಹೀಗಾಗಿ ಕಾಲ, ಪ್ರದೇಶ, ಬಿರುದುಗಳ ದೃಷ್ಟಿಯಿಂದ ಇವರೀರ್ವರೂ ಭಿನ್ನರು; ಆದರೆ ಸಂಬಂಧಿಕರು. ಕೆಚ್ಚನ ಮಾಚಯನಾಯಕನು "ಹಗೆಯ ಬೆಸಕೊಳ್ವಂ", "ವಂದಿಜನ ಕಲ್ಪವೃಕ್ಷಂ", 'ರೂಪಕಂದರ್ಪ', 'ಸಾಹಿತ್ಯ ನಿಳಯ' ಎಂಬ ಬಿರುದುಗಳಿಂದ ಅಲಂಕೃತನಾಗಿದ್ದನು. ಕಣಿಕಟ್ಟೆಯಲ್ಲಿ ಚಟ್ಟಬೋವನನ್ನು ಅರವತ್ತು ಮಾನಸ ಎಕ್ಕಟಿಗರ ನಾಯಕನೆಂದು ಕರೆಯಲ್ಪಡುತ್ತಿದ್ದುದನ್ನು ಗಮನಿಸಿದರೆ ಈ ಪಡೆಯು ಕೆಚ್ಚನ ಮಾಚೆಯ ನಾಯಕನ ಸುಪರ್ದಿಯಲ್ಲಿದ್ದಿರಬಹುದು.

**ಸಾಮಂತ ಮಾಚ :** ಸಾಮಂತ ಮಾಚನು ಸಾಮಂತ ಭೀಮ ಮತ್ತು ಚಟ್ಟಿಯಕ್ಕ ದಂಪತಿಗಳ ಹಿರಿಯಪುತ್ರ. (ಕ್ರಿ.ಶ. 1170ರ ಮರುವಂಜಿಯ ಶಾಸನವು[53] ಮಾಚನನ್ನು ಹೀಗೆ ವರ್ಣಿಸಿದೆ.

**ಅತಿಬಳವೀರಮಂಡಳಿಕ ವಿಷ್ಣುನಿಲಪಾಳನೀ ಬೀಡನೋಳೀಕರಂ**
**ಸಿತಗರಗಂಡನೆಂಬ ಬಿರುದುನ್ನತಿಯಂ ಸಲೆ ತಾಳ್ದಿದಾತನಂ**
**ಕ್ಷಿತಿತಳ ಮೆಚ್ಚಿಕೊಂಡು ಬಿರುದಂ ಪಡೆದಾಹವರಂಗ ಮಾಚನಂ**
**ತತಿಸಯವಿಕ್ರಮಕ್ರಮಮನೇವೊಗೆಳ್ವೆಂ ಕಲಿಕಾಲಕರ್ಣನಂ**

ಮಾಚನು ಒಬ್ಬ ಶೂರ, ಪರಾಕ್ರಮಿಯಾಗಿದ್ದುದರ ಜೊತೆಗೆ ಕಲಿಯುಗದ ಕರ್ಣನೆಂಬ ಅಭಿದಾನಕ್ಕೂ ಪಾತ್ರನಾಗಿದ್ದನು. ಆಹವರಂಗ ಮಾಚ ಎಂಬ ಮಾತು ಬಹುಶಃ ತನ್ನ ಆಳರಸರು ನಡೆಸುತ್ತಿದ್ದ ಯುದ್ಧಗಳಲ್ಲಿ ಈತ ವೀರಾವೇಶದಿಂದ ಹೋರಾಡಿ ಶತ್ರುಗಳನ್ನು ಮಣಿಸಿ ವಿಜಯಕ್ಕೆ ಕಾರಣನಾಗಿದ್ದುದನ್ನು ಸೂಕ್ಷ್ಮವಾಗಿ ಧ್ವನಿಸುತ್ತದೆ. ಈ ಶಾಸನದಲ್ಲಿ ಮಾಚನಿಗೆ ಮಾಳವ್ವೆ ಎಂಬ ಪತ್ನಿಯೂ, ಮಲ್ಲನೆಂಬ ಮಗನೂ ಇದ್ದುದು ಉಕ್ತವಾಗಿದೆ.

**ಮಹಾಸಾಮಂತ ಚಟ್ಟಯ್ಯ:** ಹೊಯ್ಸಳ ಅರಸರಾದ ವಿನಯಾದಿತ್ಯ (ಕ್ರಿ.ಶ. 1047–1097), ಎರೆಯಂಗ (ಕ್ರಿ.ಶ.1098–1102), ಒಂದನೆಯ ಬಲ್ಲಾಳ (ಕ್ರಿ.ಶ 1102–1108), ವಿಷ್ಣುವರ್ಧನ (ಕ್ರಿ. ಶ 1108–1142) ಈ ನಾಲ್ವರ ಆಳ್ವಿಕೆಯಾವಧಿಯಲ್ಲಿ ಚಿಕ್ಕನಾಯಕನಹಳ್ಳಿಯ ಹುಳಿಯೇರು ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳನ್ನು ಹಾಗೂ ಕಡೂರಿನ ನೀರ್ಗುಂದ ಮತ್ತು ಅದರ ನೆರೆಯ ಪ್ರದೇಶಗಳನ್ನು ಮಹಾಸಾಮಂತ ಪದವಿಯಿಂದ ಚಟ್ಟಯ್ಯನು ಆಳಿದ್ದಾನೆ. ಅನೇಕ ಶಾಸನೋಕ್ತ ಪಂಕ್ತಿಗಳು ಇವನನ್ನು 'ಹುಳಿಯೇರುಚಟ್ಟ', 'ನೀರ್ಗುಂದದ ಚಟ್ಟ' ಎಂದು ಉಲ್ಲೇಖಿಸಿವೆ. ಈ ಎರಡು ಪ್ರದೇಶಗಳಿಗೆ ಹೊಯ್ಸಳ

ಸಾಮ್ರಾಜ್ಯದಲ್ಲಿ ವಿಶೇಷ ಸ್ಥಾನ–ಮಾನಗಳು ದೊರಕುವಲ್ಲಿ ಅದರಲ್ಲಿಯೂ ಮುಖ್ಯವಾಗಿ ಹುಳಿಯೇರಿಗೆ ಗಣನೀಯ ಅಸ್ಮಿತೆಯನ್ನು ಕಲ್ಪಿಸಿ ಸ್ಥಳೀಯ ಸಾಂಸ್ಕೃತಿಕ ಚರಿತ್ರೆಗೆ ಮಿಗಿಲಾದ ಕೊಡುಗೆಯನ್ನು ಕೊಟ್ಟಿರುವನು.

ಮಹಾಸಾಮಂತ ಚಟ್ಟಯ್ಯನು ಹೊಯ್ಸಳ ಅರಸರಲ್ಲಿ ಈ ಮುಂಚಿನಿಂದಲೂ ಸಾಮಂತರಾಗಿದ್ದ ಕರಿಯಬೊಮ್ಮನ ವಂಶಕ್ಕೆ ಸೇರಿದವನು. ಈ ವಂಶದ ಮೂರನೆ, ತಲೆಯಾದ ಸಾಮಂತಭೀಮ ಮತ್ತು ಚಟ್ಟಿಯಕ್ಕ ದಂಪತಿಗಳ ದ್ವಿತೀಯ ಪುತ್ರನೆ ಚಟ್ಟಯ್ಯ. ಸಾಮಂತ ಮಾಚನು ಇವನ ಅಣ್ಣ; ಸಾಮಂತ ಮಲ್ಲ ಮತ್ತು ಸಾಮಂತ ಗೋವಿದೇವ ಇವನ ಅನುಜರು. ಚಟ್ಟಯ್ಯನ ಮಡದಿ ಚಂದವ್ವೆ ನಾಯಿಕಿತಿ; ಈ ದಂಪತಿಗಳಿಗೆ ಅನುಕ್ರಮವಾಗಿ ಹಂದರ, ಹೇಮಲೆ, ಕಾಚವ್ವೆ ಎಂಬ ಮಕ್ಕಳಿದ್ದರು. ಚಟ್ಟಯ್ಯನಿಗೆ ಇನ್ನೊರ್ವ ಮಡದಿಯೂ ಇದ್ದು, ಅವಳನ್ನು ಶಾಸನಗಳು ಶಾಂತಲೆ ಅಥವಾ ಸಾತವ್ವೆ ಎಂದು ಕರೆದಿದೆ. ಈ ಶಾಂತಲೆಯ ಮಗ ವಿಷ್ಣು ಅಥವಾ ಬಿಟ್ಟಿದೇವ.

ಕ್ರಿ.ಶ. 1087ರ ಚಿಕ್ಕನಾಯಕನಹಳ್ಳಿಯ ನಾಯಿಗೆರೆ ಗ್ರಾಮದಲ್ಲಿನ ಶಾಸನವು[54] ಮಹಾಸಾಮಂತ ಚಟ್ಟಯ್ಯನ ಪ್ರಥಮ ಉಲ್ಲೇಖನ್ನೊಳಗೊಂಡಿದೆ. ಈ ತ್ರುಟಿತ ಶಾಸನದನ್ವಯ, "ಸಾಮಂತ ಘಸಣಿ ಹಟ್ಟಯ್ಯಗಳು ಹುಳಿಯಜ ವೃತ್ತಿಯನ್ನು ರಾಜ್ಯಗೆಯ್ಯುತ್ತಿರಲು" ಮಾಯಣ ಮತ್ತು ಕೇತಣ್ಣರಿಬ್ಬರು ಹಂದರಕೆರೆಯ ಮಲ್ಲಿಕಾರ್ಜುನದೇವರಿಗೆ ಭೂದಾನಗಳನ್ನು ನೀಡಿದರು. ಚಟ್ಟಯ್ಯನ ಶಾಸನಗಳು ಅವನ ರಾಜಕೀಯ ಸಾಧನೆಗಳನ್ನು ಎಳೆಎಳೆಯಾಗಿ ಬಿಡಿಸಿ ಹೇಳುತ್ತವೆ.

ಸುಮ್ಮನಿರದೆ ಎದುರಾಳಿಗಳಾಗಿ ಬಂದ ವೈರಿಪಡೆಯನ್ನು ಕಂಡ ಯುದ್ಧಲಾಲಸಿಯಾದ ಚಟ್ಟನು ಮಹಾಕೋಪದಿಂದ ತನ್ನ ಭಯಂಕರ ಖಡ್ಗವನ್ನು ಒರೆಯಿಂದ ತೆಗೆದಕೂಡಲೇ ಅದನ್ನು ಕಂಡು ಶತ್ರುಪಕ್ಷವು ಕನಲಿಹೋಯಿತು. ಇನ್ನು ತನ್ನ ಸೈನ್ಯದೆಡೆಗೆ ಮುತ್ತಿಗೆಹಾಕಲು ಕೈಬೀಸಿದಾಗ ಚಟ್ಟನ ಕೋಪವೆಂಬ ಅಗ್ನಿಯನ್ನು ನೋಡಿ ಬೆದರಿದ ವಿರೋಧಿಬಣವು ಕಾಪಾಡಲು ಅಂಗಲಾಚಿತು. ಇಂತಹ ಅಸಾಮಾನ್ಯ ಶೌರ್ಯಾತಿಶಯ ಚಟ್ಟನದಾಗಿತ್ತು ಎಂದು ಶಾಸನ ಪದ್ಯಗಳು ಹೊಗಳುತ್ತವೆ.

ಕದಂಬ ಮಂಡಳಿಕ ತೈಲನ ಗರುಡನಾದ ಮಸಣುಗನು ಬಳೆಮೆರೆಯೆಂಬಲ್ಲಿ ಬೀಡುಬಿಟ್ಟಿದ್ದಾಗ ಅವನನ್ನು ಎದುರಿಸಿ, ಸೋಲಿಸಿ ಅವನ ಅಶ್ವಗಳನ್ನು ವಿಷ್ಣುವರ್ಧನನಿಗೆ ಒಪ್ಪಿಸಿದ ಚಟ್ಟನ ಪರಾಕ್ರಮ ಅತಿಶಯವಾದುದು. ತನ್ನ ಸಾಧನೆಗಳಿಂದ ಚಟ್ಟಯ್ಯನು ಮಸಿವಸಾಮಂತಕಂಜಕುಂಜರಂ, ಶರಣಾಗತವಜ್ರ ಪಂಜರಂ, ಗಂಡಪ್ರಚಂಡಂ, ಮಲೆಪರೊಳ್ಗಂಡಂ, ಅಯ್ನೂರ್ವರ ಕೋಟೆ, ಸಿತಗರಗಂಡಂ, ಕೂಡಿಕೂಟಕೆತಪ್ಪುವ ಸಾಮಂತರ ಗಂಡಂ ಎಂಬ ಬಿರುದುಗಳಿಂದ ಗೌರವಿಸಲ್ಪಟ್ಟಿದ್ದನು. ಜೊತೆಗೆ ಸಮಧಿಗತ ಪಂಚಮಹಾಶಬ್ದ, ಸಕಲಲಕ್ಷ್ಮೀಕಾಂತ ಎಂಬಿತ್ಯಾದಿ ವಿಶೇಷ ಆದರಣೆಗಳಿಗೂ ಪಾತ್ರನಾಗಿದ್ದನು.

ಚಟ್ಟಯ್ಯನಿಗೆ ಆಡಳಿತದಲ್ಲಿ ನೆರವಾದ ಅಧೀನ ಅಧಿಕಾರವರ್ಗವೆಂದರೆ ಜಕ್ಕಗೌಡ, ಸಂಕಗೌಡ, ಮಲ್ಲಗೌಡ, ಮಾದಿಗೌಡ, ಬೊಪ್ಪಗೌಡ, ಅಜಗೌಡ, ಚಟ್ಟಗೌಡ, ಮಾಕಗೌಡರು ಕಡವೂರಿನ ಬಸವಗೌಡನ

ಮಗ ಚೆಂದಗೌಡ ಮೊದಲಾದವರು. ಇದೆಲ್ಲದಕ್ಕೂ ಮಿಗಿಲಾಗಿ ಸಾಮಂತ ಚಟ್ಟಯ್ಯನು ಆದರ್ಶ ಚಾರಿತ್ರ್ಯ ವ್ಯಕ್ತಿತ್ವದ ಘನತೆಗಳನ್ನು ಹೊಂದಿದ್ದನು. ಇದಕ್ಕೆ ಅವನಿಗಿದ್ದ 'ಪರನಾರಿಪುತ್ರಂ', 'ನುಡಿದಂತೆ ನಡೆವಗಂಡಂ', 'ಸಮಸ್ತಗುಣಸಂಪನ್ನಂ', 'ಸ್ವಾಮಿಸಂತೋಷಂ', 'ಪಿರಿದಿತ್ತು ಮೆರೆವಂ', 'ಶಿವಪಾದಶೇಖರಂ', 'ಭಕ್ತಚಿಂತಾಮಣಿ', 'ಮಹಾಮಹೇಶ್ವರ ಗಣಾವತರಂ', 'ನುಡಿಯಂ ಮತ್ತೆನ್ನಂ', 'ತ್ರಿಪುರಹರಲಬ್ಧವರಪ್ರಸಾದಂ' – ಈ ಬಿರುದುಗಳು ಸಾಕ್ಷಿಯಾಗಿವೆ. ಇವು ಅವನ ಸಾಮಾಜಿಕ ಮತ್ತು ಧಾರ್ಮಿಕ ಜೀವನದ ಶುದ್ಧ ಒಲವುಗಳನ್ನು ನಮಗೆ ಅರಹುತ್ತವೆ.

ಚಟ್ಟಯ್ಯನ ಪ್ರಿಯ ಮಡದಿ ಚಂದವ್ವೆ. ಈ ದಂಪತಿಗಳ ಸುಪುತ್ರ ಹರಿಹರ. ಹರಿಹರನ ಹೆಸರಿನಲ್ಲಿ ಮಾತ್ರ ಸಿಂಹವಿಲ್ಲ; ಬದಲಿಗೆ ಅವನ ಭುಜಬಲದಲ್ಲಿಯೂ ಸಿಂಹಪರಾಕ್ರಮವಿದ್ದು, ಆತ ಅದ್ವಿತೀಯ ವೀರಾಗ್ರಣಿಯಾಗಿದ್ದನು. ಚಟ್ಟ ಮತ್ತು ಚಂದವ್ವೆ ದಂಪತಿಗಳ ಈರ್ವರು ಕುವರಿಯರಲ್ಲಿ ಮೊದಲನೆಯಾಕೆ ದೇಮಲೆ; ಎರಡನೆಯವಳು ಕಾಚವ್ವೆ.

**ಚಟ್ಟಯ್ಯನ ಮರಣ** : ತುಂಬು ಬಾಳನ್ನು ಬಾಳಿದ ಚಟ್ಟಯ್ಯನ ಮರಣದ ವಿಚಾರವು ಶಾಸನಗಳಿಂದ ತಿಳಿದುಬರುತ್ತದೆ. ವಕ್ಕಲಗೆರೆಯ ಶಾಸನವು[55] ಇದಕ್ಕೆ ಸಾಕ್ಷಿಯಾಗಿದೆ. ಚಂದವ್ವೆಯು ತನ್ನಳಿಯ ಮಲ್ಲಯ್ಯನಾಯಕ, ತಮ್ಮ ಮಗಳು ಕಾಚವ್ವೆನಾಯಿಕಿತಿಯರನ್ನು ಮುಂದಿಟ್ಟು ಕೊಂಡು ತಮ್ಮ ಜಾತಿ–ವ್ರಿತಿಯನ್ನು ನಡೆಸುತ್ತಿದ್ದಳು. ತನ್ನ ಗಂಡ ಚಟ್ಟಯ್ಯನಾಯಕರಿಗೆ ಪರೋಕ್ಷವಿನಯವಾಗಿ ಮತ್ತು ತನ್ನಳಿಯ ಮಗಳ ಅಭ್ಯುದಯ ನಿಮಿತ್ತವಾಗಿ ತಮ್ಮ ಊರಾದ ವಕ್ಕಲಗೆರೆಯಲ್ಲಿ ಶಿವಾಲಯವನ್ನು ರಚಿಸಿ, ಅದಕ್ಕೆ ಕೆಲವು ಭೂದಾನಗಳನ್ನು ನೀಡಿದ್ದಳು. ಇದೇ ವಕ್ಕಲಗೆರೆಯ ಮತ್ತೊಂದು ಶಾಸನವು,[56] ಚಟ್ಟಯ್ಯನ ಅಧೀನ ಅಧಿಕಾರಿ ಹೆಗ್ಗಡೆ ದೇವಣ್ಣ ಮತ್ತು ಕೆರೆಯಣ್ಣರು ವಕ್ಕಲಗೆರೆಯಲ್ಲಿ ಚಟ್ಟೇಶ್ವರ ದೇಗುಲವನ್ನು ನಿರ್ಮಿಸಿ ವೀರಚಟ್ಟೇಶ್ವರ ಎಂಬ ಲಿಂಗವನ್ನು ಪ್ರತಿಷ್ಠೆ ಮಾಡಿದರು. ಇವರು ಚಟ್ಟಯ್ಯನಾಯಕರಿಗೆ ಪರೋಕ್ಷವಿನಯವಾಗಿ ನಿರ್ಮಿಸಿದ ಆಲಯಕ್ಕೆ ಗಾಣದೆರೆ, ಮನೆದೆರೆಗಳನ್ನು, ಕೆಲವು ಭೂದಾನಗಳನ್ನು ದಾನನೀಡಿದರೆಂದು ತಿಳಿಸುತ್ತದೆ. ಈ ಶಾಸನದಲ್ಲಿ ಕೆರೆಯಣ್ಣನನ್ನು 'ಚಟ್ಟನಗಂಧವಾರಣ' ಎಂದು ಹೊಗಳಲಾಗಿದೆ. ಈ ದಾನದ ಮತ್ತು ಲಿಂಗಪ್ರತಿಷ್ಠೆಯ ಸಂದರ್ಭದಲ್ಲಿ ಚಂದವ್ವೆಯು ಉಪಸ್ಥಿತಳಿದ್ದಳು. ಈಗಾಗಲೇ ಚಟ್ಟನ ಹೆಸರಿನಲ್ಲಿ ಚಟ್ಟಸಮುದ್ರ ಎಂಬ ಕೆರೆಯಿದ್ದುದು ಈ ಶಾಸನದಿಂದ ತಿಳಿಯುತ್ತದೆ.

ಚಟ್ಟಯ್ಯನಾಯಕರಿಗೆ ಪರೋಕ್ಷವಿನಯವಾಗಿ ಚಟ್ಟೇಶ್ವರದೇವರಿಗೆ ವಕ್ಕಲಗೆರೆಯ ಆದೆಯನಾಯಕ, ಬೀರಗೌಡ, ಶಾಂತಗೌಡರು ಹುಲ್ಲೆಯಕೆರೆಯಲ್ಲಿ 10 ಕೊಳಗ ಗದ್ದೆ, 500 ಕಂಬ ಹೊಲಗಳನ್ನು ದತ್ತಿಯಾಗಿ ಸಮರ್ಪಿಸಿದರು. [57] ಮರುವಂಜಿಯ ಮಲ್ಲೆಗೌಡನು[58] ಚಟ್ಟೆಯನಾಯಕರಿಗೆ ಪರೋಕ್ಷ ವಿನಯವಾಗಿ, ಚಟ್ಟೇಶ್ವರದೇವರಿಗೆ 500 ಕಂಬ ಹೊಲವನ್ನು, ಅಣುವಗೆರೆಯ ಮುಂದಗೌಡನು 500 ಕಂಬ ಹೊಲ, ಹೊನ್ನಯ್ಯ ಮತ್ತು ಹಸದಮಲ್ಲಯ್ಯ, ಕೇತೆಯನಾಯಕರು ಸಹ ತಲಾ 500 ಕಂಬ ಹೊಲಗಳನ್ನು ದತ್ತಿಯಾಗಿ ನೀಡಿದರು. ಇದೇ ಸಂದರ್ಭದಲ್ಲಿ ಹರಿಹರ ಮತ್ತು ಚಂದವ್ವೆ, ಕೆರೆಯಣ್ಣ ಮೊದಲಾದ ಸಮಸ್ತ

ಪ್ರಜೆಗಳು ದುಡುಗೇತನಕೆರೆಯನ್ನು ಹರಿಹರದೇವರಿಗೆ ಅರ್ಪಿಸಿದರು. ಚಟ್ಟಯ್ಯನು ಮರಣಹೊಂದಿದಾಗ, ಪರೋಕ್ಷ ವಿನಯವಾಗಿ ನೀಡಿದ ದಾನ–ದತ್ತಿಗಳನ್ನು ತಿಳಿಸುವ ಮೇಲಿನ ಶಾಸನಗಳಲ್ಲಿ ವಕ್ಕಲಗೆರೆಯ 2 ಶಾಸನಗಳನ್ನು ಹೊರತು ಪಡಿಸಿದರೆ (ಕ್ರಿ.ಶ. 1188, ಕ್ರಿ.ಶ. 1191) ಉಳಿದವುಗಳಲ್ಲಿ ಕಾಲದ ಉಲ್ಲೇಖವಿಲ್ಲ. ಆದರೂ ಚಟ್ಟಯ್ಯನು ಕ್ರಿ.ಶ. 1188ಕ್ಕೂ ಮುಂಚೆಯೇ ಮರಣಹೊಂದಿದ್ದನೆಂದು ಊಹೆ ಮಾಡಬಹುದು. ಈ ಚಟ್ಟಯ್ಯನಾಯಕನು ಶಿವಮೊಗ್ಗ, ಸೊರಬ, ಚನ್ನರಾಯಪಟ್ಟಣ, ಬೇಲೂರು, ಹೊಳಲಕೆರೆ, ದಾವಣಗೆರೆ, ತಿಪಟೂರು, ಹಾಸನದ ಕೆಲವು ಶಾಸನೋಕ್ತ ಚಟ್ಟರಿಗಿಂತ ಭಿನ್ನನಾಗಿದ್ದಾನೆ.

**ಶಾಂತಲೆ ಅಥವಾ ಸಾತವ್ವೆ** : ಮಹಾಸಾಮಂತ ಚಟ್ಟಯ್ಯನಿಗೆ ಚಂದವ್ವೆ ಅಥವಾ ಚಂದವ್ವೆನಾಯಿಕಿತಿ ಎಂಬ ಹೆಂಡತಿ ಇದ್ದಳಾದರೂ ಈ ಶಾಂತಲೆ ಅಥವಾ ಸಾತವ್ವೆಯು ಈತನ ಇನ್ನೊರ್ವ ಮಡದಿಯೆಂಬುದು ಶಾಸನಗಳಿಂದ ವೇದ್ಯವಾಗುತ್ತದೆ. ಆದರೆ ಕಿರಿಯರಸಿ ಯಾರು? ಪಿರಿಯರಸಿ ಯಾರು? ಎಂಬುದು ಸ್ಪಷ್ಟವಾಗಿಲ್ಲ. ಆದರೂ ಶಾಂತಲೆಯು ಚಿಕ್ಕನಾಯಕನ ಹಳ್ಳಿ ಪರಿಸರದ ಶಾಸನಗಳಲ್ಲಿ ಮಾತ್ರ ಉಲ್ಲೇಖಗೊಂಡಿದ್ದರೆ, ಚಂದವ್ವೆಯು ಕಡೂರು ಪರಿಸರದ ಶಾಸನಗಳಲ್ಲಿ ಮಾತ್ರ ಉಲ್ಲೇಖಗೊಂಡಿದ್ದಾಳೆ. ಚಟ್ಟನ ಮೊದಮೊದಲಿನ ಶಾಸನಗಳು ಚಿಕ್ಕನಾಯಕನ ಹಳ್ಳಿಯಲ್ಲೂ ಆನಂತರದ ಶಾಸನಗಳು ಕಡೂರಿನಲ್ಲಿ ದೊರೆತಿರುವುದರಿಂದ ಬಹುಶಃ ಶಾಂತಲೆಯೇ ಚಟ್ಟನ ಮೊದಲಮಡದಿ ಇರಬಹುದು; ಶಾಂತಲೆಯ ಮಗ ಬಿಟ್ಟಿದೇವ ಅಥವಾ ವಿಷ್ಣುದೇವನು ಚಟ್ಟನ ನಂತರ ಹುಳಿಯೇರು ಪುರವರಾಧೀಶ್ವರ ಎಂದು ಕರೆಯಲ್ಪಡುವುದರಿಂದ ಈ ಬಿಟ್ಟದೇವನೇ ಚಟ್ಟನ ಹಿರಿಯ ಮಗ ಎಂದೆನಿಸುತ್ತದೆ.

**ಬಿಟ್ಟಿದೇವ ಅಥವಾ ವಿಷ್ಣುದೇವ** : ಮಹಾಸಾಮಂತ ಚಟ್ಟಯ್ಯನಾಯಕ ಮತ್ತು ಶಾಂತಲೆ ದಂಪತಿಗಳ ಪುತ್ರನೀತ. ಶಾಸನಗಳಲ್ಲಿ ಇವನನ್ನು ಬಿಟ್ಟಿದೇವ, ಬಿಟ್ಟಿಗ, ವಿಷ್ಣು, ವಿಷ್ಣುದೇವ ಎಂದೂ ಕರೆಯಲಾಗಿದೆ. ಇವನು ಹೊಯ್ಸಳ ಅರಸರಾದ 1ನೆಯ ನರಸಿಂಹ ಮತ್ತು ಇಮ್ಮಡಿ ಬಲ್ಲಾಳರ ಆಳ್ವಿಕೆಯಾವಧಿಯಲ್ಲಿ ಮಹಾಸಾಮಂತ ಪದವಿಯಿಂದ ಹುಳಿಯೇರನ್ನು ಆಳುತ್ತಿದ್ದನು. ಚಟ್ಟಯ್ಯನ ತರುವಾಯ ಬಿಟ್ಟಿದೇವನೇ **'ಹುಳಿಯೆಱಪುರವರಾಧೀಶ್ವರ'** ಎಂದು ಕರೆಯಲ್ಪಟ್ಟಿರುವುದನ್ನು ಗಮನಿಸಿದರೆ, ಹುಳಿಯೇರು ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳ ರಾಜ್ಯಭಾರವನ್ನು ಚಟ್ಟಯ್ಯನು ತನ್ನ ಹಿರಿಯ ಮಗ ಬಿಟ್ಟಿದೇವನಿಗೆ ವಹಿಸಿ, ಆನಂತರ ನೀರ್ಗುಂದದ ಕಡೆಗೆ ಹೊರಟಂತೆ ತೋರುತ್ತದೆ. ಕ್ರಿ.ಶ. 1161ರ ಚಿಕ್ಕನಾಯಕನಹಳ್ಳಿ ಬಳಿಯ ಹೆಗ್ಗೆರೆಯ ಶಾಸನದಲ್ಲಿ[59] ಬಿಟ್ಟಿದೇವನ ಪ್ರಥಮ ಉಲ್ಲೇಖ ಕಂಡುಬರುತ್ತದೆ. ಯುದ್ಧ ತರಬೇತಿಯ ತುಕಡಿಯೊಂದು ಈ ಪ್ರದೇಶದಲ್ಲಿದ್ದು ಅದರ ಪ್ರಮುಖ ಜವಾಬ್ದಾರಿ ಬಿಟ್ಟಿದೇವನ ಹೆಗಲ ಮೇಲಿತ್ತು ಎನ್ನಬಹುದು. ಬಿಟ್ಟಿದೇವನ ವ್ಯಕ್ತಿತ್ವವನ್ನು ಮತ್ತು ಅವನ ಪರಾಕ್ರಮಗಳನ್ನು ಶಾಸನಗಳು ಮನದುಂಬಿ ಹಾಡಿಹೊಗಳಿವೆ[60]

ಶಕ್ತಿಸಾಮರ್ಥ್ಯಗಳಲ್ಲಿ ಬಲರಾಮನಂತೆ, ಔದಾರ್ಯದಲ್ಲಿ ಕರ್ಣನಂತೆ, ವಾಗ್ವೈಕರಿಯಲ್ಲಿ ಬ್ರಹ್ಮನಂತೆ, ಶ್ರೇಷ್ಠಳಾದ ಲಕ್ಷ್ಮಿಯಂತಹ ವಧುವನ್ನು ಪಡೆದಿರುವಲ್ಲಿ ವಿಷ್ಣುವಂತೆ ಹೆಸರಾಂತನಾಗಿದ್ದನು ಈ ಸಾಮಂತ

ಬಿಟ್ಟಿದೇವನು. "ನುಡಿವಹಿತರ ನಿಟ್ಟೆಲುವ ಮುರಿದು ತೇಯುವ" ಬಿಟ್ಟಿಗನ ಶೌರ್ಯವನ್ನು ಮತ್ತೊಂದು ಶಾಸನ ಹೀಗೆ ತಿಳಿಸುತ್ತದೆ.

ರಣರಂಗದಲ್ಲಿ ಬಿಟ್ಟಿದೇವನು ತನ್ನೊರೆಯಿಂದ ಭಯಂಕರ ಖಡ್ಗವನ್ನು ತೆಗೆದು ಸಿದ್ಧನಾಗಿ ವಜ್ರದಂತಹ ಕಠಿಣ ಹೊಡೆತವನ್ನು ವೈರಿಗಳೆಂಬ ಮದಗಜಗಳಿಗೆ ಹೊಡೆಯಲು ಆ ಗಜಗಳ ನೆತ್ತಿಯಿಂದ ರಕ್ತವಾಹಿನಿಯು ಧುಮ್ಮಿಕ್ಕುವುದನ್ನು ಕಂಡು ಅಲ್ಲಿದ್ದ ಭೂತಗಳ ಸಮೂಹವು ವೇಗವಾಗಿ ಧಾವಿಸಿ ಬಂದು ಬಾಣಗಳಿಂದ, ಖಡ್ಗದಿಂದ ಇರಿಯಲ್ಪಟ್ಟ ವೈರಿಪಡೆಯ ಶಿರಗಳಲ್ಲಿ ಕೂತು ರಕ್ತಹೀರುತ್ತಿದ್ದುದು ಭೀಕರವಾಗಿದ್ದಿತು. ತನ್ನ ಅಪ್ರತಿಮ ಪ್ರತಾಪಪದಿಂದಲೇ ಏನೋ ಈತನಿಗೆ 'ಸಾಮಂತಘಸಣಿ', 'ದೊಡ್ಡಂಕಬಡಿವ', 'ಜಗವನಣಲಿವ ಸಿತಗರಗಣ್ಡ' ಎಂಬಂತಹ ಬಿರುದುಗಳು ಯಥೋಚಿತವಾಗಿಯೆ ಸಂದಿವೆ.

ಇಲ್ಲಿ ಇನ್ನೊಂದು ಆಯಾಮವನ್ನು ಗಮನಿಸಬೇಕು. ಬಿಟ್ಟಿದೇವನು ಹುಳಿಯೇರಿನಲ್ಲಿದ್ದಾಗ ಚಟ್ಟಯ್ಯನ ಅನುಜ ಗೋವಿದೇವ ಕಣಿಕಟೆಯಲ್ಲಿರುತ್ತಾನೆ. ಬಿಟ್ಟಿದೇವನ ನಿರ್ಗಮನದ ನಂತರ ಅಲ್ಲಿಂದ ಆತ ಹುಳಿಯೇರಿಗೆ ನಿಯುಕ್ತನಾಗುತ್ತಾನೆ. ಒಟ್ಟಿನಲ್ಲಿ ಆಡಳಿತ್ಮಾಕವಾಗಿ ಪ್ರಮುಖ ಕೇಂದ್ರಗಳಾದ ಹುಳಿಯೆರು, ನೀರ್ಗುಂದ, ಕಣಿಕಟ್ಟೆ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಈ ಹುಳಿಯೆರು ಸಾಮಂತರೇ ಒಬ್ಬರ ನಂತರ ಮತ್ತೊಬ್ಬರು ನೇಮಕಗೊಂಡು ಒಟ್ಟು ಹೊಯ್ಸಳ ಸಾಮ್ರಾಜ್ಯದ ಪೂರ್ವದ ಗಡಿಯಲ್ಲಿ ಅರಾಜಕತೆ ತಲೆದೋರದಂತೆ ತಮ್ಮ ಕಾರ್ಯಭಾರ ನಿರ್ವಹಿಸಿದ್ದಾರೆ.

**3.5 ಮಹಾಮಂತ್ರಿ ಚಂದ್ರಮೌಳಿ :**

ಚಂದ್ರಮೌಳಿಯು ಹೊಯ್ಸಳರ ಕಾಲದ ಪ್ರಮುಖ ಮಂತ್ರಿಗಳಲ್ಲಿ ಒಬ್ಬ. ಇವನು 2ನೆಯ ಬಲ್ಲಾಳನ (ಕ್ರಿ.ಶ. 1173–1220) ಅಧೀನದಲ್ಲಿದ್ದನು. ಬಲ್ಲಾಳನ ಹಲವು ಅಧಿಕಾರಿಗಳಲ್ಲಿ ಇವನದೂ ಸಹ ಗಣ್ಯವಾದ ಹೆಸರಾಗಿದೆ. ಹೊಯ್ಸಳ ವಂಶದ ಏಳ್ಗೆಯಲ್ಲಿ ಇಂತಹ ಅನೇಕ ಅಧಿಕಾರಿಗಳ ಅಪ್ರತಿಮವಾದ ಕೊಡುಗೆಯಿರುವುದು ನಮಗೆ ಇತಿಹಾಸದಲ್ಲಿ ಮುನ್ನೆಲೆಗೆ ತರಬೇಕಾದ ಅಗತ್ಯವಿದೆ. ಚಂದ್ರಮೌಳಿಯ ಇತಿವೃತ್ತವು ಇಂತಿದೆ_

ಚಂದ್ರಮೌಳಿಗೆ ಆರಾಧ್ಯ ದೈವ ಈಶ್ವರ, ಮಹಾಪರಾಕ್ರಮಿಯಾದ ವೀರಬಲ್ಲಾಳನು ಸ್ವಾಮಿ, ವಿಮಲಚರಿತನಾದ ಶಂಭುದೇವನು ತಂದೆ, ಶಿಷ್ಟರ ಮತ್ತು ಇಷ್ಟರ ಚಿಂತಾಮಣಿ ಎನಿಸಿ ಲೋಕವಿಕ್ಯಾತೆಯಾದ ಅಕ್ಕವ್ವೆಯು ತಾಯಿ; ಈ ಶಾಸನ ಪದ್ಯದಲ್ಲಿ ಒಂದು ಸಾಲನ್ನು ಲಕ್ಷಿಸಬೇಕು– "ಇಂತಹ ಚಂದ್ರಮೌಳಿಗೆ ಕಲಿಗಾಲದ ಮಂತ್ರಿವರ್ಗ ಸಮನಾದೀತೆ ?"ಎಂಬ ಮಾತು ವೀರಬಲ್ಲಾಳನ ಕಾಲದ ಮಂತ್ರಿವರ್ಗದಲ್ಲಿ ಪ್ರಾಯಶಃ ಚಂದ್ರಮೌಳಿಯು ಅತ್ಯಂತ ಬುದ್ಧಿವಂತನೂ ಕಾರ್ಯ ತತ್ಪರನೂ ಆಗಿದ್ದನೆಂದೂ ತೋರುತ್ತದೆ. ಅದಕ್ಕೆ ಏನೋ ಇವನು ಪ್ರಭು ಎಂಬ ಅಭಿದಾನಕ್ಕೂ ಪಾತ್ರನಾಗಿದ್ದಾನೆ. ಇಲ್ಲಿ ಪ್ರಭು ಎಂಬುದನ್ನು ದೊರೆ ಎಂಬ ಅರ್ಥದಲ್ಲಿ ಸ್ವೀಕರಿಸುವುದಕ್ಕಿಂತ ಬಲ್ಲಾಳನ ಮಂತ್ರಿಗಳಲ್ಲಿ

ಶ್ರೇಷ್ಠನಾಗಿದ್ದನೆಂಬ ಧ್ವನಿಯಲ್ಲಿ ಅರ್ಥೈಸಿಕೊಳ್ಳುವುದು ಹೆಚ್ಚು ಸಮಂಜಸವಾದೀತು. ಇಂದ್ರನಿಗೆ ಬೃಹಸ್ಪತಿಯಿರುವಂತೆ ಪತಿಭಕ್ತನೂ, ವರಮಂತ್ರ ಶಕ್ತಿಯುತನೂ ಆದ ಚಂದ್ರಮೌಳಿಯು ವೀರಬಲ್ಲಾಳನಿಗೆ ಮಂತ್ರಿಯಾಗಿದ್ದನು. ಮಹಾತೇಜಸ್ವಿಯೂ, ವಿರೋಧಿಸಚಿವರೆಂಬ ಮದದ ಆನೆಗಳ ಪಾಲಿಗೆ ಸಿಂಹಪ್ರಾಯನಾಗಿದ್ದನು.

ಅಂತರವಳ್ಳಿಯ ತಮಿಳು ಶಾಸನವು[61] ಮಹಾಪ್ರಧಾನಿ ಚಂದ್ರಮೌಳಿಯು ತೆಂಪಾಗ್ಯೆ ಅನದಾನಪಳ್ಳಿಯ ಕೈಲಾಸಸ್ಥಾನದಲ್ಲಿ ಚಂದ್ರಮೌಳೀಶ್ವರ ಗುಡಿಯನ್ನು ಕಟ್ಟಿಸಿದುದಾಗಿ ಅದು ತಿಳಿಸುತ್ತದೆ. ಕೆಳಲೆನಾಡಿನಲ್ಲಿದ್ದ ಈ ಹಳ್ಳಿಯನ್ನು ಹಿಂದೆ ಪೆರಿಯ ವಿಟ್ಟಿದೇವನು ಅಗ್ರಹಾರವನ್ನಾಗಿ ಮಾಡಿ ಚಂದ್ರಮೌಳಿಯ ಚಿಕ್ಕಪ್ಪನಾದ ಪಟ್ಟಯಾಂಗನಿಗೆ ದತ್ತಿಬಿಟ್ಟಿದ್ದನು. ಚಂದ್ರಮೌಳಿಯನ್ನು ಶಾಸನವು ಪೆರಿಯ ಮನ್ನೆಪೆರ್ಗಡೆ ಎಂದು ವರ್ಣಿಸಿದೆ. ಹಿರಿಯಮನೆ ಹೆಗ್ಗಡೆ ಎಂಬುದರ ತಮಿಳು ರೂಪಾಂತರವಿದು. ಅವನು ಅರಮನೆಯಲ್ಲಿ ಮುಖ್ಯಾಧಿಕಾರಿಯಾಗೆ ರಾಜಕಾರ್ಯವನ್ನು ನಿರ್ವಹಿಸುತ್ತದ್ದನೆಂಬುದನ್ನು ಇದು ಸೂಚಿಸುವಂತೆ ತೋರುತ್ತದೆ. ಮೂಲದತ್ತಿಯನ್ನು ಬಿಟ್ಟವನು ಪೆರಿಯ ಬಿಟ್ಟಿದೇವ ಅಂದರೆ ವಿಷ್ಣುವರ್ಧನ . ಆದ್ದರಿಂದ ತೇದಿಯಿಲ್ಲದ ಈ ಶಾಸನವನ್ನು 2ನೆಯ ಬಲ್ಲಾಳನ ಕಾಲಕ್ಕೆ ಒಯ್ಯಬಹುದು. ಈತನ ಪತ್ನಿ ಆಚಲಾದೇವಿ. ತನಗೆರಗಿದ ದೇವತೆಗಳ ಕಿರೀಟಗಳ ಕಾಂತಿಯಲ್ಲಿ ಮಂದ ಅರಹಂತ ಪರಮೇಷ್ಠಿಗಳ ಪಾದದ ಗಂಧೋಧಕದಿಂದ ಆಚಿಯಕ್ಕನ ತಲೆ ಪಾವನವಾಯಿತು. ಎಡೆಬಿಡದೆ ಈಕೆ ಚರ್ತುವಿಧ ದಾನಗಳನ್ನು ಮಾಡಿಕೃತಕೃತ್ಯಳಾಗಿದ್ದಳು.: ಇದಕ್ಕಾಗಿ ಪ್ರಸಿದ್ದಿಯನ್ನು ಪಡೆದಿದ್ದಳು ಎಂದು ಈಕೆಯ ಶಾಸನಗಳು ಇವಳನ್ನು ಹೊಗಳುತ್ತವೆ. "ಶ್ರೀಮತು ಹಿರಿಯ ಹೆರ್ಗ್ಗಡಿತಿಯಾಚಲ ದೇವಿಯನ್ವಯವೆಂತೆದೊಡೆ" ಎಂಬ ಸಾಲನ್ನು ಅತ್ಯಂತ ಎಚ್ಚರಿಕೆಯಿಂದ ಗಮನಿಸಿದರೆ ಈಕೆಯು ಆಡಳಿತದಲ್ಲಿ ಹಿರಿಯ ಹೆಗ್ಗಡಿತಿಯಾಗಿ ಕಾರ್ಯನಿರ್ವಹಿಸುತ್ತಿದ್ದಿರಬೇಕು ಎನಿಸುತ್ತದೆ. ಇವಳ ಮೊದಲನೆಯ ಸಹೋದರನಾದ ಬಮ್ಮದೇವನು ಹೆಗ್ಗಡೆಯಾಗಿದ್ದನೆಂಬುದನ್ನು ಸೂಕ್ಷ್ಮವಾಗಿ ಗ್ರಹಿಸಿದಾಗ, ಈಕೆಯು ಅವನಿಗಿಂತ ಹಿರಿಯ ಸ್ಥಾನದಲ್ಲಿದ್ದ ಹೆಗ್ಗಡಿತಿಯಾಗಿ ಕರ್ತವ್ಯಪಾಲಿಸಿದ್ದಿರಬಹುದಾದ ಸಾಧ್ಯತೆಗಳಿವೆಯಲ್ಲವೇ !? ಅಕ್ಕ ಎಂಬ ಸಂಬೋಧನೆಯು ಇವಳ ಹೆಸರಿನಲ್ಲಿ ಮಿಳಿತವಾಗಿರುವುದು ನೋಡಿದರೆ ಬಹುಶ: (ಶಾಸನ ಮೌನ ತಾಳಿದ್ದರೂ) ಈಕೆಯು ತನ್ನ ತಂದೆ ಶಿವೆಯನಾಯಕ ಚಂದವ್ವೆ ದಂಪತಿಗಳ ಆರು ಮಕ್ಕಳಲ್ಲಿ ಹಿರಿಯ ಮಗಳಾಗಿದ್ದಳೆಂದು ತಿಳಿಯಬಹುದು. ಈಕೆಯ ತವರು ಮನೆತನದವರ ಶಾಸನಗಳನ್ನು ಅವಲೋಕಿಸಿದರೆ ಇನ್ನು ಇಬ್ಬರು ಆಚಲಾದೇವಿಯರ ವಿಚಾರ ಶಾಸನಗಳಲ್ಲಿ ಕಂಡುಬಂದಿದೆ. ಆದರೂ ಈ ಇಬ್ಬರ ಹೆಸರುಗಳು ಆಚಲಾದೇವಿಯರೆಂದೇ ಸ್ಪಷ್ಟವಾಗಿ ಶಾಸನಗಳಲ್ಲಿ ಉಕ್ತವಾಗಿವೆ. ಈ ಆಚಲಾದೇವಿಯರು ಚಂದ್ರಮೌಳಿಯ ಪತ್ನಿ ಆಚಲಾದೇವಿಗಿಂತ ಭಿನ್ನರು. ಅವರವರ ವೈವಾಹಿಕ ಸಂಬಂಧಗಳಿಂದ ಹಾಗೂ ಸೋದರ ಸಂಬಂಧಗಳಿಂದ –ಹೇಗೆಂದರೆ ಒಬ್ಬ ಆಚಲಾದೇವಿಯು ಹೆಮ್ಮಾಡಿದೇವನ ಮಡದಿ. ಇನ್ನೊಬ್ಬ ಆಚಲಾದೇವಿಯು ಸೋವಣನಾಯಕನ ಮಗಳು. ಹೀಗಾಗಿ ನನ್ನ ಅಧ್ಯಯನದ ದೃಷ್ಟಿಯಿಂದ ಚಂದ್ರಮೌಳಿಯ ಪತ್ನಿಯಾದ ಈ ಆಚಿಯಕ್ಕ ಅಥವಾ ಆಚಲಾದೇವಿಯನ್ನು

ಒಂದನೆಯ ಆಚಲಾದೇವಿಯೆಂತಲೂ, ಇವಳ ಮತ್ತೊಬ್ಬ ಸಹೋದರಿಯಾದ ಆಚಲಾದೇವಿಯನ್ನು 2ನೆಯ ಆಚಲಾದೇವಿಯೆಂತಲೂ, ಈಕೆಯ ತಮ್ಮನ ಮಗಳಾದ ಆಚಲಾದೇವಿಯನ್ನು 3ನೆಯ ಆಚಲಾದೇವಿಯೆಂತಲು ಗುರುತಿಸಿ ವಿವರಿಸಿದ್ದೇನೆ.

**3.6 ಗಂಗರಾಜ ಮತ್ತು ಅವನ ಮನೆಯವರು**

ಗಂಗರಾಜನ ವಂಶದಲ್ಲಿ ಶಾಸನಾಧಾರಗಳಿಂದ ಸದ್ಯಕ್ಕೆ ನನಗೆ ಗುರುತಿಸಲು ಸಾಧ್ಯವಾಗಿರುವ ಅತ್ಯಂತ ಪ್ರಾಚೀನ ವ್ಯಕ್ತಿ ಎಂದರೆ ನಾಗವರ್ಮ್ಮ. 1006ರಲ್ಲಿ ಹೊಯ್ಸಳರಿಗೂ ಚೋಳರಿಗೂ ನಡೆದ ಕಲಿಯೂರಿನ ಯುದ್ಧದಲ್ಲಿ ಹೊಯ್ಸಳರಿಗೆ ಹಿನ್ನಡೆಯಾಯಿತು. ಆಗಿನ್ನೂ ಹೊಯ್ಸಳ ವಂಶವು ನಾಡಿನ ಇತಿಹಾಸದಲ್ಲಿ ತಮ್ಮದೇ ಛಾಪನ್ನು ರೂಪಿಸಿಕೊಳ್ಳಲು ಹವಣಿಸುತ್ತಿದ್ದ ಕಾಲವದು. ನೃಪಕಾಮನು ಹೊಯ್ಸಳರಲ್ಲಿ ಮೊದಲನೆಯ ಮುಖ್ಯ ಅರಸನಾಗಿ ರೂಪುಗೊಳ್ಳುತ್ತಿದ್ದ ಕಾಲವದು. ಚೋಳರಂತಹ ಪ್ರಬಲ ದೊರೆಗಳ ಮೇಲೆ ಯುದ್ಧಕ್ಕೆ ನಿಂತದ್ದೇ ಬಹುದೊಡ್ಡ ಸಾಧನೆಯಾಗಿತ್ತು. ಹಾಗಾಗಿ ಈ ಕದನಕ್ಕೆ ವಿಶೇಷವಾದ ಐತಿಹಾಸಿಕ ಪ್ರಾಮುಖ್ಯತೆ ಇದ್ದೇ ಇದೆ. ಇದೇ ಕದನದಲ್ಲಿ ನೃಪಕಾಮನು ತನ್ನ ಸೇನಾಧಿಪತಿ ನಾಗಣ್ಣ ಅಥವಾ ನಾಗವರ್ಮನನ್ನು ಮತ್ತಿತರ ಸೈನ್ಯಾಧಿಕಾರಿಗಳನ್ನು ಕಳೆದುಕೊಂಡನು ಎಂಬ ಉಲ್ಲೇಖಗಳಿವೆ.[62] ಹಾಗಾಗಿ ಗಂಗರಾಜನ ವಂಶದಲ್ಲಿ ನಾವೀಗ ಗುರುತಿಸಿರುವ ಅತ್ಯಂತ ಪ್ರಾಚೀನ ವ್ಯಕ್ತಿಯಾದ ಈ ನಾಗವರ್ಮನು ಬಹುಶಃ ಕಲಿಯೂರಿನ ಯುದ್ಧದಲ್ಲಿ ಮಡಿದ ನಾಗಣ್ಣನೇ ಇರಬಹುದು.

ನಾಗವರ್ಮ್ಮನ ಮಗ ಮಾರಮಯ್ಯ; ಮಾರಮ್ಮಯ್ಯನ ಬಗ್ಗೆ ಹೆಚ್ಚಿನ ಮಾಹಿತಿಯ ಲಭ್ಯವಿಲ್ಲ. ಈತನೂ ಕೂಡ ರಣಧೀರನಾಗಿದ್ದ ಸಂಗತಿಯನ್ನು ನಾವು ತಿಳಿಯಬಹುದು. ಎಂದರೆ ಆತನು ಸಹ ಸೈನ್ಯದಲ್ಲಿದ್ದನು ಎಂದು ತಿಳಿಯಬಹುದು. ಆದರೆ ಆತನು ಯಾವ ಪದವಿಯಲ್ಲಿದ್ದನೆಂಬ ವಿಷಯವನ್ನು ನಮಗೆ ಸಮಕಾಲೀನ ಶಾಸನಗಳು ತಿಳಿಸುವುದಿಲ್ಲ. ಮಾರಮಯ್ಯನ ವಧು ಮಾಕಣಬ್ಬೆ. ಈ ದಂಪತಿಗಳ ಸುತನೇ ಒಂದನೆಯ ಏಚ ಅಥವಾ ಏಚಿರಾಜ; ಏಚಿರಾಜ ಮತ್ತು ಪೋಚಿಕಬ್ಬೆ ದಂಪತಿಗಳಿಗೆ ಇಬ್ಬರು ಪುತ್ರರು. ಅವರಲ್ಲಿ ಮೊದಲನೆಯಾತ ಬರ್ಮ್ಮಚಮೂಪ, ಎರಡನೆಯಾತ ಗಂಗರಾಜ. ಗಂಗರಾಜನ ವಂಶೀಯರು ಕೌಂಡಿಲ್ಯ ಗೋತ್ರದವರಾಗಿದ್ದರು. ಜೈನಧರ್ಮದ ಅನುಯಾಯಿಗಳಾಗಿದ್ದರು.

ಗಂಗರಾಜದಂಡಾಧಿಪನು ಹೊಯ್ಸಳರ ಪ್ರಸಿದ್ಧ ದಂಡನಾಯಕನಾದ ಮರಿಯಾನೆ ದಂಡನಾಯಕನ ಸಂಬಂಧಿಯೂ ಆಗಿದ್ದ ವಿವರವನ್ನು ನಮಗೆ ನಾಗಮಂಗಲದ ಶಾಸನವು ಅರುಹುತ್ತದೆ; ಜೊತೆಗೆ ಈ ಶಾಸನವು ಪ್ರಸಿದ್ಧನಾದ ಮರಿಯಾನೆ ದಂಡನಾಯಕನ ವಂಶದ ವಿವರಗಳನ್ನು ಕೊಡುತ್ತದೆ. ಇದು ಕ್ರಿ.ಶ. 1183ಕ್ಕೆ ಸೇರಿದ ಸಂಕೀರ್ಣ ಶಾಸನ. ಇದರಲ್ಲಿ ಕ್ರಮವಾಗಿ ಕ್ರಿ.ಶ 1048, 1103, 1182–83ರಲ್ಲಿ ಕೊಟ್ಟಂತ ದತ್ತಿಗಳನ್ನು ಉಲ್ಲೇಖಿಸುವ ಸಂದರ್ಭದಲ್ಲಿ ಹಲವಾರು ಪ್ರಮುಖ ರಾಜಕೀಯ ಸಂಗತಿಗಳಿವೆ.

ಈ ಶಾಸನವು 135 ವರ್ಷಗಳ ಹಿಂದೆ ಹೊಯ್ಸಳ ದೊರೆ ವಿನಯಾದಿತ್ಯನ ಆಳ್ವಿಕೆಯ ಕಾಲದಲ್ಲಿ ನಡೆದ ಸಂಗತಿಯೊಂದನ್ನು ತಿಳಿಸಿ ಆನಂತರ ಒಂದನೆಯ ನರಸಿಂಹನ ಕಾಲದಲ್ಲಿ ಘಟಿಸಿದ ವಿವರಗಳನ್ನು ತಿಳಿಸುತ್ತದೆ. ಹಿರಿಯ ಮರಿಯಾನೆಯನ್ನು ವಿನಯಾದಿತ್ಯನ ಪತ್ನಿ ಕೆಳೆಯಬ್ಬರಸಿಯು ತನ್ನ ಸ್ವಂತ ತಮ್ಮನಂತೆಯೇ ನೋಡಿಕೊಂಡಿದ್ದಳಂತೆ. ಆಗ ರಾಜನು ಸೊಸೆಯೂರಿನಿಂದ ಆಳುತ್ತಿದ್ದನು. ಆಕೆಯೂ ದೊರೆಯೂ ಮರಿಯಾನೆಗೆ ಕ್ರಿ.ಶ 1048 ಫೆಬ್ರವರಿ 19 ರಂದು ದೇಕವ್ವೆಯನ್ನು ಕನ್ಯಾದಾನ ಮಾಡಿ ಆ ಸಂದರ್ಭದಲ್ಲಿ ಆಸಂದಿನಾಡಿನ ಸಿಂದಗೆರೆಯ ಪ್ರಭುತ್ವವನ್ನು ಕೊಟ್ಟರು. ಮರಿಯಾನೆಗೆ ಚಾಮವ್ವೆ ಎಂಬ ಮತ್ತೊಬ್ಬ ಪತ್ನಿಯಿದ್ದಳು. ಆಕೆಯಲ್ಲಿ ಅವನಿಗೆ ಪದುಮಲದೇವಿ, ಚಾಮಲದೇವಿ, ಬೊಪ್ಪದೇವಿ ಎಂಬ ಮೂವರು ಹೆಣ್ಣುಮಕ್ಕಳು ಜನಿಸಿದರು. ಈ ಮೂವರನ್ನು ಎರೆಯಂಗನ ಮಗ ಒಂದನೆಯ ಬಲ್ಲಾಳನು ಒಂದೇ ಹಸೆಯ ಮೇಲೆ ಮದುವೆಯಾದನೆಂಬ ಕುತೂಹಲದ ವಿಷಯ ಈ ಶಾಸನದಲ್ಲಿದೆ. ಈ ಸಂದರ್ಭದಲ್ಲಿ ಬಲ್ಲಾಳನು ಹಿಂದೆ ಮರಿಯಾನೆಗೆ ಕೊಟ್ಟಂತಹ ("ಮೊಲೆವಾಲರಿಣಕ್ಕೆ") ದತ್ತಿಯನ್ನು ಪುನರ್ದತ್ತಿಯಾಗಿ ನೀಡಿದನು. ಈ ಹಿರಿಯ ಮರಿಯಾನೆಯ ಮೈದುನ (ಹೆಂಡತಿಯ ತಮ್ಮ) ಗಂಗರಾಜದಂಡನಾಯಕ. ಅಂದರೆ ಗಂಗರಾಜನ ಒಡಹುಟ್ಟಿದ ಸೋದರಿಯ ಗಂಡನೇ ಹಿರಿಯ ಮರಿಯಾನೆ ದಂಡನಾಯಕ. [63] ಇವನು ವಿಷ್ಣುವರ್ಧನನ ಪ್ರಮುಖ ಸೇನಾನಿಯಾಗಿದ್ದನು ಎಂಬುದು ಆತನಿಗೇ ಹೆಮ್ಮೆಯ ಸಂಗತಿಯಾಗಿತ್ತು. ಗಂಗರಾಜನ ಬಹಳ ಮುಖ್ಯ ಸಾಧನೆಗಳನ್ನು ನಾವು ಅವನು ವಿಷ್ಣುವರ್ಧನನಿಗಾಗಿ ದೊರಕಿಸಿಕೊಟ್ಟ ಮಹಾ ದಿಗ್ವಿಜಯವಾದ ಚೋಳರ ಮೇಲಿನ ಗೆಲುವಿನಿಂದ ಆರಂಭಿಸಬಹುದು. ಗಂಗರಾಜನು ತನ್ನ ಮುಂದಾಳತ್ವದಲ್ಲಿ ಸೈನ್ಯವನ್ನು ಸಜ್ಜುಗೊಳಿಸಿಕೊಂಡು ಗಂಗವಾಡಿಯ ಕಡೆಗೆ ಮುನ್ನುಗ್ಗುತ್ತಾನೆ. ಅದರ ಕೇಂದ್ರಭಾಗವಾದ ತಲಕಾಡನ್ನು ಮುತ್ತುತ್ತಾನೆ. ಆಗ ಚೋಳರಿಂದ ಆಕ್ರಮಿತವಾಗಿದ್ದ ಗಂಗವಾಡಿಯ ಪ್ರಾಂತ್ಯಾಧಿಕಾರಿಯಾಗಿದ್ದ ಆದಿಯಮನು ಕಾವೇರಿಯ ದಡದ ಮೇಲೆ ಹೊಯ್ಸಳ ಸೇನೆಯನ್ನು ಎದುರಿಸುತ್ತಾನೆ. ಆದರೆ ಗಂಗರಾಜನ ಅತ್ಯುಗ್ರ ದಾಳಿಯ ಎದುರು ನಿಲ್ಲಲಾರದೆ ಚೋಳ ಸೈನ್ಯವು ದಿಕ್ಕಾಪಾಲಾಗಿ ಓಡುತ್ತದೆ. ಯುದ್ಧದಲ್ಲಿ ಅದಿಯಮನು ಸಾಯುತ್ತಾನೆ. ಅವನಿಗೆ ಸಹಾಯ ಮಾಡಲು ಬಂದಿದ್ದಂತಹ ಇನ್ನಿಬ್ಬರು ಚೋಳ ಅಧಿಕಾರಿಗಳಾದ ದಾಮೋದರ ಮತ್ತು ನರಸಿಂಗವರ್ಮರು ರಣರಂಗದಿಂದ ಪಲಾಯನಗೈಯುತ್ತಾರೆ. ನರಸಿಂಗವರ್ಮನನ್ನು ಕೊಲ್ಲಲಾಗುತ್ತದೆ. ದಾಮೋದರನು ಕಂಚಿಯ ಕಡೆಗೆ ಓಡಿಹೋಗುತ್ತಾನೆ. ಹೀಗೆ ಗಂಗರಾಜನ ಅತೀವ ಶೌರ್ಯ ಪರಾಕ್ರಮ ಚಾಣಾಕ್ಷತೆಗಳಿಂದ ತಲಕಾಡು 1117ರಲ್ಲಿ ಹೊಯ್ಸಳರ ಮಡಿಲಿಗೆ ಸೇರುತ್ತದೆ. ಪರಾಕ್ರಮದಿಂದ ಹೋರಾಡಿ ಜಯವನ್ನು ತಂದವನು ಗಂಗರಾಜನಾದರೂ ತಲಕಾಡುಗೊಂಡ ಎಂಬ ಬಿರುದನ್ನು ಧರಿಸಿದವನು ಮಾತ್ರ ವಿಷ್ಣುವರ್ಧನನಾಗಿದ್ದನು.

ಈ ವಿಜಯದ ದ್ಯೋತಕವಾಗಿ ವಿಷ್ಣುವರ್ಧನನು ವೀರಗಂಗ ತಲಕಾಡುಗೊಂಡ ಎಂಬ ಬಿರುದುಗಳನ್ನು ಧರಿಸಿದನು. ಹೊಯ್ಸಳರ ಈ ಚಾರಿತ್ರಿಕ ವಿಜಯಪತಾಕೆಯ ಉತ್ತುಂಗತೆಗೆ ಗಂಗರಾಜನೇ ಅಧ್ವರ್ಯು. ಅಚ್ಚ ಕನ್ನಡ ಪ್ರದೇಶದಿಂದ ತಮಿಳರನ್ನು ಅಟ್ಟಿದ ವಿಷ್ಣುವರ್ಧನನ ಯಶೋಕಿರೀಟಕ್ಕೆ

ಗಂಗರಾಜನು ವಜ್ರಮಣಿಯೇ ಸರಿ. ಕಾವೇರಿ ಕಣಿವೆಯ ಅತ್ಯಂತ ಸಂಪದ್ಭರಿತವಾದ ಪ್ರದೇಶವು ಇದರಿಂದ ಮತ್ತೆ ಹೊಯ್ಸಳರಿಗೆ ಸಲ್ಲುವಂತಾಯಿತು. ಚೋಳರಿಂದ ಆಕ್ರಮಿತವಾದ ಈ ಪ್ರಾಂತ್ಯವು ಕೃಷಿಯ ಮೇಲಿನ ಹಾಗೂ ಹೆದ್ದಾರಿ ಸುಂಕಗಳಿಂದ ಹೇರಳವಾದ ಲಾಭವನ್ನು ತರುವ ಪ್ರದೇಶವಾಗಿತ್ತು. ಇಲ್ಲಿ ಆ ಕಾಲದಲ್ಲಿಯೇ ಗುಡಿಕೈಗಾರಿಕೆಗಳು ಹೆಚ್ಚು ಹೆಚ್ಚು ಪ್ರವರ್ಧಮಾನವಾಗಿದ್ದವು. ಮಾರುಕಟ್ಟೆಗಳು ಕೂಡ ಒಳನಾಡಿನ ಹಾಗೂ ಹೊರನಾಡಿನ ವ್ಯಾಪಾರದಲ್ಲಿ ಅಸದೃಶವಾದ ಕಾರ್ಯಗಳನ್ನು ನಿರ್ವಹಿಸುತ್ತಿದ್ದವು. ಹಾಗಾಗಿಯೇ ಈ ಕಾವೇರಿ ಜಲಾನಯನ ಪ್ರದೇಶದ ಒಡೆತನಕ್ಕೆ ನಿರಂತರವಾದ ಸಂಘರ್ಷಗಳು ನಡೆಯುತ್ತಲೇ ಇದ್ದವು. ತಲಕಾಡನ್ನು ವಶಪಡಿಸಿಕೊಳ್ಳುವ ಮೂಲಕ ಇದನ್ನು ಶಾಶ್ವತವಾಗಿ ಪರಿಹರಿಸಿದ ಕೀರ್ತಿ ಮಾತ್ರ ಗಂಗರಾಜನದ್ದೇ ಆಗಿತ್ತು. ತನ್ನ ಪರಾಕ್ರಮದಿಂದ ಜನತೆಯನ್ನು ಅಚ್ಚರಿಗೊಳಿಸಿದ್ದ ದಾಮನು ಈಗ ಗಂಗರಾಜನ ಹೊಡೆತವನ್ನು ತಾಳಲಾರದೆ ಭಯಗೊಂಡು ಪಲಾಯನಮಾಡಿ ನಾಯಿಯೂ ಹೇಸುವ ನರಕಪಾಲದಲ್ಲಿ ಶೈವಮುನಿಯಂತೆ ಉಣ್ಣುತ್ತಿರುವನಲ್ಲ ಎಂದು ಶಾಸನವು ಆಶ್ಚರ್ಯವನ್ನು ವ್ಯಕ್ತಪಡಿಸುತ್ತದೆ.

**ಎನಿತಾನುಂ ಬವರಂಗಳೊಳ್ಬಲಬರಂ ಬೆಂಕೊಂಡ ಗಂಡಿಂದಮೋ**

**ವೆನಿಸುತ್ತಂ ತಳಕಾಡೊಳಿನ್ನೆವರಮಿರ್ದ್ದಿರ್ಗಳ್ಕರಂ ಗಂಗರಾ**

**ಜನ ಖಳ್ಗಾಹತಿಗಳ್ಕಿ ಯುದ್ಧವಿಧಿಯೊಳ್ಬಿನ್ನಿತ್ತು ನಾಯುಂಣದೋ**

**ಡಿನಲುಂಡಿರ್ದ್ದಪನತ್ತ ಶೈವಶಮಿವೊಲ್ಸಾಮಂತ್ತದಾಮೋದರಂ**

ನರಸಿಂಗವರ್ಮ್ಮನೇ ಮೊದಲಾದ ಘಟ್ಟದ ಮೇಲಿನ ಚೋಳನ ಸಾಮನ್ತರೆಲ್ಲರನ್ನು ಸದೆಬಡಿದು ಆ ನಾಡನ್ನೆಲ್ಲ ಏಕಚಕ್ರದ ಅಡಿಯಲ್ಲಿ ವಿಷ್ಣುವರ್ಧನನಿಗೆ ಸಾಧಿಸಿಕೊಟ್ಟನು. ಇದನ್ನು ಮೆಚ್ಚಿ ವಿಷ್ಣುವರ್ಧನನು ಏನನ್ನಾದರು ಬೇಡಿಕೋ ಎಂದು ಕೇಳಿದ ಸಂದರ್ಭವನ್ನು ಬಹಳ ಎಚ್ಚರಿಕೆಯಿಂದ ನಾವು ನೋಡಬಹುದಾಗಿದೆ. ಇಲ್ಲಿ ನಮಗೆ ಗಂಗರಾಜನು ಒಬ್ಬ ಅಪರಿಮಿತನಾದ ಮಹಾಸಾಹಸಿ ಆಗಿದ್ದರೂ ಅವನೊಳಗೊಬ್ಬ ಅವ್ಯಕ್ತವಾಗಿ ಧಾರ್ಮಿಕ ಪುರುಷನೇ ಇದ್ದನು ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬಹುದು. ಆಗ "ಅವರಿವರಂತೆ ಏನೇನನ್ನೋ ಬೇಡದೆ ಭೂಭುವನವು ಬಣ್ಣಿಸುವಂತೆ ಗೋವಿಂದವಾಡಿಯನ್ನು ಬೇಡಿದನು". ಗಂಗರಾಜನು ತಾನು ಹೊಯ್ಸಳ ದೊರೆಯಿಂದ ಪಡೆದ ಗೋವಿಂದವಾಡಿಯನ್ನು ಗೊಮ್ಮಟದೇವರ ಪೂಜೆಗಾಗಿ ಸಂತೋಷವಾಗಿ ದತ್ತಿಬಿಟ್ಟನು. ಆಗ ಮುನಿಗಳು ಮನಸಾರೆ ಗೊಮ್ಮಟನೆಂದು, ಚಾಮುಂಡರಾಯನೆಂದು ಇವನನ್ನು ಹೊಗಳಿದರು.[64]

ವಿಷ್ಣವರ್ಧನನ ಈ ಅಗಾಧವಾದ ರಾಜಕೀಯ ಪರಮಾಧಿಕಾರಾಕಾಂಕ್ಷಿಯ ರಾಜತಾಂತ್ರಿಕ ನಡೆಗಳನ್ನು ನೋಡುತ್ತ ಚಾಳುಕ್ಯ ಚಕ್ರವರ್ತಿ ಸುಮ್ಮನೆ ಕುಳಿತಿರಲಿಲ್ಲ. ಗಂಗವಾಡಿಯ ವಿಜಯದ ಮರುವರ್ಷದಲ್ಲಿಯೇ ಅಂದರೆ 1118ರಲ್ಲಿ ವಿಕ್ರಮಾದಿತ್ಯನು ಜಗದ್ದೇವ ಹಾಗೂ ಅನೇಕ ಜನ ತನ್ನ ಮಹಾಮಂಡಳೇಶ್ವರರು ಮತ್ತು 12ಜನ ಸಾಮಂತರೊಂದಿಗೆ ಹೊಯ್ಸಳರ ಮೇಲೆ ದಂಡೆತ್ತಿ ಬಂದನು.

ಹಾಸನ ಸಮೀಪದ ಕಣ್ಣೇಗಾಲದಲ್ಲಿ ಈ ಚಾಳುಕ್ಯ ಹೊಯ್ಸಳ ಕಾದಾಟ ನಡೆಯಿತು. ವೀರಗಂಗ ಹೊಯ್ಸಳನೂ ತನ್ನ ದಳಪತಿಯಾದ ಗಂಗರಾಜನೂ ರಾತ್ರಿಯವೇಳೆಯಲ್ಲಿ ಚಾಳುಕ್ಯ ಸೈನ್ಯವನ್ನು ಎದುರಿಸಿದರು [65]

ಗಂಗರಾಜನು ಕುದುರೆಯೇರಿ ರಾತ್ರಿವೇಳೆಯಲ್ಲಿ ಬಂದು ಚಾಲುಕ್ಯಚಕ್ರವರ್ತಿಯ ಮೇಲೆ ಆಕ್ರಮಣ ಮಾಡಿದನು. ಈ ಇರುಳಯುದ್ಧದಲ್ಲಿ ನಿರಾಯಾಸವಾಗಿ ಗೆದ್ದು ಅಲ್ಲಿದ್ದ ಸಕಲ ವಸ್ತುವಾಹನಗಳನ್ನು (ರಥ)ತಂದು (ದೋಚಿ) ವಿಷ್ಣುವರ್ಧನನಿಗೆ ಅರ್ಪಿಸಿದನು. ಆಗಿನ ಕಾಲದಲ್ಲಿ ಹಲವು ರೀತಿಯ ಯುದ್ಧ ತಂತ್ರಗಳನ್ನು ಜನಪ್ರಿಯಗೊಳಸಿದ ಕೀರ್ತಿಯೂ ಗಂಗರಾಜನಿಗೆ ಸಲ್ಲಬೇಕು. ಆತನ ಸೈನ್ಯದಲ್ಲಿ ಹಲವು ಪ್ರಾಂತ್ಯಗಳಿಂದ ಸಂಗ್ರಹಿಸಿದ್ದ ಕುದುರೆಗಳಿದ್ದವು.

ಹೊಯ್ಸಳರ ಆಕ್ರಮಣಗಳಲ್ಲಿ ಅದ್ಭುತವಾದ ಸೈನ್ಯ ಶ್ರೀಮಂತಿಕೆಯನ್ನು ಒದಗಿಸಿ ವಿಷ್ಣುವರ್ಧನನ ರಾಜ್ಯ ವಿಸ್ತರಣ ನೀತಿಯ ಮುಖ್ಯ ಭುಜಬಲವಾಗಿ ವಿಜಯಕ್ಕೆ ಕಾರಣಕರ್ತನಾಗಿದ್ದನು. ಕಣ್ಣೇಗಾಲದ ಯುದ್ಧದ ಯಶಸ್ಸಿನಿಂದ ಸಂತುಷ್ಟನಾದ ಗಂಗರಾಜನು ನಂತರ ಹಾನಗಲ್ಲಿನ ಕದಂಬರನ್ನೂ ಸೋಲಿಸಿ ಅಲ್ಲಿಂದ ಮುಂದುವರೆದು ತುಂಗಭದ್ರಾ ನದಿಯನ್ನೂ ದಾಟಿ ಕುಮ್ಮಟದ ಕೋಟೆಯನ್ನೂ ಸಹ ವಶಪಡಿಸಿಕೊಂಡನು.

ಈ ವಿಜಯದಿಂದ ಸಂತುಷ್ಟನಾದ ಅರಸನು ಗಂಗರಾಜನ ಭುಜಬಲಪರಾಕ್ರಮಕ್ಕೆ ಮೆಚ್ಚಿ ಏನಾದರೂ ಕೇಳಿಕೊಳ್ಳುವಂತೆ ಮತ್ತೆ ಕೇಳುತ್ತಾನೆ. ಆಗ ಗಂಗರಾಜನು ನಶ್ವರವಾದ ರಾಜ್ಯಕೋಶಾದಿಗಳನ್ನು ಬೇಡದೆ ಜಿನಪೂಜೆಗಾಗಿ ಪರಮ ಎಂಬ ಗ್ರಾಮವನ್ನು ಬೇಡಿದನು. ತನ್ನ ತಾಯಿ ಪೋಚಲದೇವಿಯು ಮಾಡಿಸಿದ ಜಿನಾಲಯಕ್ಕೂ (ಶಾಸನ ಬಸದಿ)ಮತ್ತು ತನ್ನ ಪ್ರಿಯತಮೆ ಲಕ್ಷ್ಮಿದೇವಿ ಮಾಡಿಸಿದ ಜಿನಾಲಯಕ್ಕೂ (ಎರಡುಕಟ್ಟೆ ಬಸದಿ)ಈ ಪರಮ ಗ್ರಾಮವನ್ನು ದತ್ತಿಯಾಗಿ ನೀಡಿದನು. ಇವನು ಎಂತಹ ಉದಾರಿಯಲ್ಲವೇ ಎಂದು ಶಾಸನವು ಕೊಂಡಾಡಿರುವುದನ್ನು ನಾವು ಗಮನಿಸಬೇಕು. ವಿಷ್ಣುನೃಪನ ಮಂತ್ರಿ ಧವಳಕೀರ್ತಿ ಪ್ರಭೆಯನ್ನು ಹೊಂದಿದ್ದಂತಹವನು ಗಂಗರಾಜ ದಂಡಾಧೀಶನು. ಇವನು ವಿಭು ಎನಿಸಿಕೊಂಡಿದ್ದನು.

ವಿಷ್ಣವರ್ಧನನ ಅತ್ಯುಚ್ಚ ಗುರಿಯಾದ ಚಕ್ರವರ್ತಿ ಸ್ಥಾನಮಾನದ ಕನಸನ್ನು ನನಸನ್ನಾಗಿಸಿದವನು ಗಂಗರಾಜ. ಇದನ್ನು ಗಂಗರಾಜನ ಬಿರುದುಗಳಲ್ಲಿ ಮುಖ್ಯವಾಗಿ ತೋರಿರುವ 'ವಿಷ್ಣುವರ್ಧನ ಭೂಪಾಳ ಹೊಯ್ಸಳ ಮಹಾರಾಜ ರಾಜ್ಯಾಭಿಷೇಕ ಪೂರ್ಣ್ಣಕುಂಭ ಧರ್ಮ್ಮಹರ್ಮ್ಯೋದ್ಧರಣ ಮೂಳಸ್ತಂಭ' ಎಂಬ ಬಿರುದು ಮತ್ತಷ್ಟು ನನ್ನ ಈ  ವಾದಕ್ಕೆ ಪುಷ್ಟಿಯೊದಗಿಸುತ್ತದೆ.

### 3.7 ಕಾಮಯ್ಯ ಮತ್ತು ಅವನ ವಂಶೀಯರು

ಈ ಕಾಮಯ್ಯದಂಡನಾಯಕನು ಹೊಯ್ಸಳ ದೊರೆ 3ನೆಯ ಬಲ್ಲಾಳನ(ಕ್ರಿ.ಶ 1291–1343) ಅಧೀನದಲ್ಲಿದ್ದನು. ಕ್ರಿ.ಶ. 1315ರಿಂದ 1341ರವರೆಗಿನ ಅವಧಿಯಲ್ಲಿ ಅತ್ಯಂತ ಪ್ರಮುಖವಾದ ಹುದ್ದೆಯನ್ನು ಅಲಂಕರಿಸಿದ್ದನು. ಕಾಮಯ್ಯ ದಂಡನಾಯಕ ಮತ್ತು ಅವನ ವಂಶೀಯರ ಶಾಸನಗಳನ್ನು ಅನುಲಕ್ಷಿಸಿ ಅವರ ಆಡಳಿತಾತ್ಮಕ ಮತ್ತು ಸಾಂಸ್ಕೃತಿಕ ಸಂಕಥನವನ್ನು ಪ್ರಸ್ತುತಪಡಿಸುವುದರ ಮೂಲಕ ಅಂಚಿಗೆ ಸರಿಸಲ್ಪಟ್ಟಿದ್ದ ಅಧಿಕಾರಿಯೊಬ್ಬನಿಗೆ ಸೂಕ್ತ ಸ್ಥಾನಮಾನಗಳನ್ನು ಒದಗಿಸುವುದು ನನ್ನ ಆಶಯವಾಗಿದೆ.

ಮಾಗಡಿ ತಾಲೂಕು ತಿಪ್ಪಸಂದ್ರ ಹೋಬಳಿಗೆ ಸೇರಿದ ಹೆಬ್ಬಳಲು ಎಂಬ ಗ್ರಾಮದ ಕ್ರಿ.ಶ 1315 ರ ಶಾಸನದಲ್ಲಿ[66] ಕಾಮಯ್ಯ ದಂಡನಾಯಕನ ಪ್ರಥಮ ಉಲ್ಲೇಖ ದೊರೆಯುತ್ತದೆ. ಈ ಹೆಬ್ಬಳಲು ಗ್ರಾಮದ ಶಾಸನದನ್ವಯ  ಕಾಮಯ್ಯದಂಡನಾಯಕನು ಹುಳ್ಳೆಯನಹಳ್ಳಿಯ ನಾಡಿನಲ್ಲಿರುವ ಕೆಲವು ಪ್ರದೇಶಗಳನ್ನು ಸೇನಬೋವ ರಾಜಣ್ಣನಿಗೆ ದಾನವಾಗಿ ನೀಡುವಷ್ಟು ಪ್ರಬಲನಾಗಿ ರೂಪುಗೊಂಡಿದ್ದನು. ಇಲ್ಲಿ ನಾವು ಗಮನಿಸಬೇಕಾದ ಅತ್ಯಂತ ಮುಖ್ಯವಾದ ಸಂಗತಿಯೆಂದರೆ ಮಾಗಡಿ ಪ್ರಾಂತ್ಯದಲ್ಲಿ ಹೊಯ್ಸಳರ ಆಡಳಿತವು ರೂಪುಗೊಳ್ಳಬೇಕಾದರೆ ನಮಗೆ ಸಿಗುವ ಅತ್ಯಂತ ದಕ್ಷನಾದ ಅಧಿಕಾರಿಯೇ ಈ ಕಾಮಯ್ಯದಂಡನಾಯಕ. ಮಾಗಡಿ ಪ್ರಾಂತ್ಯವು ದಟ್ಟವಾದ ಬೆಟ್ಟಗುಡ್ಡಗಳಿಂದ ಆವೃತವಾಗಿದ್ದು ಮುಖ್ಯವಾದ ಹೆದ್ದಾರಿಯಲ್ಲಿ ಇಲ್ಲದ ಕಾರಣ ಈ ಪ್ರಾಂತ್ಯದ ಅಧಿಕಾರವನ್ನು ನೇರವಾಗಿ ಯಾವುದೇ ರಾಜಮನೆತನಗಳು ವಹಿಸಿಕೊಳ್ಳಲು ಹಿಂಜರಿಯುತ್ತಿದ್ದವು. ಸಾಂಪ್ರದಾಯಿಕವಾಗಿ ಮಲೆನಾಡಿನ ಅಧಿಕಾರದ ರುಚಿಯನ್ನು ಕಂಡಿದ್ದ ಹೊಯ್ಸಳ ಮನೆತನವು ಈ ಪ್ರಾಂತ್ಯದಲ್ಲಿ ಆಡಳಿತದ ಚುಕ್ಕಾಣಿಯನ್ನು ಹಿಡಿಯಲು ಸಹಜವಾಗಿಯೇ ಉತ್ಸುಕರಾಗಿರಬೇಕು. ಈ ಪ್ರಾಂತ್ಯದಲ್ಲಿದ್ದ ಬುಡಕಟ್ಟುಗಳನ್ನು ಒಲಿಸಿಕೊಂಡು ಅವರನ್ನು ಸೈನ್ಯದಲ್ಲಿ ಜಮಾವಣೆ ಮಾಡಿಕೊಂಡು ಗುರುತರವಾದ ಯುದ್ಧಗಳನ್ನು ಗೆಲ್ಲುವ ಯೋಚನೆಯನ್ನು ಹೊಯ್ಸಳ ದೊರೆಗಳು ಮಾಡಿರಲೂಬಹುದು. ಇಂತಹ ಸಂಕ್ರಮಣ ಸಂದರ್ಭದಲ್ಲಿ ಹೊಯ್ಸಳರಿಗೆ ಪೂರಕವಾಗಿ ನಿಷ್ಠೆಯಿಂದ ದುಡಿಯುವ ವ್ಯಕ್ತಿಯ ಅವಶ್ಯಕತೆ ಇದ್ದೇ ಇತ್ತು. ಇದಕ್ಕೆ ಸಂಪೂರ್ಣವಾಗಿ ಸಹಕರಿಸಿ ಹೊಯ್ಸಳ ಸೈನ್ಯವನ್ನು ದಷ್ಟಪುಷ್ಟವಾಗಿ ರೂಪಿಸುವಲ್ಲಿ ಕಾಮಯ್ಯನಾಯಕನ ಪಾತ್ರವೂ ಹಿರಿದಾದುದಾಗಿದೆ ಎಂದರೆ ಯಾವುದೇ ಉತ್ಪ್ರೇಕ್ಷೆಯಿಲ್ಲ.

ಬಹುಶಃ ಹೊಯ್ಸಳ ದೊರೆಗಳ ವಿಶ್ವಾಸವನ್ನು ಕಾಮಯ್ಯ ದಂಡನಾಯಕನು ಅತ್ಯಂತ ಬೇಗ ಸಂಪಾದಿಸಿದನು ಎಂದು ತೋರುತ್ತದೆ. ಅದಕ್ಕೆ ಮುಖ್ಯಕಾರಣವಾಗಿ ಕ್ರಿ.ಶ 1319ರ  ಸುಮಾರಿಗೆ ಆತನ ಹೆಸರು ಮಹಾಪಸಾಯತ ಪದವಿಯೊಂದಿಗೆ ಉಲ್ಲೇಖಗೊಂಡಿದೆ.[67] ದೇವಗುಂದನಾಡಿನ ಕೊಯೂರಿನ ಮಸಣಗವುಡನಿಗೆ ಬ್ರಹ್ಮಸಮುದ್ರವನ್ನು ಈತನು ದಾನವಿತ್ತಿದ್ದನು. ಈ ಶಾಸನ ದೊರೆತಿರುವ ಸ್ಥಳ ತುಮಕೂರು. ದೇವಗುಂದನಾಡಿಗೂ ಕಾಮಯ್ಯದಂಡನಾಯಕನಿಗೂ ಇರುವ ಸಂಬಂಧವಾದರೂ ಏನು? ಎಂದು ಯೋಚಿಸುವಾಗ ಮಾಗಡಿ ಪ್ರಾಂತ್ಯದಿಂದ ಇವನ ಉಲ್ಲೇಖವು ತುಮಕೂರು ಪ್ರಾಂತ್ಯದೊಂದಿಗೆ

ತಳುಕು ಹಾಕಿಕೊಂಡಿರುವುದನ್ನು ನಾವು ಗಮನಿಸಬೇಕಾಗಿದೆ. ಇದೇ ಕಾಲದ ಮತ್ತೊಂದು ಶಾಸನವು[68] ಮಹಾಪಸಾಯತನಾಗಿದ್ದ ಕಾಮಯ್ಯದಂಡನಾಯಕನು ದೇವಗುಂದ ನಾಡಿನ ಕೊಯರಾದ ಹೊತ್ತಜೀಗೆರೆಯ ಮಸಣಗವುಡನ ಮಗ ಚಿಕ್ಕಣ್ಣನಿಗೆ ಆ ನಾಡಿನಲ್ಲಿ ಬರಿಕಕಲ್ಲನ್ನು ದಾನವಿತ್ತನು. ಈ ಬರಿಕಕಲ್ಲು ಈಗಿನ ತುಮಕೂರು ಸಮೀಪವಿರುವ ಬರಕ ಗ್ರಾಮವೇ ಆಗಿದೆ. ದೊಡ್ಡಬಳ್ಳಾಪುರದ ಕ್ರಿ.ಶ 1328ರ ಶಾಸನವು[69] ಕಾಮಯ್ಯದಂಡನಾಯಕನು ಮಹಾಪ್ರಧಾನ ಪದವಿಯಲ್ಲಿದ್ದನು ಎಂದು ತಿಳಿಸುತ್ತದೆ. ಈ ವೇಳೆಗೆ ಅರಸನಾದ ಬಲ್ಲಾಳನು ವುಂಣಾಮಲೆ ಪಟ್ಟಣದಿಂದ ರಾಜ್ಯವಾಳುತ್ತಿದ್ದನು. ಇದೇ ಸಂದರ್ಭದಲ್ಲಿ ಕಾಮಯದಂಡನಾಯಕನು ಎಲಹಂಕನಾಡಿನ ಗೌಡನೋರ್ವನಿಗೆ ಕುರುವಗೆರೆಯಲ್ಲಿ ಕೆಲವು ಭೂಮಿಯನ್ನು ದಾನವಿತ್ತನು. ಈ ಶಾಸನದನ್ವಯ ಅರಸನಾದ ಬಲ್ಲಾಳನು ವುಂಣಾಮಲೆ ಪಟ್ಟಣದಿಂದ ರಾಜ್ಯವಾಳುತ್ತಿದ್ದನೆಂದಿರುವುದು ಸರಿಯಷ್ಟೆ. ಆದರೆ ಇದಕ್ಕೂ ಹಿಂದಿನ ಶಾಸನಗಳಲ್ಲಿ ವೀರಬಲ್ಲಾಳನು ಕೇವಲ ಪೃಥ್ವಿರಾಜ್ಯಂಗೆಯ್ಯುತ್ತಿರೆ ಎಂದಿರುವುದನ್ನು ಗಮನಿಸಿದಾಗ ಎಲ್ಲಿಂದ ಆಳುತ್ತಿದ್ದ ಎಂಬುದು ಸ್ಪಷ್ಟವಾಗಿ ಉಲ್ಲೇಖಗೊಂಡಿಲ್ಲ. ಯಾವ ಕಾಲದಿಂದ ಅರಸನು ಉಣ್ಣಾಮಲೆ ಪಟ್ಟಣದಿಂದ ಆಳುತ್ತಿದ್ದನು? ಅವನ ಅನುಪಸ್ಥಿತಿಯಲ್ಲಿ ಕಾಮಯನು ಈ ಪ್ರದೇಶದ ಆಡಳಿತ ನಿರ್ವಹಣೆ ಮಾಡುತ್ತಿದ್ದಿರಬೇಕು ಎಂದೆನಿಸುತ್ತದೆ.

ಹಂತಹಂತವಾಗಿ ಕಾಮಯ್ಯದಂಡನಾಯಕನು ಅಧಿಕಾರದಲ್ಲಿ ಮುಂದುವರೆದು ಹೊಯ್ಸಳ ಸೇನೆಯನ್ನು ಪ್ರಬಲಗೊಳಿಸಿದನು ಎಂದು ತಿಳಿಯಲು ಅವಕಾಶಗಳಿವೆ. ಬಹುಶಃ ಯುದ್ಧಕಾಲದಲ್ಲಿ ಸೇನೆಯೊಂದಿಗೆ ಕಳೆಯುತ್ತಿದ್ದ ಕಾಮಯ್ಯನು ಉಳಿದಂತೆ ಅತ್ಯಂತ ಧಾರ್ಮಿಕನಾಗಿ ತನ್ನನ್ನು ತಾನು ರೂಢಿಸಿಕೊಂಡಿದ್ದನು. ಆತನು ಮಹಾಪ್ರಧಾನ ಪದವಿಯನ್ನು ಹೊಂದಿದ್ದು ಬೆಂಗಳೂರು, ತುಮಕೂರು ಜಿಲ್ಲೆಗಳಲ್ಲಿ ಪ್ರಭಾವಶಾಲಿಯಾಗಿದ್ದನು. ಇದಕ್ಕೆ ಉದಾಹರಣೆಯಾಗಿ ಕೆಲವು ಶಾಸನಗಳನ್ನು ಗಮನಿಸಬಹುದು. ಕ್ರಿ.ಶ 1328ರ ಮತ್ತೊಂದು ಶಾಸನವು[70] ಕಾಮಯ್ಯದಂಡನಾಯಕನು ಮಹಾಪ್ರಧಾನ ಪದವಿಯಲ್ಲಿದ್ದನು ಎಂದು ತಿಳಿಸುತ್ತದೆ. ಈ ದಂಡನಾಯಕನು ಯಲಹಂಕನಾಡಿನ ನಾಗವಾರದ ಗೌಡನೊರ್ವನಿಗೆ ತಿಂಡಲು (ಈಗಿನ ದೇವನಹಳ್ಳಿಯ ತಾಲೂಕಿನ ಕುಂದಾಣ ಹೋಬಳಿಯ ತಿಂಡ್ಲು) ಗ್ರಾಮವನ್ನು ದಾನವಿತ್ತನು.

ಕ್ರಿ.ಶ 1328ರ ಇನ್ನೊಂದು ಶಾಸನವು[71] ಕಾಮಯ್ಯದಂಡನಾಯಕನು ಎಲಹಂಕ ನಾಡಿನ ಸೇನಬೋವ ಅಲ್ಲಾಳಪ್ಪನಿಗೆ ಬಯಿರತ್ತಿಯ ಗದ್ದೆ ಬೆದ್ದಲುಗಳಲ್ಲಿ ಕೆಲವನ್ನು ದಾನವಿತ್ತನು. ಇದು ಈಗಿನ ಬೈರತಿಯೇ ಆಗಿದೆ. ಕ್ರಿ.ಶ 1329ರ ದೊಮ್ಮಲೂರಿನ ಶಾಸನವು[72] ಕಾಮಯದಂಡನಾಯಕನನ್ನು ಉಲ್ಲೇಖಿಸುತ್ತದೆಯಷ್ಟೆ. ಹೆಚ್ಚಿನ ವಿವರಗಳು ಲಭ್ಯವಿಲ್ಲ. ಕ್ರಿ.ಶ 29–4–1331ರ ಶಾಸನದನ್ವಯ[73] "ಮಹಾಪ್ರಧಾನ ಕಾಮೆಯದಂಡನಾಯಕನೂ ಬಲ್ಲಾಳದೇವನೂ ಸುಖದಿಂದ ರಾಜ್ಯವಾಳುತ್ತಿದ್ದನು." ಎಂಬ ಸಾಲು ಕುತೂಹಲ ಮೂಡಿಸುತ್ತದೆ. ಗೊರವನಕಲ್ಲು ಎಂಬ ಊರಿನ ಮೇಲೆ ತುರುಕರು ದಾಳಿ ಮಾಡಿದ

ಸಂದರ್ಭದಲ್ಲಿ 'ಕಟಕತೋಟಿಕಾರ, ಮರೆವೊಕ್ಕರಕಾವ' ಎನಿಸಿದ್ದಂತಹ ಲಿಂಗದಹಳ್ಳಿಯ ಬಲಗೌಡನ ಮಗ ಮಾರಗೌಡನು ಕಳ್ಳರೊಡನೆ ಹೋರಾಡಿ ಅವರ ಕುದುರೆಗಳನ್ನು ವಶಪಡಿಸಿಕೊಂಡನು. ಇವನ ಈ ಹೋರಾಟವನ್ನು ಮೆಚ್ಚಿ ವೀರಬಲ್ಲಾಳನು ಮತ್ತು ಕಾಮಯ್ಯದಂಡನಾಯಕನು ಅರಸಿಕೆರೆಯ ಸಮೀಪದ ಕಲ್ಲಗುಂಡಿ ಮತ್ತು ಆ ಕಲ್ಲಗುಂಡಿಗೆ ಸೇರಿದ ಉಪಗ್ರಾಮಗಳನ್ನು ಮಾರಗವಡನಿಗೆ ನೆತ್ತರುಗೊಡುಗೆಯಾಗಿ ನೀಡಿದರು. ಇದನ್ನು ಅನುಲಕ್ಷಿಸಿ ಈ ಸಂದರ್ಭದಲ್ಲಿ ಮುಸಲ್ಮಾನರ ದಾಳಿಯು ತೀಕ್ಷ್ಣವಾಗಿತ್ತು ಎಂದು ಭಾವಿಸಬಹುದು. ಹೊಯ್ಸಳ ಸೇನೆಯನ್ನು ಕಾಮಯ್ಯನು ಭರಪೂರಿತನಾಗಿಸಿದನು ಎಂದು ತಿಳಿಯಲು ಈ ಮೇಲಿನ ಉದಾಹರಣೆಗಳು ನಮ್ಮನ್ನು ಪ್ರಚೋದಿಸುತ್ತದೆ.

ಹೊಯ್ಸಳ ಸೈನ್ಯವನ್ನು ಸದೃಢವಾಗಿ ಕಟ್ಟಿದ್ದರ ಪರಿಣಾಮವಾಗಿ ಕ್ರಮೇಣ ಕಾಮಯ್ಯ ದಂಡನಾಯಕನು ವೀರಬಲ್ಲಾಳನಿಗೆ ಅತ್ಯಂತ ಹತ್ತಿರವಾದನು. ಅವರಿಬ್ಬರ ಆಡಳಿತವೂ ಅಭಿನ್ನವಾಗುವಷ್ಟು ದಾಖಲೆಗಳು ನಮಗೆ ದೊರಕುತ್ತವೆ. ಕ್ರಿ.ಶ 20–9–1331ರ ಗುಬ್ಬಿಯ ಸಂಪಿಗೆ ಗ್ರಾಮದ ಶಾಸನದ[74] ಪ್ರಕಾರ, ವೀರಬಲ್ಲಾಳನೂ ಕಾಮಯ್ಯ ದಂಡನಾಯಕನೂ ಶ್ರೀವಿರೂಪಾಕ್ಷ ಹೊಸದುರ್ಗದಲ್ಲಿ ಆಳುತ್ತಿದ್ದರು. ಇದನ್ನು ಗಮನಿಸಿದಾಗ ಇವರಿಬ್ಬರ ಅಧಿಕಾರವು ಅಭಿನ್ನವಾಗಿದ್ದವು ಎನಿಸುತ್ತದೆ. ಒಮ್ಮೆ ದಂಡನಾಯಕ ಪದವಿಯು ದೊರೆತಾಗ ಸೇನಾ ನಿರ್ವಹಣೆಯ ಜೊತೆಗೆ ನಾಡನ್ನು ಸರ್ವತೋಮುಖವಾಗಿ ಅಭಿವೃದ್ಧಿಯ ಪಥದತ್ತ ಕರೆದುಕೊಂಡು ಹೋಗುವ ಅವಶ್ಯಕತೆ ಕಾಮೆಯ ದಂಡನಾಯಕನದ್ದಾಗಿತ್ತು. ಆ ಸಂದರ್ಭದಲ್ಲಿ ಅವನ ಆಡಳಿತ ಪ್ರದೇಶಗಳಲ್ಲಿ ನಾನಾದೇಸಿಗಳಾದ ವ್ಯಾಪಾರಿಗಳನ್ನು ಕರೆತಂದು ವ್ಯಾಪಾರ ವಹಿವಾಟುಗಳಲ್ಲಿ ನಾಡನ್ನು ಕಟ್ಟಿದ ವ್ಯಕ್ತಿಯೂ ಈತನಾದನು.

ಜೊತೆಗೆ ತುಮಕೂರು ಜಿಲ್ಲೆಯ ಪರಿಷ್ಕೃತ ಶಾಸನ ಸಂಪುಟವನ್ನು ಸಿದ್ಧಪಡಿಸಿದ ಸಂಪಾದಕರು ಹೇಳಿರುವ ಈ ಮಾತುಗಳನ್ನು ಇದಕ್ಕೆ ಪೂರಕವಾಗಿ ಅವಲೋಕಿಸಬಹುದು. "3ನೆಯ ಬಲ್ಲಾಳನು ದಕ್ಷಿಣದಲ್ಲಿ ಮುಸ್ಲಿಂ ಆಕ್ರಮಣವನ್ನು ಎದುರಿಸಲು ಸಮರ್ಥನಾದನು. ಸಾಮಾನ್ಯವಾಗಿ ವಿಜಯನಗರ ಸಾಮ್ರಾಜ್ಯವೆಂದು ಇತಿಹಾಸದಲ್ಲಿ ಹೆಸರಾದ ಕರ್ನಾಟಕ ಸಾಮ್ರಾಜ್ಯವನ್ನು ಸ್ಥಾಪಿಸುವುದರಲ್ಲಿ ಬಲ್ಲಾಳನು ಪ್ರಮುಖಪಾತ್ರವಹಿಸಿದ್ದನು. ದೋರಸಮುದ್ರವು ಕೈಬಿಟ್ಟು ಹೋದರೂ ತಿರುವಣ್ಣಾಮಲೆಯನ್ನು ತನ್ನ ಮುಖ್ಯಸ್ಥಳವನ್ನಾಗಿ ಮಾಡಿಕೊಂಡು ಅಲ್ಲಿಂದಲೇ ಮುಸಲ್ಮಾನರ ದಾಳಿಯಿಂದಾದ ಹಾನಿಯನ್ನು ತಡೆಗಟ್ಟಲು ಅಗತ್ಯವಿರುವ ಶಕ್ತಿಸಂಪನ್ಮೂಲಗಳನ್ನು ಒಟ್ಟುಗೂಡಿಸುವ ಯತ್ನದಲ್ಲಿ ತೊಡಗಿದನು. ಕ್ರಿ.ಶ. 1317ರಲ್ಲಿ ಅವನು ಅರುಣಸಮುದ್ರ ಅಂದರೆ ಈಗಿನ ತಿರುವಣ್ಣಾಮಲೈಯಲ್ಲಿ ಇದ್ದನು. ಇವನ ಪ್ರೋತ್ಸಾಹ ಸಹಾಯಗಳಿಂದ ಮತ್ತು ಇತರ ಅನೇಕ ಪ್ರಮುಖರ ಬೆಂಬಲದಿಂದ ಸಂಗಮವಂಶವೆಂದು ಕರೆಯಲ್ಪಡುವ 1ನೆಯ ಹರಿಹರನು ವಿಜಯನಗರವೆಂದು ಮುಂದೆ ಕರೆಯಲ್ಪಡುವ ಹಂಪೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸಿದನೆಂದು ಇತಿಹಾಸ ಪ್ರಸಿದ್ಧವಾಗಿದೆ. ಬಲ್ಲಾಳನು ಇದಕ್ಕಾಗಿ ಸಿದ್ಧತೆ ಎಂಬಂತೆ ವಿರೂಪಾಕ್ಷ ಹೊಸಪಟ್ಟಣವೆಂಬ ನಗರವನ್ನು ಕಟ್ಟಿಸಿದನು. ಶ್ರೀವಿರೂಪಾಕ್ಷನನ್ನು

ಅಧಿದೈವವಾಗಿ ಹೊಂದಿದ್ದ ಹಂಪೆಯ ಬಳಿ ಈ ನಗರ ನಿರ್ಮಾಣವಾಯಿತು. [ವೀರಬಲ್ಲಾಳನು ತನ್ನ ಮಗನಿಗೂ ವಿರೂಪಾಕ್ಷ ಎಂಬ ಹೆಸರಿನ್ನಿಟ್ಟಿದ್ದನ್ನು ಇಲ್ಲಿ ನೆನೆಯಬಹುದು.] ಇದೇ ಮುಂದೆ ವಿಜಯನಗರವಾಗಿ ಬೆಳೆಯಿತು. ಇವನು ಕ್ರಿ. ಶ 1331ರಲ್ಲಿ ವಿರೂಪಾಕ್ಷಹೊಸದುರ್ಗವೆಂದು ಕರೆಯಲಾಯಿತು. ಬಲ್ಲಾಳನ ಈ ಪ್ರಯತ್ನಗಳಲ್ಲಿ ಅವನ ಮಂತ್ರಿ ಕಾಮಯ್ಯದಂಡನಾಯಕನು ಅರಸನಿಗೆ ಬೆಂಬಲವಾಗಿ ನಿಂತನು. ಈ ದಂಡನಾಯಕನು ಬಲ್ಲಾಳನ ಜೊತೆಯಲ್ಲಿಯೇ ವಿರೂಪಾಕ್ಷ ಹೊಸದುರ್ಗದಿಂದ ಆಳುತಿದ್ದನು ಎಂದು ಈ ಶಾಸನವು ತಿಳಿಸುತ್ತದೆ. ಇವರಿಬ್ಬರೂ ಕೂಡಿಯೇ ದಾನವೊಂದನ್ನು ಮಾಡಿದುದನ್ನು ಇಲ್ಲಿ ಕಾಣಬಹುದು."

ನಿರಂತರವಾದ ಯುದ್ಧ ಚಟುವಟಿಕೆಗಳಲ್ಲಿ ಹಾಗೂ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡ ಕಾಮಯ್ಯದಂಡನಾಯಕನು ಸುಮಾರು ಕ್ರಿ.ಶ. 1340ರ ಸುಮಾರಿಗೆ ತನ್ನ ಸೇವೆಯಿಂದ ನಿವೃತ್ತನಾದಂತೆ ತೋರುತ್ತದೆ. ಇಲ್ಲಿಂದ ಮುಂದೆ ಇವನ ವಂಶೀಯರೇ ಆಡಳಿತದಲ್ಲಿ ಮುಂದುವರೆದಿದ್ದರೂ ಯಾವುದೇ ಬಗೆಯಲ್ಲಿಯೂ ಕಾಮಯ್ಯನಿಗೆ ಸರಿಸಮನಾಗಿ ಅವರ ವ್ಯಕ್ತಿತ್ವಗಳು ಇಲ್ಲದೇ ಇರುವುದರಿಂದಲೂ ಹಾಗೂ ವೀರಬಲ್ಲಾಳನ ಆಳ್ವಿಕೆಯು ಕೊನೆಗೊಂಡ ಮೇಲೆ ಅವನ ವಂಶೀಯರು ತಮ್ಮ ಸ್ಥಾನಮಾನಗಳನ್ನು ಉಳಿಸಿಕೊಳ್ಳಲು ಕಷ್ಟ ಪಡಬೇಕಾದ ಹಿನ್ನೆಲೆಯಲ್ಲಿಯೂ ಅವನ ವಂಶೀಯರು ನಡೆಸಿದ ಕೈಂಕರ್ಯಗಳನ್ನು ತಿಳಿಯಬೇಕಾಗಿದೆ. ತಂದೆಗೆ ಸರಿಸಮನಾದ ಹುದ್ದೆಗಳನ್ನು ಬಹುಶಃ ಅವನ ನಂತರ ನೀಡಿದರೂ ಅವರು ಅದನ್ನು ಅವನಷ್ಟು ತತ್ಪರತೆಯಿಂದ ನಡೆಸಿಕೊಂಡಂತೆ ತೋರುವುದಿಲ್ಲ.

ಕಾಮಯ್ಯದಂಡನಾಯಕನು ಮೊದಲು ದೇವಗುಂದನಾಡಿನ ಕೆಲವು ಭಾಗಗಳ ಆಡಳಿತದ ಚುಕ್ಕಾಣಿಯನ್ನು ಹಿಡಿದಿದ್ದನು; ತದನಂತರ ಇಂದಿನ ಬೆಂಗಳೂರು, ತುಮಕೂರು ಜಿಲ್ಲೆಗಳ ಅಧಿಕಾರವನ್ನು ಹೊಂದಿದ್ದನು. ಅತ್ಯಂತ ಮುಖ್ಯವಾಗಿ ಹೇಳುವುದಾದರೆ ಯಲಹಂಕನಾಡಿನ ಸುಪರ್ದಿಯು ಅವನ ಕೈಸೇರಿತು. ಕ್ರಿ.ಶ 1315ರಲ್ಲಿ ದಂಡನಾಯಕ ಪದವಿಯೊಂದಿಗೆ ಕಾಣಿಸಿಕೊಳ್ಳುತ್ತಿದ್ದ ಅವನ ಹೆಸರು 1319ರಲ್ಲಿ ಮಹಾಪಸಾಯತ, 1328ರಲ್ಲಿ ಮಹಾಪ್ರಧಾನ ಪದವಿಗಳೊಡನೆ ಉಲ್ಲೇಖಗೊಂಡಿರುವುದು ಆಡಳಿತದಲ್ಲಿ ಆತನು ಹಂತಹಂತವಾಗಿ ಉತ್ತುಂಗಕ್ಕೇರಿದ್ದ ಪರಿಯನ್ನು ಸೂಕ್ಷ್ಮವಾಗಿ ತಿಳಿಸುತ್ತದೆ. 1331ರ ವೇಳೆಗೆ ಅರಸ 3ನೆಯ ಬಲ್ಲಾಳನ ಜೊತೆಜೊತೆಗೆ ಸರಿಮಿಗಿಲಾಗಿ ಹೆಗಲೆಣೆಯಾಗಿ ಆಡಳಿತಕ್ಕೆ ಇಂಬು ನೀಡುತ್ತಿದ್ದುದು ಗೋಚರವಾಗುತ್ತದೆ.

3ನೆಯ ಬಲ್ಲಾಳನು ಉಣ್ಣಾಮಲೆ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ನಡೆಯುತ್ತದ್ದ ರಾಜಕೀಯ ಮೇಲಾಟಗಳಲ್ಲಿ ರಾಜಕೀಯ ಸ್ಥಿತ್ಯಂತರಗಳ ಕಾದಾಟಗಳಲ್ಲಿ ನಿರತನಾಗಿದ್ದ ಸಂದರ್ಭದಲ್ಲಿ ಕನ್ನಡ ನಾಡಿನ ಬಯಲುಸೀಮೆಯ ಪ್ರದೇಶಗಳಾದ ದೇವಗುಂದನಾಡು ಮತ್ತು ಯಲಹಂಕನಾಡುಗಳಲ್ಲಿ ಯುದ್ಧಾದಿ ಅಶಾಂತ ಪರಿಸ್ಥಿತಿಗಳು, ಅರಾಜಕತೆಗಳು, ಸಾಮಾನ್ಯ ವಿಪ್ಲವಗಳು ಸಹ ಮುನ್ನೆಲೆಗೆ ಬರದಂತೆ ದಕ್ಷವೂ ಯೋಗ್ಯವೂ ಆದ ಆಡಳಿತವನ್ನು ನಡೆಸಿದ್ದನು ಎಂಬುದು ದೃಢವಾಗುತ್ತದೆ. ಕಾಮಯ್ಯದಂಡನಾಯಕನು

ನೀಡಿರುವ ದಾನಗಳಲ್ಲಿ ಬಹುಪಾಲು ದಾನಗಳು ಸೇನಬೋವರಿಗೆ ಮತ್ತು ಗೌಡರಿಗೆ ಸಂದಾಯವಾಗಿವೆ. ಈ ಅಂಶವನ್ನು ಮತ್ತೂ ಸೂಕ್ಷ್ಮವಾಗಿ ಗ್ರಹಿಸಿದರೆ ಪ್ರಾಯಶಃ ಆಡಳಿತದ ಕೊನೆಯ ಶ್ರೇಣಿಯಲ್ಲಿರುವ ಸೇನಬೋವ ಮತ್ತು ಊರಗೌಡರು ಸ್ಥಳೀಯವಾದ ಆಡಳಿತದಲ್ಲಿ ಪ್ರಮುಖರು. ಹಾಗಾಗಿ ಈ ಇರ್ವರಿಗೂ ಅವಶ್ಯಕತೆಗನುಗುಣವಾಗಿ ದಾನಗಳನ್ನು ಆ ಮೂಲಕ ಸೌಲಭ್ಯ ಸವಲತ್ತುಗಳನ್ನು ನೀಡುತ್ತಲೇ ಸ್ಥಳೀಯ ಅಧಿಕಾರಿಗಳ ಬೆಂಬಲ ಮತ್ತು ಬಲಗಳನ್ನು ಗಟ್ಟಿಗೊಳಿಸಿಕೊಂಡು ಅವರೆಲ್ಲರ ನಿಷ್ಠೆಯನ್ನು ತನ್ನತ್ತ ತಿರುಗಿಸಿಕೊಂಡು ಸೌಹಾರ್ದಯುತವಾದ ಒಂದು ರಾಜಕೀಯ ಪರಿಸ್ಥಿತಿಯನ್ನು ಈ ಜಾಣ ದಂಡನಾಯಕನು ಏರ್ಪಡಿಸಿಕೊಂಡಿದ್ದನು.

### 3.8 ಕಬ್ಬಹುನಾಡಾಳ್ವರು :

ಈಗಾಗಲೇ ಅನೇಕ ವಿದ್ವಾಂಸರು ಗುರುತಿಸಿರುವಂತೆ ಶ್ರವಣಬೆಳಗೊಳದ ಪ್ರಾಚೀನ ಹೆಸರು ಕಟವಪ್ರ. ಈ ಕಟವಪ್ರವು ಈಗಿನ ಶ್ರವಣಬೆಳಗೊಳದ ಚಿಕ್ಕಬೆಟ್ಟವಾಗಿದೆ. ಇಲ್ಲಿನ ಶಾಸನಗಳೇನಕವು ಚಿಕ್ಕಬೆಟ್ಟವನ್ನು ಕಟವಪ್ರಶೈಲ, ಕಟವಪ್ರಗಿರಾನಿಹ, ಕಟವಪ್ರಶೈಲಶಿಖರ, ಕಟವಪ್ರ ನಲ್ಗಿರಿ, ಕಟ್ವಪ್ಪಿನಾವೆಟ್ಟ, ಮುಂತಾಗಿ ಕರೆದಿವೆ. ಅಲ್ಲದೆ ಕೆಲವು ಶಾಸನಗಳು ಕಟ್ವಪ್ಪು, ಕಟ್ಬಪ್ಪು, ಕಬ್ಬಪ್ಪು ಎಂದೂ ಸಹ ಕರೆದಿವೆ. ಕಟ್ಬಪ್ಪು ಎಂಬುದು ಸಂಸ್ಕೃತದ ಕಟವಪ್ರದ ತದ್ಭವವಾಗಿದೆ. ಗಂಗರು, ಬಾಣರು ಮತ್ತು ಹೊಯ್ಸಳರ ಆಳ್ವಿಕೆಗೆ ಈ ಪ್ರದೇಶವು ಒಳಪಟ್ಟು ಕಪ್ಪುನಾಡು, ಕಬ್ಬುನಾಡು, ಕಟ್ಬಪ್ಪುನಾಡು ಸಾಸಿರ, ಕಬ್ಬಹುನಾಡು ಸಾಸಿರ ಎಂದು ಮುಂತಾಗಿ ಕರೆಯಲ್ಪಟ್ಟಿತ್ತು. ಇನ್ನು ಸ್ಪಷ್ಟವಾಗಿ ಹೇಳುವುವದಾದರೆ ಕಟ್ವಪ್ಪುನಾಡೇ ಕಬ್ಬಹುನಾಡು ಆಗಿದೆ.

ಕೃಷ್ಣರಾಜಪೇಟೆ ಪರಿಸರದ ಗ್ರಾಮಗಳು ಈ ಕಬ್ಬಾಹುನಾಡಿನಲ್ಲಿ ಅಂತರ್ಗತವಾಗಿದ್ದವು. ಈ ಕಬ್ಬಹುನಾಡನ್ನು ಮುಗಿಲಕುಲದ ಗರುಡರೆನಿಸಿದ್ದ ಗಂಡನಾರಾಯಣಸೆಟ್ಟಿ ಮತ್ತು ಅವನ ವಂಶಜರು ಆಳುತ್ತಿದ್ದರಿಂದ ಇವರನ್ನು ಕಬ್ಬಹುನಾಡಾಳ್ವರು ಎಂಬ ಬಿರುದಿನಿಂದ ಸಂಬೋಧಿಸಲಾಗಿದೆ. ಗರುಡರಾಗಿದ್ದ ಇವರು ಸಾಮಂತರಾಗಿ, ಒಂದು ಪ್ರದೇಶದ ಆಡಳಿತಾಧಿಕಾರಿಗಳು ಆಗಿದ್ದರು. ಮುಗಿಲ ಕುಲದ ಗರುಡರೂ ಸಾಮಂತರೂ ಆಗಿರುವವರ ವಿವರವಾದ ಚಿತ್ರಣವನ್ನು ಗಮನಿಸಿದರೆ, ಹೊಯ್ಸಳ ರಾಜ್ಯಾಡಳಿತವು ತನ್ನ ಶ್ರೇಣಿಗೆ ಸಮಾಜದಿಂದ ವ್ಯಕ್ತಿಗಳನ್ನು ಸೇರಿಸಿಕೊಳ್ಳಲು ಅವಕಾಶ ಮಾಡಿದ್ದಿತು. ಅವರ ವಿಸ್ತರಣ ನೀತಿಯಲ್ಲಿ ಗರುಡರು ಅತ್ಯಂತ ಮುಖ್ಯವಾದ ಆಯುಧವಾದರು ಎಂಬುದು ಸೂಕ್ಷ್ಮ ಅಧ್ಯಯನದಿಂದ ವೇದ್ಯವಾಗುತ್ತದೆ.

**ಕಂನಡಿಗಮಂನೆಯರು** : ಕಂನಡಿಗಮಂನೆಯ ಎಂಬುದೊಂದು ಪದವಿ ಎಂದು ಅರ್ಥೈಸಬಹುದಾದರೂ ಹಿಂದಿನ ಶಾಸನದಲ್ಲಿ[75] ಬಲ್ಲೆಯನಾಯಕನು ಕಂನಡಿಗಮನೆಯಾಳ್ತನಂ ಗೆಯ್ವರಿಗೆ ಸೇನಾನಾಯಕನೆಂದಿರುವಾಗ ಅಂತಹ ಅಧಿಕಾರಿಗಳಿಗೆ ಈತ ಸೇನಾನಾಯಕ ಎಂದು ಹೇಳಬಹುದೇ?

ಕನ್ನಡಿಗ ಯೋಧಮುಖ್ಯರ ಸೇನಾನಾಯಕನೆ? ಎಂದು ಹಿರಿಯ ವಿದ್ವಾಂಸರಾದ ಬಾ.ರಾ. ಗೋಪಾಲ್‌ರವರು ಸಂಶಯ ವ್ಯಕ್ತಪಡಿಸಿದ್ದಾರೆ. ಈ ಸಂಶಯವನ್ನು ಕೊಂಚವಾದರೂ ನನ್ನ ಮಟ್ಟಿಗೆ ಪರಿಹರಿಸುವ ಒಂದು ಕಿರುಪ್ರಯತ್ನವನ್ನು ವಿನಯಪೂರ್ವಕವಾಗಿ ಪ್ರಸ್ತುತ ಪ್ರಬಂಧದಲ್ಲಿ ಮಾಡಿದ್ದೇನೆ. ಈ ಭಾಷಿಕ ಪರಿಭಾಷೆಯನ್ನು ಮತ್ತೂ ಸೂಕ್ಷ್ಮವಾಗಿ ಅವಲೋಕಿಸಿದಾಗ ಕನ್ನಡಿಗ ಯೋಧರು ಎಂಬ ಮಾತು ತನ್ನ ಒಡಲಲ್ಲಿ ಬೇರೆ ಭಾಷಿಕ ಸಮುದಾಯದ ಯೋಧರು ಇದ್ದರು ಎಂಬುದನ್ನು ಧ್ವನಿಪೂರ್ಣಗೊಳಿಸುತ್ತದೆ ಅಲ್ಲವೇ ? ! ಆದ್ದರಿಂದ ಇದನ್ನು ಕನ್ನಡಿಗ ಯೋಧರು ಎಂದು ಸೀಮಿತ ಪರಿಧಿಯ ವಿವೇಚನೆಯಿಂದಾಚೆ ಹೋಗಿ ಯೋಚಿಸಬಹುದು ! ಮಂನೆಯ ಎಂಬುದು ಮನ್ನೆಯ ಎಂಬ ರೂಪದಂತೆಯೂ ಭಾಸವಾಗುತ್ತದೆ. ಮಂನೆಯ ಅಥವಾ ಮನ್ನೆಯ ಎಂಬ ಪದಕ್ಕೆ ಗೌರವ, ಮಾನ್ಯ, ಮನ್ನಣೆಗೆ ಯೋಗ್ಯನಾದವನು, ಮಾಂಡಲಿಕ, ನಾಯಕ, ದಾನವಾಗಿ ಕೊಡುವ ಭೂಮಿ, ನಾಡಿನ ಒಂದು ಭಾಗ ಎಂದು ಅರ್ಥಗಳಿವೆ.

ಹೇಳಿಕೇಳಿ ಈ ಮುಗಿಲ ಕುಲದ ಗರುಡರು ಸಾಮಂತರು; ಪ್ರಾಯಶಃ ಮನ್ನೆಯರಾದವರು ಈ ಸಾಮಂತರ ಅಧೀನರಾಗಿದ್ದು ಆ ಮನ್ನೆಯರನ್ನು ಒಳಗೊಂಡ ಸೈನ್ಯದ ತುಕಡಿಗೆ ಈ ಸಾಮಂತರು ನಾಯಕರಾಗಿದ್ದುದನ್ನು ಈ ಪದ ಸೂಚಿಸುತ್ತಿದೆಯೇ? ಇದನ್ನು ಒಪ್ಪಿಕೊಂಡ ಪಕ್ಷದಲ್ಲಿ 'ಕಂನಡಿಗ' ಎಂಬ ಪದಕ್ಕೆ ಏನೆಂದು ಅರ್ಥ ಯೋಚಿಸಬಹುದು? ಆದ್ದರಿಂದ ಈ ಪರಿಭಾಷೆಯನ್ನು ಕೇವಲ ರಾಜಕೀಯವಾಗಿ ನೋಡದೆ ಸ್ವಲ್ಪ ಸಾಮಾಜಿಕವಾಗಿ ನೋಡಬಹುದು. ಜನಾಂಗಿಕವಾಗಿ ಹೊಯ್ಸಳರು ಮೂಲತಃ ಮಲೆನಾಡಿನವರು. ಅವರ ಮನೆತನದ ಉತ್ತರೋತ್ತರ ಪರಂಪರೆಯನ್ನು ಹೊಯ್ಸಳ ಕರ್ನಾಟಕ ಮನೆತನದವರು ಎಂದು ಕರೆಯುವುದು ರೂಢಿಯಲ್ಲಿದೆ. ಹಾಗಾಗಿ ಇಲ್ಲಿ ಕಂನಡಿಗ ಎಂದರೆ ಹೊಯ್ಸಳ ಅರಸರನ್ನೇ ಈ ಪದ ಸೂಚಿಸುತ್ತಿದ್ದಿರಬೇಕು. "ಕಂನಡಿಗ ಮನೆಯಾಳ್ತನಗೆಯ್ವರ ಅಥವಾ ಮಂನೆಯಾಳ್ತನಗೆಯ್ವರ ಸೇನಾನಾಯಕ" ಎಂಬ ವಾಕ್ಯವೃಂದಕ್ಕೆ 'ಹೊಯ್ಸಳ ಅರಸರ ಅಧೀನದಲ್ಲಿಯೇ ಇದ್ದ ಮನ್ನೆಯರ ಪಡೆಯೊಂದರ ದಳಪತಿಗಳಿವರು' ಎಂಬುದಾಗಿ ಅರ್ಥ ಹೇಳಲು ಸಾಧ್ಯವಿದೆ. ಹಾಗಾಗಿ ಈ ಕನ್ನಡಿಗಮನ್ನೆಯರ ಅಧಿಪತಿಗಳಾದ 'ಮುಗಿಲಕುಲದ ಗರುಡ'ರನ್ನು ಕರ್ನಾಟಕದ ವಿಶಿಷ್ಟ ಯೋಧವರ್ಗ ಎಂದು ಸಮರ್ಥಿಸಬಹುದಾಗಿದೆ.

ಈ ಮುಗಿಲಕುಲದ ಗರುಡರ ವಂಶಾವಳಿಯಲ್ಲಿ ಸ್ವಾರಸ್ಯವಾದ ಅಂಶವೇನೆಂದರೆ ವಣಿಕ ಜಾತಿಯನ್ನು ಸೂಚಿಸುವ ಸೆಟ್ಟಿ ಎಂಬ ಪ್ರತ್ಯಯವನ್ನು ಕೈಬಿಟ್ಟು ಅದರ ಸ್ಥಾನದಲ್ಲಿ ಸೈನಿಕ ಸಂಬಂಧವಾದ ನಾಯಕ ಎಂಬ ಪ್ರತ್ಯಯವು ಸ್ಪಷ್ಟವಾಗಿ ಕಾಣಿಸಿಕೊಂಡಿರುವುದು. ಬಹುಶಃ ಒಂದು ವೃತ್ತಿಯಿಂದ ಸಂಪೂರ್ಣವಾಗಿ ಮತ್ತೊಂದು ವೃತ್ತಿಗೆ ಬದಲಾಯಿಸಿಕೊಂಡದ್ದು ಅಥವಾ ಒಂದರಿಂದ ಇನ್ನೊಂದಕ್ಕೆ ಬಡ್ತಿ ಇದಕ್ಕೆ ಕಾರಣವಾಗಿರಬಹುದು.(ಇವರ ಎಲ್ಲ ಶಾಸನಗಳಲ್ಲಿಯೂ ಇವರು ಕಬ್ಬಹುನಾಡನ್ನು ಆಳುವವರು

ಆಗಿದ್ದು ಹಲವು ದಾನದತ್ತಿ ವಿಚಾರಗಳೇ ತುಂಬಿವೆ. ಆದ್ದರಿಂದ ಇಲ್ಲಿ ಅವುಗಳನ್ನು ವಿವರಿಸದೆ ಮುಂದಿನ ಅಧ್ಯಾಯಗಳಲ್ಲಿ ಪ್ರಸ್ತಾಪಿಸುತ್ತೇನೆ ಮತ್ತು ಪ್ರಧಾನವಾಗಿ ಇವರು ಗರುಡರಾದ ಬಗೆಯನ್ನು ವಿಶ್ಲೇಷಿಸುತ್ತೇನೆ).

### 3.9 ಮತ್ತಿತರ ಕಿರುಮಂಡಳೇಶ್ವರರು

**ಸಾಮಂತ ಸೋಮ** : ಇವನು ವಿಷ್ಣುವರ್ಧನನ ಸಾಮಂತನಾಗಿಯೂ ಇದ್ದ ಅಧಿಕಾರಿ. ಜೊತೆಗೆ ಈತನು ಕಲುಕಣಿನಾಡನ್ನು ಆಳುತ್ತಿದ್ದಂತಹ ಮಹಾಮಂಡಳೇಶ್ವರ. ಕರಿಯಯ್ಯಣ್ಣ, ನಾಗ, ಸುಗ್ಗಗವುಣ್ಡರು ಇವನ ಪೂರ್ವಿಕರಾಗಿದ್ದರು. ಮಾರದೇವನು ಇವನ ನಂತರದ ತಲೆಮಾರಿನವನು. ಸಾಮಾನ್ಯ ನಿಯಮದಂತೆ ತಲೆಮಾರಿಗೆ 25 ವರ್ಷಗಳ ಅಂತರವನ್ನು ಇಟ್ಟುಕೊಂಡರೆ ಕರಿಯಯ್ಯಣನ ಕಾಲವನ್ನು 1065–75ರ ಸುಮಾರಿಗೆ ಒಯ್ಯಬಹುದು. ಆಗ ವಿನಯಾದಿತ್ಯನು ಸಾಮಂತನಾಗಿ ಆಳುತ್ತಿದ್ದ ಕಾಲ. ಚೋಳರ ಮೇಲೆ ದಂಡೆತ್ತಿ ಹೋಗಿದ್ದ ಈ ವೀರಗಂಗ ಪೆರ್ಮಾಡಿ ಯಾರೆಂಬುದು ಸ್ಪಷ್ಟವಾಗಿಲ್ಲ. ಇದು ಕಲ್ಯಾಣದ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಸೋಮೇಶ್ವರನ ಕಾಲ .

ಸೋಮನು ಆಹವಭೀಮಂ, ಜಿನಪಾದಕಮಳಭೃಂಗಂ ಜಿನನಾಥಸ್ನಪನಜಲಪವಿತ್ರತಗಾತ್ರಂ ಎಂದು ಕೀರ್ತಿಸಲ್ಪಟ್ಟಿದ್ದಾನೆ. ಸೋಮನ ಮಡದಿ ಮಾರವ್ವೆ. ಸೋಮನು ವಿಬುಧಪ್ರಸನ್ನ, ಆಹಾರಾಭಯಭೈಶಜ್ಯ ಶಾಸ್ತ್ರ ದಾನವಿನೋದ, ಜಿನಗನ್ಧೋಧಕ ಪವಿತ್ರೀಕೃತೋತ್ತಮಾಂಗ, ಜಿನಸಮಯಯ ಸಮುದ್ಧರಣ, ತೊಡರ್ದರಡೊಂಕಿ, ತೊಡರೆ ಬಲ್ಗಂಡ, ಎಂದು ಮುಂತಾಗಿ ಪ್ರಸಿದ್ದನಾಗಿದ್ದನು. ಇವನು ಭಾನುಕೀರ್ತಿಸಿದ್ದಾಂತ ದೇವನ ಶಿಷ್ಯನಾಗಿದ್ದನು. "ಕುಡಲೂರ ಕಮಳ ಮಾತ್ತಾಂಡ ತೊಡರ್ದರಡೊಂಕಿ ಕಲ್ಕಣಿನಾಡಾಳ್ವ ಕೂಡಿಕಾಡುವ ನಾಯಕರಗಂಡ" ಎಂದು ಹೊಗಳಿದೆ. ಇವನ ಮಗ ಮಾರದೇವ ಮತ್ತು ಸೊಸೆ ಮಹಾದೇವಿಯರು ಸ್ವರ್ಗಕ್ಕೆ ಹೋದರೆಂಬ ವಿಚಾರ ಉಲ್ಲೇಖಿತವಾಗಿದೆ[76]

**ಮಾಚ** : ಇವನು ಈ ಸಾಮಂತ ಸೋಮನ ವಂಶದವನೆಂದು ತೋರುತ್ತದೆ. ಏಕೆಂದರೆ ಈ ವಂಶದವರಿಗಿರುವ ಅನೇಕ ಬಿರುದುಗಳು ಇವನಿಗೂ ಸಂದಾಯವಾಗಿವೆ. ಕಲುಕಣಿನಾಡನ್ನು ಇವನು ಆಳುತ್ತಿದ್ದನು. ಈತನು ಸಹ ಕುಡಲೂರಕಮಳಮಾತ್ತಾಂಡ ತೊಡರ್ದರಡೊಂಕಿ ಕಲ್ಕಣಿನಾಡಾಳ್ವ ಕೂಡಿಕಾಡುವನಾಯಕರಗಂಡ, ಪರನಾರಿಪುತ್ರ, ಎಂದು ಕೀರ್ತಿ ಪಡೆದಿದ್ದಾನೆ.

**ವೀರಯ್ಯದಂಡನಾಯಕ** : ಇವನು 2ನೆಯ ವೀರಬಲ್ಲಾಳನ ಅಧಿಕಾರಿ . ಇವನ ತಂದೆ ರುದ್ರದೇವ; ತಾಯಿ ಗಂಗೆ; ತಮ್ಮ ಅಚ್ಯುತ. ಇವನದು ಭಾರದ್ವಾಜಗೋತ್ರ. ರುದ್ರದೇವನು ಸಮರಮುಖಲಸತ್ ಎಂದೆನಿಸಿಕೊಂಡಿದ್ದಾನೆ. ಅಚ್ಯುತನು ಸುರಮಂತ್ರಿಭ್ರಾಜಂ ಎನಿಸಿದ್ದನು. ವೀರಯ್ಯದಂಡನಾಯಕನು ಸರ್ವಾಧಿಕಾರಿ, ಮಹಾಪ್ರಧಾನ , ಶ್ರೀಕರಣಾಧಿಕಾರಿ ಸರ್ವಾಧ್ಯಕ್ಷ ಪದವಿಗಳನ್ನು ಅಲಂಕರಿಸಿದ್ದನು. ರುದ್ರನ ಮಡದಿ ಗಂಗಾದೇವಿ. ಈಕೆ ತನ್ನ ಪುತ್ರನಾದ ವೀರಯದಂಡನಾಯಕನನ್ನು ಹೆತ್ತ ಬಗೆಯನ್ನು ಅತಿಶಯವಾಗಿ ಶಾಸನವು ವರ್ಣಿಸಿದೆ. ವೀರಯ್ಯದಂಡನಾಯಕನು ಒಬ್ಬ ಅಧಿಕಾರಿಯಾಗಿ

ಎಷ್ಟು ವಿಶಿಷ್ಟ ಎಂಬುದಕ್ಕೆ ಈ ಶಾಸನಪದ್ಯ ಸಾಕ್ಷ್ಯ ಒದಗಿಸುತ್ತದೆ. ವೀರಯ್ಯದಂಡನಾಯಕನ ತನ್ನ ಅರಸರ ಮೇಲೆ ಪ್ರೀತಿಗಾಗಿ ಅವರ ರಾಜ್ಯಾಭ್ಯುದಯ ಉಂಟಾಗಲಿ ಎಂದು ಹಾರೈಸಿ ತಾನೆ ಮುಂದೆ ನಿಂತು ಕಾಡುಕಡಿಸಿ, ವೀರಬಲ್ಲಾಳಪುರವೆಂಬ ಊರನ್ನು ನಿರ್ಮಿಸಿದನು. ಆ ಊರಿಗೆ ತಾನೆ ಮೊದಲು 4 ಗದ್ಯಾಣಗಳನ್ನು 32 ಬ್ರಾಹ್ಮಣರಿಗೆ ಸರ್ವನಮಸ್ಯವಾಗಿ ದಾನವಿತ್ತನು. ಜೊತೆಗೆ ವೀರಸಮುದ್ರ, ರುದ್ರಸಮುದ್ರ, ಗಂಗಸಮುದ್ರ, ಅಚ್ಯುತಸಮುದ್ರಗಳೆಂಬ 5 ಕೆರೆಗಳನ್ನು ಕಟ್ಟಿಸಿದನು. ಕಲ್ಲಿನಲ್ಲಿ ದೇವಾಲಯವನ್ನು ನಿರ್ಮಿಸಿ, ಅಲ್ಲಿ ಶ್ರೀ ವೀರನಾರಯಣದೇವರು ಮತ್ತು ಅಚ್ಯುತದೇವರನ್ನು ಪ್ರತಿಷ್ಠಾಪಿಸಿದನು. ದೇವರ ವಿವಿಧ ಸೇವೆಗಳಿಗೆಂದು ಮೈಸೆನಾಡಿನ ಮುದುಗೆರೆಯನ್ನು ಅಗ್ರಹಾರವನ್ನಾಗಿ ಮಾಡಿ ಅದನ್ನು ದತ್ತಿಯಾಗಿ ನೀಡಿದ್ದನು.[77]

**ದೇವರಾಜ ದಂಡನಾಯಕ:** 2ನೆಯ ದೇವರಾಜನು "ಸಮಸ್ತರಾಜ್ಯ ಭರನಿರೂಪಿತ ಮಹಾಮಾತ್ಯ ಪದವೀ ಪ್ರಖ್ಯಾತಂ ಶಕ್ತಿತ್ರಯ ಸಮನ್ವಿತಂ ಶ್ರೀ ವೀರ ವಿಷ್ಣುವರ್ಧನದೇವ ಸಪ್ತಾಂಗ ಲಕ್ಷ್ಮಿ ರಕ್ಷಣಾಂಗರಕ್ಷಕ ಸತ್ಯಶೌಚಸ್ವಾಮಿ ಹಿತಾದಿ ಸದ್ಗುಣಸಿಕ್ಷಕಂ ಚತುರ್ವೇದ ಮಹಾದಾನ ನಿರತಂ ಶ್ರೀಮದಭಿನವ ಭರತನಶ್ರೀ ವೀರವಿಷ್ಣುವರ್ಧನದೇವ ಭುಜವಿಜಯ ಮಂಡಿತ ಮಾನವಾಕಾರಚಕ್ರಂ ಸ್ವಾಮಿಸಮಾದೇಶ ಸಾಧಿತ ಸಕಳದಕ್ಚಕ್ರಕೌಷಿಕ ಕುಳಾಂಬರ ದಿವಾಕರಂ ಸಮ್ಯಕ್ತ ರತ್ನಾಕರ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮನ್ಮಹಾ ಪ್ರಧಾನಂ" ಎಂದು ಕೀರ್ತಿತನಾಗಿದ್ದಾನೆ. **ಇವನು** ವಿಷ್ಣುವರ್ಧನನ ಮಹಾಪ್ರಧಾನನಾಗಿದ್ದನು. ದೊರೆಯು ಆತನಿಗೆ ತಂತ್ರವರ್ಗಡೆತನವನ್ನು ನೀಡಿ ಗೌರವಿಸಿದ್ದನು. [78]

**ರೇಚಿಮಯ್ಯ ದಂಡನಾಯಕ :** ಇವನು ರೇಚರಸ ಎಂತಲೂ ಉಲ್ಲೇಖಿತನಾಗಿದ್ದಾನೆ. ವಸುಧೈಕಭಾಂಧವ ಎನಿಸಿದ್ದ ರೇಚಿಮಯ್ಯದಂಡನಾಯಕನು ತನ್ನ ಮಡದಿ ಗೌರಾದೇವಿಯರೂ ಸೇರಿ ತಮ್ಮ ನೋಂಪಿಯ ಉದ್ಯಾಪನೆ ನಿಮಿತ್ತವಾಗಿ ಶ್ರೀ ಮೂಲಸಂಘ ದೇಶಿಯಗಣ ಪುಸ್ತಕಗಚ್ಚದ ಕೊಂಡಕುಂದಾನ್ವಯದ ಕೊಲ್ಲಾಪುರದ ಮಾಘಣಂದಿ ಸಿದ್ಧಾಂತದೇವರ ಶಿಷ್ಯರಾದ ಶುಭಚಂದ್ರತ್ರೈವಿದ್ಯದೇವರ ಶಿಷ್ಯರಾದ ಶ್ರೀ ಸಾಗರಣಂದಿ ಸಿದ್ಧಾಂತದೇವರು ವ್ರತವಿಶೇಷದಿಂದಿರೆ ಅವರಿಗೆ ಸಹಸ್ರಕೂಟಜಿನಾಲಯವನ್ನು ಪ್ರತಿಷ್ಠೆಯನ್ನು ಮಾಡಿಸಿದರು ಅದನ್ನು ಅವರಿಗೆ ದಾನವಿತ್ತರು.[79]

2ನೆಯ ವೀರಬಲ್ಲಾಳನ ಕಾಲದಲ್ಲಿ ಅವನ ಪಾದಪದ್ಮೋಪಜೀವಿಗಳಾದ ಅರಸಿಯಕೆರೆಯ ಭವ್ಯನಕರಗಳ ರತ್ನತ್ರಯಾಧಿಷ್ಠಿತತ್ವಮೇ. ಧರ್ಮ್ಮಪ್ರತಿಪಾಲನಶಕ್ತಿಯಂ ಕಳಚುರ್ಯ್ಯ ಕುಳಸಚಿವೋತ್ತಮನೂ ಆದ ರೇಚರಸನು ಅರಸನ ಅನುಮತಿಯ ಮೇರೆಗೆ ಅರಸಿಯಕೆರೆಯಲ್ಲಿ ಸಹಸ್ರಕೂಟಜಿನಬಿಂಬವನ್ನು ಮಾಡಿಸಿ ಆ ದೇವರ ಅಷ್ಟವಿಧಾರ್ಚನೆಗೆ ಪೂಜಾರಿ ಪರಿಚಾರಕರ ಜೀವಿತಕ್ಕೆ ಜೀರ್ಣೋದ್ದಾರಕೆಂದು ಬಲ್ಲಾಳ ಭೂಪನಿಂದ ಹಂದರಹಾಳನ್ನು ಪಡೆದು ತಮ್ಮ ಅನ್ವಯದ ಗುರುಗಳಾದ ಶ್ರೀ ಮೂಲಸಂಘ ದೇಸಿಗಣದ ಪುಸ್ತಕಗಚ್ಛದ ಇಂಗಳೇಶ್ವರದ ಬಳಿಯೆನಿಸಿದ ಮಾಘನಂದಿಸಿದ್ಧಾಂತದೇವರ ಶಿಷ್ಯ ಶುಭಚಂದ್ರತ್ರೈವಿದ್ಯದೇವರ ಶಿಷ್ಯರಾದ ಶ್ರೀ ಮಾಘಣಂದಿ ಸಿದ್ಧಾಂತದೇವರಿಗೆ ದಾನವಿತ್ತನು. ರೇಚಣ

ಮಂತ್ರಿಯು ರಾಜಾಧ್ಯಕ್ಷದ ಹೆಗ್ಗಡೆಯ ಪದವಿಯಲ್ಲಿಯೂ ಇದ್ದನು. ಇವನದು ವಾಜಿವಂಶ. ಮಂತ್ರಾಲೋಚನದಲ್ಲಿ ಇವನನ್ನು ಮೀರಿಸಿದವರಿಲ್ಲ. ದೇವಮಂತ್ರಿಗೆ ಸಮಾನವಾದ ಹಿರಿಮೆಯನ್ನು ಪಡೆದು ಹೊಯ್ಸಳ ರಾಜ್ಯದಲ್ಲಿ ಮಾನ್ಯನಾಗಿದ್ದನು. ಬಹುಶಃ ಈತ ಸಾಹಿತಿಯೂ ಆಗಿದ್ದನೆಂಬುದನ್ನು ಇವನ ಸಾಹಿತ್ಯವಿದ್ಯಾಧರ ಎಂಬ ಬಿರುದು ಧ್ವನಿಸುತ್ತದೆ.[80]

ಭಗವತೀ ದೇವಿಯಲಬ್ಧವರಪ್ರಸಾದರುಂ ಗೋಕುಲನಾರಾಯಣದೇವರ ಪಾದಾರಾಧಕಂ ಕಡಬಕಂಠೀರವಂ ಕಡಬರಾದಿತ್ಯರುಂ ಆಳಿಂಮುಂನಿರಿವರುಂ ಪ್ರಜೆಮೆಚ್ಚೆಗಂಡರುಂ ಪರಬಳಸಾಧಕರುಂ ಅರಗಿಕುಂಜರುಂ ತಪ್ಪೆತಪ್ಪುವಂ ವಿಶ್ವಾಸ್ಕೆ ತಪ್ಪ ನುಡಿದುಮತನ್ನ ತೊಡರೆಬಲ್ಲಂಗಂಡರುಂ ಹಯವತ್ಸರಾಜ ಗಣಿಕಾಮನೋಜ ಸುಜನೈಕಭಾಂದವ ಶ್ರೀಸೋಮೇಶ್ವರದೇವರ ಪಾದಾರಾಧಕಂ ಮಹಾಸಾಮಂ ಚಳುಕ್ಕೆಯನಾಯಕಂ ಸೇನವಗೆರೆಯ ವ್ರಿತ್ತಿಯಂ ಸುಖದಿಂದಾಳುತ್ತಿದ್ದನು.ಇವನ ಪ್ರಸಿದ್ಧಳಾದ ತಾಯಿ ಬೊಮ್ಮವೆ. ಘನಶೌರ್ಯಂ  ತಂದೆ ಬೀಜಿಸೆಟ್ಟಿ ಅರವಣುಗಿನ ಸುಪುತ್ರ ಭುಜಬಲ ಮಹಾದೇವಸೆಟ್ಟಿ ;ಅವನ ಸತಿ ತಿಪ್ಪವೆ ಸೆಟ್ಟಿಕವ್ವೆ ; ಈ ದಂಪತಿಗಳ ಪುತ್ರ  ಬೈರಿಸೆಟ್ಟಿ[81]

**ಸಿಂಗರಸ:** ಅರಸಿಯಕೆರೆಯ ಸಿಂಗರಸ ಎಂದು ಈತ ಗುರುತಿಸಲ್ಪಟ್ಟಿದ್ದಾನೆ. ಈತನು ಮಗರೆಮೂನೂರರ ಮೊದಲಬಾಡ ಕಳಿಕಟ್ಟೆಯನ್ನು ಸರ್ವ್ವಭಾದಾಪರಿಹಾರಾರ್ಥವಾಗಿ ಆಳುತ್ತಿದ್ದನು. ಇವನು ಸಿಂಗೇಶ್ವರ ದೇವರನ್ನು ಪ್ರತಿಷ್ಠೆಯನ್ನು ಮಾಡಿ ದೇವರ ಅಂಗಭೋಗ ನಿವೇದ್ಯಕ್ಕೆ ತಪೋಧನರ ಆಹಾರದಾನಕ್ಕೆ ವಿದ್ಯಾದಾನಕ್ಕೆ 2ಮತ್ತರು ಗದ್ದೆ, ಚಿಕ್ಕತೂಬಿನ ಬಳಿ 2ಸಲಗೆ ಗದ್ದೆಯನ್ನು ದಾನವಿತ್ತನು. ಅಡುವಗೆರೆಯಲ್ಲಿ ಪಂಡಿತಯ್ಯನು 1 ಸಲಗೆ ಗದ್ದೆಯನ್ನು ದತ್ತಿನೀಡಿದನು. ಶಾಸನೋಕ್ತ ಸಾಲುಗಳು ಅನೇಕ ಮಾಹಿತಿಯನ್ನು ಒದಗಿಸುತ್ತದೆ.

**“**ಕೂರಾಳು ಸುಬಗಂ ಕುಲವಧು ವಾರಿಜಮುಖಿಮಾದಿಕಬ್ಬೆಗೆ ಪುಟ್ಟಿದನೀ ಧಾರಣಿಗೆ ಕಲ್ಪವ್ರಿಕ್ಷನುದಾರಗುಣಂ ಮಾರಸಿಂಗನಾಹವಧೀರಂ ಧೀರನೊಳಂಬಗೌಣ್ಡನುದಾರಗುಣಂ ಸಲೆ ಬಿಂಮ್ಮಿಕಬ್ಬೆಗಂ ಸಕಳ ಗಉಣಾಧಾರನೆನೆ ಭೂಪನುದಯಿಸಿ ಧಾರುಣಿಯಲು ನೆಗಳ್ದನಲ್ತೆ  ಕಾಯ್ವರ ಗಣ್ಡಂ ಬೂವಂಗಂ ಕುಲವಧು ಸೋವಬ್ಬೆಗಮುದಿತ ಕೀರ್ತ್ತಿ ಪುಟ್ಟುವ ತೆರದಿಂದೀ ವಸುಧೆಯೊಳವತರಿಸಿದಕಾನ್ರಿಪಂ ಪುಣುಸೆಗಾಂಕನೆನೆ ಪೊಗಳದರಾರು ಕಟ್ಟಾಳು ಪುಣುಸೆಗಕುಲವಧು ಚಟ್ಟಬ್ಬೆಗಮೆಂಟುನೂರಕ್ಕಧಿಪತಿಯಾಗಲು ಪುಟ್ಟಿದ ಕಣಿಗಿಲುನಾಳ್ಕಂ ನೆಟ್ಟನೆ ಸಾಮನ್ತ ಸಿಂಗನುರ್ವ್ವೀತಳದೊಳು**”**[82]

**ಪೋಲಾಳ್ವ ದಂಡನಾಥ:** ಇವನು ವೀರನರಸಿಂಹನ ಅಧೀನವರ್ತಿ. ಮಂಗೊಳದ 200 ಮಹಾಜನರ ಎದುರಿನಲ್ಲಿ ನರಸಿಂಹದೇವರ ನಂದಾದೀಪಕ್ಕೆ ಒಂದು ಮನೆಯನ್ನು ಮತ್ತು ಗಾಣವನ್ನು ದಾನವಿತ್ತನು. ಈ ದಾನವನ್ನು ಲೋಕಾಭರಣಗುರುದೇವನಿಗೆ ನೀಡಿದನು.[83] ಇವನು

ಉತ್ತಮಚೋಳಗಂಗನೆನಿಸಿದ ಶೆಲ್ವಗಂಗನ ಮಾವನಾಗಿದ್ದನು. ಪೋಲಾಳ್ವನ ತಮ್ಮ ಚಿಕ್ಕ ದಂಡನಾಯಕ. [84] ಪೋಲಾಳ್ವದಂಡನಾಥನು ಹೊಯ್ಸಳ ವೀರಬಲ್ಲಾಳ ಮತ್ತು ಅವನ ಮಗ ವೀರ ನರಸಿಂಹ ಇವರಿಬ್ಬರ ಕಾಲದಲ್ಲಿಯೂ ಅಮಾತ್ಯನಾಗಿದ್ದನು. ಈತನು ವಿಷ್ಣುಭಕ್ತನಾಗಿದ್ದು ಪರಾಕ್ರಮಶಾಲಿಯೂ ಆಗಿದ್ದನು. ಆಂಧ್ರಪ್ರದೇಶದ ನಾರಾಯಣಪುರದ ಅತ್ತಿರಾಜ ಮತ್ತು ನವಿಲಾಡೆಯಕ್ಕ ದಂಪತಿಗಳು ಈತನ ತಂದೆ ತಾಯಿಗಳು.

**ಹರಿಹರದಂಡನಾಯಕ:** ಹರಿಹರದಂಡನಾಯಕನ ವಂಶಕ್ರಮದಲ್ಲಿ ಮೊದಲ ತಲೆಯೆಂದರೆ ಚಿಕ್ಕಹಡೆವಳ್ಳ. ಇವನಿಗೆ ನಾಗಲೆ ಮಡದಿ. ಈ ದಂಪತಿಗಳ ಸುತ ಮಲ್ಲೆಯನಾಯಕ. ಮಲ್ಲೆಯನಾಯಕ ಮತ್ತು ಗುಜ್ಜಲೆ ದಂಪತಿಗಳಿಗೆ ಧರ್ಮ ಅರ್ಥ ಕಾಮಗಳೆಂಬಿವು ಹುಟ್ಟುವಂತೆ. ಸಿಂಗೆಯನಾಯಕ, ಮಾರೆಯನಾಯಕ, ಹರಿಹರದಂಡನಾಯಕ ಎಂಬ ಮೂವರು ಮಕ್ಕಳು ಜನಿಸಿದರು. ಇವನು 3ನೆಯ ಬಲ್ಲಾಳನ ದಂಡನಾಯಕನಾಗಿದ್ದನು. ಮಹಾಪ್ರಧಾನ ಪದವಿಯನ್ನು ಗ್ರಹಿಸಿದ್ದನು. ಇವನು ಮತ್ತು ಬಡಗರೆನಾಡಿನ ಅಧಿಪನಾಗಿದ್ದನು. ಹರಿಹರದಂಡನಾಯಕನಿಗೆ ಹರಿಯಣ್ಣ ಎಂಬ ಮಗನಿದ್ದನು[85] ಹರಿಹರ ದಂಡನಾಯಕನು ತೆನದಂಕ ವಂಶದವನಾಗಿದ್ದನು. ಹರಿಹರದಂಡನಾಯಕನು ಪ್ರಧಾನ ಚೂಡಾರತ್ನ, ನಿಯೋಗ ಯೋಗಂಧರ, ಪತಿಕಾರ್ಯದುರಂಧರ, ಸಾಲಮಂನೆಯಬೇಂಟೆಕಾರನುದ್ದಂಡ ಗಂಡ, ಭಂಗಾರಂ ನಾಲ್ವತ್ತು ನಾಯಕರ ಗಂಡಂ, ಸಮರಪ್ರಚಂಡನಾಶ್ರಿತಜನಕಲ್ಪವೃಕ್ಷಂ ಶರಣಜನರಕ್ಷಾದಕ್ಷಂ, ಬಂಧುಜನಚಿಂತಾಮಣಿ, ಶಿವಭಕ್ತ ಚೂಡಾಮಣಿ, ಶ್ರೀಮತು ಹರಿಹರದೇವರ ದಿವ್ಯಪಾದಪದ್ಮಾರಾಧಕ, ಪರಬಳ ಸಾಧಕ ಎಂಬ ಬಿರುದುಗಳನ್ನು ಪಡೆದಿದ್ದನು.

**ಕುಮಾರ ಲಕ್ಷ್ಮೀಧರ ದಂಡನಾಯಕ:** ಇವನು 2ನೆಯ ವೀರಬಲ್ಲಾಳನ ಅಧೀನ ಅಧಿಕಾರಿಯಾಗಿದ್ದನು. ಹೆಗ್ಗಬೇಲೂರಿನ ಚನ್ನಕೇಶವ ದೇವಾಲಯದಲ್ಲಿನ ಚನ್ನಕೇಶವ ದೇವರ ಕಂಚಿನ ಅಡ್ಡಣಿಗೆಯ ಪೀಠವನ್ನು ವಿಜಯನಾರಾಯಣದೇವರಿಗೆಂದು ಮಹಾಪ್ರಧಾನ ಕುಮಾರ ಲಕ್ಷ್ಮೀಧರ ದಂಡನಾಯಕನು ಕೊಡುಗೆಯಿತ್ತನು.[86] ಹನ್ನೊಂದು ನಾಡಿನ ಅಧಿಪತ್ಯವನ್ನು ಇವನು ವಹಿಸಿದ್ದ ಮಹಾಮಂಡಳೇಶ್ವರನು. ಇವನ ಹನ್ನೊಂದು ನಾಡಿಗಾಗಿ ಆಸೆಪಟ್ಟು ಬಲ್ಲಗೌಡನು ಅರವಳ್ಳಿಯ ಮೇಲೆ ದಾಳಿ ಮಾಡಿ ಅಲ್ಲಿನ ತುರುಗಳನ್ನು ಹಿಡಿದನು. ಆಗ ಲಕ್ಕಯ್ಯನೆಂಬಾತನು ಬಲ್ಲಗೌಡನನ್ನು ಕೊಂದು ತುರುಗಳನ್ನು ಕಾಪಾಡಿದನು. ಜೊತೆಗೆ ಮುನ್ನೂರು ಹೊನ್ನಿನ ದಂಡವನ್ನು ವಸೂಲಿಮಾಡಿದನು.[87] ಹಳೇಬೀಡಿನ ಶಾಸನವು ಕುಮಾರ ಲಕ್ಷ್ಮೀಧರ ದಂಡನಾಯಕನ ಬಗ್ಗೆ ವಿಶೇಷ ಮಾಹಿತಿಯನ್ನು ನೀಡುತ್ತದೆ. ಇವನ ಮಡದಿ ಸುಗ್ಗಲದೇವಿ. ಈತನು ಗಂಡಪೆಂಡಾರ ಎಂದು ಕೀರ್ತಿತನಾಗಿದ್ದಾನೆ.

**ಮಹಾಪಸಾಯತ ಕೂಸ ಚಟ್ಟ:** ಇವನು ವೀರನರಸಿಂಹನ ಅಧಿಕಾರಿ. ಇವನ ಇತಿವೃತ್ತ ಹೀಗಿದೆ. ಬಮ್ಮಯ್ಯ ಮತ್ತು ಶ್ರೀದೇವಿಯರ ಮಗನೀತ. ಈತನ ಮಡದಿ ಮಹಾದೇವಿ. ಶುದ್ಧ ಚಾರಿತ್ರ್ಯವುಳ್ಳವನೂ, ಧರ್ಮಪರನೂ ರಣರಂಗಧೀರನೂ ಆಗಿ ಈತ ಹೆಸರುಪಡೆದಿದ್ದನು. ಕೊಡುಗೈದಾನಿಯೂ

ಆಗಿದ್ದನೆಂಬುದು ಇವನ ಶಾಸನಗಳಿಂದ ತಿಳಿದುಬರುತ್ತದೆ.ಕೆಲಕಾಲ ಮಂತ್ರಿಯೂ ಆಗಿದ್ದು ನಾಡಿನಲ್ಲೆಲ್ಲ ವಿಶೇಷ ಕೀರ್ತಿಗೆ ಪಾತ್ರನಾಗಿದ್ದನು. ಚಟ್ಟಯ್ಯನ ಬಿರುದುಗಳು ಅಪಾರವಾಗಿವೆ.

**ಕುಕ್ಕಲು ನಾಡಾಳ್ವರು:**

**ಮಹಾಸಾಮಂತಾಧಿಪತಿ ಮಯಿಲೆಯಯನಾಯಕ:** ಇವನು ವೀರಬಲ್ಲಾಳನ ಕುಮಾರ ಎಂಬ ಪ್ರೀತಿಗೆ ಪಾತ್ರನಾಗಿದ್ದನು. ಇವನ ತಂದೆ ಕೋಡಿಯನಾಯಕ/ ಕೋಟೆಯನಾಯಕ. ಮಯಿಲೆಯನಾಯಕನ ತಮ್ಮನಾದ ಚೆಂನೆಯನಾಯಕನು ಸ್ವಾಮಿದ್ರೋಹರ ಗಂಡ, ಮಾರ್ಮಲೆವಮಂಡಳಿಕರ ಗಂಡ, ಸ್ವಾಮಿಯ ಅನುವರಕೆ ತಾನೆ ನಿಸ್ಸೀಮ ಎಂದು ಹೆಸರು ಪಡೆದಿದ್ದನು.[88] ಮಯಿಲೆಯನಾಯಕನು ತನ್ನ ಸಹೋದರನಾದ ಚನ್ನಯನಾಯಕ ರೊಡಗೂಡಿ ಕುಕ್ಕಲುನಾಡನ್ನು ಆಳುತ್ತಿದ್ದನು. ನರಲೋಕ ಗಂಡ ಎಂದು ಬಿರುದುಪಡೆದಿದ್ದನು.[89]

**ಜಾಲೆಯದಂಡನಾಯಕನು** : ಜಾಲೆಯದಂಡನಾಯಕನು ಮಹಾಪ್ರಧಾನ ಪದವಿಯಲ್ಲಿದ್ದನು. ಜಗದೋರ್ಬ್ಬಗಂಡ ಎಂದು ಖ್ಯಾತನಾಗಿದ್ದನು.ಇವನು ಕೆಲಕಾಲ ಕುಕ್ಕಲುನಾಡನ್ನು ಆಳುತ್ತಿದ್ದನು.[90]

**ಬೀರೆಯನಾಯಕ:** ಈತನು ಕುಕ್ಕಲುನಾಡನ್ನು ಆಳುತ್ತಿದ್ದನು. ಜೊತೆಗೆ ಕಾಡಸೂರನ್ನು ಸಹ ಪಾಲಿಸುತ್ತಿದ್ದನು.[91]

**ಕಲೆಯನಾಯಕ** : ಈತನು ಕುಕ್ಕಲುನಾಡನ್ನು ಆಳುತ್ತಿದ್ದನು. ಜೊತೆಗೆ ಕಾಡಸೂರನ್ನು ಸಹ ಪಾಲಿಸುತ್ತಿದ್ದನು. ಈತನಿಗೆ ಮಹಾವೀರ ರಾಜ್ಯದ ಚೋಳ, ಹೊಸಬಿರುದರಗಂಡ, ತೊಡರ್ದರ ಗಾಳ, ಆಲೂರ ಭೀಮ ಎಂಬ ಬಿರುದುಗಳಿದ್ದವು.[92]

**ಕಾಡೆಯನಾಯಕ:** ಈತನು ಸಹ ಕುಕ್ಕಲುನಾಡನ್ನು ಆಳುತ್ತಿದ್ದನು. ಜೊತೆಗೆ ಕಾಡಸೂರನ್ನು ಸಹ ಪಾಲಿಸುತ್ತಿದ್ದನು. ಈತನಿಗೆ ಮಹಾಸಾಮಂತ ಚೋಳ, ಹೊಸಬಿರುದರಗಂಡ, ತೊಡರ್ದರ ಗಾಳ, ಆಲೂರ ಭೀಮ, ಸಿತಗರಗಂಡ ಎಂಬ ಬಿರುದುಗಳಿದ್ದವು.[93]

**ಅಪೆಯನಾಯಕ** : ಈತನು ಸಹ ಕುಕ್ಕಲುನಾಡನ್ನು ಆಳುತ್ತಿದ್ದನು. ಜೊತೆಗೆ ಕಾಡಸೂರನ್ನು ಸಹ ಪಾಲಿಸುತ್ತಿದ್ದನು. ಈತನಿಗೆ ಮಹಾವೀರರಾಜೇಂದ್ರ ಚೋಳ, ಹೊಸಬಿರುದರಗಂಡ, ತೊಡರ್ದರ ಗಾಳ, ಆಲೂರ ಭೀಮ, ಸಿತಗರಗಂಡ ಎಂಬ ಬಿರುದುಗಳಿದ್ದವು.[94]

**ಗಂಗದೇವ** : ಈತನು ದೊರೆ ವೀರನರಸಿಂಹನ ಅಧೀನವರ್ತಿಯಾಗಿದ್ದನು. ಈತನ ತಂದೆ ಕೈದಾಳದ ಮಲ್ಲಿದೇವ. ಗಂಗದೇವ ಮರುಗಲುನಾಡನ್ನು ಆಳುತ್ತಿದ್ದನು. ಮಹಾಸಾಮಂತ ಪದವಿಯನ್ನೂ ಅಲಂಕರಿಸಿದ್ದನು. ಭುಜಬಲವೀರಗಂಗ, ಹೊಯ್ಸಳ ಸಾಮಂತ, ಕಡಬಕಂಠೀರವ, ತೆಲುಂಗಮಂಡಳಿಕರ ಗಂಡ, ಗಂಡಪೆಂಡಾರ, ಮಂಡಳಿಕರವೀರಘಂಟೆ, ಪರಬಳಸಾಧಕ ಎಂಬ ಬಿರುದುಗಳಿದ್ದವ.[95]

**ಕಂಪಯದಂಡನಾಯಕ :** ವೀರರಾಮನಾಥನು ಕುಂದಾಣಿಯ ಬೀಡಿನಲ್ಲಿ ಆಳುತ್ತಿದ್ದಾಗ, ಈ ಕಂಪಯ ದಂಡನಾಯಕನು ಮರುಗಲಿನಾಡಿನಲ್ಲಿದ್ದನು. ಮಹಾಪ್ರಧಾನ ಪದವಿಯನ್ನಲಂಕರಿಸಿದ್ದನು. ಮಾಂಡಲಿಕ ಜವರ ಜಾನಿಕಯ್ಯನಾಥ ಮೂವರುರಾಯರ ಗಂಡ ಎಂಬ ಬಿರುದುಗಳಿಂದ ಖ್ಯಾತನಾಗಿದ್ದನು.[96]

**ಸಾಮಂತ ಬೂಚಿದೇವ :** 1ನೆಯ ನರಸಿಂಹನ ಕೈಕೆಳಗೆ ಈತ ಅಧಿಕಾರಿಯಾಗಿ ಮಹಾಸಾಮಂತ ಪದವಿಯನ್ನು ಅಲಂಕರಿಸಿದ್ದನು. ಸಮಧಿಗತ ಪಂಚಮಹಾಶಬ್ದ, ಭವ್ಯ ಚೂಡಾಮಣಿ, ಸಮ್ಯಕ್ತ ರತ್ನಾಕರ, ಸಮ್ಯಕ್ತ ಚೂಡಾಮಣಿ, ರಾಜ್ಯಾಭ್ಯುದಯಕರಣಕಾರಣ, ವೀರಲಕ್ಷ್ಮೀಕಾಂತ ನಾಲ್ವತ್ತನಾಲ್ವರಗಂಡ, ಚತುರ್ಮುಖ ದಾಯಿಗಗೊಂದಳಂಬಡಿವಂ, ತೊಡರ್ದರಡೊಂಕಿ, ಅದಳಾದಿತ್ಯಂ ಎಂದು ಮುಂತಾಗಿ ಬಿರುದಾಂಕಿತನಾಗಿದ್ದಾನೆ. ಇವನು ಮರುಗೆರೆನಾಡನ್ನು ಆಳುತ್ತಿದ್ದನು. ಕೈದಾಳವು ಈ ಮರುಗರೆ ನಾಡಿನ ಮುಖ್ಯ ಸ್ಥಳವಾಗಿದ್ದಿತು. ಆಶ್ಚರ್ಯವೆಂದರೆ ಈ ಶಾಸನದಲ್ಲಿ ಇವನು ಮಾನ್ಯಖೇಡಪುರವರಾಧೀಶ್ವರ ಎಂದು ಕರೆಸಿಕೊಂಡಿದ್ದಾನೆ. ಈ ಬಿರುದಿನ ಆಧಾರದಿಂದ ಈ ಅದಳ ಮನೆತನದವರು ಪ್ರಸಿದ್ಧವಾದ ಮಳಖೇಡದ ರಾಷ್ಟ್ರಕೂಟರ ವಂಶಕ್ಕೆ ಸೇರಿರಬಹುದು ಎಂದು ಊಹಿಸುವುದು ದುಸ್ತರವೆನಿಸುತ್ತದೆ. ಆದರೂ ಈ ವಂಶದ ಕೊನೆಯ ಸಾಮಂತನಾದ ಗೂಳಿಯ ಬಾಚಿ ಕಾಲ 1155ರಿಂದ ಹಿಂದಕೆ ಕಾಲಗಣನೆಯನ್ನು ಮಾಡುತ್ತ ಹೋದರೆ ಈ ವಂಶದ ಮೊದಲ ಸಾಮಂತನಾದ ಬಾಸಯನು ರಾಷ್ಟ್ರಕೂಟ 3ನೆಯ ಕೃಷ್ಣನ ಸಮಕಾಲೀನನಾಗಿದ್ದನೆಂದು ಊಹಿಸಲು ಅವಕಾಶವಾಗುತ್ತದೆ. ಒಂದು ವೇಳೆ ಈ ಊಹೆ ನಿಜವಾದ ಪಕ್ಷದಲ್ಲಿ ಈ ಮನೆತನದವರು ರಾಷ್ಟ್ರಕೂಟರ ಕಾಲದಿಂದಲೂ ಅಧಿಕಾರದಲ್ಲಿದ್ದುದು ಆಶ್ಚರ್ಯವೇನಲ್ಲ.

ಈ ಅದಳ ಮನೆತನದ ಸಾಮಂತರು ಮರುಗರೆನಾಡು ಅಥವಾ ಮರುಗೆರೆ ಮುನ್ನೂರು ಎಂಬ ಪ್ರದೇಶವನ್ನು ಆಳುತ್ತಿದ್ದರು. ಈ ಪ್ರಾಂತವು ಪ್ರಾಚೀನ ಗಂಗರ ಕಾಲದಿಂದಲೂ ಪ್ರಸಿದ್ದವಾಗಿತ್ತು. ಪ್ರಾಚೀನ ಗಂಗ ಮನೆತನದ 2ನೆಯ ಮಾಧವವರ್ಮನು ಮರುಕರ ಫ಼ಿಷಯದಲ್ಲಿಯ (ಮರುಗರೆ ವಿಷಯ)ಕೂಡಲೂರು ಎಂಬ ಗ್ರಾಮವನ್ನು ದಾನವಾಗಿ ಕೊಟ್ಟಿದ್ದನು. ಈ ಗ್ರಾಮವು ತೊಳ್ಳಾ ನದಿಯ ಪಶ್ಚಿಮ ದಿಕ್ಕಿಗೆ ಮತ್ತು ಪೇರೂರು ಗ್ರಾಮದ ಪೂರ್ವದಿಕ್ಕಿನಲ್ಲಿ ಇದ್ದಿತೆಂದು ತಿಳಿದುಬರುತ್ತದೆ.[97] ಸುಮಾರು 8ನೆಯ ಸತಮಾನದ ಗಂಗ ಶ್ರೀಪುರುಷನ ಒಂದು ಶಾಸನದಲ್ಲಿ ಮರುಗೆರೆ ನಾಡು ಮುನ್ನೂರರ ಉಲೇಖವಿದ್ದು ಅದನ್ನು ಅರಸನ ದಂಡನಾಯಕನಾದ ಸಿಯಗೆಲ್ಲನು ಆಳುತ್ತಿದ್ದನೆಂದು ಹೇಳಿದೆ. ಇಲ್ಲಿ ಉಕ್ತವಾಗಿರುವ ಮರುಗರೆ ಕೂಡಲೂರು ಪೇರೂರು ಅಥವಾ ತೊಳ್ಳಾ ನದಿ ಇವು ಇಂದಿನ ಭೂಪಟದಲ್ಲಿ ಗುರುತಿಸುವುದು ಕಠಿಣವಾದದ್ದರಿಂದ ಮರುಗರೆ ನಾಡಿನ ವಿಸ್ತಾರವನ್ನು ಗುರುತಿಸುವುದು ಸಾಧ್ಯವಿಲ್ಲ.

ಪೇರೂರನ್ನು ತಮಿಳುನಾಡಿನ ಕೊಯಿಮತ್ತೂರು ಸಮೀಪದ ಈ ಹೆಸರಿನ ಗ್ರಾಮದೊಡನೆ ಸಮೀಕರಿಸಲು ಯತ್ನಿಸಲಾಗಿದೆ; ಆದರೆ ಇದು ಸಂದೇಹಾಸ್ಪದವಾಗಿದ್ದು, ಇದನ್ನು ಪುಷ್ಟೀಕರಿಸುವ

ಆಧಾರಗಳ ಕೊರತೆಯಿದೆ. ಹೊಯ್ಸಳ ಕಾಲದ ಶಾಸನಗಳಲ್ಲಿ ಮರುಗರೆನಾಡು ಮೇಲಿಂದ ಮೇಲೆ ಉಲ್ಲೇಖಿಸಲ್ಪಟ್ಟಿದ್ದು ಅದು ಸದ್ಯದ ತುಮಕೂರು ಜಿಲ್ಲೆಯ ಪ್ರದೇಶದಲ್ಲಿ ಇದ್ದು ಈ ನಾಡಿನಲ್ಲಿ ಸೇರಿದ್ದ ಗ್ರಾಮಗಳನ್ನು ಸದ್ಯದ ತುಮಕುರು ತಾಲೂಕಿನಲ್ಲಿ ಗುರುತಿಸಬಹುದಾಗಿದೆ. ಉದಾರಹರಣೆಗೆ ಕೈದಾಳ, ದಿರ್ಬೂರು ಮೆಳೆಯಕೋಟೆ ಸೀತಕಲ್ಲು ಹುರುಳೂರುಗಳು ತುಮಕೂರು ತಾಲೂಕಿನಲ್ಲಿಯೆ ಇವೆ. ಮರುಗರೆ ನಾಡು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಆಡಳಿತ ವಿಭಾಗವಾಗಿ ಮುಂದುವರೆಯಿತು. ಅದು ಘನಗಿರಿ ರಾಜ್ಯ ಅಥವಾ ಪೆನುಗೊಂಡೆ ರಾಜ್ಯದಲ್ಲಿ ಸೇರಿಕೊಂಡಿದ್ದಿತು.[98]

**ಮಹಾಸಾಮಂತ ಮಾಚಯನಾಯಕ:** ಇವನು ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ತುರುನಾಡನ್ನು ಆಳುತ್ತಿದ್ದನು. ವೈರಗಳೆಂಬ ಮದವೇರಿದ ಆನೆಗಳಿಗೆ ಉಗ್ರ ಭಯಂಕರನಾಗಿದ್ದನು. ಸುಳ್ಳು ಹೇಳುವವರ ಮೂಗು ಕೊಯ್ದು ಬುದ್ಧಿಕಲಿಸುವಂತಹವನು ಈತ. ಮಾಳಿಗೆಯೂರಿನಲ್ಲಿ ಒಂದು ಸುಂದರವಾದ ಕೆರೆಯನ್ನು ಕಟ್ಟಿಸಿದ್ದನು. ಗೋದಾನ ಭೂದಾನ ಕನ್ಯಾದಾನಗಳನ್ನು ಮಾಡುತ್ತ ಶಿವಾಲಯಗಳನ್ನು ನಿರ್ಮಿಸುತ್ತ ಖ್ಯಾತಿಯನ್ನು ಪಡೆದಿದ್ದನು. ಇವನು ಕೆರೆಗಳನ್ನು ಕಟ್ಟಿಸಿ ಹೆಸರುವಾಸಿಯಾಗಿದ್ದನೆಂಬುದಕ್ಕೆ ಇವನಿಗೆ ಇದ್ದಂತಹ ಒಡಗೆರೆ ಮಲ್ಲ ಎಂಬ ಬಿರುದು ಸಾಕ್ಷಿಯಾಗಿದೆ.[99]

**ಹಿರಿಯ ಹಡವಳ ಚಾವಿಮಯ್ಯ:** ಹಿರಿಯ ಹಡವಳ ಚಾವಿಮಯ್ಯನನ್ನು ಉಲ್ಲೇಖಿಸುವ ಒಂದು ಸಂಕೀರ್ಣ ಶಾಸನವಿದೆ. ಕ್ರಿ. ಶ 1155, 1174, 1176 ರ ವಿಷಯಗಳಿವೆ.[100] ಮೊದಲ ಬಾಗ ಒಂದನೆಯ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಈ **ಹಿರಿಯ ಹಡವಳ ಚಾವಿಮಯ್ಯ**ನ ಪತ್ನಿ ಮತ್ತು ನಯಕೀರ್ತಿ ಸಿದ್ಧಾಂತ ಚಕ್ರವರ್ತಿಯ ಶಿಷ್ಯೆಯಾದ ಜಕ್ಕವ್ವೆಯು ಹೆರಗಿನಲ್ಲಿ ಬಸದಿಯೊಂದನ್ನು ಕಟ್ಟಿಸಿ ಅದರಲ್ಲಿ ಚೆನ್ನಪಾರ್ಶ್ವನಾಥನ ಪ್ರತಿಮೆಯನ್ನು ಪ್ರತಿಷ್ಠೆ ಮಾಡಿದ ಸಂಗತಿಯನ್ನು ತಿಳಿಸುತ್ತದೆ. ಈಕೆ ಬಮ್ಮಯ್ಯ ಮತ್ತು ಆಚವ್ವೆಯರ ಪುತ್ರಿ. ಈಕೆಯ ಪತಿ ಬಿಟ್ಟಿದೇವ ಎಂದರೆ ವಿಷ್ಣುವರ್ಧನನ ಗರುಡನೆಂದು ವರ್ಣಿತನಾಗಿದ್ದಾನೆ. ಶಾಸನ ಕೊನೆಯಲ್ಲಿ ಅರಸ ನರಸಿಂಹನಿಗೆ ಮನವಿಮಾಡಿಕೊಂಡು ಆತನ ಅನುಮತಿ ಪಡೆದು ಈ ಭೂದಾನವನ್ನು ಮಾಡಿದಳು. ಈಕೆಯ ಪತಿ ವಿಷ್ಣುವರ್ಧನನಿಗೆ ಗರುಡನಾಗಿದ್ದನಲ್ಲದೆ ಮಹಾಮಂಡಳೇಶ್ವರನಾಗಿದ್ದನು. ಈತ ಯುವರಾಜ ನರಸಿಂಹನೊಂದಿಗೆ ಸೌಹಾರ್ದಯುತ ಸಂಬಂಧವನ್ನು ಹೊಂದಿದ್ದನು.

**ಬೊಮ್ಮಣ್ಣದಂಡನಾಯಕ:** ರಾಮೇಶ್ವರ ದೇವಾಲಯದೊಳಗೆ ದಕ್ಷಿಣಮೂರ್ತಿ ಗುಡಿಯ ಹಿಂದೆ ಒಂದರ ಪಕ್ಕ ಇನ್ನೊಂದರಂತೆ ನಿಲ್ಲಿಸಿದ ನಾಲ್ಕು ಬೇರೆ ಬೇರೆ ಕಲ್ಲುಗಳ ಮೇಲೆ ಶಾಸನವನ್ನು ಕಂಡರಿಸಿರುವುದು ಒಂದು ಅಪರೂಪದ ನಿದರ್ಶನ.[101] ಶಾಸನದಲ್ಲಿ ಎರಡು ತೇದಿಗಳಿವೆ ಕ್ರಿ.ಶ. 27–10–1250, 21–6–1251. ಮೊದಲ ತೇದಿಯಂದು ನಡೆದ ಘಟನೆಯ ಎಂಟು ತಿಂಗಳ ನಂತರ ಎರಡನೆಯ ತೇದಿಯನ್ನು ಸೂಚಿಸಿದೆ. ಈ ತೇದಿಯಂದು ಶಾಸನವನ್ನು ಕಂಡರಿಸಲಾಯಿತೆಂಬುದು ಸ್ಪಷ್ಟ. ಹಿರಿಯ ಸಂಧಿ ವಿಗ್ರಹಿಯಾದ ಹಾಗೂ ಕೊಂಗಮಂಡಲದ ಮಹಾ ಮಂಡಳೇಶ್ವರನಾದ ಬೊಮ್ಮಣ್ಣದಂಡನಾಯಕರ

ಕೈಕೆಳಗಿದ್ದ ವಾಮರಸನ ಮಗ ಕಲ್ಲಯ್ಯನೆಂಬಾತ ರಾಮನಾಥ ದೇವರ ಪೂಜೆಗಾಗಿ ಹೂದೋಟವೊಂದನ್ನು ಮಾಡಿಸಲು ದೇವಾಲಯದ ಸ್ಥಾನಿಕರಿಂದ 95 ಕಂಬ ಭೂಮಿಯನ್ನು ಕ್ರಯಕ್ಕೆ ಪಡೆದು ದಾನ ನೀಡಿದ.

**ಹೆಗ್ಗಡೆ ಬೂಚಿಮಯ್ಯ:** ಇವನು 2ನೆ ವೀರಬಲ್ಲಾಳನ ಅಧೀನನಾಗಿ ಮಹಾಪ್ರಧಾನ ಪದವಿಯನ್ನು ಅಲಂಕರಿಸಿದ್ದನು. ಇವನು ವೀರಬಲ್ಲಾಳನ ಆಜ್ಞೆಯ ಮೇರೆಗೆ ಲಂಚೆಯಿಂದ ಹಂಡುವಲಾದೇಳುನಾಡಿನ ಅಧಿಕಾರವನ್ನು ನಡೆಸುತ್ತಿದ್ದನು. ಈ ನಾಡಿನಲ್ಲೆ ಇರುವ ವಿಜಯನಾರಾಯಣ ದೇವರ 12 ಊರಿನಲ್ಲಿರುವ ಕಾಣಿಕೆ, ಉಗ್ರಾಣ, ಪರಿಧಾನ, ಬೆಡುಂಗೊಳು, ಚಳಾಯ, ದಾಯದೆರೆ ,ಹಡವರ, ಬೀರವಣ, ತವುಡೆ, ನಲ್ಲೆತ್ತು ನಲುಗಂಟಿ ನಲ್ಲಾಮದಣ್ಡಾಯ ಮೊದಲಾದ ಕಿರುಕುಳತೆರಿಗೆಗಳನ್ನು ವಿಜಯನಾರಾಯಣ ದೇವರಿಗೆ ಅರ್ಪಿಸಿದನು.[102]

**ಮಹಾಪಸಾಯತ ಕಳುವ ಸಾಯಣ್ಣ:** ಇವನು 3ನೆಯ ಬಲ್ಲಾಳನ ಅಧಿಕಾರಿಯಾಗಿದ್ದನು. ವೀರಬಲ್ಲಾಳನ ಕಾಲದಿಂದ ಹಲವು ಅರಸರು ಆಸಂದಿನಾಡಿನಲ್ಲಿರುವ ಬ್ರಹ್ಮಲೇಶ್ವರ ದೇವರ ದೇವದಾನದ ಭೂಮಿಯಾದ ಬಾಣೂರನ್ನು ಭಂಢಾರವಾಗಿ ಕುತ್ತುವತ್ತಿಯಾಗಿ ಹಲವು ಕಾಲ ನಿರ್ವಹಿಸಿದ್ದರು. 3ನೆಯ ಬಲ್ಲಾಳನು ಅಧಿಕಾರಕ್ಕೆ ಬಂದ ಮೇಲೆ ಅದನ್ನು ಅಗ್ರಹಾರವನ್ನಾಗಿ ಮಾಡುವಂತೆ ಕಳುವ ಸಾಯಣ್ಣನವರಿಗೆ ದಾನವಿತ್ತನು. ಸಾಯಣ್ಣನವರಿಂದ ಅಗ್ರಹಾರದ ಮಹಾಜನಗಳು ತಮ್ಮ ಸ್ವಾಮ್ಯಕ್ಕೆಂದು 6 ವೃತ್ತಿಯನ್ನು ದಾನವನ್ನಾಗಿ ಪಡೆದು ಅಗ್ರಹಾರವನ್ನಾಗಿ ಮಾಡಲು ಸಮ್ಮತಿಸಿದರು. ಆ ಊರನ್ನು ಸಾಯಣ್ಣನವರು ಅಗ್ರಹಾರವನ್ನಾಗಿ ಪರಿವರ್ತಿಸಿದನು. ಅದಕ್ಕೆ ಲಕ್ಷ್ಮಿಪುರವೆಂದು ನಾಮಕರಣಮಾಡಲಾಯಿತು. 21 ಗದ್ಯಾಣಗಳನ್ನು ಬಾಣೂರಿನ ಅಶೇಷ ಮಹಾಜನಗಳಿಂದ ಕುಳವಾಗಿ ಪಡೆದ ಬ್ರಹ್ಮಲೇಶ್ವರದ ಮಹಾಜನಗಳು ಅದನ್ನು ದೇವರ ಅಮೃತಪಡಿ ನೈವೇದ್ಯಕ್ಕೆ, ನಿತ್ಯ ಉಪಾಹಾರಕ್ಕೆ ಅಕ್ಕಿ ವೊಕ್ಕುಳ ನಂದಾದೀವಿಗೆಗೆ 2 ಹೂವು ಗಂಧ ಧೂಪ ನಿತ್ಯಾರತಿ ವೈಶಾಖ ಪೌರ್ಣಮಿ ಕಾರ್ತಿಕ ಪೌರ್ಣಮಿಯಲ್ಲಿ ತುಪ್ಪದ ಮಾಲೆ ದೀವಿಗೆಗೆಂದು ದಾನವಿತ್ತರು.[103]

**ಕುಂದಮಾರಾಯ:** ಇವನು ಎರೆಯಂಗನ ಬಳಿ ಮಹಾಪ್ರಧಾನನಾಗಿ ಮನೆವೆಗ್ಗಡೆಯಾಗಿ ಅಧಿಕಾರದಲ್ಲಿದ್ದನು, ಈತ ಮಯ್ಸೆನಾಡಿನ ತಾವರೆಯ ಕೆರೆಯನ್ನು ಉಭಯಸಾಮ್ಯದಿಂದ ಆಳುತ್ತಿದ್ದನು. ಈ ತಾವರೆಯಕೆರೆಯಲ್ಲಿ ಒಂದು ಶಿವಾಲಯವನ್ನು ನಿರ್ಮಿಸಿ ಅಲ್ಲಿ ಮೆಂದೇಶ್ವರದೇವರನ್ನು ಪ್ರತಿಷ್ಠಾಪಿಸಿದನು. ದೇವರ ಸೇವೆಗಳಿಗೆಂದು ಹೊಸಗೆರೆಯ ಮೊದಲೇರಿ ಯಲ್ಲಿ 6ಸಲಗೆ ಗದ್ದೆ, ಮೂಲಸ್ಥಾನದ ಕಲಿದೇವರಿಗೆ ಮಾವಿನಕೆರೆಯ ಅಡ್ಡೇರಿಯ ಕೆಳಗೆ 3ಸಲಗೆ ಗದ್ದೆಗಳನ್ನು ದತ್ತಿಯಾಗಿ ನೀಡಿದನು.[104]

**ಮಹಾಸಾಮಂತ ಚೋಳೆಯ:** ಇವನು ವಿಷ್ಣುವರ್ಧನನ ಅಧೀನ ಅಧಿಕಾರಿ. ಮಹಾಸಾಮಂತ ಚೋಳೆಯ ಸತಿ ಸೋವವೆನಾಯಕಿತಿ. ಇವರ ಮಗ ಸಾಮಂತ ಬೆನವಯ್ಯ, ಈ ಬೆನವಯ್ಯ ಮತ್ತು ಸಾಂತವ್ವೆನಾಯಕಿತಿಯರ ಮಗ ಈ ಚೋಳೆಯ. ಇವನಿಗೆ ಸಾಮಂತ ಮಾಚಯ್ಯ ಮತ್ತು ಸಾಮಂತ

ಹುಳ್ಳಯ್ಯ ಎಂಬ ಸಹೋದರರು ಇದ್ದರು. ಇವನ ಬಿರುದುಗಳು ; ಸಮಧಿಗತಪಂಚಮಹಾಶಬ್ದ, ವೀರಲಕ್ಷ್ಮಿಕಾಂತ, ತುರುಕರೇವಂತ, ಪರಬಳಕ್ರಿತಾಂತ, ಗೋತ್ರಪವಿತ್ರ, ಪರಾಂಗನಾ ಪುತ್ರ, ದಾಯಿಗಮುರಾರಿ, ದಾಯಿಗದುಷ್ಟರಗಂಡ, ಇಡುಗೂರದೇವೀ ಲಬ್ದವರಪ್ರಸಾದ, ಸದಾನಂದ ಭೋಗ ನಾಗೇಂದ್ರ, ವೈರಿಮನೋಭಂಗಂ, ಅಯ್ಯನ ದೇವಪಾದಾರಾಧಕ. ಇವನು ಬಾಣವೂರು, ಕಿತ್ತನಕೆರೆ, ಹೆಣ್ಣೆಯಗೆರೆ ಹಂದರಹಾಳು, ಸೊಜಿಲಮಾವುಗಳನ್ನು ಬೀಡಿಕೆಯಾಗಿ ಆಳುತ್ತಿದ್ದನು. ತನ್ನ ಅಣ್ಣ ಮಾಚೆಯನಾಯಕನಿಗೆ ಪರೋಕ್ಷವಿನಯವಾಗಿ ಶಿವಾಲಯವನ್ನು ನಿರ್ಮಿಸಿ ಅ ದೇವರ ಸೇವೆಗಳಿಗೆಂದು 10ಕೊಳಗ 3 ಖಂಡುಗ ಗದ್ದೆ, ಕನಕೇಶ್ವರ ದೇವರ ಸ್ನಾನ ನಿವೇದ್ಯಕ್ಕೆ, ನಂದಾದೀವಿಗೆಗೆ ಎಂದು 10 ಕೊಳಗ 3 ಖಂಡುಗ ಗದ್ದೆ, ಮೂಲಸ್ಥಾನದ ದೇವರಿಗೆ 1ಖ ಗದ್ದೆ, ಬಾಣವೂರಿನ ದೇವರಿಗೆ 3ಖ ಗದ್ದೆ, ಹೆಣ್ಣೆಯಗೆರೆಯ ದೇವರಿಗೆ 2 ಖ ಗದ್ದೆ ಸೊಜಿಲಮಾವಿನ ದೇವರಿಗೆ 2ಖ ಗದ್ದೆ ಗಳನ್ನು ದತ್ತಿಯಾಗಿ ನೀಡಿದನು[105]

**ಘಂಟೆಯ ಸಿಂಗಯ್ಯ ನಾಗಯ್ಯ:** ಇವನು 2ನೆಯ ವೀರಬಲ್ಲಾಳನ ಅಧೀನ ಅಧಿಕಾರಿ. ಇವನ ಬಿರುದುಗಳೆಂದರೆ : ಮಹಾಪಸಾಯ್ತ, ಅತಿವಿಷಮ ಹಯಾರೂಢ ಪ್ರೌಢರೇಖಾರೇವಂತ, ಪರಬಳ ಕ್ರಿತಾಂತ, ಸುತ್ತ ಬಳಸುವರ ಗಂಡ, ಅಳಂಕಂಡು ಕೆಳಹಿಡಿವರ ಗಂಡ, ವೈರಿಗೆದೆದಲ್ಲಳಂ, ನೀತಿಚಾಣಕ್ಯಂ, ಅಚಳಿತವಾಕ್ಯಂ, ಶ್ರೀಸೋಮನಾಥ ದೇವರ ಪಾದಾರಾಧಕ, ಪರಬಳ ಸಾಧಕ, ಹಿರಿಯಭೇರುಂಡನ ಮೊತ್ತದಕೂಸ ಘಂಟೆಯ ಸಿಂಗಯ್ಯ ನಾಗಯ್ಯನು ಸಾತಿಯಬ್ಬೆಗೆರೆಯನ್ನು ಸರ್ವಬಾಧಾಪರಿಹಾರವಾಗಿ ಮೆಯ್ಜೀವಿತಕ್ಕೆ ಆಳುತ್ತಿದ್ದನು. ಘಂಟೆಯ ಸಿಂಗಯ್ಯನ ಹಳ್ಳಿಯಲ್ಲಿ ಸಾಸಮುನಿದೇವರು ಸಿಂಗಯ್ಯನ ಹೆಸರಲ್ಲಿ ಸಿಂಗೇಶ್ವರ ದೇವರ ಪ್ರತಿಷ್ಠೆಯನ್ನು ಮಾಡಿಸಿದರು. ದೇವರ ನಿತ್ಯ ನೈವೇದ್ಯ ಖಂಡಸ್ಫುಟಿತ ಜೀರ್ಣೋದ್ದಾರಕ್ಕೆ ಮಠಪತಿ ತಪೋಧನರ ಆಹಾರದಾನಕ್ಕೆ ಸಮಸ್ತ ಪ್ರಜೆಗಾವುಂಡಗಳು ಸಿಂಗಯ್ಯನೂ ಉಪಸ್ಥಿತರಿದ್ದು ಸಾಸಮುನಿದೇವರಿಗೆ 4 ಸಲಗೆ ಗದ್ದೆ, 10 ಕೊಳಗ 1 ಸಲಗೆ ಬೆದ್ದಲೆಗಳನ್ನು ದಾನವಿತ್ತರು.[106] ಇವನು ತನ್ನ ಹೆಸರಿನಲ್ಲಿ ಹಳ್ಳಿಯೊಂದನ್ನು ನಿರ್ಮಿಸಿ ತನ್ನ ತಂದೆಯ ಹೆಸರಿನಲ್ಲಿ ಮಾಚಸಮುದ್ರವೆಂಬ ಕೆರೆಯನ್ನು ಕಟ್ಟಿಸಿದ್ದನು. ಸೋಮನಾಥದೇವರನ್ನು ಪ್ರತಿಷ್ಠೆ ಮಾಡಿಸಿ ಆ ದೇವರ ನಿತ್ಯ ನೈವೇದ್ಯ ಖಂಡಸ್ಫುಟಿತ ಜೀರ್ಣೋದ್ದಾರಕ್ಕೆ ಮಠಪತಿ ತಪೋಧನರ ಆಹಾರದಾನಕ್ಕೆ ಸಮಸ್ತ ಪ್ರಜೆಗಾವುಂಡಗಳು ಸಿಂಗಯ್ಯನೂ ಉಪಸ್ಥಿತರಿದ್ದು ರುದ್ರಶಕ್ತಿಯ ಪುತ್ರ ಕಲ್ಯಾಣಶಕ್ತಿಗೆ 5ಸಲಗೆ ಗದೆ, 10ಕೊಳಗ 2 ಸಲಗೆ ಹೊಲಗಳನ್ನು ದಾನವಿತ್ತರು. [107]

**ಚಮೂನಾಥ ಪದ್ಮನಾಭ:** ಇವನು ಶ್ರೀನಾರಸಿಂಹ ಹೊಯ್ಸಳ ದೇವನಾಥನ ಅಧೀನವರ್ತಿ. ಹೊಯ್ಸಳರಾಜ್ಯಲಕ್ಷ್ಮಿಯು ಸ್ಥಿರವಾಗಿ ನಿಲ್ಲಲು ಇವನು ಮುಖ್ಯಕಾರಣನಾಗಿದ್ದನೆಂದು ಕರೆಯಲ್ಪಟ್ಟಿದ್ದಾನೆ. ದಂಡನಾಥಚೂಡಾರತ್ನಂ ಎಂತಲೂ ಕೀರ್ತಿತನಾಗಿದ್ದಾನೆ. ನರಸಿಂಹನ ಅನುಮತಿ ಪಡೆದು ಅಗ್ರಹಾರ

ಬೆಳಗುಲಿಯಲ್ಲಿರುವ ಸೋಮೇಶ್ವರ ದೇವರ ವಿವಿಧ ಪೂಜಾ ಕೈಂಕರ್ಯಗಳಿಗೆಂದು ಕೆಲವು ಭೂದಾನಗಳನ್ನು ನೀಡಿದನು.[108]

**ಕಾಡಯನಾಯಕ:** ಸಾಮಂತರ ಗಂಡ, ವೈರಿ ಇಭಮ್ರಿಗಶಾರ್ದೂ‍ಳ, ಆಳೋಡಿಮರಳುವ ಸಾಮಂತರಗಂಡ, ವೀರಬಲ್ಲಾಲದೇವನ ಗಂಧವಾರಣ, ಕೆರೆಗೋಡುನಾಡಾಳ್ವ ಮಹಾಪಸಾಯಿತನಾದ ಸಾಮಂತ ಕಾಡಯನಾಯಕನು ಕಲ್ಕಣಿನಾಡಿನಲ್ಲಿರುವ ದಿಡುಗಿನ ವ್ರಿತ್ತಿಯನ್ನು ಆಳುತ್ತಿದ್ದನು. ಮಹಾಪಸಾಯಿತ, ವೀರಬಲ್ಲಾಳದೇವನ ಗಂಧವಾರಣನಾದ ಎಡವ ಜಕ್ಕಯನು ಶ್ರೀ ಬಿಲ್ಲೇಶ್ವರ ದೇವರಿಗೆ ವಿವಿಧ ಸೇವೆಗಳಿಗೆಂದು ಮಲ್ಲಿಕಜೀಯನಿಗೆ ಹಲವು ಗದ್ಯಾಣಗಳನ್ನು ದತ್ತಿಯಾಗಿ ನೀಡಿದನು[109]

ಹೀಗೆ ಈ ಅಧ್ಯಾಯದಲ್ಲಿ ಹೊಯ್ಸಳರ ಕಾಲಘಟ್ಟದಲ್ಲಿ ಬಹಳ ಮುಖ್ಯರಾದ ಅಧಿಕಾರದ ಆಯಕಟ್ಟಿನ ಜಾಗದಲ್ಲಿದ್ದ ಮಹಾಮಂಡಳೇಶ್ವರರೂ ಮತ್ತು ಅವರ ಕೈಕೆಳಗಿನ ಅಧಿಕಾರಿಗಳನ್ನು ಪರಿಚಯಿಸಲಾಗಿದೆ. ಮುಂದಿನ ಅಧ್ಯಾಯಗಳಲ್ಲಿ ಅವರ ಸಾಹಿತ್ಯಕ, ಸಾಮಾಜಿಕ, ಆರ್ಥಿಕ ಕೊಡುಗೆಗಳನ್ನು ವಿಶೇಷವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ಕೊನೆಟಿಪ್ಪಣಿಗಳು ಮತ್ತು ಆಕರಸೂಚಿ


01. ಎಪಿಗ್ರಾಫಿಯಾ ಕರ್ಣಾಟಿಕಾ (ಎ.ಕ) ಸಂಪುಟ 11 (ರೈಸ್) ದಾವಣಗೆರೆ 36
02. ಎ.ಕ.12 (ರೈ) : ತಿಪಟೂರು 2
03. ಎ.ಕ. 3 (ರೈ) : ತಿ.ನ 97
04. ಸಂಪಾದಿತ : 2001: ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ), ಕಸಾಪ, ಬೆಂಗಳೂರು, ಪುಟ 754
05. ಎ.ಕ 8 (ಪ) : ಹೊನ 103
06. ಎ.ಕ 8 (ಪ) : ಹೊನ 103 ಎ
07. ಎ.ಕ. 6 (ಪ) : ಕೃಪೇ 100
08. ಎ.ಕ 9 (ರೈ) : ಆನೇ 80
09. ಅದೇ : ಬೆಂ 133
10. ಎಆರ್ಐಈ. 1977–78. ಆರ್ಕಿಯಾಲಜಿಕಲ್ ಸರ್ವೇ ಆಫ್ ಇಂಡಿಯಾ : ನವದೆಹಲಿ : 1986 ಪುಟ 117
11. ಎ.ಕ. 10 (ರೈ) : ಮಾ 12, 13
12. ಅದೇ : ಚಿಂ 53.
13. ಅದೇ : ಕೋ 16
14. ಎ.ಕ. 9 (ರೈ) : ಹೊಸ 90
15. ಅದೇ : ಹೊಸ 75
16. ಎ.ಕ. 6 (ರೈ) : ಚಿಮ 105
17. ಅದೇ : ಶೃಂ 1
18. ಪ್ರ.ಸಂ, ಡಾ. ಕೆ. ಆರ್. ಗಣೇಶ್ : 2010 : ಗುಣಮಧುರ, ಬೆಂಗಳೂರು, ಪುಟ 430
19. ಎ.ಕ 5 (ರೈ) : ಬೇ 150
20. ಅದೇ : ಬೇ 164, 186
21. ಎ.ಕ 12 (ರೈ) : ತು 49
22. ಎ.ಕ 5 (ರೈ) : ಬೇ 167

23. ಎ.ಕ 9 (ರೈ) : ಚಪ 65
24. ಎ.ಕ 12 (ರೈ) : ತು 56
25. ಎ.ಕ. 5 (ರೈ) ; ಬೇ 166
26. ಅದೇ : ಬೇ 165
27. ಎ.ಆರ್.ಎಸ್.ಐ.ಈ 1928–29, ನಂ 262,
28. ಡಾ. ಪಿ.ವಿ.ಕೃಷ್ಣಮೂರ್ತಿ, ಡಾ. ಎಂ.ಜಿ. ನಾಗರಾಜ್ (ಸಂ) 2010: ಇತಿಹಾಸ ದರ್ಶನ : ಡಾ. ಕೆ. ವಸಂತಲಕ್ಷ್ಮಿ: 'ಸಕರಾಯಪಟ್ಟಣದ ಅಪ್ರಕಟಿತ ನಿಷಧಿ ಶಾಸನ' : ಪುಟ 33–36
29. ಡಾ. ದೇವರಕೊಂಡಾರೆಡ್ಡಿ: 2––– : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ (ಕವಿಶಾಸಂ) 2 : ಕೊಪ್ಪಳ : ಗಂಗಾವತಿ 21
30. ಎಸ್.ಐ.ಐ 16– ನಂ 9
31. ಎ.ಕ. 11 (ರೈ) : ದಾ 57
32. ಅದೇ : ಚಿದು 12
33. ಎ.ಕ. 10 (ಪ) : ಚರಾ 134
34. ಎ.ಆರ್.ಐ.ಇ : 1909: ನಂ 189: ಆರ್ಕಿಯಾಲಜಿಕಲ್ ಸರ್ವೇ ಆಫ್ ಇಂಡಿಯಾ : ನವದೆಹಲಿ
35. ಎ.ಕ 4 (ಪ) : ಚಾನ 309
36. ಎ.ಕ 3 (ಪ) : ಗುಂ 40
37. ಅದೇ : ಗುಂ 179
38. ಎ.ಕ. 4 (ಪ) : ಪಿಪ 19
39. ಕೆ.ವಿ. ರಮೇಶ್ : Inscriptions of Western Gangas, (pp. 42)
40. ಎ.ಕ 10 (ಪ) : ಅಕೆ 95
41. ಎ.ಕ. 12 (ಪ): ಕಡೂ 178
42. ಎ.ಕ. 24 (ಪ) : ಚಿನಾ 13
43. ಅದೇ :
44. ಎ.ಕ 24 (ಪ) : ಚಿನಾ 43
45. ಎ.ಕ 24 (ಪ): ಚಿ.ನಾ 16, 58, 95, 87
46. ಅದೇ : ಚಿನಾ 16
47. ಅದೇ : ಚಿನಾ 95
48. ಅದೇ : ಚಿನಾ 58
49. ಅದೇ : ಚಿನಾ 111
50. ಅದೇ : ಚಿನಾ 77
51. ಅದೇ : ಚಿನಾ 76
52. ಎ.ಕ 10 (ಪ) : ಅಕೆ 84
53. ಎ.ಕ 12 (ಪ) : ಕ 179
54. ಎ.ಕ 24 (ಪ) : ಚಿನಾ 40
55. ಎ.ಕ 12 (ಪ) ; ಕ 200
56. ಅದೇ : ಕ 201
57. ಅದೇ : ಕ 205
58. ಅದೇ : ಕ 207
59. ಎ,ಕ 24 (ಪ) : ಚಿನಾ 104
60. ಅದೇ : ಚಿನಾ 13
61. ಎ.ಕ 7 (ಪ) : ಮ 34
62. ಎ.ಕ 2 (ಪ) : ಶ್ರಬೆ 532
63. ಎ.ಕ 7 (ಪ) : ನಾಮಂ 72
64. ಎ.ಕ. 11 (ಪ) ಮೂ 29
65. ಎ.ಕ. 2 (ಪ) : ಶ್ರಬೆ 82 ಮತ್ತು 154
66. ಎ.ಕ. 9 (ರೈ) ; ಮಾ 58
67. ಎ.ಕ 24 (ಪ) ; ತುಮ 70

68. ಎ.ಕ 12 (ರೈ) : ಮದ್ದ 28
69. ಎ.ಕ 9 (ರೈ): ದೊಡ್ಡ18
70. ಎ.ಕ 9 (ರೈ) : ದೇವ 1
71. ಎ.ಕ 9 (ರೈ) : ಹೊಸ 124
72. ಎ.ಕ (ರೈ) ಅನುಬಂಧ ; ಬೆಂ 163
73. ಎಕ 10 (ಪ) ; ಅಕೆ 62
74. ಎ.ಕ 12 (ರೈ) : ಗು 30
75. ಎ.ಕ 6 (ಪ) : ಕೃ 78
76. ಎ.ಕ 7 (ಪ) : ನಾಮ 171
77. ಎ.ಕ 9 (ಪ): ಬೇ, 438
78. ಎ.ಕ 7 (ಪ) : ನಾಮಂ 64
79. ಎ.ಕ. 10 (ಪ) : ಅಕೆ 17
80. ಎ.ಕ. 10 (ಪ) : ಅಕೆ 31
81. ಎ.ಕ 10 (ಪ) : ಅಕೆ 61
82. ಎ.ಕ 10 (ಪ) : ಅಕೆ 73
83. ಕ.ವಿ.ಶಾ.ಸಂ 1 ಬಳ್ಳಾರಿ ಜಿ , ಹಡಗಲಿ,75
84. ಕ.ವಿ.ಶಾ.ಸಂ 1, ಕೋ 124 ಎ
85. ಎ.ಕ 7 (ಪ) ಮಂ 31
86. ಎ.ಕ 9 (ಪ) ಬೇ 2
87. ಎ.ಕ 9 (ಪ) : ಬೇ 221
88. ಎ.ಕ 9 (ರೈ) : ಬೆ 111
89. ಎ.ಕ 9 (ರೈ) ಬೆ 110, ನೆ 9
90. ಎ.ಕ 9 (ರೈ) : ನೆ 12
91. ಎ.ಕ 12 (ರೈ) : ತಿಪ 14
92. ಎ.ಕ 12 (ರೈ) : ತಿಪ 21
93. ಎ.ಕ 12 (ರೈ) : ತಿಪ 22
94. ಎ.ಕ 12 (ರೈ) : ತಿಪ 23
95. ಎ.ಕ 12 (ರೈ) : ತಿಪ 28
96. ಎ.ಕ 12 (ರೈ) : ತುಮ 17
97. ಎ.ಕ 12 (ರೈ) : ಗು 57
98. ಎ.ಕ 12 (ರೈ) : ತುಮ 9
99. ಎ.ಕ 6 (ಪ) : ಕೃಪೇ 62
100. ಎ.ಕ 8(ಪ) : ಹಾ 146
101. ಎ.ಕ. 9 (ಪ) : ಬೇ 17
102. ಎ.ಕ. 9 (ಪ) : ಬೇ 17
103. ಎ.ಕ. 9 (ಪ) : ಬೇ 34
104. ಎ.ಕ. 9 (ಪ) : ಬೇ 473
105. ಎ.ಕ. 10 (ಪ) :ಅಕೆ, 114
106. ಎ.ಕ. 10 (ಪ) :ಅಕೆ 117
107. ಎ.ಕ. 10 (ಪ) :ಅಕೆ, 118, 1214)
108. ಎ.ಕ. 10 (ಪ) :ಚಪ 96
109. ಎ.ಕ. 10 (ಪ) : ಚಪ 125

## ಅಧ್ಯಾಯ 4

## ಕನ್ನಡ ಭಾಷೆ, ಸಾಹಿತ್ಯ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು

ಜ್ಞಾನಕ್ಕೆ ಮಾಧ್ಯಮಗಳು ಹಲವು. ಮಾನವನ ಆಶಯ, ಹಂಬಲ, ಅಭಿಲಾಷೆ ಇತ್ಯಾದಿಗಳೆಲ್ಲದರ ಅಭಿವ್ಯಕ್ತಿಗೆ ಲಿಪಿ, ಭಾಷೆ, ಸಾಹಿತ್ಯಗಳು ಮಾಧ್ಯಮಗಳೆಂಬುದರಲ್ಲಿ ಸಂಶಯವಿಲ್ಲ. ಈ ಮೂರು ಪ್ರಧಾನವಾದ ಸಂಗತಿಗಳಿಂದ ಬದುಕಿದ, ಬದುಕುತ್ತಿರುವ ಜನಸಮುದಾಯಗಳ ಅನೇಕ ಬಗೆಯ ಜ್ಞಾನಕೌಶಲ್ಯಗಳು ನಮ್ಮ ಅರಿವಿಗೆ ದಕ್ಕುವುವು. ಅಂತೆಯೇ ಹೊಯ್ಸಳ ಅರಸರ ಅಧೀನವರ್ತಿಗಳಾಗಿದ್ದ ಮಹಾಮಂಡಳೇಶ್ವರರ ಶಾಸನಗಳಿಂದ ಅಂದಿನ ಜನಜೀವನದ ಹಲವು ಬಗೆಯ ಸ್ಥಿತಿಗತಿಗಳು ನಮಗೆ ತಿಳಿದುಬರುತ್ತದೆ. ಇದಕ್ಕೆ ಮೂಲಮಾತೃಕೆಗಳಾದ ಕನ್ನಡ ಭಾಷೆ, ಲಿಪಿ, ಸಾಹಿತ್ಯ ಸಂವರ್ಧನೆಗೆ ಈ ಮಹಾಮಂಡಳೇಶ್ವರರು ನೀಡಿದ ಕೊಡುಗೆಗಳ ವಿವೇಚನೆಯನ್ನು ಪ್ರಕೃತ ಅಧ್ಯಯನವು ಒಳಗೊಂಡಿದೆ.

### 4.1 ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳ ಲಿಪಿವಿನ್ಯಾಸ :

ಹೊಯ್ಸಳರು, ಕಲ್ಯಾಣದ ಚಾಲುಕ್ಯರ ನಂತರ ಕರ್ನಾಟಕದ ಸಾರ್ವಭೌಮರಾದವರು. ಹಾಗಾಗಿ ಇವರ ಪ್ರಾರಂಭಿಕ ಕಾಲಘಟ್ಟದಲ್ಲಿ ಕಲ್ಯಾಣದ ಚಾಲುಕ್ಯರ ಶಾಸನಗಳ ಲಿಪಿವಿನ್ಯಾಸವು ಮುಂದುವರೆಯಿತು. ಅಚ್ಚ ಹೊಯ್ಸಳ ಲಿಪಿಯೆಂದರೆ ಕ್ರಿ.ಶ. 1050 ರಿಂದ 1345ರವರೆಗೆ ಹೊಯ್ಸಳರ ಶಾಸನಗಳಲ್ಲಿ ಮೂಡಿಬಂದಿರುವ ಲಿಪಿಯೆಂದು ತೋರುತ್ತದೆ. ಈ ಅವಧಿಯಲ್ಲಿ ಜನರಲ್ಲಿ ಅಕ್ಷರಪ್ರಜ್ಞೆಯು ವಿಶಾಲವಾಗಿ ಮೂಡುವುದರಲ್ಲಿ ಹೊಯ್ಸಳರ ಕಾಲದ ವಿದ್ಯಾಭ್ಯಾಸವು ಮಹತ್ತರವಾದ ಪಾತ್ರವನ್ನು ವಹಿಸಿತು ಎಂದು ತಿಳಿಯಬೇಕಾಗಿದೆ. ಹಾಗಾಗಿಯೇ ಜನಸಾಮಾನ್ಯರಿಗೆ ಹೆಚ್ಚು ಹತ್ತಿರವಾದ ಲಿಪಿಯು ರಾಜಪೋಷಣೆಯಲ್ಲಿ ಅತ್ಯಂತ ನಿಪುಣ ಲಿಪಿಕಾರರ ದೆಸೆಯಿಂದ ಒಂದು ಸ್ಥಿರರೂಪವನ್ನು ಪಡೆಯಿತು. ಇದಕ್ಕೆ ಮುಖ್ಯಕಾರಣವೆಂದರೆ ಸ್ಥಳೀಯವಾಗಿ ಆಡಳಿತರೂಢರಾಗಿದ್ದ ಸಾರ್ವಜನಿಕ ಸಂಪರ್ಕಾಧಿಕಾರಿಗಳಾಗಿ ಮಹತ್ತರ ಪಾತ್ರವಹಿಸಿದ್ದ ಮಹಾಮಂಡಳೇಶ್ವರರು ಆಳರಸರ ಶಾಸನಗಳನ್ನು ಜನರಿಗೆ ತಲುಪಿಸಲು ಈ ಲಿಪಿಕಾರರ ತಂಡಗಳನ್ನೇ ಮಾಡಿ ಅವರಿಗೆ ಈ ಹೊಯ್ಸಳ ಲಿಪಿಯ ಸೂಕ್ಷ್ಮತೆಗಳನ್ನು ಅರಿಯುವಂತೆ ಮಾಡಿ ಆ ಲಿಪಿಕಾರರ ಕುಟುಂಬಗಳನ್ನು ಪೋಷಿಸುತ್ತಾ ತಾವೇ ಶಾಸನಗಳನ್ನು ಹಾಕಿಸುತ್ತಿದ್ದರು. ಶಾಸನಗಳ ಅಲಂಕಾರಗಳು ಹೆಚ್ಚಾಗಿ ಕಂಡುಬಂದದ್ದು ಸಹ ಒಂದು ವಿಶೇಷ ಸಂಗತಿ. ಈ ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳ ಲಿಪಿ ಸೊಬಗನ್ನು ಬಿಂಬಿಸುವ ಅಂಶಗಳು ಈ ಮುಂದಿನಂತಿವೆ.

೦೧. ಅಕ್ಷರಗಳು ದುಂಡಾಗಿದ್ದು ಸುಂದರವಾದ ಚೌಕಟ್ಟಿಗೆ ಒಳಗಾಗಿವೆ.

೦೨. ಪಂಕ್ತಿಗಳನ್ನು ಹಾಕಿ ಬರೆದಿವೆಯೇನೋ ಎಂಬಂತೆ ಚಿಕ್ಕದಾದ, ಚೊಕ್ಕವಾದ ಅಕ್ಷರಗಳ ರಚನಾತ್ಮಕತೆಯಿದೆ.

೦೩. ಈ ಹಿಂದಿನ ಲಿಪಿಗಳಿಗಿಂತ ಹೆಚ್ಚು ರೇಖಾ ಸ್ಫುಟತೆಯನ್ನು ಹೊಂದಿವೆ.

೦೪. ಅಕ್ಷರಗಳ ಬಾಗುವಿಕೆಗಳಲ್ಲಿ ಒಂದು ಬಗೆಯ ಆಕರ್ಷಕವಾದ ಮುದ್ದಾದ ಬಾಗುವಿಕೆ ಎದ್ದುಕಾಣುತ್ತದೆ.

೦೫. 12ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ವರ್ಣಮಾಲೆಯ ಎಲ್ಲ ಅಕ್ಷರಗಳು ಈ ಲಿಪಿಯಲ್ಲಿವೆ.

೦೬. 'ಱ', 'ೞ' ಗಳ ಬಳಕೆಯು ವ್ಯಾಕರಣದ ನಿಯಮಗಳಿಗನುಗುಣವಾಗಿ ನಿಯತವಾಗಿ ಪ್ರಯೋಗಗೊಂಡಿವೆ.

೦೭. ಅಂಕಿಗಳ ಅರ್ಹ ಬಳಕೆಯಿದೆ.

೦೮. 'ಬ' ಮತ್ತು 'ಚ' ಗಳು ಒಂದೆ ತೆರನಾಗಿರುವಂತೆ ಕಾಣುತ್ತವೆ.

೦೯. ಮಹಾಪ್ರಾಣ 'ಭ' ಕಾರವನ್ನು ಗಮನಿಸಿದರೆ ಅದರ ಹೊಕ್ಕಳ ಭಾಗದಲ್ಲಿ ಸ್ವಲ್ಪ ಸ್ಥಳ ಬಿಡಲಾಗಿದೆ.

೧೦. 'ಶ್ರೀ'ಕಾರವು ಹೊಸಗನ್ನಡದ ಶ್ರೀಕಾರಕ್ಕೆ ಹೆಚ್ಚು ಹತ್ತಿರವಾಗಿ ಕಂಡುಬರುತ್ತದೆ.

೧೧. 'ಕ'ಕಾರವು ಕೆಲವೊಮ್ಮೆ 'ರ'ಎಂಬ ಭ್ರಮೆಯನ್ನುಂಟುಮಾಡುತ್ತದೆ.

೧೨. ಅನುಸ್ವಾರವು ಅಕ್ಷರದ ಪಕ್ಕಕ್ಕೆ ಸ್ಥಾನ ಪಡೆದಿದೆ.

೧೩. ಅನುಸ್ವಾರಗಳನ್ನು ಕೆಲವೊಮ್ಮೆ ಶಾಸನಾಕ್ಷರಗಳ ಸಾಲಿನ ಮೇಲೆ, ಸಾಲಿನ ನಡುವೆ ಅನಿಯತವಾಗಿ ಬರೆಯಲಾಗಿದೆ. ಅನುಸ್ವಾರದ ಸ್ಥಾನದಲ್ಲಿ ಬಿಂದುವಿಗೆ ಬದಲಾಗಿ ಕೆಲವೊಮ್ಮೆ ಅನುನಾಸಿಕಗಳು(ಙ,ಞ,ಣ,ನ,ಮ) ಪ್ರಯೋಗಗೊಂಡಿವೆ.

೧೪. ವ್ಯಂಜನಗಳೊಂದಿಗೆ ಸೇರಿರುವ ಏತ್ವ ಮತ್ತು ಓತ್ವಗಳು ಮೊದಲಿಗಿಂತಲೂ ಹೆಚ್ಚು ಸ್ಪಷ್ಟ ಆಕಾರವನ್ನು ಪಡೆದುಕೊಂಡಿವೆ.

೧೫. 'ರ'ಕಾರದ ಒತ್ತಕ್ಷರವು ಒಂದು ಸುತ್ತುಬಂದಿದ್ದರೂ ಆ ಗೆರೆ ಹಿಂದಿನ ಗೆರೆ ಸೇರಿ ವೃತ್ತಾಕಾರವನ್ನು ಸೃಷ್ಟಿಸಿಲ್ಲ.

೧೬. 'ಶ'ಕಾರವನ್ನು ಹೆಚ್ಚು ಆಕರ್ಷಕವಾಗಿ ಕಾಣಿಸಲೆಂದೋ ಏನೋ ಮೇಲ್ಭಾಗದಲ್ಲಿ ಒಂದು ವೃತ್ತಕಾರದ ಸಣ್ಣ ಸುರುಳಿ ಕಂಡುಬರುತ್ತದೆ.

೧೭. 'ಥ'ಕಾರವು ಈಗಿನ ಕನ್ನಡ ಸ್ವರೂಪಕ್ಕೆ ಬಂದುಬಿಟ್ಟಿದೆ. ಆದರೆ ಅದರ ಮಧ್ಯದಲ್ಲಿ ಕೆಲವೊಮ್ಮೆ ಚುಕ್ಕೆ ಕಾಣಿಸಿಕೊಂಡರೆ, ಮತ್ತೆ ಕೆಲವೊಮ್ಮೆ ಸಣ್ಣ ವೃತ್ತವೊಂದು ಕಾಣುತ್ತದೆ. ಜೊತೆಗೆ ಅದರ ಕೆಳಭಾಗದಲ್ಲಿ ಹೊಕ್ಕಳು ಸೀಳಿಲ್ಲದಿರುವುದು ವಿಶೇಷ.

೧೮. 'ಯ'ಕಾರದ ಒತ್ತಕ್ಷರವು ಈ ಮೊದಲು ನೇರವಾಗಿ ಅಕ್ಷರದಿಂದ ಪ್ರಾರಂಭವಾಗಿ ಗೆರೆಯು ಮುಂದಕ್ಕೆ ಬಂದು ಬಾಗಿ ಸಮಾನಾಂತರವಾಗಿ ಬೆಳೆದು ಮೇಲಕ್ಕೆ ಬಂದಿತ್ತು. ಈ ಹಂತದಲ್ಲಿ ಅಕ್ಷರದಿಂದಲೇ ಪ್ರಾರಂಭವಾಗಿ ಒಂದು ಸಣ್ಣಗೆರೆ ನೇರವಾಗಿ ಇಳಿದು ಎಡಕ್ಕೆ ತಿರುಗಿ ಅರೆವೃತ್ತವನ್ನು ಸೃಷ್ಟಿಸಿ ನೇರವಾಗಿ ಮೇಲಕ್ಕೆ ಹೋಗಿದೆ.

೧೯. ವಿಶೇಷವಾಗಿ 'ಐ'ಕಾರವು ಅರ್ಧವೃತ್ತಾಕಾರವಾಗಿ ಮತ್ತೆ ಮೇಲಕ್ಕೆ ಹೋಗಿದ್ದು ಸುಂದರವಾಗಿದೆ.

೨೦. ಹಲವು ಒತ್ತಕ್ಷರಗಳು ಸ್ವಲ್ಪ ಹೆಚ್ಚೇ ಎನ್ನುವಂತೆ ಗಾತ್ರದಲ್ಲಿ ಅವು ಸೇರಿರುವ ವ್ಯಂಜನಗಳ

ಗಾತ್ರಗಳಿಗಿಂತ ದೊಡ್ಡದಾಗಿ ಮತ್ತು ಹೆಚ್ಚು ಆಕರ್ಷಕವಾದ ಶೈಲಿಯಲ್ಲಿ ಮುದ್ದು ಸೂಸುತ್ತವೆ.

೨೧. ಎಲ್ಲಕ್ಕಿಂತ ವಿಶೇಷವೆಂದರೆ, ಕ್ರಿ. ಶ 1200ರ ತರುವಾಯ ಹೊಯ್ಸಳರು ತಮ್ಮ ಗಮನವನ್ನು ದಕ್ಷಿಣ ಕರ್ನಾಟಕದ ಜೊತೆಗೆ ತಮಿಳುನಾಡಿನ ರಾಜಕೀಯದ ಕಡೆಗೂ ಹರಿಸಿದರು. ಹೀಗಾಗಿ ಇವರ ಕಾಲದಲ್ಲಿ ತಮಿಳುಭಾಷೆಯ ತಮಿಳು ಲಿಪಿಯ ಶಾಸನಗಳು ರಚಿತವಾದವು. ತಮಿಳಿನ ಅನೇಕ ಅಧಿಕಾರಿಗಳು ದಕ್ಷಿಣ ಕರ್ನಾಟಕದ ಅನೇಕ ಕಡೆ ನೆಲಸಿದ್ದರು. ಹೀಗಾಗಿ ತಮಿಳಿನ ಪ್ರಭಾವವು ಕನ್ನಡ ಭಾಷೆಯ ಮೇಲುಂಟಾಗಿತ್ತು. ಆದರೆ ಮುಮ್ಮಡಿ ವೀರಬಲ್ಲಾಳನ ಶಾಸನಗಳಲ್ಲಿ ಕೆಲವೇ ಕೆಲವು ಶಾಸನಗಳು ತಮಿಳು ಲಿಪಿ ಮತ್ತು ಕನ್ನಡ ಭಾಷೆಯಲ್ಲಿರುವುದು ವಿಶೇಷವಾಗಿದೆ. ಆದರೆ ಈ ಕಾಲಘಟ್ಟದ ರಾಜರ ಶಾಸನಗಳು ತಮಿಳಿನಲ್ಲೆ ಇದ್ದರೂ ಈ ಮಹಾಮಂಡಳೇಶ್ವರರು ಸ್ವತಃ ತಾವೇ ಹಾಕಿಸಿರುವ ಶಾಸನಗಳು ಮಾತ್ರ ಪೂರ್ಣವಾಗಿ ಕನ್ನಡದಲ್ಲಿಯೇ ಇವೆ. ಅಷ್ಟರಮಟ್ಟಿಗೆ ಇವರು ಸ್ಥಳೀಯವಾದ ಕನ್ನಡ ಭಾಷೆ ಮತ್ತು ಲಿಪಿಗಳ ಉಳಿವಿಗೆ ಮತ್ತು ಸಂವರ್ಧನೆಗೆ ಕಾರಣರಾಗಿದ್ದಾರೆ.

### 4.2 ಹೊಯ್ಸಳ ಮಹಾಮಂಡಳೇಶ್ವರರಿಂದ ಸಂವರ್ಧನೆಗೊಂಡ ಕನ್ನಡ ಭಾಷೆಯ ಸ್ವರೂಪ

ಹೊಯ್ಸಳ ಮಹಾಮಂಡಳೇಶ್ವರರಿಂದ ಸಂವರ್ಧನೆಗೊಂಡ ಕನ್ನಡಭಾಷೆಯ ಸ್ವರೂಪವನ್ನು ವಿವೇಚಿಸುವ ಸಂದರ್ಭದಲ್ಲಿ ನಡುಗನ್ನಡ ಭಾಷೆಯ ಲಕ್ಷಣಗಳನ್ನು ಲಕ್ಷ್ಯದಲ್ಲಿರಿಸಿಕೊಳ್ಳುವುದು ಮುಖ್ಯ. ಹಾಗಾಗಿ ಈ ನಡುಗನ್ನಡ ಭಾಷೆಯ ಹಲವು ಲಕ್ಷಣಗಳನ್ನು ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ಮತ್ತು ಸ್ವತಃ ಅವರೇ ವಿರಚಿಸಿದ ಕೃತಿಗಳಲ್ಲಿ ಹಾಗೂ ಅವರು ಆಶ್ರಯ ನೀಡಿದ್ದ ಕವಿಕೃತಿಗಳಲ್ಲಿರುವ ಕನ್ನಡ ಶಬ್ದಗಳಲ್ಲಿ ಈ ಮುಂದಿನಂತೆ ಕಾಣಬಹುದು–

1. ಹಳಗನ್ನಡದಲ್ಲಿ ಅಪರೂಪವಾಗಿದ್ದ 'ಪ'ಕಾರ 'ಹ'ಕಾರವಾಗುವ ಪ್ರಕ್ರಿಯೆ ನಡುಗನ್ನಡದಲ್ಲಿ ಹೆಚ್ಚು ಪ್ರಾಚುರ್ಯ ಪಡೆಯಿತು. 12ನೆಯ ಶತಮಾನದ ಶಾಸನಗಳಲ್ಲಿಯೂ ಸಾಹಿತ್ಯದಲ್ಲಿಯೂ ಹೆಚ್ಚಾಗುತ್ತಾ ನಡೆದ 'ಹ' 13ನೆಯ ಶತಮಾನಗಳಲ್ಲಿ ಇನ್ನೂ ಹೆಚ್ಚಾಗಿ ಬಳಕೆಯಾಗುತ್ತಿತ್ತು. ಉದಾ : ಪಾಯ್ದು> ಹಾಯ್ದು [1]
2. ದ್ರಾವಿಡಭಾಷಾ ಪರಿವಾರದಲ್ಲಿ ಕನ್ನಡವನ್ನು ಸ್ವತಂತ್ರ ಭಾಷೆಯನ್ನಾಗಿ ಸ್ಥಾಪಿಸುವ ಲಕ್ಷಣಗಳಲ್ಲಿ ಒಂದಾದ 'ವ'ಕಾರ 'ಬ'ಕಾರವಾಗುವ ಕ್ರಿಯೆ ಹಳಗನ್ನಡದಲ್ಲಿಯೇ ಪ್ರಾರಂಭವಾಗಿ, ನಡುಗನ್ನಡದಲ್ಲಿಯೇ ಹೆಚ್ಚಾಯಿತು.ಉದಾ : ವಡೆದಿರ್ದಳ್> ಬಡೆದಿರ್ದಳ್[2]
3. ಹಳಗನ್ನಡ ಕಾಲಕ್ಕೆ ಎರಡು ಭಿನ್ನ ವರ್ಣಗಳಾಗಿದ್ದ 'ಱ' ಮತ್ತು 'ರ್' ಗಳು ಕನ್ನಡದಲ್ಲಿ ಅಂತಿಮವಾಗಿ ಒಂದಾಗುವ ಕ್ರಿಯೆ ನಡುಗನ್ನಡಕ್ಕೆ ನಾಂದಿಯಾಯಿತು. 12ನೆಯ ಶತಮಾನದ ಮಧ್ಯಭಾಗದಲ್ಲಿ ಪ್ರಾರಂಭವಾದ ಱ್ > ರ ಬದಲಾವಣೆ 13ನೆಯ ಶತಮಾನದ ಹೊತ್ತಿಗೆ ಸಂಪೂರ್ಣವಾಯಿತು. ಹಿಂದೆ ಎರಡಾಗಿದ್ದ ವರ್ಣಗಳು ಒಂದರೊಳಗೊಂದು ಕೂಡಿ, ಒಂದೇ

ಆದವು. ಇಂದು ಬಳಕೆಯಲ್ಲಿರುವ 'ರ'ದಲ್ಲಿ ಹಿಂದಿನ 'ಱ್' ಮತ್ತು 'ರ್' ಎರಡೂ ಇವೆ. ಉದಾ– ಹುಳಿಯೆಱು> ಹುಳಿಯೇರು.[3]

4. ಇದೇ ಮಾದರಿಯ ಇನ್ನೊಂದು ಬದಲಾವಣೆ 'ೞ' ಎನ್ನುವುದು 'ಳ್' ಆದದ್ದು. ಉಚ್ಚಾರಣೆಯ ತೊಂದರೆಯ ಮೂಲಕವೊ ಅಥವಾ ಸಂದಿಗ್ದತೆಯ ಮೂಲಕವೊ ಅಂತೂ ಬದಲಾಗಲಾದ ೞ > ಳ್ ವರ್ಣದೊಡನೆ ಸಮರೂಪ ಹೊಂದಿತು.ಉದಾ–ಪೊಗೞಲ್>ಪೊಗಳಲ್, ನೆಗೞ್> ನೆಗಳ್[4]
5. ಹಳಗನ್ನಡದಲ್ಲಿ ಸಾಮಾನ್ಯವಾಗಿ ಬಳಕೆಯಾಗುವ ಪ್ರೇರಣಾರ್ಥಕವಾದ 'ಇಸು' ಪ್ರತ್ಯಯವು (ಉದಾ–ನಿಶಿಧಿಯನ್ನು ಮಾಡಿಸಿದಳ್) ನಡುಗನ್ನಡದಲ್ಲಿ ಸಾರ್ವತ್ರಿಕವಾಗಿ ಬಳಕೆಯಾಗುತ್ತಿತ್ತೇನೋ ನಿಜ .ಆದರೆ 'ಇಸು' ಪ್ರತ್ಯಯದ ಬದಲಿಗೆ ಕೆಲವೊಮ್ಮೆ ಇಪು ಪ್ರತ್ಯಯವು ಕೆಲವು ಶಾಸನಗಳಲ್ಲಿವೆ.ಉದಾ ಸ್ಮರಯಿಪ[5]
6. ಶಬ್ದಗಳ ಅಂತ್ಯಸ್ಥಾನದಲ್ಲಿರುವ 'ನ್' ಧ್ವನಿ ನಡುಗನ್ನಡ ಕಾಲಕ್ಕೆ ಕರಗಹತ್ತಿತ್ತು. ಮಗನ್, ಅವನ್ ಮುಂತಾದ ಶಬ್ದಗಳಲ್ಲಿಯ ನ್ ಬಿದ್ದುಹೋಗಿ ಅವು 'ಮಗ', 'ಅವ' ರೂಪಗಳಾದದ್ದು 11ನೇ ಶತಮಾನದ ಶಾಸನಗಳಿಂದ ತಿಳಿದುಬರುತ್ತದೆ.ಉದಾ ಮಗನ್ > ಮಗ[6]
7. ಹೊಯ್ಸಳ ಮಹಾಮಂಡಳೇಶ್ವರರ ವಿಶಾಲ ಪ್ರಾದೇಶಿಕ ಮತ್ತು ಅಧಿಕಾರವ್ಯಾಪ್ತಿಯ ಕಾರಣದಿಂದ ಅವರ ಶಾಸನಗಳಲ್ಲಿ ಕನ್ನಡ, ಸಂಸ್ಕೃತ ಭಾಷೆಗಳು ಅತ್ಯಧಿಕ ಪ್ರಮಾಣದಲ್ಲಿ ರಚನೆಯಲ್ಲಿ ಮಿಳಿತವಾಗಿವೆ. ಕೆಲವು ಶಾಸನಗಳು ತಮಿಳು ಭಾಷಿಕವಾಗಿವೆ. ಗಂಗರಾಜನ ಶ್ರವಣಬೆಳಗೊಳದಲ್ಲಿನ ಒಂದು ಶಾಸನದಲ್ಲಿ ಮಾತ್ರ ಮರಾಠಿ ಭಾಷೆ ಬಳಕೆಯಾಗಿದೆ. [7]
8. ಭೂತಕಾಲದಲ್ಲಿ ಪ್ರಥಮ ಪುರುಷದ ಬಹುವಚನದ ಆಖ್ಯಾತ ಪ್ರತ್ಯಯಗಳ ಹ್ರಸ್ವಸ್ವರಾದಿ 'ಅರ್' ಎಂಬುದು ದೀರ್ಘಸ್ವರಾದಿಯಾಗಿ 'ಆರ್' ಎಂದಾಗಿದೆ– ಉದಾ : ಕೊಟ್ಟಾರ್ [8]
9. ಅನುಸ್ವಾರಕ್ಕೆ ಬದಲಾಗಿ ಣಕಾರವೆಂಬ ಅನುನಾಸಿಕವನ್ನು ಬಳಸಿದೆ. ಉದಾ : ಗಂಗದಂಡೇಶ > ಗಂಗದಣ್ಡೇಶ [9]
10. ಸರೇಫ ವ್ಯಂಜನಾಕ್ಷರವನ್ನು ದ್ವಿತ್ವ ಮಾಡಿ ಬರೆದಿದೆ : ಉರ್ವರೆ> ಉರ್ವ್ವರೆ [10]
11. ಅಬಿಂದುಕ ಪದರೂಪಗಳು ಸಬಿಂದುಕಗಳಾಗಿ ಪರಿವರ್ತನೆಯಾದವು. ಉದಾ : ನಿನ್ನ>ನಿಂನ [11] ಸಮ್ಯಕ್ತ್ವ > ಸಂಮ್ಯಕ್ತ್ವ [12]
12. ಒಂದೇ ಪದದ ಭಿನ್ನ ರೂಪಗಳಿವೆ. ಉದಾ: ಗೊಂಮಟ, ಗೊಮ್ಮಟ [13]
13. ಹಲವು ಪ್ರಕೃತಿ ರೂಪಗಳ ಪ್ರಯೋಗಗಳಿವೆ. ಉದಾ : ಗೋವಿದೇವಂ > ಗೋವಿದೇವ[14]
14. ವಾಕ್ಯಸಂಧಿಗೆ ಹಲವು ಉದಾಹರಣೆಗಳು ದೊರೆಯುತ್ತವೆ. ಉದಾ: ಮೇಲೆ ಒಂದು>ಮೇಲೆವಂದು,ಪೊಡರಿಸಿ ಒಂದು> ಪೊಡರಿಸಿವೊಂದು [15]
15. ಲ ಕಾರಕ್ಕೆ ಬದಲಾಗಿ ಳ, ೞ ಕಾರಗಳು ಬಂದಿರುವ ಉದಾಹರಣೆಗಳುಂಟು. ಉದಾ : ಬಾಲಚಂದ್ರ>ಬಾಳಚಂದ್ರ [16] ನಿಲಯ>ನಿಳಯ[17]

ಪ್ರಸ್ತುತ ಪ್ರಬಂಧದಲ್ಲಿ ವಿಶ್ಲೇಷಿಸುತ್ತಿರುವ ಭಾಷೆಯ ಸ್ವರೂಪ ಪ್ರಚಲಿತವಾಗಿದ್ದರೆ ಅದನ್ನು ಮಾತನಾಡುವ ಜನರ ಹತ್ತಿರ ಹೋಗಿ ಅದನ್ನು ವಿಶ್ಲೇಷಿಸಬಹುದಿತ್ತು. ಅದೇ ನಾವು ವಿಶ್ಲೇಷಿಸುತ್ತಿರುವ ರೂಪು ಹಿಂದಿನ ಕಾಲದ್ದಾಗಿದ್ದರೆ ಆ ಕಾಲದ ದಾಖಲೆಗಳೆ ನಮಗೆ ಆಧಾರ. ಈ ದಾಖಲೆಗಳೆಂದರೆ ಕವಿಕೃತಿಗಳು ಹಾಗೂ ಶಾಸನಗಳು. ಈ ದಾಖಲೆಗಳಲ್ಲಿ ಕಂಡುಬರುವ ರೂಪಗಳು ಆ ಕಾಲದ ಜನರ ಭಾಷೆಯ ಪ್ರತಿನಿಧಿಗಳೆಂದು ಗ್ರಹಿಸಿ ಮುಂದೆ ಸಾಗಬೇಕಾಗುತ್ತದೆ. ಆದರೆ ಈ ಗ್ರಹಿಕೆಯಲ್ಲಿ ಅನೇಕ ತೊಂದರೆಗಳಿವೆ. ಕನ್ನಡದಲ್ಲಿ (ಉಳಿದ ಭಾಷೆಗಳಲ್ಲಿಯೂ ಇದು ಸಾಮಾನ್ಯವಾಗಿ ಕಂಡುಬರುವ ಪರಿಸ್ಥಿತಿ) ಜನಭಾಷೆಗೂ ವಿದ್ವದ್ಭಾಷೆಗೂ ಇರುವ ಅಂತರ ಬಹಳ. ಇವೆರಡೂ ಬೇರೆ ಭಾಷೆಗಳೇ ಎನ್ನುವಷ್ಟು ಅಲ್ಲಿ ವ್ಯತ್ಯಾಸಗಳು. ಇದಕ್ಕೆ ಕಾರಣ ಬದಲಾಗುತ್ತಿರುವ ಭಾಷೆ ಜನರ ಬಾಯಲ್ಲಿ ಸ್ಥಾನ ಪಡೆಯುತ್ತದೆ. ಆದರೆ ಈ ಬದಲಾವಣೆಯ ಪ್ರಭಾವ ಕವಿಕೃತಿಗಳಲ್ಲಿ ಕಂಡು ಬರುತ್ತದೆಯೆಂದು ಹೇಳಲು ಬರುವುದಿಲ್ಲ. ಹೆಚ್ಚಾಗಿ ವಿದ್ವಾಂಸರಿಗೆ ಈ ಬದಲಾವಣೆ ಅಗ್ರಾಹ್ಯವಾಗಿಯೇ ತೋರಿ ಅವರು ಹಳೆಯ ರೂಪಗಳನ್ನಷ್ಟೇ ತಮ್ಮ ಕೃತಿಗಳಲ್ಲಿ ಬಳಸುತ್ತಾರೆ ಹೀಗಾಗಿ ಒಂದು ಕೃತಿ ಒಂದು ಕಾಲದಲ್ಲಿ ರಚಿತವಾಗಿದ್ದರೂ ಅದು ಆ ಕಾಲದ ಭಾಷಾವಸ್ಥೆಯ ಪ್ರಾತಿನಿಧಿಕ ಕೃತಿಯೇ ಅಲ್ಲವೇ ಎನ್ನುವುದನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಳ್ಳಬೇಕಾಗುತ್ತದೆ. ನಡುಗನ್ನಡದಲ್ಲಿಯೇ ಇದಕ್ಕೆ ಉತ್ತಮ ಉದಾಹರಣೆ ಸಿಕ್ಕುತ್ತದೆ. ಸಾಂಪ್ರದಾಯಿಕವಾಗಿ ಹಳಗನ್ನಡದಲ್ಲಿಯೇ ತನ್ನ ಗಿರಿಜಾಕಲ್ಯಾಣವನ್ನು ರಚಿಸಿದ ಹರಿಹರ 12ನೆಯ ಶತಮಾನದ ಕ್ರಾಂತಿಯ ಪ್ರಭಾವಳಿಯಲ್ಲಿ ಆ ಕಾಲದ ಭಾಷೆಯಲ್ಲಿಯೇ ರಗಳೆಗಳನ್ನು ಬರೆದ.

ಒಂದು ಕಾಲದ ಪ್ರಾತಿನಿಧಿಕ ಕೃತಿಗಳನ್ನು ಆಯ್ಕೆಮಾಡಿದ ಮೇಲೆ ಅದರಲ್ಲಿರುವ ರೂಪಗಳ ನಿಷ್ಕರ್ಷೆಯಾಗಬೇಕು. ಲಿಪಿಕಾರನ ಸ್ವತಂತ್ರ ಮನೋವೃತ್ತಿಯ ಮೂಲಕವೋ ಪ್ರಾದೇಶಿಕ ಭಿನ್ನತೆಯ ಮೂಲಕವೋ ಕಾಲಭಿನ್ನತೆಯ ಮೂಲಕವೋ ಅಥವಾ ತಪ್ಪನ್ನು ಸರಿಮಾಡುವ ಹಂಬಲದಿಂದಲೋ ಒಂದು ಕೃತಿಯ ನಕಲು ಮಾಡುವಾಗ ಬದಲಾವಣೆಗಳಾಗುತ್ತದೆ. ಇವುಗಳನ್ನೆಲ್ಲ ಲಕ್ಷ್ಯದಲ್ಲಿಟ್ಟುಕೊಂಡು ಮೂಲರೂಪವನ್ನು ನಿರ್ಣಯಿಸಬೇಕಾಗುತ್ತದೆ. ಇದು ಗ್ರಂಥಸಂಪಾದಕರ ಹೊಣೆ. ಈ ರೂಪ ನಿರ್ಣಯದಲ್ಲಿಯೂ ಸಂಪಾದಕರ ಅಳತೆಗೋಲುಗಳ ಭಿನ್ನತೆಯ ವ್ಯತ್ಯಾಸವಾಗುವುದುಂಟು. ಈ ಪರಿಸ್ಥಿತಿಯಲ್ಲಿ ಇದೇ ರೂಪ ಸರಿಯೆಂದು ಸಾಧಿಸುವುದು ಹೇಗೆ? ಹೀಗಾಗಿ ವಿಶ್ಲೇಷಣೆಯ ಖಚಿತತೆಗೆ ಭಂಗ ಬರುತ್ತದೆ. ಒಟ್ಟಿನಲ್ಲಿ ಈ ಕೆಲಸ ಅತಿ ಕಠಿಣವಾದುದು. ಅನ್ಯಮಾರ್ಗವಿಲ್ಲದ್ದರಿಂದ ಬಹುಜನಸಮ್ಮತವಾದ ವಿದ್ವಾಂಸರ ಆವೃತ್ತಿಯನ್ನು ಆರಿಸಿಕೊಂಡು ಕಾರ್ಯ ಮಾಡಬೇಕಾಗಿದೆ. ಇಂತಹ ಪರಸ್ಥಿತಿಯಲ್ಲಿ ಸಹಾಯಕವಾಗಬಹುದಾದ ಇನ್ನೊಂದು ಪ್ರಬಲ ಅಂಶವೆಂದರೆ ಶಾಸನಗಳು. ಶಾಸನಗಳು ಜನಭಾಷೆಗೆ ಸಮೀಪವೆಂಬ ಅಭಿಪ್ರಾಯ ವಿದ್ವಜ್ಜನ ಸಮ್ಮತವಾಗಿದ್ದು, ಇಲ್ಲಿ ಕಂಡುಬರುವ ರೂಪಗಳು ಖಚಿತ ಆಧಾರಗಳಾಗುತ್ತವೆ. ಇದಕ್ಕೂ ಹೆಚ್ಚಾಗಿ ಈ ರೂಪಗಳು ಗ್ರಂಥಸ್ಥ ಭಾಷೆಯ ರೂಪಗಳ ಸಂದಿಗ್ಧತೆಯಲ್ಲಿ ಸಹಾಯಕವಾಗುತ್ತದೆ. ನಮ್ಮ ವಿಶ್ಲೇಷಣೆಯನ್ನು ಈ ಹಿನ್ನೆಲೆಯಲ್ಲಿ ಮಾಡುವ ಪ್ರಯತ್ನ

ವಿದೆ. ಹೊಯ್ಸಳ ಮಹಾಮಂಡಳೇಶ್ವರರ ಸಾಹಿತ್ಯ ಮತ್ತು ಶಾಸನ ಸಾಹಿತ್ಯಗಳಲ್ಲಿ ಕಂಡುಬರುವ ಭಾಷೆಯ ಸ್ವರೂಪದ ಅಭ್ಯಾಸವನ್ನು ಮೂರು ಹಂತಗಳಲ್ಲಿ ಮಾಡಬೇಕಾಗುತ್ತದೆ. ಅವುಗಳೆಂದರೆ :

1. ಧ್ವನಿಮಾ 2. ಆಕೃತಿಮಾ 3. ವಾಕ್ಯರಚನೆ

**ಧ್ವನಿಮಾ** : ಒಂದು ಭಾಷೆಯಲ್ಲಿ ಬಳಕೆಯಾಗುವ ಮಹತ್ವದ ಧ್ವನಿ ಅಥವಾ ಧ್ವನಿಸಮುದಾಯವಾದ ಧ್ವನಿಮಾ ಸ್ಥೂಲವಾಗಿ ವ್ಯಾಕರಣಗಳಲ್ಲಿ ಬಳಕೆಯಾಗುವ ವರ್ಣಕ್ಕೆ ಸಂವಾದಿಯಾಗುತ್ತದೆ. ಆದರೂ ಧ್ವನಿಮಾ ಹಾಗೂ ವರ್ಣಗಳಲ್ಲಿ ಸಾಕಷ್ಟು ಭಿನ್ನತೆಯಿದೆ. ಹೊಯ್ಸಳ ಮಹಾಮಂಡಲೇಶ್ವರರ ಕಾಲದಲ್ಲಿಯೇ ಬಾಳಿದ ಕೇಶಿರಾಜನು ಬರೆದ ಶಬ್ದಮಣಿದರ್ಪಣದ [18] ಪ್ರಕಾರ ಅಚ್ಚಗನ್ನಡದ ಸುದ್ದಗೆ 57–10= 47 ವರ್ಣಗಳು. ಈ 47 ವರ್ಣಗಳನ್ನೂ ಬೇರೆ ಬೇರೆ ಸಂದರ್ಭಗಳಲ್ಲಿಯ ಅವನ ಹೇಳಿಕೆಯ ಪ್ರಕಾರವೇ 34ಕ್ಕೆ ಇಳಿಸಬಹುದು. ಧ್ವನಿಮಾ ದೃಷ್ಟಿಯಿಂದ ಪರಿಶೀಲಿಸಿದಾಗ ಈ ಸಂಖ್ಯೆ ಇನ್ನೂ ಸಣ್ಣದಾಗುತ್ತದೆ. ಆದರೆ ಈ ಸುದ್ದಗೆ ಹಳಗನ್ನಡಕ್ಕೆ ಅನ್ವಯಿಸವಂತಹುದು. ನಡುಗನ್ನಡದ ಸುದ್ದಗೆಯನ್ನು ಇದರೊಡನೆ ಹೋಲಿಸಿದಾಗ ಅಲ್ಲಲ್ಲಿ ಸ್ವಲ್ಪ ವ್ಯತ್ಯಾಸವಾಗಬಹುದು.

**ಹಳಗನ್ನಡ ಸ್ವರಗಳು :**

| ಪದ | ಪೂರ್ವ | ಮಧ್ಯ | ಪಶ್ಚ |
|---|---|---|---|
| ಉನ್ನತ | ಅ ಆ | ಇ ಈ | ಉ ಊ |
| ಮಧ್ಯ | ಋ | ಎ ಏ | ಒ ಓ |

**ಸಂಧ್ಯಕ್ಷರಗಳು : ಐ ಔ**

**ವ್ಯಂಜನಗಳು :**

**ಅಘೋಷಸ್ಪರ್ಶಗಳು –** ಪ್ ತ್ ಟ್ ಚ್ ಕ್

**ಘೋಷಸ್ಪರ್ಶಗಳು –** ಬ್ ದ್ ಚ್ ಜ್ ಗ್

**ಮಹಾಪ್ರಾಣಗಳೂ –** ಫ್ ಥ್ ಠ್ ಛ್ ಖ್ ಭ್ ಧ್ ಢ್ ಝ್ ಘ್

**ಅನುನಾಸಿಕಗಳು** – ಮ್ ನ್ ಣ್

**ಈಷತ್ ಸ್ಪೃಷ್ಟ –** ರ್

**ತಾಡಿತ –** ಱ್

**ಲೋಡಿತಗಳು –** ಲ್ ಳ್ ೞ್

**ಘರ್ಷಗಳು –** ಸ್ ಷ್ ಶ್ ಹ್

**ಅರ್ಧಸ್ವರಗಳು** – ವ್ ಮ್

ಸ್ಪರ್ಶಗಳಲ್ಲಿ ಘೋಷ ಅಘೋಷಗಳಂತೂ ಸರಿಯೇ. ಮಹಾಪ್ರಾಣಗಳೂ ಬಳಕೆಯಲ್ಲಿವೆ. ಅನುನಾಸಿಕ ವಿಚಾರವಾಗಿ ಹೇಳಬೇಕಾದರೆ ಮ್ ನ್ ಣ್ ಗಳು ಸ್ವತಂತ್ರವಾಗಿಯೂ ಸ್ವಜಾತಿಯ ಸ್ಪರ್ಶಗಳ ಹಿಂದೆಯೂ ಬರುತ್ತದೆ. ಈ ಮೂರು ಅನುನಾಸಿಕಗಳು ಯಾವುದೇ ಪರಿಸರದಲ್ಲಿ ಬರವುದರಿಂದ ಇದಕ್ಕೆ ಧ್ವನಿಮಾಸ್ಥಿತಿ ತಾನೇ ಪ್ರಾಪ್ತವಾಗುತ್ತದೆ. ಆದರೆ ಇದೇ ಮಾತನ್ನು ಙ್ ಹಾಗೂ ಞ್ ಗಳ ವಿಷಯದಲ್ಲಿ ಹೇಳಲಿಕ್ಕೆ ಸಾಧ್ಯವಿಲ್ಲ. ಇವು ಸ್ವಜಾತಿಯ ಸ್ಪರ್ಶಗಳ ಹಿಂದೆ ಮಾತ್ರ ಬರುತ್ತವೆ. ಉದಾ : ಸಂಗಮ ದೇವ, ವಂಚನೆ ಮುಂತಾಗಿ ಅವು ಬರುವುದು ಈ ಪರಿಸರದಲ್ಲಿ ಮಾತ್ರ. ಈ ರೀತಿ ವಿಶಿಷ್ಟ ಪರಿಸರದಲ್ಲಿ ಮಾತ್ರ ಬರುವುದರಿಂದ ಇವುಗಳಿಗೆ ಧ್ವನಿಮಾಸ್ಥಿತಿ ಪ್ರಾಪ್ತವಾಗುವುದಿಲ್ಲ. ಇವು ಉಪಧ್ವನಿಮಾಗಳು ಇವನ್ನು 'ನ್' ಧ್ವನಿಮಾದ ಉಪಧ್ವನಿಗಳೆಂದು ಗ್ರಹಿಸಬಹುದು. ಹೀಗೆ ಒಟ್ಟು 5 ಅನುನಾಸಿಕ ಧ್ವನಿಗಳಿದ್ದರೂ ಮೂರೇ ಅನುನಾಸಿಕ ಧ್ವನಿಗಳಾಗುತ್ತವೆ. ಇದಲ್ಲದೆ ಇನ್ನೊಂದು ಅನುನಾಸಿಕ ಧ್ವನಿಯನ್ನು ಪರಾಮರ್ಶಿಸಬೇಕು. ಅದೂ ಅನುನಾಸಿಕ ಧ್ವನಿಯಾದರೂ ಉಳಿದ ಧ್ವನಿಗಳಿಗಿಂತ ಭಿನ್ನವಾದ ಇದಕ್ಕೆ ಪಾರಿಭಾಷಿಕವಾಗಿ ಅನುಸ್ವಾರವೆಂದು ಹೆಸರು. ಯಾವ ಸ್ಪರ್ಶಧ್ವನಿಯೊಡನೆಯೂ ಇದು ಬರಲಾರದ. ಯ್,ರ್,ಲ್,ವ್,ಶ್,ಸ್,ಹ್ ಈ ಅವರ್ಗೀಯ ವ್ಯಂಜನಗಳೊಡನೆ ಬರುವ ಈ ಅನುನಾಸಿಕ ಕೇವಲ ಸಂಸ್ಕೃತ ಮೂಲದ ಶಬ್ದಗಳಲ್ಲಿ ಮಾತ್ರಕಂಡುಬರುತ್ತದೆ. ಜಿಹ್ವಾಮೂಲೀಯ, ಉಪಧ್ಮಾನೀಯ, ವಿಸರ್ಗ, ಅನುಸ್ವಾರ, ಯೋಗವಾಹವೆಂಬ ಹೆಸರು ಪಡೆದಿರುವ ಈ ಧ್ವನಿಗಳೆಲ್ಲ ಒಂದೇ ಧ್ವನಿಮಾದಲ್ಲಿ ಅಡಕವಾಗುತ್ತದೆ.

ರೇಫವೆಂದು ಕರೆಯಲ್ಪಡುವ 'ರ್' ಮತ್ತು 'ಶಕಟರೇಫ' ವೆಂದು ಕರೆಯಲ್ಪಡುವ 'ಱ್' ಗಳು ನಡುಗನ್ನಡದಲ್ಲಿ ಭಿನ್ನ ಧ್ವನಿಮಾಗಳಾಗಿ ಬಳಕೆಯಾಗುತ್ತಿದ್ದವು. ಅರಿ–ಕತ್ತರಿಸು, ಅಱಿ –ತಿಳಿ, ನೆರೆ–ಸೇರು, ನೆಱೆ– ತುಂಬು, ಪರಿ–ಹೋಗು, ಪಱಿ– ಸೀಳು ಮುಂತಾದ ದೃಷ್ಟಾಂತಗಳಲ್ಲಿ ಬಳಕೆಯಾಗುವ ಈ ಧ್ವನಿಮಾಗಳೂ ಭಿನ್ನವಾದರೂ ಱ್ ದ ಉಚ್ಚಾರಣೆ ಹೇಗಿತ್ತೆಂದು ಹೇಳುವುದು ಕಠಿಣವಾಗುತ್ತದೆ. ಕೇಶಿರಾಜನ ಪ್ರಕಾರ, "ರೇಫೆ ಹುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ಱಕಾರಂ ಪುಟ್ಟುವುದು". ಕನ್ನಡದಲ್ಲಿ ಅದು ಯಾವ ರೀತಿ ಉಚ್ಚಾರವಾಗುತ್ತಿತ್ತೆಂಬುದು ಹೇಳಲು ಕಠಿಣವಾದರೂ ತಮಿಳಿನಲ್ಲಿ ಕಂಡುಬರುವ ಉಚ್ಚಾರಣೆಯ ಮೇಲಿಂದ ಅದು ಹೇಗಿತ್ತೆಂಬುದನ್ನು ಊಹಿಸಬಹದು.

ಘರ್ಷ ವರ್ಣಗಳಾದ ಸ್, ಷ್, ಶ್, ಹ್ ಗಳು ಬಳಕೆಯಾದರೂ ಈಗಲೂ ಕಂಡುಬರುವಂತೆ ಷ್ ದ ಬಳಕೆ ಸೀಮಿತವಾಗಿದ್ದು ಉಳಿದ ಮೂರು ಧ್ವನಿಗಳ ಬಳಕೆ ಸಾಕಷ್ಟಿತ್ತು. ಳ್ ಮತ್ತು ೞ್ ಗಳ ವಿಷಯವಾಗಿ ಹೇಳಬೇಕಾದರೆ ಹಿಂದೆ ಸ್ವತಂತ್ರ ವರ್ಣಗಳಾಗಿದ್ದ ಇವುಗಳ ನಡುವಿನ ವ್ಯತ್ಯಾಸ ನಡುಗನ್ನಡದ ಕಾಲಕ್ಕೆ ಮಾಯವಾಯಿತು. ಹೊಯ್ಸಳ ಮಹಾಮಂಡಳೇಶ್ವರರ ಕಾಲದಲ್ಲಿಯೇ ಹಳಗನ್ನಡದಲ್ಲಿ ಬರೆದ 'ಗಿರಿಜಾಕಲ್ಯಾಣ' 'ಯಶೋಧರ ಚರಿತೆ', 'ಕಬ್ಬಿಗರ ಕಾವ' ಅಲ್ಲದೆ ಹರಿಶ್ಚಂದ್ರ ಕಾವ್ಯ ಮುಂತಾದ ಕಾವ್ಯಗಳಲ್ಲಿ ಅಧಿಕವಾಗಿ ಬಳಕೆಯಾದರೂ ಉಳಿದೆಡೆಯಲ್ಲಿ ಈ ವರ್ಣದ ಬಳಕೆ ಕಡಿಮೆಯಾದುದು ಕಂಡುಬರುತ್ತದೆ.

ಉಚ್ಚಾರಣೆಯಿಂದ ಹೋಗಿಬಿಟ್ಟ 'ೞ್' ವರ್ಣವು ಯಾವ ರೀತಿ ಉಚ್ಚರಿಸಲ್ಪಡುತ್ತಿತ್ತೆಂಬುದನ್ನು ಹೇಳುವುದು ಕಠಿಣವೇ. ಕೇಶಿರಾಜನು "ಡಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ ೞಕಾರಂ ಪುಟ್ಟುಗುಂ" ಎಂದು ಹೇಳಿದ್ದು ನೋಡಿದರೆ ರೇಫ ಡಕಾರಗಳ ಮಧ್ಯದ ಒಂದು ಉಚ್ಚಾರಣೆ ಇತ್ತೆಂದು ಹೇಳಬಹುದು. ಇವು ಹೊಯ್ಸಳ ಮಹಾಮಂಡಳೇಶ್ವರರ ಶಾಸನ ಸಾಹಿತ್ಯ ಮತ್ತು ಸಾಹಿತ್ಯಿಕ ಕೃತಿಗಳಲ್ಲಿ ನಿಚ್ಚಳವಾಗಿ ಕಂಡುಬರುತ್ತದೆ.

2. **ಆಕೃತಿಮಾ** : ಈ ವಿಭಾಗದಲ್ಲಿ ನಾವು ವಿಭಕ್ತಿ, ವಚನ. ಲಿಂಗ, ಕಾಲ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ನಡುಗನ್ನಡ ಭಾಷೆಯನ್ನು ಹೊಯ್ಸಳ ಮಹಾಮಂಡಳೇಶ್ವರರ ಶಾಸನ ಮತ್ತು ಸಾಹಿತ್ಯ ಕೃತಿಗಳನ್ನು ಅನುಲಕ್ಷಿಸಿ ಪರಿಶೀಲಿಸಬಹುದು. ಮೊದಲನೆಯದಾಗಿ ವಿಭಕ್ತಿಯಲ್ಲಿ ಕೆಳಗಿನಂತೆ ಪ್ರತ್ಯಯಗಳು ಕಂಡುಬರುತ್ತವೆ.

**ಪ್ರಥಮಾ–** ಮ್,ಧಮ್, ನ್,ವ್, ಉ

**ದ್ವಿತೀಯಾ** – ಅಮ್, ಆ ಅನು, ಅನ್ನು

**ತೃತೀಯಾ** – ಇಮ್, ಇಂದೆ, ಇಂದ, ಇಂದಮ್

**ಚತುರ್ಥಿ** – ಕೆ, ಕ್ಕೆ, ಗೆ, ಇಗೆ, ಅಂಗೆ, ಇಂಗೆ

**ಪಂಚಮೀ** – ಅತ್ತಣಿಂ, ದೆಸೆಯಿಂದ

**ಷಷ್ಠೀ** _ ಅ

**ಸಪ್ತಮೀ** _ ಒಳ್, ಒಳು, ಒಳಗೆ, ಅಲಿ, ಅಲು, ಅಲ್ಲಿ

**ಸಂಬೋಧನ** – ಅಂತ್ಯಸ್ವರ ದೀರ್ಘ

ಈ ಕಾಲದಲ್ಲಿ ಕಂಡುಬರುವ ಪ್ರತ್ಯಯಗಳನ್ನು ಅವಲೋಕಿಸಿದಾಗ ಪ್ರಥಮಾವಿಭಕ್ತಿಯ ಪ್ರತ್ಯಯಗಳು ವಿಶೇಷ ಬದಲಾವಣೆಯಿಲ್ಲದೆ ಹಳಗನ್ನಡದಿಂದ ಮುಂದುವರೆದುದು ಕಂಡುಬರುತ್ತದೆ. ದ್ವಿತೀಯಾ ವಿಭಕ್ತಿಯಲ್ಲಿ ಹಳಗನ್ನಡದ ಸಾಕಷ್ಟು ವಿಭಕ್ತಿ ಪ್ರತ್ಯಯಗಳು ಮುಂದುವರೆದಿದ್ದರೂ 'ಅಮ್' ಹಾಗೂ 'ಅನ್' ಪ್ರತ್ಯಯಗಳು ಮಾಯವಾಗಿರುವುದು ಲಕ್ಷ್ಯಕ್ಕೆ ಬರುತ್ತದೆ. ತೃತೀಯಾ ವಿಭಕ್ತಿಯಲ್ಲಿ ಹಳಗನ್ನಡದ 'ಎ' ದ ಸ್ಥಾನದಲ್ಲಿ 'ಇ' ಬಂದಿರುವುದನ್ನು ಬಿಟ್ಟರೆ ಉಳಿದವು ಇದ್ದಂತೆಯೇ ಬಳಕೆಯಾಗುತ್ತಿವೆ. ಹಳಗನ್ನಡದ ಚತುರ್ಥಿ ವಿಭಕ್ತಿ ಪ್ರತ್ಯಯಗಳಾದ 'ಗ್ಗೆ' ಹಾಗೂ 'ಜ್ಗೆ' ನಡುಗನ್ನಡದಲ್ಲಿ ಬಳಕೆಗೆ ಹೊರತಾಗಿದೆ. ಕುತೂಹಲಕರ ಸಂಗತಿಯೆಂದರೆ ಹಳಗನ್ನಡದಲ್ಲಿ ಬಳಕೆಯಾಗುತ್ತಿದ್ದ ಪಂಚಮೀ ವಿಭಕ್ತಿಯ 2,3 ಪ್ರತ್ಯಯಗಳಲ್ಲಿ ಒಂದು ಬಳಕೆಯಲ್ಲಿಲ್ಲದಿರುವುದು. ಪಂಚಮಿ ವಿಭಕ್ತಿಗೆ ಇಲ್ಲಿ ಪ್ರತ್ಯಯವೇ ಇಲ್ಲ. ಷಷ್ಠಿ ವಿಭಕ್ತಿಯಲ್ಲಿ ಯಾವ ಬದಲಾವಣೆಯೂ ಇಲ್ಲ. ಸಪ್ತಮೀ ವಿಭಕ್ತಿಯಲ್ಲಿ ಮಾತ್ರ ಪ್ರತ್ಯಯ

ಸಮೃದ್ಧಿ  ಸಾಕಷ್ಟು ಕಂಡುಬಂದರೂ ಹಳಗನ್ನಡದಲ್ಲಿ ಬಳಕೆಯಾಗುತ್ತಿದ್ದ 'ಅಲ್', 'ಎ', 'ಐ' ಗಳೆಲ್ಲ ಮಾಯವಾಗಿ ಶಬ್ದಾಂತ್ಯ ಸ್ವರ ದೀರ್ಘದ ಮೂಲಕವೇ ಆ  ಕಾರ್ಯ ನಡೆಯುತ್ತದೆ.

**ವಚನ :** ಏಕವಚನ ಮತ್ತು ಬಹುವಚನ ಯುಕ್ತವಾದ ವಚನ ವ್ಯವಸ್ಥೆಯಲ್ಲಿ ಬಹುವಚನಕ್ಕೆ ಮಾತ್ರ ಪ್ರತ್ಯಯಗಳು ಕಂಡುಬರುವುದು ಸಾಮಾನ್ಯ ಸಂಗತಿ. ನಡುಗನ್ನಡದಲ್ಲಿ ಕಂಡುಬರುವ ಬಹುವಚನ ಪ್ರತ್ಯಗಳೆಂದರೆ : 'ಅರ್', 'ಇರ್', 'ರ್' , 'ಗಳು', 'ಕಳು'

ಹಳಗನ್ನಡ ಪ್ರತ್ಯಯಗಳ ಹಿನ್ನಲೆಯಲ್ಲಿ ನಡುಗನ್ನಡದ ಪ್ರತ್ಯಯಗಳನ್ನು ಅವಲೋಕಿಸಿದಾಗ ಹಳಗನ್ನಡದಲ್ಲಿ ಅಲ್ಲಲ್ಲಿ ಕಂಡುಬರುತ್ತಿದ್ದ ಪೂರ್ವದ ಹಳಗನ್ನಡದ 'ಅರ್' ಪ್ರತ್ಯಯ ನಡುಗನ್ನಡದಲ್ಲಿ ಸಂಪೂರ್ಣ ಮಾಯವಾಗಿದೆ. 'ಗಳ್', 'ಕಳ್' ರೂಪಗಳು ಹಳಗನ್ನಡದಿಂದ ಮುಂದುವರಿದಿದ್ದು ಕಳ್ ಹಳಗನ್ನಡದಲ್ಲಿಯಂತೆ ಇಲ್ಲಿಯೂ ಒಂದೇ ದೃಷ್ಟಾಂತದಲ್ಲಿ ಮಾತ್ರ ಬಳಕೆಯಾಗಿದೆ; ಈ ಎರಡೂ ರೂಪಗಳೂ ಕೊನೆಯಲ್ಲಿ ಉ ಸೇರಿ ಅವು–ಗಳು ಹಾಗೂ ಕಳು ಆಗಿವೆ. ಅಲ್ಲದೆ ಹಳಗನ್ನಡದಲ್ಲಿ ಕಂಡುಬರುತ್ತಿದ್ದ –ದಿರ್ ಮತ್ತು –ವಿರ್ ಪ್ರತ್ಯಯಗಳು ಈಗ ಇಲ್ಲವಾಗಿವೆ.

**ಕ್ರಿಯಾಪದ :** ಹಳಗನ್ನಡ ಕಾಲದ ಪ್ರತ್ಯಯಗಳಲ್ಲಿ ವಿಶೇಷ ಬದಲಾವಣೆ ಎನಿಸದಿದ್ದರೂ ಅವುಗಳ ಪ್ರಾಶಸ್ತ್ಯದಲ್ಲಿ ಸಾಕಷ್ಟು ಬದಲಾವಣೆ ಕಂಡುಬರುತ್ತವೆ. ಮೊದಲು 'ದ್' ಪ್ರತ್ಯಯ ಬಳಕೆಯಾಗುತ್ತಿದ್ದ ಧಾತುಗಳಲ್ಲಿಯೂ ಈಗ 'ಇದ್' ಬಳಕೆಯಾಗುವುದು ಕಂಡುಬರುತ್ತದೆ. ಇದಕ್ಕೆ ಕಾರಣ ವ್ಯಂಜನ ದ್ವಿತ್ವ ವಿಶೇಷವಾಗಿ ವಇಜಾತಿಯ ವ್ಯಂಜನ ದ್ವಿತ್ವ ಬರುಬರುತ್ತ ಇಲ್ಲವಾಗಹತ್ತಿತ್ತು . ಈ ವ್ಯಂಜನದ್ವಿತ್ವನ್ನು ತಪ್ಪಿಸಲು ನಡುವೆ ಸ್ವರ ಬರುವ ಇದ್ ಪ್ರತ್ಯಯ ಎಎಚ್ಚಾಗಿ ಬಳೆಯಾಗ ಹತ್ತಿತ್ತು. ಉದಾ:ಹಳಗನ್ನಡದಲ್ಲಿ ಮಾಡ್+ದ್+ಅದು ಎಂಬ ರೂಪ ಸಾಧ್ಯವಾಗುತ್ತಿದ್ದರೆ ನಡುಗನ್ನಡದಲ್ಲಿ ಮೂಡ್+ಇದ್+ಅಮ್ ಬಳಕೆಯಾಗಹತ್ತಿತ್ತು. ಇಂಥ ವ್ಯಂಜನದ್ವಿತ್ವವನ್ನು ತಪ್ಪಿಸಲು ಇನ್ನೊಂದು ವಿಧಾನದ ಬಳಕೆಯೂ ಕಂಡುಬರುತ್ತಿತ್ತು. ಅದೇ ಸಮರೂಪಧಾರಣೆ. ಎರಡು ಜಾತಿಯ ವ್ಯಂಜನಗಳಲ್ಲಿ ಒಂದು ಇನ್ನೊಂದಂತಾಗುವುದೇ ಸಮರೂಪದಾರಣೆ. ಈ ಪ್ರಕಾರ ಹಳಗನ್ನಡದ ಬಿಟ್ದ್ ನಡುಗನ್ನಡದಲ್ಲಿ ಬಿದ್ದ ಎಂದೂ ಕಟ್ದ್ ಎಂಬ ರೂಪವು ಕದ್ದ ಎಂದೂ ಬಳಕೆಯಾಗಹತ್ತಿದವು. ಈ ವಿಧಾನದಲ್ಲಿಯೇ ತ್, ದ ವಿವಿಧ ರೂಪಗಳಾದ "ಟ್, ಡ್, ಕ್", ಗಳು ಬಳಕೆಯಾಗುವುದು. ಮುಂದಿನ ಕಾಲದಲ್ಲಿ ಇಲ್ಲವಾದ 'ಇ' ಪ್ರತ್ಯಯ ಇನ್ನೂ ಉಳಿದಿದೆ.

ವರ್ತಮಾನ ಕಾಲ ಪ್ರತ್ಯಯಗಳಾಗಿ ಉತ್, ಉತ್ತ, ತ, ಬಳಕೆಯಾಗುವುದಲ್ಲದೆ ಹಿಂದೆ ಬಳಕೆಯಲ್ಲಿದ್ದ 'ದಪ' ವು ಈಗ ಪ್>ಹ್ ಬದಲಾವಣೇಯ ಮೂಲಕ 'ದಹ' ರೂಪದಲ್ಲಿ ಬಳಕೆಯಾಗುತ್ತದೆ. ಭವಷ್ಯತ್ಕಾಲದ ಪ್ರತ್ಯಯಗಳು ಬ್, ಉವ್, ಪ್ಪ, ವ್, ಹಳಗನ್ನಡದ ಮ್, ವ್, ಪ್ಪ ಗಳ ಸ್ಥಾನದಲ್ಲಿ ಈ ಪ್ರತ್ಯಯಗಳು ಕಂಡುಬರುತ್ತವೆ.

**3. ವಾಕ್ಯ ರಚನೆ:** ಹೊಯ್ಸಳ ಮಹಾಮಂಡಳೇಶ್ವರರ ಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿನ ವಾಕ್ಯರಚನೆಯಲ್ಲಿ ನಡುಗನ್ನಡಕ್ಕಾಗಿ ವಿಶಿಷ್ಟವಾಗಿ ಹೇಳಬೇಕಾದ ಅಂಶಗಳು ಕಡಿಮೆ. ಕನ್ನಡದ ಮೂಲವಾಕ್ಯ ರಚನೆಯ ಕರ್ತೃ, ಕರ್ಮ, ಕ್ರಿಯಾಪದ ಕ್ರಮವೇ ಕಂಡುಬಂದರೂ ಅಲ್ಲಲ್ಲಿ ಈ ಕ್ರಮವನ್ನು ಬಿಟ್ಟದ್ದೂ ಉಂಟು. ಉದಾ: "ಆನೆಯನೇರಿಕೊಂಡುಹೋದಿರೆ ನೀವು" ಇಂಥ ವಾಕ್ಯಗಳಲ್ಲಿ ಕರ್ತೃಪದ ಮೊದಲು ಬರಬೇಕಾದುದು ಕ್ರಿಯಾಪದದ ನಂತರ ಬಂದಿದೆ. ಇಂಥ ಉದಾ:ಗೆ ಕೊರತೆಯೇನೂ ಇಲ್ಲ. ಕಬ್ಬಿಗರ ಕಾವ್ಯವನ್ನು ಬರೆದ ಆಂಡಯ್ಯ ತನ್ನ ವಿಶಿಷ್ಟ ಪ್ರಯತ್ನದ ಮೂಲಕ ಕನ್ನಡವನ್ನು ಮೆರೆದಿದ್ದಾನೆ. ಸಂಸ್ಕೃತ ಪದವೊಂದನ್ನೂ ಬಳಸದೆ ಕನ್ನಡದಲ್ಲಿಯೇ ಕಾವ್ಯರಚಿಸುವ ಪ್ರತಿಜ್ಞೆಯನ್ನು ಮಾಡಿ ಅದನ್ನು ಪೂರೈಸಿದ ಈ ಪ್ರಯತ್ನ ಕಾವ್ಯದ ದೃಷ್ಟಿಯಿಂದ ಯಶಸ್ವಿಯಾಗದಿದ್ದರೂ ಭಾಷೆಯ ದೃಷ್ಟಿಯಿಂದ ಅಮೂಲ್ಯವಾಯಿತು. ಕ್ನನಡ ಭಾಷೆಯ ಶಬ್ದ ಸಂಪತ್ತು ಬೆಳೆಯಲು ಕಾರಣವಾಯಿತು. ಆದರೆ ಆಂಡಯ್ಯನ ಮೇಲ್ಪಂಕ್ತಿಯನ್ನು ಮುಂದಿನವರಾರೂ ಅನುಸರಿಸಲಿಲ್ಲವಾಗಿ ಅವನೊಬ್ಬನಿಗೆ ನಿಂತುಹೋಯಿತು.

**ಪಾರಿಭಾಷಿಕ ಪದ :**

ಪಂಚಮಹಾಶಬ್ದ ಎಂಬುದು ಅನೇಕ ಹೊಯ್ಸಳ ಮಹಾಮಂಡಳೇಶ್ವರರಿಗೆ ಸಂದ ಬಿರುದಾಗಿದೆ. ಐದು ಮಹಾವಾದ್ಯಗಳ ಶಬ್ದದ ಗೌರವ ಇದು. ಈ ವಾದ್ಯಗಳ ಹೆಸರು ಭಿನ್ನವಾಗಿದೆ. ತಿವರಿ, ದಟ್ಟೆ, ಖಂಡಿಕ್ಕೆ, ಜಯಗಂಟೆ ಕಹಳೆಗಳು ; ಕೊಂಬು,ತಮಟೆ, ಶಂಖ, ಭೇರಿ, ಜಯಘಂಟೆ ; ಭೇರಿ, ಶಂಖ, ಕಹಳೆ, ಗಂಟೆ, ವೀಣೆ; ಈ ಪಂಚಮಹಾಶಬ್ದಗಳ ಗೌರವವು ಆಳುವ ದೊರೆಗಳಿಗೆ ಮಾತ್ರ ಸಲ್ಲುತ್ತಿತ್ತಾದರೂ ಹೊಯ್ಸಳ ಮಹಾಮಂಡಳೇಶ್ವರರ ಪದೌನ್ನತ್ಯಕ್ಕೆ ಈ ಗೌರವವು ಸಲ್ಲುತ್ತಿದ್ದುದನ್ನು ಶಾಸನಗಳು ಅನುರಣಿಸಿವೆ

## 4.3 ಹೊಯ್ಸಳ ಮಹಾಮಂಡಳೇಶ್ವರರು ನಿರ್ವಚಿಸಿದ ಸಾಹಿತ್ಯ:

ಹೊಯ್ಸಳ ಮಹಾಮಂಡಳೇಶ್ವರರಿಗೂ ಕನ್ನಡ ಸಾಹಿತ್ಯ ಸಂವರ್ಧನೆಗೂ ಬಹಳ ನಿಕಟವಾದ ಬಾಂಧವ್ಯವಿದೆ. ಇದುವರೆಗೂ ಹೊಯ್ಸಳ ಅರಸರ ಕಾಲದ ಕನ್ನಡ ಸಾಹಿತ್ಯವನ್ನು ಮಾತ್ರ ಅನುಲಕ್ಷಿಸಿ ರುದ್ರಭಟ್ಟನ ಜಗನ್ನಾಥವಿಜಯ, ಆಚಣ್ಣನ ವರ್ಧಮಾನಪುರಾಣ, ನೇಮಿಚಂದ್ರನ ನೇಮಿನಾಥಪುರಾಣ, ಕೆರೆಯ ಪದ್ಮರಸನ ದೀಕ್ಷಾಬೋಧೆ, ರಾಜಾದಿತ್ಯನ ವ್ಯವಹಾರಗಣಿತ ಮತ್ತು ಕ್ಷೇತ್ರಗಣಿತ, ಜನ್ನನ ಯಶೋಧರಚರಿತೆ ಮತ್ತು ಅನಂತನಾಥಪುರಾಣ ಈ ಕಾವ್ಯಕೃತಿಗಳನ್ನು ಚರ್ಚಿಸಲಾಗುತ್ತಿತ್ತು. ಆದರೆ ಈ ಮಹಾನ್ ಕೃತಿಗಳ ರಚನೆಗೆ ಕಾರಣಕರ್ತರಾದವರು ನಿಜವಾಗಿಯೂ ಈ ಹೊಯ್ಸಳ ಮಹಾಮಂಡಳೇಶ್ವರರು ಎಂಬುದನ್ನು ನನ್ನ ಅಧ್ಯಯನವು ಪ್ರಧಾನವಾಗಿ ಮುನ್ನೆಲೆಗೆ ತರುತ್ತದೆ. ಜೊತೆಗೆ ಹೊಯ್ಸಳ ಮಹಾಮಂಡಳೇಶ್ವರರೇ ಸ್ವತಃ ಕಾವ್ಯ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯ ಸಂವರ್ಧನೆಯಲ್ಲಿ ಮುಖ್ಯಪಾತ್ರವಹಿಸಿದ್ದಾರೆ. ಜೊತೆಗೆ ಇವರ ಶಾಸನಗಳು ಸಹ ಅದ್ಭುತವಾದ ಸಾಹಿತ್ಯಕ ಸೊಬಗನ್ನು

ಮೈಗೂಡಿಸಿಕೊಂಡು ಕನ್ನಡ ಶಾಸನ ಪ್ರಪಂಚದಲ್ಲಿ ಮಿಗಿಲಾದ ಸ್ಥಾನವನ್ನು ಪಡೆದಿವೆ. ಈ ಕುರಿತಾದಂತಹ ಸಮಗ್ರ ವಿಶ್ಲೇಷಣೆಯನ್ನು ಈ ಮುಂದಿನಂತೆ ಕಾಣಬಹುದು.

### 4.3.1 : ಹೊಯ್ಸಳ ಮಹಾಮಂಡಳೇಶ್ವರರು ಆಶ್ರಯನೀಡಿದ ಕನ್ನಡ ಕವಿಗಳು

ಹೊಯ್ಸಳ ಮಹಾಮಂಡಳೇಶ್ವರರಿಂದ ಆಶ್ರಿತರಾದ ಕವಿಕೃತಿಗಳ ವಸ್ತುವಿನ ದೃಷ್ಟಿಯಿಂದ ಕನ್ನಡ ಸಾಹಿತ್ಯದ ಮೇಲೆ ಪ್ರಭಾವ ಬೀರಿದ ಸಂಸ್ಕೃತ ವಾಙ್ಮಯವನ್ನು ಈ ರೀತಿ ವಿಂಗಡಿಸಬಹುದು –

- ಜೈನಪುರಾಣ ಕಥೆಗಳು. ಉದಾ: ಯಶೋಧರ ಚರಿತೆ
- ಶಾಸ್ತ್ರಗ್ರಂಥಗಳು. ಉದಾ: ಕೆರೆಯ ಪದ್ಮರಸನ ದೀಕ್ಷಾಬೋಧೆ
- ವೈಷ್ಣವ ಪುರಾಣ ಮತ್ತು ಕಥೆಗಳು. ಉದಾ: ರುದ್ರಭಟ್ಟನ ಜಗನ್ನಾಥವಿಜಯ ; ವಿಷ್ಣು ಪುರಾಣ ಅಥವಾ ಭಾಗವತ ಪುರಾಣಗಳಲ್ಲಿರುವ ಹಲವು ಪ್ರಸಂಗಗಳನ್ನು ಕನ್ನಡ ಕವಿಗಳು ತಮ್ಮ ಕೃತಿಗಳಲ್ಲಿ ನಿರೂಪಿಸಿದ್ದಾರೆ. ಇದಕ್ಕೆ ರುದ್ರಭಟ್ಟನ ಜಗನ್ನಾಥವಿಜಯವೇ ಕಾವ್ಯ ಕನ್ನಡದಲ್ಲಿ ಅಂಕುರಾರ್ಪಣೆಯಾಗಿದೆ. ಇವುಗಳ ಇನ್ನು ವಿಸ್ತೃತ ವಿಚಾರಗಳನ್ನು ಈ ಮುಂದಿನಂತೆ ಗಮನಿಸೋಣ.

**4.3.1.1. ರುದ್ರಭಟ್ಟನ ಜಗನ್ನಾಥವಿಜಯ :** ಹೊಯ್ಸಳ ಅರಸರ ಕಾಲದ ಚಂಪೂ ಕವಿಶ್ರೇಷ್ಠರಲ್ಲೊಬ್ಬನು ಈ ರುದ್ರಭಟ್ಟ. ಈತನು ಹೊಯ್ಸಳ ಅರಸ ವೀರಬಲ್ಲಾಳನ ಕಾಲದಲ್ಲಿದ್ದು ಅವನ ಆಸ್ಥಾನಕವಿಗಳಲ್ಲೊಬ್ಬನಾದ ನೇಮಿಚಂದ್ರನ ಸಮಕಾಲೀನನಾಗಿ ಬಾಳಿಬೆಳಗಿದವನು. ಈತನಿಂದ ರಚಿತವಾದ 'ಜಗನ್ನಾಥವಿಜಯ'ವು[19] ಕೃಷ್ಣಚರಿತೆಯನ್ನು ನಿರೂಪಿಸುವ ರಸವತ್ಕಾವ್ಯವಾಗಿದೆ. ಸಾಳ್ವನು ರಸರತ್ನಾಕರದಲ್ಲಿ ರುದ್ರಭಟ್ಟನು 'ರಸಕಲಿಕೆ' ಎಂಬ ಅಲಂಕಾರಗ್ರಂಥವನ್ನು ರಚಿಸಿರುವುದಾಗಿ ಹೇಳಿದ್ದಾನೆ. ಆದರೆ ಈ ಗ್ರಂಥ ಉಪಲಬ್ಧವಾಗಿರುವುದಿಲ್ಲ. "ವೈಷ್ಣವ ಕಾವ್ಯರಸಾರ್ಣವಂ ತುಳುಂಕಾಡುಗೆ" ಎಂದು ಜಗನ್ನಾಥವಿಜಯವನ್ನು ವಿರಚಿಸಿದ ರುದ್ರಭಟ್ಟ ವೈದಿಕ ಪುರಾಣವೊಂದನ್ನು ಕನ್ನಡದಲ್ಲಿ ಕಾವ್ಯರೂಪವಾಗಿ ವಿರಚಿಸಿದವರಲ್ಲಿ ಮೊದಲಿಗನು.

ರುದ್ರಭಟ್ಟನು ತನ್ನ ಕೃತಿಯನ್ನು ಕುರಿತು "ಚಂದ್ರಮೌಳಿಪ್ರಮುಖನಿಖಿಲವಿದ್ವಜ್ಜನಂ ಮೆಚ್ಚೆ ಪೇಳ್ದೆಂ" ಎಂದು ಹೇಳಿಕೊಂಡಿರುವನು. ಚಂದ್ರಮೌಳಿಯು ಹೊಯ್ಸಳ ವೀರಬಲ್ಲಾಳನ ಮಂತ್ರಿಯಾಗಿದ್ದುದಾಗಿ 1181ರಲ್ಲಿ ಬರೆಯಲ್ಪಟ್ಟ ಶ್ರವಣಬೆಳ್ಗೊಳದ 327ನೆಯ ಶಾಸನದಿಂದ ವೇದ್ಯವಾಗಿರುವುದು. ರುದ್ರಭಟ್ಟನು ತನ್ನ ಹಾಗೂ ತನ್ನ ಕೃತಿಯನ್ನು ಕುರಿತು–

**ಇನಿಯಳ ಸೋಂಕಿನಂತೆ ಪೊಸಮಾವಿನ ಪೂವಿನ ಜೊಂಪದಂತೆಚಂ**

**ದನರಸದಣ್ಪನಂತೆ ನನೆಯೇರಿದ  ಮಲ್ಲಿಗೆಯಂತೆ ಪೂರ್ಣಂ ಚಂ**

**ದ್ರನ ಸಿರಿಯಂತೆ ಬಂದೆಸವ ತೆಂಕಣ ತಂಬೆಲರಂತೆ ರುದ್ರಭ**

**ಟ್ಟನ ಕವಿತಾರಸಂ ಮನಮನಿರ್ಕುಳಿಗೊಳ್ವುದು ಸಜ್ಜನರ್ಕಳಾ** [20]

ವಿಷ್ಣುಪುರಾಣದಲ್ಲಿ ದೀರ್ಘವಾಗಿ ವರ್ಣಿತವಾಗಿರುವ ವಂಶಾನುವರ್ಣನೆ, ಮಹಾತ್ಮೆಗಳ ವರ್ಣನೆಗಳನ್ನು ತೊರೆದಿದ್ದಾನೆ ರುದ್ರಭಟ್ಟ. ಸಂದರ್ಭೋಚಿತವಾಗಿ ಅನೇಕ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಕಾವ್ಯ ಮತ್ತು ರಸದೃಷ್ಟಿಯಿಂದ ಹಲವಾರು ಸನ್ನಿವೇಶಗಳನ್ನು ಕೈಬಿಟ್ಟಿದ್ದಾನೆ. ಹದಿನೆಂಟು ಆಶ್ವಾಸಗಳಲ್ಲಿ ವರ್ಣಿತವಾದ ಜಗನ್ನಾಥವಿಜಯದ ಆರಂಭದ 13 ಆಶ್ವಾಸಗಳು ಮಾತ್ರ ವಿಷ್ಣುಪುರಾಣಕ್ಕೆ ಋಣಿಯಾಗಿವೆ. 14ನೆಯ ಆಶ್ವಾಸದಲ್ಲಿ ಕಂಡು ಬರುವ ಋತುವರ್ಣನೆ, ವನಕ್ರೀಡೆ, ಜಲಕ್ರೀಡೆಗಳ ವರ್ಣನೆ ಅವನ ಪಾಂಡಿತ್ಯದಿಂದ ಮೂಡಿಬಂದುದು. 17ನೆಯ ಆಶ್ವಾಸದಲ್ಲಿ ಕಂಡುಬರುವ ನಿಸರ್ಗವರ್ಣನೆಗಳು ಈತನ ಸ್ವಂತ ಸೃಷ್ಟಿ. ಇಲ್ಲಿ ಅವನು ಹೇಳುವ ನಗರದ ಬೀದಿಗಳು, ಅವುಗಳ ಸೊಬಗು, ಜನಜೀವನ ಮುಂತಾದವುಗಳಲ್ಲಿ ನಾವು ಆತನ ಸ್ಥಳೀಯತೆಯ ಪರಿಕಲ್ಪನೆಗಳನ್ನು ಅರ್ಥ ಮಾಡಿಕೊಳ್ಳಬಹುದು.

ಇವಲ್ಲದೆ ಶಿಶುಪಾಲನ ಆಡಂಬರ, ಮಂತ್ರಾಲೋಚನ ರಾಜಸೂತ್ರ ನಿರೀಕ್ಷಣಾರ್ಥ ಯುಧಿಷ್ಟರನ ಇಂದ್ರಪ್ರಸ್ಥ ಪ್ರಯಾಣ ಜರಾಸಂಧಹರಣ ಶಿಶುಪಾಲವಧಾ ಮುಂತಾದ ಸನ್ನಿವೇಷಗಳು ಮೂಲ ವಿಷ್ಣುಪುರಾಣದಲ್ಲಿ ಕಂಡುಬರುವುದಿಲ್ಲ. ಭಾಗವತ, ಭಾರತ, ಹರಿವಂಶ, ಕೃಷ್ಣಕರ್ಣಾಮೃತ ಮೊದಲಾದ ಗ್ರಂಥಗಳ ಪ್ರಭಾವ ಜಗನ್ನಾಥವಿಜಯದಲ್ಲಿ ಕೆಲವು ಸನ್ನಿವೇಶಗಳಲ್ಲಿ ಪಡಿಮೂಡಿದೆ. ಆದರೂ ರುದ್ರಭಟ್ಟನ ಪ್ರತಿಭೆ ಪಾಂಡಿತ್ಯ ಕವಿತಾಚಾತುರ್ಯಕ್ಕೆ ಕುಂದಿಲ್ಲ ಕೊರತೆಯಿಲ್ಲ. 14ನೆಯ ಆಶ್ವಾಸದಲ್ಲಿ ಬಂದಿರುವ ಹೇಮಂತ, ಶಿಶಿರ, ವಸಂತ ಋತುವರ್ಣನೆಗಳು ವನಕ್ರೀಡೆ, ಜಲಕ್ರೀಡೆಯ ಸನ್ನಿವೇಶಗಳು ಮನೋಹರವಾಗಿವೆ. ಉದಾ:

**ವರ್ಷಾಕಾಲ –** **ಮನದನುರಾಗದಿಂ ನೆಗೆದು ನೀಡಿದ ಕಂಠಮರಲ್ದ ತುಪ್ಪುರಿ**

**ರ್ಬನಿಮಿಷಮಾದ ಕಣ್ ತೆರೆದ ಚಂಚು ವಿಜೃಂಬಿಪೆರಂಕೆ ರಂಜಿಸಿ**

**ತ್ತೆನೆನಲವೇರಿತೋರವನಿತಣ್ಬನಿಮುಂಬನಿಯೇಂಬಕಾರ್ಮುಗಿ**

**ಲ್ವನಿಯನಲಂಪಿನಿಂಮಿದಿರ್ಗೊಂಡು ಕರ್ದುಂಕಿದುದುದ್ನಜಾತಕಂ** [21]

**ಹೇಮಂತ ಕಾಲ– ತಳರ್ದು ಕುಲಾಯದಿಂ ಬೆದಿರ್ದೆರಂಕೆಯ ನೀರ್ವನಿಯಂ ತೆರಳ್ದ ತು**

**ಪ್ಪುಳಿನೊನೊದಂಟಿ ಚಂಚುಪುಟದಿಂ ಬಿಸಿಲತ್ತಿದಿರಾಗಿ ನಿಂದು ಕ**

**ಣ್ಗಳನರೆಮುಚ್ಚಿ ತೋದ ಗರಿಯಂ ನಸು ಜೋಲಿಸಿ ಪಕ್ಕಿಗಳ ಮರಂ**

**ಗಳ ತುದಿಗೋಡ ಮೇಲೆ ದನಿಗೆಯ್ಯು ತುಮಿರ್ದುವು ಮುಂಬಗಲ್ವರಂ** [22]

ವಸಂತ ಕಾಲ

ಕಲಿಕಾಸಂವೀತಚೂತಂ ಮುಕುಳಿತವಕುಳಂ ಪಲ್ಲವೋಲ್ಲಾಸಿಕಂ
ಕೆಲ್ಲಿ ಲತಾಂತಾಕ್ರಾಂತವಾಸಂತಿಕೆಮೆಸೆದುದು ಯೋಗಿವ್ರಜಸ್ವಾಂತಕುಂತಂ
ವಿಲಸನ್ಮಲ್ಲೀಲತಾಂತಂ ಲಸದಳಿಪಟಲಕ್ರಾಂತಮಿಂದುಪ್ರಭಾಸಂ
ಕುಲಭಾಭಾಸ್ವದ್ದಿಗಂತಂ ಜಿತಸಕಲಜಗತ್ಕಂತುಕಾಂತಂ ವಸಂತಂ [23]

ಗೀಷ್ಮ ಕಾಲ

ಉರಿವರಿವ ಬಿಸಿಲ ಬೆಂಕೆಯ
ಭರದೆ ಮಳಲ್ದಿಂಟೆ ಕಾಯ್ದು ಸಿಡಿಯುತ್ತಿರೆ ಪಂ
ಕರುಹಭವಾಂಡದ ಹಂಚಿನ
ಹುರಿಗಡಲಿವೊಲೊಡೆದು ಪಾರಿದುವು ಬೆಟ್ಟಂಗಳ್ [24]

ಮಾವು

ತೀವಿದ ನುಣ್ಗೊನರ್ ಕಿರುಗೊಸರ್ ನಸುಬಲ್ಗೊನರೆಂಬಿವೇಳ್ಗೆವೆ
ತ್ತಾವಗಮೊಳ್ದಳಿ ಪೊಸದಳಿ ನಸುಕೆಂದಳಿರಾಗಿ ತಳ್ತ ನಾ
ನಾವಿಧದ ಳ್ಗೆಗೊಂಬುಸೆಳೆಗೊಂಬೆಳಗೊಂಬುಗಳಿಂದಮೊಪ್ಪುವಿ
ಮ್ಮಾವಿನ ಬಳ್ಳಿಮಾವಿನೆಳಮಾವಿನ ಸಒಂಪೆಸೆಗುಂ ವನಾಂತದೊಳ್ [25]

ಮಲ್ಲಿಗೆ

ಅನುನಯದಿಂದೆ ಮೂಡಿದ ಪಸುರ್ನನೆ ಬೆಳ್ನನೆಯಪ್ಪ ಪೊಂಗಿ ಬೆ
ಳ್ನನೆ ಮುಗುಳಪ್ಪ ಬೀಗಿ ಮುಗುಳೊಯ್ಯನೆ ಬಲ್ಮುಗುಳಪ್ಪನುಕ್ರಮಂ
ತನಗೆಸೆಯಳ್ ತೊಡಂಬೆ ಕೆಂಗಾಗಿ ಸಿಡಿಲ್ದು ಮರಲ್ದರಲ್ದು ಕಂ
ಪಿನ ಕಣೆ ತುಂಬಿಯಂ ನೆರಪುತಿರ್ದುದು ಮಲ್ಲಿಗೆ ಚೈತ್ರಮಾಸದೊಳ್ [26]

ಮಲ್ಲಿಕಾರ್ಜುನ, ಅಭಿನವವಾದಿವಿದ್ಯಾನಂದ, ಭಟ್ಟಾಕಳಂಕ ಮುಂತಾದವರು ತಮ್ಮ ಕೃತಿಗಳಲ್ಲಿ ಈತನನ್ನು ಸ್ತುತಿಸಿರುವುದರಿಂದ ಮತ್ತು ತಮ್ಮ ಕೃತಿಗಳಲ್ಲಿ ಈತನ ಪದ್ಯಗಳನ್ನು ಉದ್ಧರಿಸಿರುವುದನ್ನು ನೋಡಿದರೆ ರುದ್ರಭಟ್ಟನು ಆ ಕಾಲದ ಪಂಡಿತ ವರ್ಗದಲ್ಲಿ ಸನ್ಮಾನ್ಯನೂ ಜನಪ್ರಿಯನೂ ಆಗಿದ್ದನೆಂಬುದು ತಿಳಿಯುತ್ತದೆ.

### 4.3.1.2. ರಾಜಾದಿತ್ಯ:

ರಾಜಾದಿತ್ಯನು ಹೊಯ್ಸಳರ ಕಾಲದ ಶ್ರೇಷ್ಠ ಗಣಿತಶಾಸ್ತ್ರಜ್ಞ, ಕನ್ನಡದಲ್ಲಿ ಗಣಿತಶಾಸ್ತ್ರವನ್ನು ಬರೆದವರಲ್ಲಿ ರಾಜಾದಿತ್ಯನೇ ಪ್ರಥಮನು. ಗಣಿತಶಾಸ್ತ್ರಕ್ಕೆ ಸಂಬಂಧಿಸಿದಂತೆ ಸಮಗ್ರವಿಷಯಗಳನ್ನು ಪದ್ಯರೂಪದಲ್ಲಿ ವಿವರಿಸಿರುವ ಇವನ ವ್ಯವಹಾರ ಗಣಿತ ಕೃತಿಯು[27] ಗಮನಾರ್ಹವಾದುದು. ಸೂತ್ರಗಳನ್ನು

ಬಹುಪ್ರೌಢವಾದ ಪದ್ಯಗಳಲ್ಲಿ ವಿವರಿಸಿರುವುದು ಶಾಸ್ತ್ರಕಾರನಾದ ರಾಜಾದಿತ್ಯನ ಕಾವ್ಯಪ್ರೌಢಿಮೆಗೆ ನಿದರ್ಶನವಾಗಿದೆ.

ರಾಜಾದಿತ್ಯನು ಜೈನಮತೀಯನು. ಕೂಂಡಿಮಂಡಲಕ್ಕನುಪಮರತ್ನಮಂಡನಮೆನಿಪ್ಪ ಪೂವಿನ ಬಾಗೆ ಈತನ ಸ್ಥಳ ರಾಜವರ್ಮ ಬಾಚಿರಾಜ ಭಾಸ್ಕರ ಎಂಬ ಹೆಸರುಗಳು ಹಾಗೂ ಗಣಿತವಿರಿಂಚಿ, ಪದ್ಯ ವಿದ್ಯಾಧರ, ಓಜೆವೆಡಂಗ ಮೊದಲಾದ ಬಿರುದುಗಳು ಈತನಿಗಿದ್ದುದಾಗಿ ಈತನ ಕೃತಿಗಳಿಂದ ತಿಳುಬರುವುದು. 'ಉರ್ವಿಶ್ವರ ನಿಕರ ಸಭಾಯೋಗ್ಯಂ' ಎಂದು ತನ್ನನ್ನು ಕರೆದುಕೊಂಡಿದ್ದರಿಂದ ಈತನು ಯಾವುದೋ ರಾಜನ ಆಸ್ಥಾನದಲ್ಲಿದ್ದುದಾಗಿ ಊಹಿಸಲು ಸಾಧ್ಯವಿದೆ. ತನ್ನ ಗುರು ಮತ್ತು ಮನೆತನದ ವಿಷಯವನ್ನು ಹೀಗೆ ಹೇಳಿದ್ದಾನೆ

**ಜಿನನಾಥಂ ನೇಮಿನಾಥಂ ನಿಜಗುರು ಶುಭಚಂದ್ರೋತ್ತಮಂ ತಂದೆ ಸರ್ವಾ**

**ವನಿಪಸ್ರುತ್ಯಾಸ್ಪದಂ ಶ್ರೀಪತಿ ಜನನಿ ವಸಂತಾಖ್ಯೆತನ್ನಗಜಂ ಶಾಂ**

**ತನು ಮತ್ತಾಭೋಮಂ ಬಾಹುಬಲಿಭರತಾತ್ಮೇಶ್ವರರ್ ತಾಮೆನಲ್ ಬಾ**

**ಪನೆ ರಾಜಾದಿತ್ಯನೇಂ ಧನ್ಯನೋ ವಿಶದಯಶಂ ಸದ್ಗುಣಾಂಭೋದಿಚಂದ್ರ** [28]

ಎಂದು ಹೇಳಿಕೊಂಡಿರುವನು. ರಾಜಾದಿತ್ಯನು ವಿಷ್ಣುನೃಪಾಲನ ಹೆಸರನ್ನು ಅನೇಕ ಕಡೆಗಳಲ್ಲಿ ಹೇಳಿರುವನು. ಜೊತೆಗೆ ಬಾಹುಬಲಿಭರತರ ಉಲ್ಲೇಖಗಳು ಬಂದಿವೆ. ಭರತ ಬಾಹುಬಲಿಗಳು ಹೊಯ್ಸಳ 2ನೆಯ ವೀರಬಲ್ಲಾಳನ ದಂಡನಾಯಕರಾಗಿದ್ದುದಾಗಿ ನಾಗಮಂಗಲದ 37ನೆಯ ಶಾಸನವು ತಿಳಿಸುತ್ತದೆ. ಈ ದಂಡನಾಯಕರೇ ಈತನ ಆಶ್ರಯದಾತರು.

ಮುದದಿಂ ಸೇವುಣರೆತ್ತಿ ಮಾರ್ಮಲೆಯ ಪೊಮ್ಮಿ. . . . . ಎಂಬ ಪದ್ಯಗಳು ಸಹ ಸೇವುಣ ಪರಾಜಯವನ್ನು ತಿಳಿಸುತ್ತವೆ. 1112ರಲ್ಲಿ ವೀರಬಲ್ಲಾಳನಿಂದ ಸೇವುಣರ ಭಿಲ್ಲಮನು ಸೊರಟೂರಿನಲ್ಲಿ ಸೋತ ಸಂಗತಿಯನ್ನು ಅರಹುತ್ತದೆ. ಈ ಎಲ್ಲ ಸಂಗತಿಗಳಿಂದ ಈತ 2ನೆಯ ಬಲ್ಲಾಳನ ಕಾಲದಲ್ಲಿದ್ದುದಕ್ಕೆ ಸ್ಪಷ್ಟ ಸಾಕ್ಷಿ ಒದಗುತ್ತದೆ. ರಾಜಾದಿತ್ಯನು ಹೊಯ್ಸಳ ನಾಡಿನ ಸುವರ್ಣಾಧ್ಯಾಯದ ವಿಷಯಗಳನ್ನು ವಸ್ತುವನ್ನಾಗಿಸಿಕೊಂಡು ಗಣಿತ ಸೂತ್ರಗಳನ್ನು ರಚಿಸಿರುವನು. ವ್ಯವಹಾರ ಗಣಿತದ ಪೀಠಿಕಾ ಸಂಧಿಯಲ್ಲಿ ರಾಜಾದಿತ್ಯನು ತನ್ನ ತವರು ಸ್ಥಳವಾದ ಪೂವಿನ ಬಾಗೆಯನ್ನು ವರ್ಣಿಸುವ ಪದ್ಯಗಳು ಆತನ ಪ್ರತಿಭೆಯ ನಿದರ್ಶನವಾಗಿವೆ.

**ವನತತಿಯಿಂ ನದೀನದಕುಭೃತ್ಕುಲದಿಂ ಧನಧಾನ್ಯವರ್ಗದಿಂ**

**ಜನಪದರಾಜಿಯಿಂ ಬೆಳೆವ ಕೆಯ್ವೊಲದಿಂದೆಸೆವೂರ್ಗಳಿಂ ಜಗ**

**ಜ್ಜನಮತಜೈನಧರ್ಮದ ನೆಗಳ್ತೆಯೊಳಿಂಬಿನ ಕೂಂಡಿಮಂಡಲ**

**ಕ್ಕನುಪಮರತ್ನ ಮಂಡನಮೆನಿಪ್ಪುದು ಪೂವಿನ ಬಾಗಿ ಸಂತತಂ** [29]

**ಆ ವೆಡೆಯೊಳ್ ಮನಂಬಯಸಿ ಪಾಂಥಜನಂ ನಿಲಲಲ್ಲಿಗಲ್ಲಿಗ**

**ಬ್ಜಾವಳಿಯಲ್ಲಿಗಲ್ಲಿಗೆ ಸುಸೌರಭದಿಂದೆಸೆದಿರ್ಪ ಪುಷ್ಪವಾ**

**ಟಾವಳಿಯಲ್ಲಿಗಲ್ಲಿಗೆ ನವಭ್ರಮರಾವಳಿ ಹಂಸಭೃಂಗಕೀ**

**ರಾವಳಿಯಿಂದಮೊಪ್ಪುವುದು ಬಾಗೆಯದೊಂದು ಮಹೀಪ್ರದೇಶದೊಳ್** [30]

**ಪೊಸಪೊಂಗೇದಗೆ ಜಾಜಿಪಾದರಿ ಲಸತ್ಸೇವಂತಿ ನೀಲಾಬ್ಜಮು**

**ದ್ವಸರೋಜಂ ಸುರಹೊನ್ನೆ ಸಂಪಗೆ ನವೋದ್ಯನ್ಮಲ್ಲಿಕಾದಿಪ್ರಸೂ**

**ನಸಮೂಹಂ ತನಿಗಂಪನೆಣ್ದೆಸಗೆ ನಿಚ್ಚಂ ಬೀಲುಲನ್ವರ್ಥಮಾ**

**ಗೆಸೆಗುಂ ಪೂವಿನಭಾಗೆಯೆಂಬ ಪೆಸರಿಂದಿಂಬಾಗಿ ಚೆಲ್ವಾಗಿರಲ್**[31]

ಈ ಹೂವಿನ ಬಾಗೆಯೆಂಬುದು ಹೂವಿನಹಡಗಲಿ, ಬಾಗೇವಾಡಿ ಇತ್ಯಾದಿಯನ್ನು ಹೋಲುವಂತಿದೆ ಇದು ಬಹುಶಃ ಉತ್ತರಕರ್ನಾಟಕದಲ್ಲಿರಬೇಕು ಎಂದು ಶ್ರೀ ಮರಿಯಪ್ಪಭಟ್ಟರು ಅಭಿಪ್ರಾಯ ಪಡುವರು (ವ್ಯವಹಾರ ಗಣಿತ–ಮುನ್ನುಡಿ)

**ವ್ಯವಹಾರ ಗಣಿತ** : ಇದು ಗದ್ಯಪದ್ಯಾತ್ಮಕವಾಗಿದ್ದು ಸೂತ್ರಗಳು ಪದ್ಯರೂಪದಲ್ಲಿದ್ದು ಅವುಗಳಿಗೆ ಟೀಕೆ ಮತ್ತು ಉದಾಹರಣೆಗಳಿವೆ.

**ಲೆಕ್ಕದ ಕವಿತೆಯ ಬಲ್ಮೆಜ**

**ಗಕ್ಕೆಸೆದಿರೆ ಸಕಲಗಣಿತಮೀಗ್ರಂಥದೊಳಂ**

**ತೆಕ್ಕನೆ ತೀವಿರಲಯ್ದುದಿ**

**ನಕ್ಕಂನೆರೆಪೇಲ್ದುನಲ್ತೆ ರಾಜಾದಿತ್ಯಂ**[32]

ಇದು ನಿಜವಾಗಿದ್ದರೆ ಅಚ್ಚರಿಯೇ ಸರಿ. ಸಹಜತ್ರಯರಾಶಿ, ವ್ಯಸ್ತತ್ರಯರಾಶಿ, ಸಹಜ ಪಂಚರಾಶಿ, ವ್ಯಸ್ತಪಂಚರಾಶಿ, ಸಹಜಸಪ್ತರಾಶಿ, ವ್ಯಸ್ತತ್ರಯರಾಶಿ, ಸಹಜಸಪ್ತರಾಶಿ, ಸಹಜನವರಾಶಿ, ವ್ಯಸ್ತನವರಾಶಿ,ಪದವಿನ ಸೂತ್ರ, ಬಗ್ಗಾಂತರದ ಸೂತ್ರ, ಹೆದೆಯೆಂಬನಸೂತ್ರ, ತೂಬಿನಸೂತ್ರ, ಚಕ್ರಬಡ್ಡಿ ಮೊದಲಾದ ವಿಷಯಗಳು ಈ ಗ್ರಂಥದಲ್ಲಿ ವಿವರಿಸಲ್ಪಟ್ಟಿವೆ. ಒಂದರಿಂದ ಒಂಬತ್ತರವರೆಗಿನ ಮತ್ತು ಸೊನ್ನೆ ಇವುಗಳಿಗಿರುವ ವಿವಿಧ ಸಂಕೇತ ಶಬ್ದಗಳ ಪಟ್ಟಿಯನ್ನು ಕೊಟ್ಟಿರುವನು. ಗಣಿತಶಾಸ್ತ್ರದ ಜೀವಾಳವಾದ ಸಂಕಲನ, ವ್ಯವಕಲನ, ಅನುಪಾತ ಇತ್ಯಾದಿಗಳನ್ನು ತಿಳಿಸಲಾಗಿದೆ. ಗಣಿತಶಾಸ್ತ್ರವನ್ನು ಮನೋಹರವಾದ ಉದಾಹರಣೆಗಳೊಂದಿಗೆ ಲಲಿತ ಸುಂದರ ಪದ್ಯಗಳಲ್ಲಿ ವಿವರಿಸಿರುವುದು ಇವನ ಹಿರಿಮೆ ಹಾಗೂ

ವೈಶಿಷ್ಟ್ಯವಾಗಿವೆ. ಒಂದು ಊರಿನಿಂದ ಇನ್ನೊಂದು ಊರಿಗೆ ಅಳತೆ, ತೂಕಗಳಲ್ಲಿ ಅಂತರವನ್ನು ಕಾಣಬಹುದು. ಇಂತಹ ವ್ಯತ್ಯಾಸಗಳನ್ನು ಕುರಿತು ಹೇಳಿದ ಲೆಕ್ಕಗಳನ್ನು ರಾಜಾದಿತ್ಯನು ಹೇಳಿರುವನು.

ರಾಜಾದಿತ್ಯನು ಆ ಕಾಲದ ತೂಕ ಅಳತೆಗೆ ಸಂಬಂಧಪಟ್ಟ ಕೆಲವು ಕೋಷ್ಟಕಗಳನ್ನು ಹೇಳಿರುವನು. ಇದರಿಂದ ಅಂದಿನ ವಾಣಿಜ್ಯಪ್ರಪಂಚದಲ್ಲಿ ಪ್ರಚಲಿತವಾಗಿದ್ದ ತೂಕ ಅಳತೆಮಾಪನಗಳನ್ನು ಅರಿಯಬಹುದಾಗಿದೆ.

ಇದರಲ್ಲಿ ಹೇಳಿದ ಕೆಲವು ಕೋಷ್ಟಕಗಳನ್ನು ಇಲ್ಲಿ ಉದಾಹರಿಸಲಾಗಿದೆ.–

| | |
|---|---|
| 1 ಖಂಡುಗ=4ಪಂಚಕ | 1 ಕರ್ಷ= 4 ಸುವರ್ಣ |
| 1 ಪಂಚಕ= 5ಕೊಳಗ | 1 ಯೋಜನ= 4000 ಕ್ರೋಶ |
| 1ಕೊಳಗ= 4ಬಳ್ಳ | 1 ಕ್ರೋಶ = 2000 ದಂಡ |
| 1 ಬಳ್ಳ = 4ಮಾನ | 1 ದಂಡ= 4 ಮೊಳ |
| 1 ಮಾನ = 4ಸೊಲ್ಲಿಗೆ | 1 ಮೊಳ= 2 ಗೇಣು |
| 1 ಸೊಲ್ಲಿಗೆ= 4 ಗಿದ್ದಗೆ | 1 ಗೇಣು= 12 ಬೆರಳು |
| 1 ಭಾರ = 20ತೊಲ | 4 ಕಾಣಿ = 1 ವೀಸ |
| 1 ತೊಲ= 5 ಬೀಸಗೆ | 5 ವೀಸ= 1 ಹಾಸ |
| 1 ಬೀಸಗೆ= 20 ಪಲ | 4 ಹಾಗ= 1 ಹಣ |
| 1 ಪಲ= 4 ಕರ್ಷ | 10 ಹಣ = 1 ಗದ್ಯಾಣ |

ಈ ಉದಾಹರಣೆಗಳು ಅಂದಿನ ಸ್ಥಳೀಯ ವ್ಯವಹಾರ ಮತ್ತು ವಾಣಿಜ್ಯಗಳ ಚಿತ್ರವನ್ನು ಕಟ್ಟಿಕೊಟ್ಟಿದೆ. ಆವಳಿ, ಮುತ್ತು, ರತ್ನ, ವಜ್ರ, ಹೊನ್ನು, ಬೆಳ್ಳಿ, ತಾಮ್ರ ಇತ್ಯಾದಿ ಲೋಹಗಳು, ಗೋಧಿ, ನೆಲ್ಲು, ತೊಗರಿ, ಕಡಲೆ, ಜೋಳ, ಎಳ್ಳು, ಕಬ್ಬು, ಹಾಲು, ತುಪ್ಪ, ಎಣ್ಣೆ, ಎಲೆ, ಅಡಕೆ ಇವುಗಳ ಕೊಂಡುಕೊಳ್ಳುವಿಕೆ ಮಾರಾಟ ವಿವರಗಳು ಅಲ್ಲಲ್ಲಿ ಸಹಜವಾಗಿ ಬಂದಿವೆ. ಅಂದಿನ ತೂಕ, ಅಳತೆಗಳ ಮತ್ತು ಬೆಲೆಗಳ ವಿಚಾರವನ್ನು ಸರಿಯಾಗಿ ವಿಮರ್ಶಿಸಿದಲ್ಲಿ ವಿವಿಧ ವಸ್ತುಗಳಿಗೆ ಅಂದಿನ ಸ್ಥಳೀಯ ಪೇಟೆ ಧಾರಣೆ ಹೇಗಿದ್ದಿರಬೇಕೆಂಬುದೂ ತಿಳಿದು ಬರುವುದು ಮಾತ್ರವಲ್ಲ ಅಂದು ದವಸಗಳನ್ನು ಹೆಚ್ಚಾಗಿ ವಿನಿಮಯದ ಮೂಲಕ ಕೊಂಡುಕೊಳ್ಳುತ್ತಿದ್ದರೆಂಬುದನ್ನು ತಿಳಿಯಬಹುದು.

#### 4.3.1.3: ಆಚಣ್ಣನ ವರ್ಧಮಾನ ಪುರಾಣ

ತಾರೇಶೋಜ್ಜ್ವಳ ಕೀರ್ತಿ ಜೈನರುಚಿ ಎಂದು ತನ್ನನ್ನು ಕರೆದುಕೊಂಡ ಆಚಣ್ಣ ಪರಮಜಿನಭಕ್ತ. "ಶ್ರೀ ಪಾದಾಶೀತಿ ಹಾಗೂ ಶ್ರೀ ವರ್ಧಮಾನ ಪುರಾಣಂ"[33] ಗಳೆಂಬೆರೆಡು ಇವನ ಕೃತಿಗಳು. ವರ್ಧಮಾಣ ಪುರಾಣವು ಚತುರ್ವಿಂಶತಿ ತೀರ್ಥಂಕರರಲ್ಲಿ ಕೊನೆಯವನಾದ ಶ್ರೀವರ್ಧಮಾನ ಅಥವಾ ಮಹಾವೀರನ ಜೀವನ ಚರಿತ್ರೆಯನ್ನು ಕಥಾವಸ್ತುವನಾಗಿರಿಸಿಕೊಂಡು ಕನ್ನಡದಲ್ಲಿ ಸ್ವತಂತ್ರಕೃತಿಯಾಗಿ ವಿರಚಿಸಿದ ಪ್ರಥಮಕೃತಿ. ತೀರ್ಥಂಕರರ ಕಥೆಗಳನ್ನು ಅನೇಕ ಜೈನಕವಿಗಳು ಸಂಸ್ಕೃತ ಮತ್ತು ಕನ್ನಡದಲ್ಲಿ ರಚಿಸಿರುವರು. "ಆದಿಯಲ್ಲಿ ಕೂಚಿಭಟ್ಟಾರಕರೂ ನಂದಿ ಮುನೀಶ್ವರರೂ ಚತುರ್ವಿಂಶತಿ ತೀರ್ಥಂಕರರ ಮಹಾಪುರಾಣವನ್ನು ವಿರಚಿಸಿದರು. ಅನಂತರ ಕವಿಪರಮೇಶ್ವರರು ತ್ರಿಷಷ್ಟಿಶಲಾಕಾಪುರುಷ ಪುರಾಣವನ್ನು ಬರೆದರು. ಕನ್ನಡದಲ್ಲಿ ಚಾವುಂಡರಾಯನು ಜೈನರಲ್ಲಿ ಪೂಜ್ಯರೆಂದು ಪರಿಗಣಿಸಲ್ಪಟ್ಟ ತೀರ್ಥಂಕರರು ಚಕ್ರವರ್ತಿ ಮೊದಲಾದ 63 ಜನ ಶಲಾಕಾಪುರುಷರ ಕಥೆಗಳನ್ನೊಳಗೊಂಡ 'ತ್ರಿಷಷ್ಟಿ ಲಕ್ಷಣ ಮಹಾಪುರಾಣ' ಎಂಬ ಗದ್ಯಗ್ರಂಥವನ್ನು ರಚಿಸಿರುವನು. ಆಚಣ್ಣನಿಂದ ಸ್ತುತಿಸಲ್ಪಟ್ಟ ಅಸಗನು ಸಂಸ್ಕೃತದಲ್ಲಿ ವರ್ಧಮಾನಪುರಾಣವನ್ನು ರಚಿಸಿರಬಹುದಾಗಿ ತಿಳಿದುಬರುವುದು. ಈ ಕೃತಿ ಲಭ್ಯವಿಲ್ಲ. ಆಚಣ್ಣನು ಈ ಕೃತಿಯನ್ನು ಅನುಸರಿಸಿ ತನ್ನ ಕಾವ್ಯವನ್ನು ರಚಿಸಿರಬಹುದಾಗಿ ಊಹಿಸುವಂತಿದೆ. ಜೈನಮತೀಯರ 24 ತೀರ್ಥಂಕರರಲ್ಲಿ ಕೊನೆಯವನಾದ ವರ್ಧಮಾನನ ಚರಿತ್ರೆಯನ್ನು ಹೀಗೆ ಸಂಸ್ಕೃತದಲ್ಲಿ ಬರೆದರೂ, ಕನ್ನಡದಲ್ಲಿ ಎಲ್ಲರ ಬಗ್ಗೆ ಹೇಳುವಾಗ ಕಂಡುಬಂದರೂ ವರ್ಧಮಾನನ ಚರಿತ್ರೆಯನ್ನು ಕನ್ನಡದಲ್ಲಿ ಪ್ರಥಮ ಬಾರಿಗೆ ಸ್ವತಂತ್ರ ಕೃತಿಯಾಗಿ ರಚಿಸಿದ ಶ್ರೇಯಸ್ಸು ಆಚಣ್ಣನಿಗೆ ಸಲ್ಲುವುದು."[34] ಶ್ರೀಪದಾಶೀತಿ ಸುಮಾರು 94 ಕಂದಪದ್ಯಗಳ ನ್ನೊಳಗೊಂಡ ಚಿಕ್ಕ ಕೃತಿ. ಅರ್ಹಂತ, ಸಿದ್ದ, ಸಾಧು, ಉಪಾಧ್ಯಾಯ, ಆಚಾರ್ಯ ಎಂಬ ಪಂಚಪದಗಳ ಮಹಿಮೆಯನ್ನು ಬಣ್ಣಿಸುವುದು ಈ ಕೃತಿಯ ಉದ್ದೇಶವಾಗಿದೆ.

**ಭಾರದ್ವಾಜ ಪವಿತ್ರಗೋತ್ರತಿಳಕಂ ಶ್ರೀ ಕೇಶಿರಾಜಾತ್ಮಜಂ**

**ಸಾರೋದಾರ ಪವಿತ್ರಾದಿ ಗುಣಭೃನ್ಮಲ್ಲಾಂಬಿಕಾನಂದನಂ**

**ತಾರೇಶೋಜ್ಜ್ವಳ ಕೀರ್ತಿ ಜೈನರುಚಿ ವಾಣೀವಲ್ಲಭಂ ನಿರ್ಮಳಾ**

**ಚಾರಂ ನಿರ್ಮಿಸಿ ಪೆರ್ಮೆವೆತ್ತನೊಲವಿಂದಾಚಣ್ಣೀ ಧಾತ್ರಿಯೊಳ್** [35]

ಎಂಬ ಪದ್ಯಭಾಗದಿಂದ ಆಚಣ್ಣನು ಭಾರದ್ವಾಜಗೋತ್ರೋದ್ಭವನೂ ಕೇಶೀರಾಜ ಮತ್ತು ಮಲ್ಲಾಂಬಿಕೆಯರ ಮಗನೆಂದು ತಿಳಿಯುತ್ತದೆ. "ಸಂದಾಚಿರಾಜ ಪುರಿಕರನಗರಾಧೀಶಶಂಕರಾಗ್ರಹಾರ್ ತ್ಸೇವಾಸಕ್ತಾಶಯ" ಎಂಬ ವಾಕ್ಯ ಮತ್ತು ಆಶ್ವಾಸಗಳ ಅಂತ್ಯದ ಗದ್ಯದಿಂದ ಆಚಣ್ಣನು ಪರಿಕರ (ಪುಲಿಗೆರೆ) ಎಂಬ ನಗರಕ್ಕೆ ಒಡೆಯನಾದ ಶಂಖನೆಂಬುವವನ ಅಣ್ಣನೆಂದೂ ನಂದಿಯೋಗೀಂದ್ರನ ಶಿಷ್ಯನೆಂದೂ ವೇದ್ಯವಾಗುವುದು.

ಆಚಣ್ಣನು ತನ್ನ ವರ್ಧಮಾನ ಪುರಾಣದಲ್ಲಿ ತನ್ನ ವಿಭುವಾದ ರೇಚಣನನ್ನು ಮನಸಾರೆ ಹಾಡಿ ಹೊಗಳಿರುವನು. ರೇಚಣನಿಗೆ ರೇಚಿಮಯ್ಯ, ರೇಚರಸ, ರೇಚಚಮೂಪತಿ ಎಂದು ಕರೆಯಲಾಗುತ್ತಿತ್ತು. ಈತನನ್ನು ಜಿನೇಂದ್ರಮತಾಮಬ್ಜಭಾನು ಪುಣ್ಯಾಕರಂ, ಅರ್ಥಿಕಲ್ಪತರು, ಭೋಗಪುರಂದರಂ, ಭೀಕರ ವೈರವಾರಣ ವದಾರಣಕೇಸರಿ ಎಂದು ಮೊದಲಾಗಿ ಹೊಗಳಿರುವನು. ರೇಚಣನು ಕಲಚೂರ್ಯ ಆಹವಮಲ್ಲ (1180–1183)ನ ಲಕ್ಷಣ, ರೇಚಣ, ಚಂದಣ, ಸೋವಣ, ಕಾವಣ ಎಂಬ ಐದು ಪ್ರಖ್ಯಾತ ಮಂತ್ರಿಗಳಲ್ಲೊಬ್ಬನಾಗಿರುವನು. ಹೊಯ್ಸಳ ವೀರಬಲ್ಲಾಳನು ಕಲಚುರ್ಯರ ರಾಜ್ಯವನ್ನು ವಶಪಡಿಸಿಕೊಂಡ ನಂತರ ರೇಚಣನು ಹೊಯ್ಸಳ ಅರಸರ ಆಶ್ರಯವನ್ನು ಪಡೆದಂತೆ ತೋರುವುದು. ರೇಚರಸನು ಕ್ರಿ.ಶ 1220ರಲ್ಲಿ ದಕ್ಷಿಣದ ಐಹೊಳೆಯೆಂದು ಪ್ರಸಿದ್ಧಿಯನ್ನು ಪಡೆದ ಅರಸಿಕೆರೆಯಲ್ಲಿ ಸಹಸ್ರಕೂಟ ಜಿನಾಲಯವನ್ನು ಕಟ್ಟಿಸಿ ಅದಕ್ಕೆ ಹೊಯ್ಸಳ ದೊರೆಯಾದ ಬಲ್ಲಾಳನ ಅನುಮತಿಯಂತೆ ದತ್ತಿಯನ್ನು ನೀಡಿದುದಾಗಿ ಶಾಸನದಿಂದ ತಿಳಿಯುವುದು.[36] ಅಲ್ಲದೆ ಶ್ರವಣಬೆಳಗೊಳದಿಂದ ಅನತಿದೂರದಲ್ಲಿರುವ ಜಿನನಾಥಪುರದಲ್ಲಿರುವ ಶಾಂತಿನಾಥ ಜಿನನ ವಿಗ್ರಹವನ್ನು ಪ್ರತಿಷ್ಠಾಪಿಸಿದುದಾಗಿ ತಿಳಿದುಬರುವುದು.

**ಕುಲಮಂ ಪೇಳ್ವೊಡೆ ವಾಜಿವಂಶತಿಲಕಂ ಸನ್ಮಂತ್ರಮಂತ್ರಿತ್ವದೊಳ್**

**ಪಲರುಂ ಜೀಯೆನೆ ದೇವಮಂತ್ರಿಯೊಲವಂ ಸಲ್ಲೀಲೆಯಿಂ ತೋರುವಂ**

**ಚಲದಿಂದಾಂತರನಿಕ್ಕಿಮೆಟ್ಟಿ ಪಡೆವಂ ಸತ್ಕೀರ್ತಿಯಂ ಧಾತ್ರಿಯೊಳ್**

**ನಲದಿಂ ರೇಚಣಮಂತ್ರಿಯಾರ್ಗಮಧಿಕಂ ಸಾಹಿತ್ಯವಿದ್ಯಾಧರಂ**[37] ಎಂದು ರೇಚಣ ಮಂತ್ರಿಯನ್ನು ವರ್ಣಿಸಲಾಗಿದೆ ಈ ರೇಚಣ ಮಂತ್ರಿಯೇ ಆಚಣ್ಣನ ವಿಭು ಎಂಬುದರಲ್ಲಿ ಸಂಶಯವಿಲ್ಲ. ಇಂತಹ ಜಿನಾನುರಾಗಿಯೂ ಕವಿಜನಪೋಷಕನೂ ವಿದ್ಯಾಭಿಮಾನಿ ಹಾಗೂ ಮಂತ್ರಿಯಾದ ರೇಚಣನನ್ನು ಆಚಣ್ಣನು ತನ್ನ ಕೃತಿಯಲ್ಲಿ ಮನಸಾರೆ ಕೊಂಡಾಡಿರುವನು. ಆಚಣ್ಣನು ವರ್ಧಮಾನಪುರಾಣವನ್ನು ಬರೆಯಲು ಕಾರಣವನ್ನು ಹೀಗೆ ಹೇಳಿಕೊಂಡಿದ್ದಾನೆ –

**ಶ್ರೀ ವಸುಧೈಕಬಾಂಧವನ ಬಂಧುರಭಕ್ತಿಗೆ ಮೆಚ್ಚಿ ಕೇಶಿರಾ**

**ಜಾವನದೇವನಾ ವಿಬಂಧಚಾಮಸಮನ್ವಿತನಂದು ಪೇಳುತುಂ**

**ದೈವನಿಯೋಗದಿಂದೆ ಗಡ ನಿಂದುದನೀವರವೀರಕಾವ್ಯಮಂ**

**ಭಾವಿಸಿಯಾಚಿರಾಜವಿಭು ಪೂರಿಸಿದಂ ಜಿನಭಕ್ತಿ ಸೂಕ್ತಿಯಿಂ** [38]

ರೇಚಣವಿಭುವಿನ ಭಕ್ತಿಗೆ ಮೆಚ್ಚಿ ಕೇಶಿರಾಜನೂ ಮತ್ತು ಜಾಮನು ಈ ಕೃತಿ ರಚನೆಯನ್ನು ಆರಂಭಿಸಿದರು. ಆದರೆ ದೈವಯೋಗದಿಂದ ಈ ಕಾರ್ಯ ಸಂಪೂರ್ಣವಾಗಿ ನೆರವೇರಲಿಲ್ಲ. ಅರ್ಧಕ್ಕೆ ನಿಂತುಹೋದ ಈ ಕೃತಿಯನ್ನು ತಾನು ಪೂರ್ತಿ ಮಾಡಿರುವುದಾಗಿ ಹೇಳಿರುವನು. ಕೇಶಿಮಯ್ಯನೆಂಬ ಒಬ್ಬ ದಂಡನಾಯಕನು ಕಲಚುರ್ಯ ಆಹವಮಲ್ಲನಿಗೆ ಸೇವೆ ಸಲ್ಲಿಸಿ ಆತನಿಂದ ಬನವಸೆಯ ನಾಡಿಗೆ

ಒಡೆಯನಾಗಿ ನೇಮಿಸಲ್ಪಟ್ಟಿದ್ದನೆಂಬುದನ್ನು ಒಂದು ಶಾಸನದಿಂದ ತಿಳಿಯುವುದು (ಶಿಕಾರಿಪುರ 119). ಈ ದಂಡನಾಯಕನಾದ ಕೇಶೀಮಯ್ಯನು ಮತ್ತು ವರ್ಧಮಾನ ಪುರಾಣದ ರಚನೆಯನ್ನು ಆರಂಭಿಸಿದ ಕೇಶೀರಾಜನು ಅಭಿನ್ನರಾಗಿದ್ದು ಈತನೇ ಕವಿಯಾದ ಆಚಣ್ಣನ ತಂದೆಯಾಗಿರಬೇಕು ಎಂದು ಊಹಿಸಬಹುದು.

ಆಚಣ್ಣನು ಶ್ರೀವಿಜಯ, ಗಜಾಂಕುಶ, ನಾಗವರ್ಮ, ಗುಣವರ್ಮ, ಅಸಗ, ಪಂಪ, ಪೊನ್ನ, ರನ್ನ, ಅಗ್ಗಳ, ಬೊಪ್ಪಾ – ಈ ಜೈನ ಕವಿಗಳನ್ನು ಸ್ತುತಿಸಿರುವನು. ಈ ಕವಿಗಳೆಲ್ಲರೂ ಕ್ರಿ. ಶ. 1190 ಕ್ಕಿಂತಲೂ ಮೊದಲು ಜೀವಿಸಿದ್ದರು. ಇದರಿಂದ ಆಚಣ್ಣನು 1190ರ ನಂತರದವನೆಂಬುದು ಖಚಿತ. ಪಾರ್ಶ್ವಪಂಡಿತನು ತನ್ನ ಪಾರ್ಶ್ವನಾಥ ಪುರಾಣದಲ್ಲಿ ಆಚಣ್ಣನನ್ನು ಸ್ತುತಿಸಿರುವನು. ಪಾರ್ಶ್ವನಾಥಪುರಾಣದ ರಚನಾ ಕಾಲವು ಕ್ರಿ, ಶ. 1205 ಎಂದು ಕವಿಚರಿತೆಕಾರರು( ಕ.ವಿ.ಚ ಸಂ 1 ಪು 322), ಎ. ವೆಂಕಟಸುಬ್ಬಯ್ಯನವರು ಕ್ರಿ. ಶ 1218( ಕೆಲವು ಕನ್ನಡ ಕವಿಗಳ ಕಾಲವಿಚಾರ ಪು 196) ಎಂದು ಅಭಿಪ್ರಾಯ ಪಟ್ಟಿರುವರು. ಆಚಣ್ಣನ ವಿಭುವಾದ ರೇಚಣನು ಕಲಚುರ್ಯ ಆಹವಮಲ್ಲ (1180–1183), ಹೊಯ್ಸಳ ದೊರೆ ವೀರಬಲ್ಲಾಳ (1173–1220) ರ ಸಮಕಾಲೀನನು. ಈ ಕಾರಣಗಳಿಂದ ಆಚಣ್ಣನು ತನ್ನ ಕೃತಿಯಾದ ವರ್ಧಮಾನಪುರಾಣವನ್ನು 13ನೆಯ ಶತಮಾನದ ಆರಂಭದಲ್ಲಿ ರಚಿಸಿರಬಹುದಾದ ಸಾಧ್ಯತೆಗಳಿವೆ.

ಆಚಣ್ಣನು ಕೃತಿಯ ಆರಂಭದಲ್ಲಿ 'ಅಲ್ಪಧೀಧನ' ಆದ ತಾನು ಜಿನಾಗ್ರಣಿಯ ಪಾದಾರವಿಂದಗಳಲ್ಲಿ ಭಕ್ತಿಯನ್ನಿಟ್ಟು ಈ ಶ್ರೇಷ್ಠ ಕೃತಿಯನ್ನು ರಚಿಸಿರುವುದಾಗಿ ಮತ್ತು ಕಾವ್ಯಕಳಾವಿಶಾರದರು ಅದನ್ನು ತಿದ್ದಬೇಕಾಗಿ –

**ಗಣಧರರಿಂ ಬಹುಶ್ರುತತಿನಾದಮೆವರ್ಣಿತಮಾದುದಂ ಜಗ**

**ತ್ರೃಣುತಮನೊಲ್ದ ವೀರಜಿನಚಾರುಚರಿತ್ರಮನಾತ್ಮಶಕ್ತಿಯಂ**

**ಗಣಿಯಿಸಿದಲ್ಪಧೀಧನನೆನಾನಬಿವರ್ಣಿಸಿದಪ್ಪೆನಾ ಜಿನಾ**

**ಗ್ರಣಿಯ ಪದಾರವಿಂದಯುಗಬಕ್ತಿ ಸುಧಾನುಭವೋತ್ಥ ಶಕ್ತಿಯಿಂ** [39]

**ವರವಸುಧೈಕಬಾಂಧವನ ಬಂಧುರ ಭಾಗ್ಯನ ದಂಡನಾಥ ರೇ**

**ಚರಸರನ ಮಾನಸಪ್ರಿಯಮೆನಿಪ್ಪ ಜಗನ್ನುತವರ್ಧಮಾನಸ**

**ಚ್ಚರಿತಮನಿಂತಿದಂ ನಯದೆ ಭಾವಿಸಿ ಭಾವಿಸಿ ನೋಡಿ ಬಿಟ್ಟು ಮ**

**ಚ್ಚರಮನತಿಪ್ರಮೋದದೊಳೆ ತಿರ್ದುಗೆ ಕಾವ್ಯಕಳಾವಿಶಾರದರ್** [40]

ಎಂದು ವಿದ್ವಜ್ಜನರನ್ನು ವಿನಯದಿಂದ ಪ್ರಾರ್ಥಿಸಿಕೊಳ್ಳುವನು. ಆಚಣ್ಣನು ತನ್ನ ಕಾವ್ಯವನ್ನು ಕುರಿತು –

**ಸದಳಂಕಾರದಗಾರಮುದ್ವರಸಭಾವಾನೀಕದೋಕಂ ಸದ**

ರ್ಥದ ಸಾರ್ಥಂ ವರಸಬ್ದವೃಂದದ ವಿರಾಜನ್ಮಂದಿರಂ ನಾಡೆಯುಂ

ಮೃದು ಸಂದರ್ಭಧ ಗರ್ಭಮಿಂತಿದೆನಿಸಲ್ ಸಾಲ್ದಿರ್ದ ಕಾವ್ಯಂ ಸಬಾ

ಸದರಂತಃಕರಣಕ್ಕದೇಂ ಕರೆಯದೇಸೌಖ್ಯಾಮೃತಾಸಾರಮಂ [41] ಎಂದು ಹೇಳಿರುವನು.

ವಕುಳಂ ಸಪರಿಮಳ ಪ್ರಸ

ವಕುಳಂ ಸೌರಭ ಸಮಾಗತ ಭ್ರಮರಾರಾ

ವಕುಳಂ ಸೊಗಯಿಸಿದತ್ತಸೆ

ವಕುಳಂಚಿತವಿಟಪಮವನಿ ಸಂಸ್ಥಾವಕುಳಂ [42]

ಕೇಸರಿ ನಿಮಗೇಸರಿ ದೇ

ವೀ ಸಡಗರಮಾದುದುಚಿತಮಾಗಿರೆ ಬೆಸಸಿಂ

ಕೇಸರಿಯಂ ಕಡೆಪಟ್ಟಾ

ವೇಸರಿಯಂ ಕೆಡಮವಂತೆ ಕೆಡಪದೆ ಮಾಣಿಂ [43] ಇಂತಹ ಸಹಜವಾಗಿ ಸುಳಿದುಬಂದ ಸುಂದರ ಪ್ರಾಸಯಮಕಾದಿ ಶಬ್ದಾಲಂಕಾರಗಳನ್ನು ಕಾವ್ಯದುದ್ದಕ್ಕೂ ಕಾಣಬಹುದು. ಶಬ್ದಾಲಂಕಾರಗಳಂತೆ ಅರ್ಥಾಲಂಕಾರಗಳನ್ನೂ ಕವಿ ಸಮುಚಿತವಾಗಿ ಪ್ರಯೋಗಿಸಿದ್ದಾನೆ. ಉಪಮಾ, ರೂಪಕ ಮೊದಲಾದ ಅಲಂಕಾರಗಳು ಹೆಚ್ಚಾಗಿ ಕಂಡುಬರುವುವು. ಉದಾಹರಣೆಗೆ ಕೆಳಗಿನ ಪದ್ಯಗಳನ್ನು ಗಮನಿಸಬಹುದು.

ಸಿಂಗದ ಶಿಶುವಂ ಕಂಡ ಕು

ರಂಗದ ಮರೆಯಂತೆ ಬೆದರಿ ದೆಸೆಗೆಟ್ಟು ಕರಂ

ಬೆಂಗೊಟ್ಟೋಡಿದನವನು

ತ್ತುಂಗ ಕರಂಗಳ ಮರಂಗಳೇಡೆದೆರಪುಗಳೊಳ್ [44]

ಆಕೆಯ ವಕ್ತ್ರವಾರಿಜದ ಲೋಚನನೀಳಸರೋಜದೋಷ್ಠಬಂ

ಧೂಕದ ದಂತಕುಂದದ ಸಖಾಂಕುರ ಕೇಶಕದಂಬು ಮೋಹನ

ಶ್ರೀಕರಮೆಂದಿದ್ಯೆದು ತೆರದಂಬನೆ ನೆಚ್ಚಿನ ಕೆಯ್ದು ಮಾಡಿ ಮೂ

ಲೋಕದೊಳೆಯ್ದೆ ಪಂಚಶರನುಂ ಕುಸುಮಾಸ್ತ್ರನುಮಾದನಂಗಜಂ [45]

ಕರಪೀಡನಮುರುಕಚದೊಳ್

ತರಣೀಜನ ಮಧ್ಯದೊಳ್ ದರಿದ್ರತೆಚಿಂತಾ

**ಪರತೆ ಮುನೀಶ್ವರರೊಳ್ ತಾಂ**

**ದೊರೆಕೊಳ್ಳುಮದಲ್ಲದಿಲ್ಲತಜ್ಜನಪದದೊಳ್** [46]

ಇಂತಹ ಸುಂದರವಾದ ಅಲಂಕಾರಗಳನ್ನು ಕೃತಿಯುದ್ದಕ್ಕೂ ಕಾಣಬಹುದು. ಆಚಣ್ಣನು ಸಂಸ್ಕೃತದಲ್ಲಿಯೂ ಪಾಂಡಿತ್ಯವುಳ್ಳವನಾಗಿದ್ದನು. ವಿವಿಧ ಸಂಸ್ಕೃತ ವೃತ್ತಗಳನ್ನು ಪ್ರಯೋಗಿಸಿದರೂ ರಗಳೆ, ತ್ರಿಪದಿಯಂತಹ ಅಚ್ಚಗನ್ನಡ ವೃತ್ತಗಳನ್ನೂ ಪ್ರಯೋಗಿಸಿರುವನು; ಅಲ್ಲದೆ ದ್ರ್ಯಕ್ಷರಿ ಗತಪ್ರತ್ಯಾಗತ ಮೊದಲಾದ ಚಿತ್ರಕವಿತೆಗಳನ್ನೂ ಪ್ರಯೋಗಿಸಿರುವನು. ದ್ರ್ಯಕ್ಷರಿಯ ಒಂದು ಪದ್ಯವನ್ನು ಕಾಣಬಹುದು–

**ಕಲಿಕೊಂಕಲ್ಕೇಕಕ್ಕುಂ**

**ಕೆಲಕ್ಕೆ ಕೋಲಿಕ್ಕೆ ಲಕ್ಕೆಕ್ಕೆಲ್ಲಂ**

**ಕಲಿಕೊಲಲೆ ಕಲಲ್ಕಕ್ಕುಂ**

**ಕುಲಕಕ್ಕುಂ ಕಲಿ ಕಲಂಕಿ ಕೊಂಕೆ ಕಲಂಕಂ** [47]

ಇಂತಹ ವಿವಿಧ ಅಲಂಕಾರ ಹಾಗೂ ವೃತ್ತಗಳ ಪ್ರಯೋಗಗಳು ಆಚಣ್ಣನ ಪಾಂಡಿತ್ಯದ ನಿದರ್ಶನವಾಗಿದೆ; ಕಾವ್ಯದ ಭಾಷೆ ಪ್ರೌಢವಾಗಿದೆ; ಮಹಾಕಾವ್ಯಗಳಲ್ಲಿರಬೇಕಾದ ನವರಸಗಳೂ ವರ್ಧಮಾನಪುರಾಣದಲ್ಲಿ ಸಮಯೋಚಿತವಾಗಿ ನಿರೂಪಿಸಲ್ಪಟ್ಟಿವೆ. ಕಾವ್ಯದಲ್ಲಿ ಭವ್ಯಬಾಳಿನ ಕತೆಯನ್ನು ಬಿತ್ತರಿಸುವ ಧಾರ್ಮಿಕ ಕಾವ್ಯವಾದರೂ ಶೃಂಗಾರರಸಕ್ಕೆ ಕೊರತೇ ಇಲ್ಲ. ವನವಿಹಾರದಲ್ಲಿ ಮೈಮರೆತ ಸ್ತ್ರೀಯರನ್ನು ಬಹು ಸುಂದರವಾಗಿ ವರ್ಣಿಸಿರುವನು. ವನವಿಹಾರ ಮಾಡುತ್ತಿದ್ದ ಸ್ತ್ರೀಯರು ವನದಂತೆ ತೋರುತ್ತಿದ್ದರು ಎಂಬುದನ್ನು –

**ಕಳಹಂಸಗಳ ಯಾನಮಂ ನೆಗಳ್ದಯಾನಂ ಕೋಕಿಳದ್ವಾನಮಂ**

**ವಿಳಸಧ್ವಾನಮನೂನ ಬರ್ಹಿಗಳ ಬರ್ಹಾನೀಕಮಂ ಸತ್ಕಚಾ**

**ವಳಿ ಕಂಕೆಲ್ಲಿ ದಳಂಗಳಂ ಪದತಳಂ ಪ್ರೋದ್ಯಲ್ಲತಾಜಾಳಮಂ**

**ಲಳಿತಾಂಗಂ ನೆರೆ ಪೋಲೆ ತದ್ವನದವೋಲ್ ಕಣ್ಗೊಪ್ಪುವರ್ ಕಾಂತೆಯರ್** [48]

ಅದ್ಭುತವಾಗಿ ವರ್ಣಿಸಿರುವನು. ಕವಿಯ ಜಾಣ್ಮೆ ಕೌಶಲಗಳು ಮಿಂಚಿನಂತೆ ಸುಳಿದಾಡುವುದನ್ನು ಈ ಬಗೆಯ ಸನ್ನಿವೇಶಗಳನ್ನು ನಿರ್ಮಿಸುವಲ್ಲಿ ನಿರೂಪಿತವಾಗಿವೆ. ಶೃಂಗಾರದಂತೆ ಕರುಣ ರಸವೂ ಮನಮುಟ್ಟವಂತೆ ಚಿತ್ರಣಗೊಂಡಿದೆ; ಬಲರಾಮನು ತನ್ನ ಸಹೋದರನ ಕಳೇಬರವನ್ನು ಕಂಡು ಕಣ್ಣೀರು ಸುರಿಸುವ ಸಂದರ್ಭ ಹೃದಯಭೇದಕವಾಗಿದೆ.

**ಹಾ ಹಾ ಮನುಕುಲ ಮಂಡನ**

**ಹಾಹಾ ಸುರಖಚರ ಮನುಜ ಚೂಡಾರತ್ನಾ**

**ಹಾ ಹಾ ಗುರುಜನವತ್ಸಲ**

**ಹಾಹಾ ಬುಧ ಬಂಧೂವಂದಿಕಲ್ಪಮಹೀಜಾ** [49]

**ಗರುಡಿಯೊಳಾರೊಳಿನ್ನಳವಿ ಮಾಡುವೆನಾರೊಡನೇರು ತೋರುವೆಂ**

**ಕರಿತುರಗಂಗಳಂ ನಗುವೆನಾರೊನಾರೊಡನಣ್ಣ ಮೆಚ್ಚಿದಂ**

**ತಿರೆ ಮನದಿಚ್ಚೆಯಂ ನುಡಿವೆನಾರೊಡನಾಡುವೆನಕ್ಕಟಾ ಸಹೋ**

**ದರನನನಾಥನಂ ಬಿಸುಟುಇ ಕೆಮ್ಮನೆ ತಮ್ಮನೆ ಪೋಗಲಕ್ಕಮೇ** [50]

ಇಂತಹ ಯಾವುದೇ ಸನ್ನಿವೇಶವೇ ಆಗಲಿ ಆಚಣ್ಣನು ಸಹೃದಯರ ಮನದಲ್ಲಿ ಅಚ್ಚಳಿಯದಂತೆ ಉಳಿಸುವನು. ಪಡೆನುಡಿಗಳನ್ನು ಗಾದೆಮಾತುಗಳನ್ನು ಕವಿ ಸಂದರ್ಭೋಚಿತವಾಗಿ ಪ್ರಯೋಗಿಸಿದ್ದಾನೆ. ಒಡೆಯರ್ ಪಿಂಗಿದ ಗೇಹದಲ್ಲಿ ಸುನಕಂ ಪೊಕ್ಕಂದದಿಂ [51] ಕಿರ್ಚಿಂಗೆ ಕಿರ್ಚು ಮರ್ದಕ್ಕುಂ [52] ಬಡವಂ ನಿಧಿಗಂಡ ಮಾಳ್ಕೆಯಿ [53] ಇತ್ಯಾದಿ· ಈ ಎಲ್ಲ ಅಂಶಗಳನ್ನು ಗ್ರಹಿಸಿ ನನ್ನ ಅಧ್ಯಯನವು ಮುನ್ನೆಲೆಗೆ ತರುವ ಸಂಗತಿಗಳೆಂದರೆ,–

- ಕಥಾವಸ್ತುವಿನ ದೃಷ್ಟಿಯಿಂದ ವರ್ಧಮಾನನ ಚರಿತ್ರೆಯನ್ನು ಕನ್ನಡದಲ್ಲಿ ಪ್ರಥಮ ಬಾರಿಗೆ ಸ್ವತಂತ್ರ ಕೃತಿಯನ್ನಾಗಿ ರಚಿಸಿದ ಶ್ರೇಯಸ್ಸು ಆಚಣ್ಣನಿಗೆ ಸಲ್ಲುವುದು.
- ಸುಂದರವಾದ ಅಲಂಕಾರಗಳು, ಹಿತಮಿತ ವರ್ಣನಾ ವೈಖರಿಗಳು, ಸನ್ನಿವೇಶ ನಿರ್ಮಾಣ ಚಾತುರ್ಯ, ತ್ರಿಪದಿಯಂತಹ ಅಚ್ಚಗನ್ನಡ ಬಂಧಗಳು, ದ್ವ್ಯಕ್ಷರಿ ಗತಪ್ರತ್ಯಾಗತದಂತಹ ಅಪರೂಪದ ರಚನೆಗಳು, ಸಮಕಾಲೀನ ಸಮಾಜದಲ್ಲಿ ರೂಢಿಗತವಾಗಿದ್ದ ಗಾದೆಮಾತುಗಳು, ಪಡೆನುಡಿಗಳು, ರಸ–ಪದೌಚಿತ್ಯಗಳು, ರೇಚರಸನ ವಾಜಿವಂಶದ ಬಗೆಗಿನ ಮಾಹಿತಿಗಳು ಈ ಕೃತಿಯು ಅಧ್ಯಯನಪೂರ್ಣವಾದ ಘನಕೃತಿ ಎಂಬ ಮೌಲ್ಯವನ್ನು ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಗಳಿಸಿದೆ.
- ಇಂತಹ ಶ್ರೇಷ್ಠ ಕೃತಿರತ್ನದ ರಚನೆಗೆ ಇಂಬನೀಡಿ ಕನ್ನಡ ಸಾರಸ್ವತ ಲೋಕದಲ್ಲಿ ಮಿಗಿಲಾದ ಸ್ಥಾನವನ್ನು ಗಳಿಸಲು ಪ್ರೋತ್ಸಾಹ ನೀಡುವ ಮೂಲಕ ರೇಚರಸ ಮಂತ್ರಿಯು ಕೃತಿಯ ಅನನ್ಯತೆಗೆ ಕಾರಣನಾಗಿದ್ದಾನೆ. ಈ ಮೂಲಕ ಕನ್ನಡ ಸಾಹಿತ್ಯ ಸಂವರ್ಧನೆಗೆ ತನ್ನ ಮೌಲಿಕ ಕೊಡುಗೆಯನ್ನು ನೀಡಿದ್ದಾನೆ.

**4.3.1.4. ಜನ್ನ ಕವಿಯ ಕೃತಿಗಳು :**

"ಗರ್ವದ ಮಾತಲ್ಲ ಶಾಸ್ತ್ರ ಲೌಕಿಕ ಕಲೆಯೊಳ್ ಬೇರ್ವರಿದ ನೇಮಿಜನ್ನರಿರ್ವರೆ ಕರ್ಣಾಟಕ ಕೃತಿಗೆ ಸೀಮಾ ಪುರುಷರ್" ಕನ್ನಡ ಸಾಹಿತ್ಯಕ್ಕೆ ನೇಮಿಚಂದ್ರ ಹಾಗೂ ಜನ್ನರಿಬ್ಬರೇ ಸೀಮಾ ಪುರುಷರು ಎಂದು ಮಧುರ ಕವಿಯು ಹೇಳಿರುವುದು ಸಾರ್ಥಕವಾದ ಮಾತಾಗಿದೆ. ತನ್ನ ಪ್ರತಿಭೆ ಪಾಂಡಿತ್ಯ, ಕವಿತಾಶಕ್ತಿಯನ್ನು ಸಾಹಿತ್ಯ ಚರಿತ್ರೆಯಲ್ಲಿ ಚಿರಂತನವಾಗಿ ತೊಳಗಿದ ಅಪೂರ್ವ ಕವಿ ಜನ್ನ. ಕನ್ನಡ ಸಾಹಿತ್ಯದ ಕವಿಚಕ್ರವರ್ತಿಯಾಗಿ ಮೆರೆದ ಜನ್ನನು ನಿಜಕ್ಕೂ ಧ್ರುವತಾರೆಯೇ ಸೈ. 13ನೆಯ ಶತಮಾನದ ಚಂಪೂಕಾರರಲ್ಲಿ ಈತ ಅಗ್ರಗಣ್ಯನಾದ ಕವಿ.

ಜನ್ನ ಪಂಪ ರನ್ನ ಚಾವುಂಡರಾಯರಂತೆ ಪ್ರತಿಭಾವಂತ ಕವಿಯಾಗಿ ಕೆಚ್ಚೆದೆಯ ಕಲಿಯಾಗಿ ಜಿನಾನುರಾಗಿಯಾಗಿ ಮೆರೆದ ಬಹುಮುಖ ವ್ಯಕ್ತಿತ್ವದ ಮಹಾಕವಿ. ಪ್ರಾಚೀನ ಜೈನ ಕವಿಗಳ ಪರಂಪರೆಯನ್ನು ಅನುಸರಿಸಿದರೂ ತನ್ನದೇ ಆದ ಹೊಸದೊಂದು ಮಾರ್ಗವನ್ನು ನಿರ್ಮಿಸಿದ ಜನ್ನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿರಸ್ಮರಣೀಯನಾಗಿದ್ದಾನೆ. ಜನ್ನನ ಉಪಲಬ್ಧ ಕೃತಿಗಳು[54] 'ಯಶೋಧರ ಚರಿತೆ', 'ಅನಂತನಾಥ ಪುರಾಣ', 'ಅನುಭವಮುಕುರ'ಗಳು. ಅನುಭವಮುಕುರಕ್ಕೆ 'ಸ್ಮರತಂತ್ರ' ಎಂಬ ಹೆಸರೂ ಇದೆ. ಜನ್ನನು ಕವಿ ಮಾತ್ರವಲ್ಲದೆ ಶ್ರೇಷ್ಠ ಶಾಸನಕಾರನೂ ಆಗಿದ್ದನು. ಚನ್ನರಾಯಪಟ್ಟಣ ಶಾಸನ (179), ತರಿಕೆರೆಯ (45) ಶಾಸನಗಳು ಇವನ ರಚನೆಗಳಾಗಿವೆ. ಇನ್ನೂ ಕೆಲವು ಶಾಸನಗಳನ್ನು ರಚಿಸಿರುವುದಾಗಿ ಅಭಿಪ್ರಾಯವಿದೆ.

ಕಮ್ಮೆ ವಂಶದ ಕಾಶ್ಯಪ ಗೋತ್ರದ ಹಿರಿಯ ಮನೆತನ ಜನ್ನನದು. ಈತನ ತಂದೆ ಕವಿಸುಮನೋಬಾಣ ಎಂಬ ಬಿರುದಿನಿಂದ ಮೆರೆದ ಕವಿಯೂ ವಿದ್ವಾಂಸನೂ ಆದ ಶಂಕರ. ಹೊಯ್ಸಳ ನಾರಸಿಂಹನಲ್ಲಿ ಕಟಕೋಪಾಧ್ಯಾಯನಾಗಿ ಸೇವೆಸಲ್ಲಿಸಿರುವನು. ಜಗದೇಕಮಲ್ಲನಲ್ಲಿ ಕಟಕೋಪಾಧ್ಯಾಯನಾಗಿ ಅಭಿನವ ಶರ್ಮ ಎಂಬ ಗೌರವಕ್ಕೆ ಪಾತ್ರನಾದ 2ನೆಯ ನಾಗವರ್ಮ ಈತನ ಉಪಾಧ್ಯಾಯ. "ರಾಯ ದಂಡಾಧಿನಾಥ ಕೃತಾಂತಂರೇಚಯಂ ಪೆತ್ತಪುತ್ರಿ" ಲಕುಮದೇವಿ ಈತನ ಮಡದಿ. ಈತನ ಸಹೋದರಿ 'ಸೂಕ್ತಿಸುಧಾರ್ಣವ'ವನ್ನು ರಚಿಸಿದ ಮಲ್ಲಿಕಾರ್ಜುನನ ಪತ್ನಿ. ಮಲ್ಲಿಕಾರ್ಜುನನ ಮಗನೂ ಜನ್ನನ ಸೋದರಳಿಯನೂ ಆದ ಕೇಶಿರಾಜ ಕನ್ನಡದ ಶ್ರೇಷ್ಠ ವೈಯಾಕರಣಿ. ಇಂತಹ ವಿದ್ವತ್ ಕುಟುಂಬದಲ್ಲಿ ಬೆಳೆದ ಜನ್ನ ಶಸ್ತ್ರ ಮತ್ತು ಶಾಸ್ತ್ರಗಳೆರಡರಲ್ಲೂ ಮಿಗಿಲಾದ ನೈಪುಣ್ಯವನ್ನು ಪಡೆದಿದ್ದನು. ಜನ್ನನು ನರಸಿಂಹ ದೊರೆಯಲ್ಲಿ ದಂಡನಾಯಕನಾಗಿ ಮಂತ್ರಿಯಾಗಿ ಕವಿಯಾಗಿ ಗಣ್ಯಸ್ಥಾನವನ್ನು ಪಡೆದಿದ್ದನು ಎಂಬುದು ಅವನ ಅನಂತನಾಥಪುರಾಣದಿಂದಲೇ ವೇದ್ಯವಾಗುತ್ತದೆ.–

**ನರಸಿಂಹನ ಚೋಳಕುಳೋ**

**ದ್ಧರಣನ ಸರ್ವಜ್ಞಭೂಪನೋಲಗದೊಳ್ನಿ**

**ಂದಿರೆ ದಂಡಾಧೀಶಂ ಕು**

**ಳ್ಳಿರೆ ಮಂತ್ರಿ ತೊಡಂಕೆ ಕವಿ ಜನಾರ್ಧನ ದೇವಂ** [55]

ಜೊತೆಗೆ ನಾಟ್ಪ್ರಭು ಜನಾರ್ಧನದೇವ ಎಂತಲೂ ತನ್ನನ್ನು ಕರೆದುಕೊಂಡಿದ್ದಾನೆ. ಬಹುಶಃ ಈ ಹೊಯ್ಸಳ ಕಾಲಘಟ್ಟದ ಹಲವು ಮಹಾಮಂಡಳೇಶ್ವರರು ನಾಡಪ್ರಭುಗಳಾಗಿಯೂ ಪ್ರಬಲರಾಗಿದ್ದು ಸ್ಥಳೀಯ ಸಂಸ್ಕೃತಿಗೆ ಮಹತ್ತರ ಕೊಡುಗೆಗಳನ್ನು ಕೊಟ್ಟಿರುವುದನ್ನು ಪ್ರಸ್ತುತ ಅಧ್ಯಯನವೇ ಖಚಿತಪಡಿಸಿದೆ. ಜನ್ನನು ಸಹ ತರೀಕೆರೆ ಮತ್ತು ಚನ್ನರಾಯಪಟ್ಟಣ ಪ್ರದೇಶಗಳ ಆಸುಪಾಸಿನಲ್ಲಿ ನಾಡಪ್ರಭುವಾಗಿದ್ದ ಸಾಧ್ಯತೆಯನ್ನು ತಳ್ಳಿಹಾಕಲಾಗದು. ರೂಪ, ವಿದ್ಯೆ, ಸಂಪತ್ತು, ಸಕಲ ಭಾಗ್ಯಗಳನ್ನು ಗಳಿಸಿ ಲಕ್ಷ್ಮೀ ಸರಸ್ವತಿಯರ ಕೃಪೆಗೆ ಪಾತ್ರನಾಗಿ ಮೆರೆದ ಜನ್ನ ತನ್ನನ್ನು ಮತ್ತು ತನ್ನ ಕಾವ್ಯ ಶಕ್ತಿಯನ್ನು ಕುರಿತು –

**ಚತುರಂ ನೀನುದಾರನುಜ್ಜ್ವಲಯಶಂ ಸೌಭಾಗ್ಯ ಸಂಪನ್ನನೂ**

**ರ್ಜಿತ ಪುಣ್ಯೋದಯನೀ ಜನಾರ್ಧನನ ವಕ್ತ್ರಾಂಭೋಜಮಂ ಸಾರ್ದು ಸು**

**ಸ್ಥಿತಿಯಾಗಿರ್ದುದರಿಂದೆ ತಾಂ ಸೊಬಗೆಯೊಳ್ ಜಾಣೆಯಾದಳ್ ಸರ**

**ಸ್ವತಿ ಸಂಮ್ಮೋಹಿತೆಯಾದಳಗ್ಗಳಮೆಯಾದಳ್ ವಿಶ್ವಭೂಚಕ್ರದೊಳ್** [56]

**ಕವಿತಾಕೌತುಕದಿಂ ಮಹಾಪ್ರಭುತೆಯಿಂದೌದಾರ್ಯದಿಂ ಭೋಗರೂ**

**ಪವಿಳಾಸಸೋದಯದಿಂದೆ ಜನ್ನಮರಸಂ ಸಂದಿರ್ದು ಚೆಲ್ವಾಯ್ತುಯಾ**

**ದವಸಿಂಹ ನರಸಿಂಹರಾಯನ ಸಭಾವಾಚೋತ್ಸವಂ ಚಂದ್ರನಿ**

**ರ್ದ ವಸಂತಂ ಮಳಯಾನಿಳಂ ಸೊಗಯಿಸಿರ್ದುದ್ಯಾನ ಮೆಂತಂತೆವೊಲ್** [57]

ಚತುರನೂ, ಸುಂದರನೂ, ಉದಾರನೂ, ಉಜ್ವಲ ಕೀರ್ತಿಯುತನೂ, ಸೌಭಾಗ್ಯ ಸಂಪನ್ನನೂ, ಪುಣ್ಯಶಾಲಿಯೂ ಆದ ಜನ್ನನ ಮುಖಕಮಲದಲ್ಲಿ ಸರಸ್ವತಿ ಬಂದು ಸ್ಥಿರವಾಗಿ ನೆಲೆಸಿರುವುದರಿಂದ ಅವಳು ಭೂಮಂಡಲದಲ್ಲೆಲ್ಲಾ ಅತ್ಯಂತ ಸುಂದರಿ, ಜಾಣೆ, ಮನೋಹರಿ, ಪೂಜ್ಯಳು ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ ಜನ್ನ. ತನ್ನ ಕಾವ್ಯಶಕ್ತಿಯಿಂದ ಪ್ರಸಿದ್ಧಿಯಾದ ಈತ ಯಾದವಸಿಂಹನರಸಿಂಹರಾಯನ ಸಭೆಯಲ್ಲಿ ಚಂದ್ರನಂತೆ ಶೋಭಿಸಿದುದಾಗಿ ಹೇಳಿಕಕೊಳ್ಳುವನು. ಅಲ್ಲದೆ ತನ್ನ ನುಡಿಗಳು, ಸ್ಫಟಿಕದಂತೆ, ಕರ್ಪುರದಂತೆ, ಶ್ರೀಗಂಧದಂತೆ, ಕ್ಷೀರಸಾಗರ, ಮುತ್ತಿನಂತೆ, ಬೆಳದಿಂಗಳಂತೆ ಎಂಬುದಾಗಿಯೂ ಮತ್ತು ತನ್ನ ಕಾವ್ಯ ಬಂಧದಲ್ಲಿರುವ ಮಾತುಗಳು ಶ್ರೀಗಂಧದಲ್ಲಿರುವ ಸುವಾಸನೆಯಂತೆ ರಸಸ್ಯಂಧಿಯಾಗಿರುವುದನ್ನು ಅಭಿಮಾನವಾಗಿ ಹೇಳಿಕೊಳ್ಳುವನು.

**ಪಳಕಿನ ಕರ್ಪುರವಳುಕಿನ**

**ಮಳಯಜದಿಂಗಡಲ ಪೊಳೆವ ಮುತ್ತಿನ ಬೆಳ್ದಂ**

**ಗಳ ಸಿರಿಗೆ ಸರಿಗೆವರ್ಪುವು**

**ಪಳರಚನೆ ಕವಿಭಾಳನೆತ್ರನಿಡುವ ಪದಂಗಳ್** [58]

ತನ್ನ ಕಾವ್ಯೋದ್ದೇಶವನ್ನು ಜನ್ನನು ಮಾರ್ಮಿಕವಾಗಿ ಹೇಳಿಕೊಂಡಿದ್ದಾನೆ. ಕವಿತಾಶಕ್ತಿಯೆಂಬುದು ಒಂದು ಕಾಮಧೇನು ಅದು ಪೂರ್ವಪುಣ್ಯದಿಂದ ಲಭ್ಯವಾಗುವಂತಹುದು ಆ ಕಾಮಧೇನು ಕೈಸೇರಿದಾಗ ಅದರ ವಚಸ್ಸುಧೆಯನ್ನು ಕಾಡುಬೆಕ್ಕಿಗೆ ಪಾಯಸವನ್ನು ಕುಡಿಸಿದಂತೆ ಅನ್ಯರಿಗೆ ನೀಡದೆ ಇಂದ್ರವಂದಿತನಾದ ಅರ್ಹಂತದೇವರಿಗೆ ಅರ್ಪಿಸಬೇಕು. ಕವಿಯು ಭವದ್ವಂದ್ವಯೆಂಬ ಕಾಡಿನ ಮೇಲೆ ಅಮೃತವರ್ಷವನ್ನು ಕರೆದವನು ಎಂಬುದನ್ನು –

**ಕವಿತಾಶಕ್ತಿಸುರೇಂದ್ರಧೇನುವದು ಪುಣ್ಯಾಯತ್ತಮಾ ಕಾಮಧೇ**

**ನುವೆ ಕೈಸಾರ್ಸೊಡಮಾವಚಸ್ಸುಧೇಯನನ್ಯರ್ಗಿತ್ತು ಕಾಳ್ಬೆಕ್ಕಿಗೂ**

**ಡುವವೊಲ್ತು ಯ್ಯಲನಿಂದ್ರ ವಂದಿತನನರ್ಹದ್ದೇವನಂ ಭತ್ಯರ್ಮಾ**

**ಡುವುದಾತಂ ಕಲೆದಾತನಲ್ತೆ ತಳೆಯೊಳ್ವಾಲಂ ಭವದ್ವಂದ್ವದಾ** [59]

ಕವಿಯಾದವನು "ರಸಸಂವ್ಯುತ್ಪನ್ನನೂ ವಿವಿಧಕಳಾಭಿಜ್ಞನೂ ಆಗಮಜ್ಞನೂ" ಆಗಿರಬೇಕು. ಅಂತಹ ಕವಿಯು ರಚಿಸುವ ಕಾವ್ಯ "ಅಖಿಳಶ್ರಾವ್ಯ"ವಾದುದು; "ಪದವ್ಯುತ್ಪತ್ತಿ ಬಹುಕಾವ್ಯಾನುಭವ ಕಳಾಪ್ರತಿಭೆ ಲೋಕಜ್ಞತೆ" ಇವು ಮುಂತಾದವುಗಳು ಕವಿತಾಪರಿಕರಗಳು ; "ಇಂತಿವು ಇಲ್ಲದಿರ್ದ ಕವಿಗಳ ಕಾವ್ಯಂಗಳಂ ಮಾಡುವ ಆಗ್ರಹಮಂ ಮಾಡಿದೊಡೆ ಅಗ್ರಹಂ ಪೊಡೆದವೊಲ್ ಬೆಂಡಾಗಿ ಬೀಳಾಗರೇ?" ಕಾವ್ಯದಲ್ಲಿ 'ಸಮುದಾಯ ಶೋಭೇ' ಇರಬೇಕು; "ಚಂದನ ಪುರದೊಳ್ ಪರಿಮಳಂ ಮೆರೆವಂತಿರೆ" ರಸಸ್ಯಂಧಿಯಾಗಿ ಮಾತುಗಳು ಶೊಭಿಸಬೇಕು ಎಂದು ಮುಂತಾಗಿ ಕವಿ ಕಾವ್ಯವನ್ನು ಕುರಿತು ಬಹುಮಾರ್ಮಿಕವಾಗಿ ಹೇಳಿರುವನು.

ಯಶೋಧರ ಚರಿತೆಯನ್ನು ವೀರಬಲ್ಲಾಳನ ಆಳ್ವಿಕೆಯಲ್ಲಿ (1173–1220), ಕ್ರಿ. ಶ 1209ರಲ್ಲಿಯೂ, ಅನಂತನಾಥಪುರಾಣವನ್ನು ವೀರಬಲ್ಲಾಳನ ಮಗ ನರಸಿಂಹನ ಆಶ್ರಯದಲ್ಲಿ ಕ್ರಿ. ಶ 1230ರಲ್ಲಿಯೂ ರಚಿಸಿರುವುದಾಗಿ ತನ್ನ ಕೃತಿಗಳ ಕೊನೆಯಲ್ಲಿ ಜನ್ನನು ಹೇಳಿಕೊಂಡಿರುವನು. 1190ರಲ್ಲಿ ರಚಿತವಾದ 179ನೆಚನ್ನರಾಯಪಟ್ಟಣದ ಶಾಸನ, 1197ರಲ್ಲಿ ರಚಿತವಾದ ತರಿಕೆರೆಯ 45ನೇ ಶಾಸನಗಳು ಜನ್ನನಿಂದಲೇ ರಚನೆಗೊಂಡವೆಂದು, ಆ ಶಾಸನಗಳ ಕೊನೆಯಲ್ಲಿರುವ "ಜನ್ನಯ್ಯನ ಕವಿತೆ", "ಉದ್ದಂಡ ಕವಿಭಾಳನೇತ್ರಂ ಸುಕವಿಜನಮಿತ್ರಂ ಜನ್ನಯ್ಯನ ಕವಿತೆ" ಎಂಬ ಉಕ್ತಿಗಳಿಂದ ತಿಳಿದುಬರುವುದು. ಯಶೋಧರ ಚರಿತೆಯಲ್ಲಿ

ತನ್ನ ಕವಿತಾಶಕ್ತಿಯನ್ನು ಕಂಡು ದೊರೆ ವೀರಬಲ್ಲಾಳನು ತನ್ನ ಆಸ್ಥಾನದಲ್ಲಿಟ್ಟುಕೊಂಡು ಆತನಿಗೆ "ಕವಿಚಕ್ರವರ್ತಿ" ಎಂಬ ಬಿರುದನ್ನಿತ್ತು ಗೌರವಿಸಿದ್ದನ್ನು ಹೀಗೆ ಹೇಳಿಕೊಂಡಿದ್ದಾನೆ–

**ಕನ್ನರನಾದರದಿಂ ಕುಡೆ**

**ಹೊನ್ನಂ ಮನಮೊಸೆದು ತೈಲಪಂ ಕುಡೆ ರನ್ನಂ**

**ಮನ್ನಿಸಿ ಬಲ್ಲಾಳಂ ಕುಡೆ**

**ಜನ್ನಂ ಕವಿಚಕ್ರವರ್ತಿವೆಸರಂ ಪಡೆದಂ** [60]

ಎಂದು ಹೆಮ್ಮೆಯಿಂದ ಹೇಳಿಕೊಂಡಿರುವನು. ಕ್ರಿ.ಶ 1190ರಲ್ಲಿ ಶಾಸನಗಳ ರಚನೆಯಿಂದ ತನ್ನ ಕಾವ್ಯೋಜ್ಜುಗವನ್ನು ಆರಂಭಿಸಿ ತನ್ನ ಬಾಳಿನ ಪರಿಪಕ್ವ ಕಾಲದಲ್ಲಿ ಕ್ರಿ. ಶ 1230ರಲ್ಲಿ ಅನಂತನಾಥಪುರಾಣವನ್ನು ರಚಿಸಿ ಕೃತಕೃತ್ಯನಾದನೆಂದು ಹೇಳಬಹುದಾಗಿದೆ.

**ಯಶೋಧರಚರಿತೆ:** ಯಶೋಧರಚರಿತೆಯು ಜನ್ನನನ್ನು ಮಹಾಕವಿಯನ್ನಾಗಿಸಿದ ಕವಿ. ಚಿಕ್ಕ ಗಾತ್ರದ ಮಹಾಕೃತಿ. ಯಶೋಧರನ ಕಥೆ ಜೈನಮತೀಯರಿಗೆ ಹೊಸತೇನಲ್ಲ. ಜೈನಧರ್ಮೀಯರು ಜೀವದಯಾಷ್ಟಮಿ ನೋಂಪಿಯ ಆಚರಣೆಯ ಸಮಯದಲ್ಲಿ ಪಾರಾಯಣಮಾಡುವ ಈ ಕಥೆ ಬಹುಜನಪ್ರಿಯವಾದುದು. ಕ್ರಿ.ಶ 650 ರಿಂದಲೂ ಸಂಸ್ಕೃತ ಮತ್ತು ಪ್ರಾಕೃತ ಗ್ರಂಥಗಳಲ್ಲಿ ಭಿನ್ನ ಭಿನ್ನ ರೂಪದಲ್ಲಿ ಪ್ರಚಲಿತವಾಗಿರುವುದು. ಯಶೋಧರನ ಕಥೆ ಮೊಟ್ಟಮೊದಲು ಪ್ರಾಕೃತದಲ್ಲಿ ವಿರಚಿತವಾದ ಪ್ರಭಂಜನ ಕೃತಿಯಾಗಿದೆ. ಇದು ತಮಿಳು ಹಿಂದಿ, ಗುಜರಾತಿ ಮುಂತಾದ ಭಾರತೀಯ ಭಾಷೆಗಳಲ್ಲಿಯೂ ಪ್ರಚಲಿತವಾಗಿದೆ. ಯಶೋಧರನ ಕಥೆಯನ್ನು ಕುರಿತು ಸೋಮದೇವನ ಸಂಸ್ಕೃತದ 'ಯಶಸ್ತಿಲಕ', ಪುಷ್ಪದಂತನ ಪ್ರಾಕೃತ ಕೃತಿ 'ಜಸಹರ ಚರಿಉ' ಮತ್ತು ವಾದಿರಾಜನ ಸಂಸ್ಕೃತ 'ಯಶೋಧರ ಚರಿತೆ' ಇಂತಹ ಜನಪ್ರಿಯ ಮತ್ತು ಮಹತ್ವದ ಕೃತಿಗಳು ಪ್ರಚಲಿತದಲ್ಲಿದ್ದವು. ಇವುಗಳಲ್ಲಿ ವಾದಿರಾಜನ ಕೃತಿಯು ಜನ್ನನಿಗೆ ಆಕರ ಕೃತಿಯಾಗಿದೆ. ಯಶೋಧರ ಚರಿತೆಯು ವಾದಿರಾಜನಲ್ಲಿ 294ಪದ್ಯಗಳಲ್ಲಿ 4 ಸರ್ಗಗಳಲ್ಲಿ ವರ್ಣಿತವಾಗಿದ್ದರೆ, ಜನ್ನನಲ್ಲಿ 310 ಕಂದಪದ್ಯಗಳಲ್ಲಿ ನಾಲ್ಕು ಅವತಾರಗಳಲ್ಲಿ ವರ್ಣಿತವಾಗಿದೆ. ಅನುಸರಣೆ ಕಂಡರೂ ಸಹ ಜನ್ನನ ಪ್ರತಿಭೆ ಪಾಂಡಿತ್ಯಗಳಿಂದ ಈ ಕಥೆ ಕನ್ನಡದಲ್ಲಿ ಅಪರೂಪದ್ದು.

ಕನ್ನಡ ಬರವಣಿಗೆಯ ಓಟ, ಅಚ್ಚುಕಟ್ಟುತನ, ಸ್ವಭಾಷೆಯ ಸಹಜತೆ, ಕವಿಯ ಉನ್ನತ ಶೈಲಿಗಳಿಂದ ಇದು ನವನವೀನವೆನಿಸಿದೆ. ಆತನು ಬಳಸಿರುವ ಉಪಮೆ ರೂಪಕಗಳು, ಅಚ್ಚಗನ್ನಡ ದೇಸೀನುಡಿಗಳು ಗಾದೆಮಾತುಗಳು ಕೃತಿಗೆ ಮೆರುಗನ್ನು ಹೆಚ್ಚಿಸಿವೆ; ದೇಸಿಯತೆಯ ವಿಶಿಷ್ಟತೆಯನ್ನು ಹೊರಹೊಮ್ಮಿಸಿವೆ. "ಆಡಿದ ಪೋಲನ್" "ಉಂಡಮರ್ದು", "ಕಂಡ ವಿಚಾರಂ", "ಒಂದಡಸಿದೊಡೆ ಏಟಡಸಿತು", "ಕೋಟಲೆಗೆ ಕೋಡು ಮೂಡಿದ ತೆಱದಿಂ", "ಶಾಂತಿ ಮಾಡೆ ಬೇತಾಳಂ ಮೂಡಿದಂತೆ", "ಸಿರಿಯನೊಟ್ಟಿ ಸುಡು ಹೋಗೆಂದಂ", "ಎಲೆ ದೇವರೆ ಪುತ್ತುಂ ಬತ್ತಲೆಯುಂ ಬಜೆದಿಲ್ಲದು ಎಂಬರ್" ಇತ್ಯಾದಿ

ದೇಸಿಯತೆಯ ಸೊಬಗಿನ ಸವಿ ಮರೆಯಲಾಗದ್ದು. ಯಶೋಧರ ಚರಿತಯಲ್ಲಿನ ಪ್ರಸಂಗಗಳ ಮೂಲಕ ಜೈನಧರ್ಮದ ಮೂಲತತ್ವವಾದ ಅಹಿಂಸೆಯನ್ನು ಕುರಿತು ಪರಿಣಾಮಕಾರಿಯಾಗಿ ಕವಿಜನ್ನನು ಕನ್ನಡ ಸಂಸ್ಕೃತಿಯ ಆಶಯವನ್ನು ಸಹ ಸೂಕ್ಷ್ಮವಾಗಿ ಅಭಿವ್ಯಕ್ತಿಸಿದ್ದಾನೆ.

ಯಶೋಧರ ಚರಿತೆಯಲ್ಲಿ ಪ್ರಸ್ತಾಪವಾಗಿರುವ ಚಂಡಮಾರಿಯ ಜಾತ್ರೆಯಂತೂ ಹೊಯ್ಸಳ ಮಹಾಮಂಡಲೇಶ್ವರರ ಕಾಲದ ಸ್ಥಳೀಯ ಜಾತ್ರೆಯೊಂದರ ಚಿತ್ರಣವನ್ನು ಕಟ್ಟಿಕೊಡುತ್ತದೆ. ಇಲ್ಲಿ ಕಥೆಯ ಓಘಕ್ಕೆ ಈ ಪ್ರಕರಣವು ಒಂದು ಮುಖ್ಯವಾದ ತಿರುವನ್ನು ಕಟ್ಟಿಕೊಡುತ್ತದೆ. ಇಂತಹ ಪ್ರಸಂಗಗಳನ್ನು ತನ್ನ ಕಾವ್ಯದಲ್ಲಿ ಸೇರಿಸಿಕೊಳ್ಳಲು ಅಧಿಕಾರಿಗಳು ನೀಡಿದ ಬೆಂಬಲವೂ ಕಾರಣವಾಗಿರಬಹುದಲ್ಲವೇ? ಈ ಜಾತ್ರೆಯ ಸಂದರ್ಭದಲ್ಲಿ ಸುದತ್ತಾಚಾರ್ಯನ ಆಗಮನದ ವಿಷಯದಲ್ಲೂ ಸಹ ಜನ್ನನಿಗೆ ಇಂತಹ ಅಧಿಕಾರಿಗಳ ಪ್ರೋತ್ಸಾಹವು ದೊರಕಿರಬೇಕು. ಕಾವ್ಯದಲ್ಲಿ ಚಂಡಮಾರಿ ಜಾತ್ರೆ ನಡೆಯುವಾಗ ಸುದತ್ತಾಚಾರ್ಯರೆಂಬ ಯತಿಗಳು ಗಮನಪ್ರಾಯಶ್ಚಿತ್ತಕ್ಕಾಗಿ ಆ ಪುರದ ಉಪವನಕ್ಕೆ ಆಗಮಿಸಿದ ವಿಷಯವು ನಮ್ಮನ್ನು ಹೊಯ್ಸಳ ದೊರೆಗಳ ಮೂಲವಂಶೀಯನಾದ ಸಳನ ಗುರುಗಳಾದ ಸುದತ್ತಾಚಾರ್ಯರ ನೆನಪನ್ನು ತರುತ್ತದೆ. ಹೊಯ್ಸಳ ದೊರೆಗಳ ಪೋಷಣೆಯಲ್ಲಿ ಮಹಾಮಂಡಳೇಶ್ವರರ ಅಡಿಯಲ್ಲಿ ಕಾವ್ಯವನ್ನು ರಚಿಸುತ್ತಿದ್ದ ಜನ್ನನಿಗೆ ಬಹುಶಃ ಹೊಯ್ಸಳ ವಂಶದ ಸ್ಥಳೀಯತೆಯೊಂದಿಗೆ ಪುರಾಣವನ್ನು ಬೆರೆಸಿ ಕಾವ್ಯವನ್ನು ರಚಿಸುವ ಅಗತ್ಯತೆಯೂ ಮೂಡಿರಬಹುದು ಎಂದು ಊಹಿಸಬಹುದಾಗಿದೆ. ಈ ಕಾವ್ಯದಲ್ಲಿ ನರಬಲಿ ನೀಡುವ ಪ್ರಸಂಗವಂತೂ ಸಮಕಾಲೀನ ಕಾಲಘಟ್ಟದ ಅತ್ಯಂತ ಹೇಯವಾದ ಕೃತ್ಯವಾಗಿದ್ದು ಜನ್ನನು ಇದನ್ನು ದಾಖಲಿಸಿ ಆ ಕಾಲದ ಸ್ಥಳೀಯ ಸಂಗತಿಯೊಂದನ್ನು ಕಟ್ಟಿಕೊಟ್ಟಿದ್ದಾನೆ.

ಯಶೋಧರ ಚರಿತೆಯಲ್ಲಿ ಬಳಕೆಗೊಂಡಿರುವ ಅನೇಕ ಪದಗಳು ಅಚ್ಚಗನ್ನಡದ ದೇಸೀಯತೆ ಹಾಗೂ ಸ್ಥಳೀಯ ಭಾಷೆಯ ಸೊಗಡನ್ನು ಸೊಗಸಾಗಿ ಬಿಂಬಿಸುತ್ತದೆ. ಅಂತಹ ಕೆಲವು ಉದಾಹರಣೆಗಳನ್ನು ಗಮನಿಸುವುದಾದರೆ ಒಜೆವಾಯ್ ಎಂಬ ಪದ ಜೊಲ್ಲು ಸೋರುವ ಬಾಯಿಯನ್ನು ಸೂಚಿಸುತ್ತದೆ ಇಂತಹದೇ ಅನೇಕ ಪದಗಳನ್ನು ಗಮನಿಸುವುದಾದರೆ

ಅಟೆಗಣ್(= ವಿಕಾರವಾದ ಕಣ್ಣು,2.38), ಎಚ್ಚನ್(= ಬಾಣ ಬಿಟ್ಟನು3.55), ಎಯ್ಮೆಗ (=ಮುಳ್ಳುಹಂದಿ,3.45), ಏನ(=ಪಾಪ,4.76), ಒಚ್ಚತ(=ಪ್ರಿಯ,3.74), ಕಯ್ಪೆಸೋರೆ(=ಕಹಿ ಸೋರೆಕಾಯಿ, 2.55), ಕಟೆಯುಂಡು(=ಚೆನ್ನಾಗಿ ತಿಂದು,3.51), ಕಿಸುಗುಳಿ(=ಅಲ್ಪಳು,3.72), ಕಿತ್ತಡ(= ವಂಚನೆ,2.70), ತಂಡುಲ(=ಅಕ್ಕಿ,4.73), ತಾಳುಗೆ(=ಅಂಗಳು,1.55), ತಳಾಱ(=ತಳವಾರ,1.43), ಪಂದರ (=ಚಪ್ಪರ,4.81), ಪಾಣ್ಬೆ (=ಜಾರೆ,3.41), ಪಾತರ(=ನರ್ತನ,2.62), ಪುಲಿಗೋಣ(=ದೊಡ್ಡಕೋಣ,3.45), ಸಿಂಟನ್(= ಹೊಲಸು ವಾಸನೆಯುಳ್ಳವನು,4.50), ಹಪ್ಪಳಿಕೆ (=ಚಪ್ಪಟೆ,2.38) ಇತ್ಯಾದಿ.

ಒಂದು ಅದ್ಭುತವಾದ ಸ್ಥಳೀಯ ಸಂಗತಿಯೊಂದನ್ನು ವಿದ್ವಾಂಸರು ಗುರುತಿಸಿದ್ದಾರೆ. [61] ನೀರನ್ನು ಶುದ್ಧೀಕರಣ ಮಾಡಲು ಮಧ್ಯಕಾಲೀನ ಕಾಲಘಟ್ಟದಲ್ಲಿ ಕತಕಬೀಜಗಳನ್ನು ಬಳಸುತ್ತಿದ್ದ ವಿಷಯವನ್ನು ಜನ್ನನು ತನ್ನ ಕೃತಿಯಲ್ಲಿ ಕಟ್ಟಿಕೊಟ್ಟಿದ್ದಾನೆ.

**ಬಿನದಕೆ ಪಾಡುತ್ತಿರೆ ನು**

**ಣ್ದನಿ ನಿದ್ರೆಗೆ ಕತಕಬೀಜಮಾಯ್ತೆನೆ ಮೃಗಲೋ**

**ಚನೆ ತಿಳಿದಾಲಿಸಿ ಮುಟ್ಟಿದ**

**ಮನಮನೆ ತೊಟ್ಟನೆ ಪಸಾಯದಾನಂಗೊಟ್ಟಳ್** [62]

**ಅನಂತನಾಥಪುರಾಣ:** ಅವನ ವರ್ಣನ ಪ್ರಪಂಚವನ್ನು ಲಕ್ಷಿಸುವುದಾದರೆ, ಪದ್ಮರಥ ವೈರಾಗ್ಯವನ್ನು ತಾಳಿ ಹೊರಟಾಗ ಆತನ ಅರಸಿಯರ ಶೋಕ, ಸುನಂದೆ ಚಂಡಶಾಸನನಿಂದ ಅಪಹೃತಳಾದಾಗ ಅವಳ ಸಖೀಜನರ ಶೋಕ, ಚಂಡಶಾಸನ ಅರಸಿಯರು ಪತಿಯೊಡನೆ ಸಹಗಮನ ಮಾಡುವ ಸನ್ನಿವೇಶ ಮೊದಲಾದವುಗಳನ್ನು ಜನ್ನನು ಎಣೆಯಿಲ್ಲದ ಸೌಂದರ್ಯದಿಂದ ವರ್ಣಿಸಿದ್ದಾನೆ. ರಸಾರ್ದ್ರವಾದ ಇಂತಹ ಸನ್ನಿವೇಶಗಳನ್ನು ಕವಿ ಹೃದಯವಿದ್ರಾವಕವಾಗಿ ಬಣ್ಣಿಸಿದ್ದಾನೆ. ಪದ್ಮರಥ ವೈರಾಗ್ಯವನ್ನು ತಾಳಿ ಕಾಡಿಗೆ ನಡೆದಾಗ ಆತನ ಅರಸಿಯರ ಶೋಕವನ್ನು ವರ್ಣಿಸಿರುವ ಪರಿ ಹೀಗಿದೆ,

**ಮನದೊಳಗಂಧಕಾರದ ಕಡಲ ಕವಿತರ್ಪುದು ನಿನ್ನ ವಕ್ತ್ರಚಂ**

**ದ್ರನ ಬೆಳಗೊಮ್ಮೆ ತೋರದೊಡೆ ವಲ್ಲಭ ನೀಬಿಸುಟಿಂತಪೋಗೆ ಜೀ**

**ವನಂ ಎಮಗೆಂತು ನಾಥ ಬರವೇಳ್ ಎನಲಾಗದೆ ದೇವತತ್ತ್ವಪೋ**

**ವನತರುಷಂಡಂ ವೆಮ್ಮ . . . ಕೊಳ್ಳದೆ ಪೇಳ್ ಭುವನೈಕ ಭೂಷಿತಾ** [63]

ಸುನಂದೆಯ ಸಖೀ ಜನರು ಅವಳಿಗಾಗಿ ಮಾಡಿದ ಆರ್ತನಾದ–

**ಹಾ ಲಲಿತಾಂಗಿ ಹಾ ಕುಸುಮಕೋಮಳೆ ಹಾ ಕಳಹಂಸಯಾನೆ ಹಾ**

**ನೀಲಸರೋಜಲೋಚನೆ ಸುನಂದೆ ನೃಪೇಂದ್ರನ ರಾಜ್ಯ ಲಕ್ಷ್ಮಿ ಭೂ**

**ಪಾಲಿನ ಭಾಗ್ಯಲಕ್ಷ್ಮಿ ವಸುಷೇಣ ಮಂಗಳ ಲಕ್ಷ್ಮಿ ರಾಜಚಾಂ**

**ಡಾಲನ ಬಾಹುರಾಹುಗಿಳನಂ ನಿನಗೆ ಎತ್ತಣಿ ವೆತ್ತ ಬಂದುದೋ** [64]

ಚಂಡಶಾಸನ ಅರಸಿಯರು ಪತಿಯೊಡನೆ ಸಹಗಮನ ಮಾಡುವ ಸನ್ನಿವೇಶ–

**ಪ್ರಮದವನಂಗಳೊಳ್ ತರುಲತಾವಳಿಗೆ ಅಂಚೆಗೆ ಕೋಕಿಳಕ್ಕೆ ವಿ**

**ಶ್ರಮಿಸುವ ತಣ್ಬೆಳಲ್ಗೆ ಕೃತಕಾದ್ರಿ ಕೋಡುವಪೂಗೊಳಕ್ಕೆ ತ**

**ದ್ರಮಣಿರ್ ಅಳ್ವಿ ಕೈಮುಗಿಯುವ ಕೈಡೆ ಮಾಡುವ ಪೊಲ್ಲಿಕೆಯ್ವುದಂ**

ಕ್ಷಮಿಯಿಸಿಯೆಂಬ ಬೀಳ್ಕೊಡುವ ಕೊಳ್ವ ರವೋತ್ಕಟಂ ಆಯ್ತುಸಂಕಟಂ [65]

ಸೀತೆಯ ಪುತ್ರಾಕಾಂಕ್ಷೆ ಮುದ್ದು ಮಗುವನ್ನು ಪಡೆದು ಅದನ್ನು ಸಂಭ್ರಮಿಸುವ ಪಾಲಿಸುವ ಸ್ತ್ರೀಯ ಸಹಜ ಮನೋಭಿಲಾಷೆಯನ್ನು ಜನ್ನನು ಬಹು ಮನೋಹರವಾಗಿ ವರ್ಣಿಸಿರುವನು.

**ಪಡೆದಮರ್ದಪ್ಪಿಕೊಂಡು ಬಿಗಿಯಪ್ಪಿ ತನೂಜನ ಮಯ್ಯಧೂಳಿ ಪ**

**ತ್ತನದ ನಳಿತೋಳ್ಗಳೇಕೆ ಮೊಲೆಯುಂಬ ಕುಮಾರನ ಕಣ್ಣ ಕಜ್ಜಳಂ**

**ಪುದಿಯದುರೋಜಮೇಕೆ ಪರಿಚುಂಬಿಸೆ ಕಂದನ ಕೈದೂಡಂಕೆ ಸೂ**

**ಸದ ಕುರುಳೇಕೆ ಬೇರೆ ಪೊರೆಯೇರಿವರಿಂ ಕುಲವೆಣ್ಣೆ ಲೋಕದೊಳ್** [66]

**ಮಗನಂ ತೊಟ್ಟಿಲೊಳಿಟ್ಟು ತೂಗಿನಲವಿಂದಂ ಜೋಗುಳಂಬಾಡಿಮೆ**

**ಲ್ಲನಗೆಯಿ ಮುದ್ದುಮೊಗಂ ತುಳುಂಕೆ ಪರಸುತ್ತಂ ನೋಡಿ ಬಾ ದೇವ ಬಾ**

**ಜಗತೀವಲ್ಲಭ ಚಾರ ಮಾಣಿಕವೆ ಬಾರೆನ್ನಾನೆಯೆಂದಿತ್ತಿ ಮೆ**

**ಯ್ದೆಗೆವನ್ನಂ ಮೊಲೆಯೂಡಿ ತೂಪಿರುವ ನೋನದಳ್ಗಕ್ಕುಮೇ** [67]

ಈಕಡೆಗಳಲ್ಲಿ ಜನ್ನನ ಅಚ್ಚಗನ್ನಡದಲ್ಲಿನ ಸೊಬಗು ಗೋಚರಿಸುತ್ತದೆ. ಅವನ ಕೃತಿಗಳಲ್ಲಿ ಇಷ್ಟರಮಟ್ಟಿಗೆ ಒಂದು ಪರಿಮಿತ ವ್ಯಾಪ್ತಿಯಲ್ಲಿ ದೇಸಿಯನ್ನು ಸೂರೆಮಾಡಿದ ಕವಿಗಳು ನಮ್ಮಲ್ಲಿ ಅತಿ ವಿರಳ. ಹೀಗಾಗಿ ಈ ಎಲ್ಲ ಆಯಾಮಗಳಲ್ಲಿಯೂ ಜನ್ನನು ಸ್ವತಃ ಒಬ್ಬ ಉನ್ನತ ಪದವಿಯಲ್ಲಿದ್ದ ಅಧಿಕಾರಿಯಾಗಿ ಮಂತ್ರಿಯಾಗಿ ಕನ್ನಡ ಸಾಹಿತ್ಯ ಸಂವರ್ಧನೆಗೆ ಕಾರಣನಾಗಿದ್ದಾನೆ.

**4.3.1.5 ಕೆರೆಯ ಪದ್ಮರಸ :**

ಕೆರೆಯ ಪದ್ಮರಸನಿಂದ 8ನೆಯ ತಲೆಯವನಾದ ಕವಿ ಪದ್ಮಣಾಂಕನು ಸು 1385ರಲ್ಲಿ ರಚಿಸಿದ 'ಪದ್ಮರಾಜಪುರಾಣ'ವು ಇವನ ಚರಿತ್ರೆಯನ್ನು ಸುವಿಸ್ತಾರವಾಗಿ ತಿಳಿಸುತ್ತದೆ. ಪದ್ಮರಾಜ ಪುರಾಣದ ಕಥಾನಾಯಕ ಪದ್ಮರಸ. ಈ ಕೃತಿಯ ಆಧಾರದ ಮೇರೆಗೆ ಕೆರೆಯ ಪದ್ಮರಸನ ವಿಷಯವಾಗಿ ಈ ಅಂಶಗಳು ಕಂಡುಬರುತ್ತವೆ. ಅವನ ವಂಶವೃಕ್ಷ ಈ ರೀತಿ ಇದೆ;

ಶಿವಯೋಗಿ ಮಲ್ಲರಸ ಅಥವಾ[ (ಮಲ್ಲಿಕಾರ್ಜುನ ಪಂಡಿತ ) ಕಲ್ಲುಕುರಿಕೆಯ ರಾಜ]

।

ಸಕಳೇಶ ಮಾದರಸ

।

ಮಾಯಿ ದೇವಾರ್ಯ

।

ಕೆರೆಯ ಪದ್ಮರಸ

ವಿಶ್ವನಾಥನ ಕಾರುಣ್ಯದಿಂದ ಶಿವಶರಣರ ವಂಶ ಪರಂಪರೆಯಲ್ಲಿ ಅಂಬೆಯಲ್ಲಿದ್ದ ಮಾಯಿದೇವ ಮತ್ತು ಮಂಗಳದೇವಿಯರ ಉದರದಲ್ಲಿ ಪದ್ಮರಸನು ಜನಿಸಿದನು. ಇವನು ವೀರಶೈವ. ಕೆರೆಯ ಪದ್ಮರಸನು ಗುರುಪರಂಪರೆಗೆ ಸೇರಿದ ಪಂಡಿತನಾಗಿದ್ದನು. ಇವನು ತನ್ನ ತಂದೆಯ ಆದೇಶದಂತೆ ಹೊಯ್ಸಳ ನರಸಿಂಹ ಬಲ್ಲಾಳನ ದಂಡನಾಯಕನೂ ಮಂತ್ರಿಯೂ ಆಗಿದ್ದಂತಹ ಗೌರಪನ(ಇವನು ಪದ್ಮರಸನ ಸೋದರಮಾವ)ಮಗಳು ಮಾದೇವಿಯನ್ನು ವಿವಾಹವಾಗಿದ್ದನು. ಗೌರಪನ ಮರಣಾನಂತರ ನರಸಿಂಹನು ಪದ್ಮರಸನಿಗೆ ದಂಡೇಶ ಪದವಿಯನ್ನು ಕೊಟ್ಟು ಮಂತ್ರಿಯನ್ನಾಗಿ ಮಾಡಿಕೊಂಡನು. ಇವನ ಮಗ ಕುಮಾರ ಪದ್ಮರಸ.

ಹೊಯ್ಸಳ ದೊರೆ ನರಸಿಂಹನು ಒಮ್ಮೆ ಬೇಲೂರಿನಲ್ಲಿ ಒಂದು ಕೆರೆಯನ್ನು ಕಟ್ಟಿಸಲು ಪದ್ಮರಸನಿಗೆ ಒಪ್ಪಿಸಿದನು. ಅದಕ್ಕಾಗಿ ರಾಜಭಂಡಾರದಿಂದ ತೆಗೆದುಕೊಂಡಿದ್ದ 12ಸಾವಿರ ಹೊನ್ನನ್ನು ವಿಟಜಂಗಮರೂಪಿಯಾಗಿ ಬಂದ ಶಿವನು ಬೇಡಲು ಅವನಿಗೆ ಪದ್ಮರಸನು ಕೊಟ್ಟುಬಿಟ್ಟನು. ನಂತರ ಜನರು ಈ ವಿಷಯವನ್ನು ರಾಜನಿಗೆ ಹೇಳಲು ರಾಜನು ವಿಚಾರಣೆ ನಡೆಸಲು ಪದ್ಮರಸನು ಕೋಪಗೊಂಡು “ಐಂದ್ರಾದಿ ಭೋಗಗಳನ್ನು ಧಿಕ್ಕರಿಸುವ ಶರಣರು ನಿನ್ನೊಡವೆಗೆ ಆಸೆ ಮಾಡುವರೆ?” ಎಂದು ದೃಢವಾಗಿ ನುಡಿದನು. ನಂತರ ರಾಜನನ್ನು ರಾಜ ಪರಿವಾರವನ್ನು ಬೇಲೂರಿಗೆ ಕರೆದೊಯ್ದು ಉಕ್ಕಿ ಹರಿಯುವ ಕೆರೆಯನ್ನೂ ಅದರ ಸುತ್ತಲೂ ಬೆಳೆದು ನಿಂತು ಕಂಗೊಳಿಸುತ್ತಿರುವ ಗದ್ದೆ ತೋಟಗಳನ್ನು ತೋರಿಸಿದನು. ಈ ಘಟನೆಯಿಂದ ಪಶ್ಚಾತ್ತಾಪಗೊಂಡ ರಾಜನು ಪದ್ಮರಸನ ಕ್ಷಮಾಪಣೆ ಕೇಳಿಕೊಂಡನು. “ಅಸಮಾಕ್ಷನಿಂದ ಬಿಟ್ಟಿಗೆ ಕಟ್ಟಿಸಿದ ಕತದಿ” ಈ ಕೆರೆಗೆ ಬಿಟ್ಟಿಸಮುದ್ರವೆಂದೂ ಪದ್ಮರಸನಿಗೆ ಕೆರೆಯ ಪದ್ಮರಸ ಎಂದು ಹೆಸರು ಬಂದಿತ್ತು. ಈ ಘಟನೆಯಿಂದ ಕೆರೆಯಪದ್ಮರಸನು ಇಂದಿನಿಂದ ನಮಗೆ ಈಶ್ವರನ ಸೇವೆಯಲ್ಲದೆ ಬೇರೆಯವರ ಸೇವೆ ಅಗ್ರಾಹ್ಯವೆಂದು ನಿರ್ಧರಿಸಿದನು. ಮಂತ್ರಿಪದವಿಯನ್ನು ತೊರೆದು ಅರಸನು ನೀಡಿದ ಸಂಪತ್ತನ್ನು ಶರಣರಿಗೆ ಅರ್ಪಿಸಿ ಲಿಂಗಾರ್ಚನಾ ನಿರತನಾದನು. ಇವನ ಭಕ್ತಿಗೆ ಸೇವೆಗೆ ಮೆಚ್ಚಿದ ಶಿವನು ತೃಪ್ತನಾಗಿ ಶಿವಾರ್ಚನೆಯ ಖರ್ಚಿಗೆಂದು ನಿತ್ಯವೂ 12 ಹೊನ್ನುಗಳನ್ನು ತೀರ್ಥಪಾತ್ರೆಯಲ್ಲಿ ಇಡುತ್ತಿದ್ದನು. ಅವುಗಳನ್ನು ಅವನು ಸದ್ವಿನಿಯೋಗ ಮಾಡುತ್ತಾ ಶಿವಭಕ್ತಿಯ ಪಾರಮ್ಯವನ್ನು ಹರಡುತ್ತಿದ್ದನು.

ಕೆರೆಯ ಪದ್ಮರಸನ ಶಿವಭಕ್ತಿ, ಪಾಂಡಿತ್ಯ, ಕೀರ್ತಿ ಎಲ್ಲೆಡೆ ಹರಡಿತು. ಇವನ ಮಹಿಮೆಯನ್ನು ಕೇಳಿ ಇವನೊಡನೆ ವಾದಿಸಲು ಆಂಧ್ರಪ್ರದೇಶದ ತ್ರಿಭುವನತಾತನೆಂಬ ವೈಷ್ಣವನು “ವೇದಾದಿ ಸಕಲಶಾಸ್ತ್ರಗಳಲ್ಲಿ

ತನಗೆ ಸರಿಸಮಾನರು ಇಲ್ಲವೆಂದೂ ಷಡ್ದರ್ಶನಗಳನ್ನೆಲ್ಲ ಗೆದ್ದವನೆಂದು ಹೆಮ್ಮೆಪಡುವ ಈ ಶೈವನನ್ನು ನಾನು ವಾದದಲ್ಲಿ ಜಯಿಸದೆ ಇರಲಾರೆ" ಎಂದು ಆನೆಯ ಮೇಲೆ ಸಕಲಶಾಸ್ತ್ರಗ್ರಂಥಗಳನ್ನು ಹೊರಿಸಿಕೊಂಡು ಬಲ್ಲಾಳನ ಆಸ್ಥಾನಕ್ಕೆ ಬಂದನು. ತ್ರಿಭುವನತಾತನು ಪ್ರತಿಪಾದಿಸಿದ ವಿಷ್ಣು ಪಾರಮ್ಯವನ್ನು ಪದ್ಮರಸನ ಪಕ್ಷದಿಂದ ಕುಮಾರ ಪದ್ಮರಸನು ಅನೇಕ ಶ್ರುತಿ ಪುರಾಣಾದಿಗಳ ಆಧಾರಗಳಿಂದ ಖಂಡಿಸಿ ಶಿವಾಧಿಕ್ಯವನ್ನು ಸ್ಥಾಪಿಸಿದನು. ಸೋತವರು ಗೆದ್ದವರ ಶಿಷ್ಯರಾಗಬೇಕೆಂಬ ಹಿಂದಿನ ಒಡಂಬಡಿಕೆ ಪ್ರಕಾರ ತ್ರಿಭುವನತಾತನು ಕೆರೆಯ ಪದ್ಮರಸನ ಶಿಷ್ಯನಾಗಿ ಅವನಿಂದ ಶಿವದೀಕ್ಷೆಯನ್ನು ಪಡೆದನು. ಕೆರೆಯ ಪದ್ಮರಸನು ನರಸಿಂಹ ಬಲ್ಲಾಳನ ಆಸ್ಥಾನದಲ್ಲಿ ತ್ರಿಭುವನತಾತನನ್ನು ವಾದದಲ್ಲಿ ಜಯಿಸಿದಾಗ ಅವನೊಡನೆ ಬೇಲೂರಿನಿಂದ ಬಂದಿದ್ದ ವಿದ್ವನ್ಮಣಿಗಳು ಅವನನ್ನು ಶ್ಲಾಘಿಸಿದರು

ಇವನಿಗೆ 'ಸಕಲಶಾಬ್ದಿಕ ಸಾರ್ವಭೌಮ', 'ಉದ್ದತವಾದಿನಿ ಕರವೇಶ್ಯಾ ಭುಜಂಗ', 'ತಾರ್ಕಿಕ ಚಕ್ರವರ್ತಿ', 'ಶಿವಾದ್ವೈತಸಾಕಾರ ಸಿದ್ದಾಂತ ಪ್ರತಿಷ್ಠಾಪನಾಚಾರ್ಯ', 'ಶರಣಕವಿ', 'ಭವಿವಿದೂರ' ಎಂಬು ಬಿರುದುಗಳಿದ್ದವು. ಶಿವನು ದಿನವೂ ಕರುಣಿಸುತ್ತಿದ್ದ ಪಡಿಹೊನ್ನನ್ನು ಕೆರೆಯ ಪದ್ಮರಸನು ಶಿವಕಾರ್ಯಕ್ಕೆ ಬಳಸುತ್ತಿರಲು ಒಂದು ದಿನ ಶಿವನು ಬಡ ವಿಧವೆಯೊಬ್ಬಳ ಹಣವನ್ನು ಗುಪ್ತವಾಗಿ ಎತ್ತಿಕೊಂಡು ಬಂದು ತೀರ್ಥದ ಪಾತ್ರೆಯಲ್ಲಿ ಹಾಕಿದನು. ಮಗನ ಮದುವೆಗೆಂದು ಶೇಖರಿಸಿದ್ದ ಹಣ ಮಾಯವಾಗಲು ಅವಳು ದುಃಖಿಸತೊಡಗಿದ್ದಳು. ಇದನ್ನು ಅರಿತ ಕೆರೆಯ ಪದ್ಮರಸನು ಕೋಪಗೊಂಡು ಶಿವನ ಪಡಿಹೊನ್ನನ್ನು ಬಿಟ್ಟೆನು, ನನಗೆ ಶರಣರ ಕರುಣವುಂಟೆಂದು ಹೇಳಿ ಮುಸುಕು ಹಾಕಿಕೊಂಡು ಮಲಗಿದನು. ಕೆರೆಯ ಪದ್ಮರಸನು ಮಲಗಿರಲು ಅವನ ಸ್ವಪ್ನದಲ್ಲಿ ಯತಿವೇಷದಲ್ಲಿ ಬಂದ ವಿಶ್ವೇಶ್ವರನು "ಮಗನೇ, ಪಡಿಹೊನ್ನಿನ ಕಾರಣದಿಂದ ಶಿವನು ಹಾಗೆ ಮಾಡಲಿಲ್ಲ. ನೀನು ಭೂಮಿಗೆ ಬಂದ ಕಾರ್ಯ ಮುಗಿಯಿತು. ಶಿವನುಮೆಚ್ಚಿ ನಿನ್ನನ್ನು ನಿಜದಲ್ಲಿ ನಿಲ್ಲಿಸಲು ಹಾಗೆ ಮಾಡಿರುವನು ನಿನ್ನ ಮಗನಿಗೆ ಆಚಾರ್ಯ ಪಟ್ಟ ಕಟ್ಟಿ ನೀನು ಕಾಶಿಗೆ ಬರಬೇಕು. ಅಲ್ಲಿ ಶಿವನು ನಿನಗೆ ಕಾರುಣ್ಯವನ್ನು ಉಂಟುಮಾಡುವನು" ಎಂದು ಹೇಳಿ ಅದೃಶ್ಯನಾದನು.

ಕೆರೆಯ ಪದ್ಮರಸನು ತನ್ನ ಮಗನಾದ ಕುಮಾರ ಪದ್ಮರಸನಿಗೆ ಆಚಾರ್ಯಪಟ್ಟ ಕಟ್ಟಿ ಜ್ಞಾನೋಪದೇಶವನ್ನು ಮಾಡಿ ಕಾಶಿಗೆ ಪ್ರಯಾಣ ಮಾಡಿದನು. ದಾರಿಯಲ್ಲಿ ಹಂಪೆಗೆ ಬಂದು ಹರಿಹರನೊಡನೆ ಕೆಲದಿನಗಳು ತಂಗಿದ್ದು ಮುಂದೆ ಹೊರಡುವಾಗ ಅವನನ್ನು ಹತ್ತಿರಕರೆದು "ಉಮಾವರಂ ನಿಮ್ಮನಿಂದಿಂಗೆಂಟನೆಯ ದಿನಗೆ ತನ್ನೊಳ್ ನೆರಪಲಿರ್ದಪಂ; ಅಂತಜೆಂ ನೀವೀಗಳೊರೆವೀ ಮಹಾಕಾವ್ಯಮಂ ತಡೆಯದನಿತಜೊಳ್ ಪಾರವೈದಿಪುದು" ಎಂದು ಹೇಳಿ ಕಾಶಿಗೆ ಹೋದ ಕೆರೆಯ ಪದ್ಮರಸನು ವಿಶ್ವನಾಥನಲ್ಲಿ ಐಕ್ಯನಾದನು. (ಈ ಅಂಶಗಳು ಪದ್ಮರಾಜ ಪುರಾಣದಲ್ಲಿ ಉಕ್ತವಾಗಿವೆ) 12ನೆಯ ಶತಮಾನದ ಉತ್ತರಾರ್ಧ ಮತ್ತು 13ನೆಯ ಶತಮಾನದ ಪೂರ್ವಾರ್ಧವು ಕೆರೆಯ ಪದ್ಮರಸನ ಕಾಲವಾಗಿದ್ದಿರಬಹುದೆಂದು ತಿಳಿಯಬಹುದು.

**ಕೆರೆಯ ಪದ್ಮರಸನ ಕೃತಿಗಳು :** ಕೆರೆಯ ಪದ್ಮರಸನ ಕೃತಿಗಳು ಸದ್ಯಕ್ಕೆ ದೊರೆತಿರುವುವು ಎರಡು. ಅವೆಂದರೆ ಒಂದು ದೀಕ್ಷಾಬೋಧೆ(ಕನ್ನಡ), [68] ಪದ್ಮರಸನು ಸಂಸ್ಕೃತದ ಸಾನಂದ ಚರಿತೆಯನ್ನು ಸಾನಂದ ಎಂಬ ಹೆಸರಿನಲ್ಲಿ ಕನ್ನಡಿಸಿದ್ದಾನೆ. ಕೆರೆಯ ಪದ್ಮರಸನು ತನ್ನ ಕೃತಿಯಲ್ಲಿ ಕಾಲ ದೇಶ ಗ್ರಂಥರಚನೆ ಮತ್ತಿತರ ಯಾವ ವಿವರಗಳನ್ನೂ ಹೇಳಿಕೊಂಡಿಲ್ಲ. ಇವನು ವಿಶ್ವನಾಥನ ಅನುಪಮ ಭಕ್ತನೆಂಬುದು ಇವನ ಗ್ರಂಥಾದಿ ಮತ್ತು ಗ್ರಂಥಾತ್ಯದ ಪ್ರಾರ್ಥನೆಯಿಂದ ತಿಳಿಯುತ್ತದೆ. **ಶ್ರೀಮದ್ಗಜೇಶ ಕರುಣೆ**

**ಸುಧಾಮಯ ನತಜನ ಚಕೋರ ಚಯ ಹಿಮಕರ**

**ಸುತ್ರಾಮಕಹರಿಸೇವಿತ ಗುಣನಾಮನೆ**

**ಸಲಹೆನ್ನ ವಿಶ್ವನಾಥ ಪ್ರಭುವೇ** [69]

**ಇಂತೀ ದೀಕ್ಷಾ ಬೋಧೆಯ**

**ನಂತುವನಜೆವರ್ಗೆ ಪೇಳ್ದೆ ಕೇಳ್ದಾರ್ತರಿಗಂ**

**ಅಂತರ್ಮಲ ಭವಹರಗುಂ**

**ಸಂತಸ ನಿಜಮಕ್ಕು ವಿಶ್ವನಾಥನ ಕೃಪೆಯಿಂ** [70]

**ದೀಕ್ಷಾಬೋಧೆಯಲ್ಲಿ** ಮೂರು ಸ್ಥಲಗಳಿವೆ. **ದೀಕ್ಷಾಬೋಧೆಯು** ರಗಳೆಯ ಛಂದಸ್ಸಿನಲ್ಲಿದೆ. ಒಂದನೆಯ ಮತ್ತು ಮೂರನೆಯ ಸ್ಥಲಗಳು ಲಲಿತ ರಗಳೆಯಲ್ಲಿಯೂ ಎರಡನೆಯ ಸ್ಥಲವು ಮಂದಾನಿಲ ರಗಳೆಯಲ್ಲಿಯೂ ಇವೆ. ವೀರಶೈವ ಮತ ಶಾಸ್ತ್ರವನ್ನು ನಿರೂಪಿಸುವ ಶ್ರೇಷ್ಠ ಗ್ರಂಥವೆಂದು ಪ್ರಸಿದ್ದಿ ಪಡೆದಿದೆ. ವಿರಶೈವ ದೀಕ್ಷೆಯನ್ನು ಶಿಷ್ಯನು ಗುರುವಿನಿಂದ ಪಡೆಯುವ ಸಂದರ್ಭದಲ್ಲಿನ ಮಹತ್ವದ ವಿಷಯಗಳು ಗುರು ಶಿಷ್ಯ ಸಂವಾದ ರೂಪದಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ. ಶಿಷ್ಯನ ನಡತೆ, ಚಿತ್ತ ಚಾಪಲ್ಯ, ಕುಲಮದ ನಿರಸನ, ಮಮಕಾರ ನಿರಸನ, ಪರತತ್ವ ಸ್ವರೂಪಗಳು ಇವೇ ಮೊದಲಾದ ವಿಷಯಗಳು ವರ್ಣಿತವಾಗಿವೆ. ಕೃತಿಯ ನಡುವೆ ವೇದಾಗಮ ಪುರಾಣಾದಿಗಳಿಂದ ಪ್ರಮಾಣಪೂರ್ವಕವಾಗಿ ಉದ್ದರಿಸಿರುವ ಸಂಸ್ಕೃತದ ಶ್ಲೋಕಗಳು 'ಸಾಕ್ಷಿ'ರೂಪದಲ್ಲಿ ಬಂದಿವೆ.

"ದೀಕ್ಷಾಸಂಸ್ಕಾರವು ವೇದಾ ಮಂತ್ರ ಕ್ರಿಯಾದೀಕ್ಷೆಗಳೆಂದು ಮೂರು ಅಂಗಗಳನ್ನೊಳಗೊಂಡಿದೆ. ಗುರುವು ಶರಣಾಗತನಾದ ಶಿಷ್ಯನನ್ನು ಕೃಪಾದೃಷ್ಟಿಯಿಂದೀಕ್ಷಿಸಿ ತನ್ನ ಹಸ್ತವನ್ನು ಆತನ ಮಸ್ತಕಕ್ಕೆ ಸಂಯೋಗಮಾಡಿ ಆತನಲ್ಲಿ ಶಿವತತ್ವವನ್ನು ಸಮಾವೇಶಗೊಳಿಸುವುದು ವೇದಾದೀಕ್ಷೆ. ಶಿಷ್ಯನ ಕಿವಿಯಲ್ಲಿ ಮಂತ್ರವನ್ನುಪದೇಶಿಸುವುದು ಮಂತ್ರದೀಕ್ಷೆ. ಶಿಷ್ಯನ ಹಸ್ತದಲ್ಲಿ ವಿದ್ಯುಕ್ತ ಸಂಸ್ಕಾರೋಪೇತವಾದ ಇಷ್ಟಲಿಂಗವನ್ನು ದಯಪಾಲಿಸುವುದು ಕ್ರಿಯಾದೀಕ್ಷೆ. ಈ ಮೂರು ದೀಕ್ಷೆಗಳು ಜರುಗಿದಾಗಲೇ ಅದು ಪರಿಪೂರ್ಣ ದೀಕ್ಷೆಯಾಗುತ್ತದೆ. ಮೇಲೆ ಹೇಳಿದ ಮೂರು ದೀಕ್ಷೆಗಳಲ್ಲಿ ಮತ್ತೆ ಪ್ರತಿಯೊಂದಕ್ಕೆ ಏಳರಂತೆ

ಅವಾಂತರ ದೀಕ್ಷೆಗಳು ಇವೆ. ಅವುಗಳನ್ನು ಚನ್ನಬಸವಣ್ಣನವರು ವಿವರಿಸುತ್ತಾರೆ. ಈ ದೀಕ್ಷಾತ್ರಯದಿಂದ ಗುರುವು ಶಿಷ್ಯನ ಅಂಗದಲಿ ಲಿಂಗ ಸಂಗವನ್ನುಂಟುಮಾಡುವುದೇ ಮುಂತಾದ ವಿಷಯಗಳನ್ನು ದೀಕ್ಷಾಬೋಧೆಯಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ. ವಚನಕಾರರ ನಂತರ ವೀರಶೈವಮತದ ತತ್ವ ಹಾಗೂ ಆಚರಣೆಗಳನ್ನು ಕುರಿತು ಮೊಟ್ಟಮೊದಲನೆಯ ಕೃತಿಯಾಗಿ ನಿರೂಪಿಸಿರುವ ದೀಕ್ಷಾಬೋಧೆ ಐತಿಹಾಸಿಕ ದೃಷ್ಟಿಯಿಂದ ಮಹತ್ವದ್ದಾಗಿದೆ. ದಾರ್ಶನಿಕ ವಿಷಯಗಳನ್ನು ಆಧಾರ ಪೂರ್ವಕವಾಗಿ ಪ್ರತಿಪಾದಿಸಿರುವುದರಿಂದಲೂ ದೀಕ್ಷಾಬೋಧೆಗೆ ಶಾಸ್ತ್ರ ಗ್ರಂಥಗಳಲ್ಲಿಯೂ ಹಿರಿದು ಸ್ಥಾನವಿದೆ.

ಮುಂದಿನ ಶತಮಾನಗಳಲ್ಲಿ ವೀರಶೈವ ಮತದ ಸ್ವರೂಪವನ್ನು ತಿಳಿಸುವ ಸಂದರ್ಭದಲ್ಲಿ ಕವಿಗಳು ಇಲ್ಲಿಂದ ಅನೇಕ ವಿಷಯಗಳನ್ನೂ ಸಂಗ್ರಹಿಸಿರುವುದು ಗಮನಾರ್ಹ. ಪಿಡುಪರ್ತಿ ಸೋಮನಾಥನು ಈ ಗ್ರಂಥವನ್ನು ತೆಲುಗಿಗೆ ಭಾಷಾಂತರಿಸಿದ್ದಾನೆ. ಒಟ್ಟಿನಲ್ಲಿ ದೀಕ್ಷಾಬೋಧೆ ದಾರ್ಶನಿಕ ಗ್ರಂಥವಾಙ್ಮಯದಲ್ಲಿ ಮಹತ್ವದ ಗ್ರಂಥವೆಂದು ಮನ್ನಣೆ ಪಡೆದಿದೆ. ಸ್ವತಃ ಒಬ್ಬ ಮಂತ್ರಿಯಾಗಿದ್ದ ಕೆರೆಯ ಪದ್ಮರಸನು ವೀರಶೈವ ತತ್ವ ಮತ್ತು ಆಚರಣೆಗಳ ಬಗ್ಗೆ ತಾತ್ವಿಕವಾದ ಕೃತಿ ರಚನೆ ಮಾಡಿ ಕನ್ನಡ ವಾಙ್ಮಯದ ಸಂವರ್ಧನೆಗೆ ಕಾರಣಕರ್ತನಾಗಿದ್ದಾನೆ.

ಹರಿಹರ ಮತ್ತು ಪದ್ಮರಸರು ಹೊಯ್ಸಳ ನರಸಿಂಹ ಬಲ್ಲಾಳನ ಆಸ್ಥಾನದಲ್ಲಿದ್ದರೆಂಬುದೇನೋ ನಿಜ. ಇದಕ್ಕೂ ಮಿಗಿಲಾಗಿ ಇವರೀರ್ವರೂ "ದೇಹವೆರಡು ಭಾವವೊಂದು" ಎಂಬಂತೆ ಜೀವಿಸಿದ್ದರೆಂಬುದು ಕೌತುಕಪೂರ್ಣ ಸಂಗತಿಯಾಗಿದೆ. ಇದಕ್ಕೆ ಉದಾಹರಣೆ: ಒಂದು ದಿನ ಹರಿಹರನು ಆಸ್ಥಾನದಲ್ಲಿ ಕಡತಗಳನ್ನು ಬರೆಯುವಾಗ ಇದ್ದಕ್ಕಿದ್ದಂತೆ ತನ್ನ ಎರಡು ಕೈಗಳನ್ನು ಮೇಲಕ್ಕೆತ್ತಿ ಒರೆಸಿದನು. ಇದರಿಂದ ಅಲ್ಲಿಯ ವಾದಿಗಳು ಗಹಗಹಿಸಿ ನಕ್ಕರಂತೆ. ಅವರ ಮಾತುಗಳನ್ನು ಆಲಿಸಿದ ರಾಜನು ಸಹ ನಕ್ಕುಬಿಟ್ಟನಂತೆ. ಕೆಲವರಂತೂ ಹರಿಹರನಿಗೆ ಮರುಳು ಹಿಡಿದಿದೆ ಎಂದು ಅಣಕವಾಡಿದರು. ಮಂತ್ರಿಯಾದ ಪದ್ಮರಸನು ಹಂಪೆಯಲ್ಲಿ ವಿರೂಪಾಕ್ಷನ ತೆರೆಗೆ ಹತ್ತಿದ್ದ ಉರಿಯನ್ನು ಹರಿಹರನು ತನ್ನ ಕೈಗಳಿಂದ ತಿಕ್ಕಿ ಆರಿಸಿದನೆಂಬುದನ್ನು ಪ್ರತ್ಯಕ್ಷ ಮಾಡಿ ತೋರಿಸಿದನಂತೆ. [71] ಮುಂದೆ ಪದ್ಮರಸನು ತನ್ನ ಪುತ್ರನಾದ ಕುಮಾರಪದ್ಮರಸನಿಗೆ ಆಚಾರ್ಯಪಟ್ಟಕಟ್ಟಿ ಕಾಶೀಕ್ಷೇತ್ರದತ್ತ ಪ್ರಯಾಣ ಬೆಳೆಸಿದಾಗ ದಾರಿಯಲ್ಲಿ ಹಂಪೆಯನ್ನು ಸಂದರ್ಶಿಸುತ್ತಾನೆ. ಪದ್ಮರಸನು ಬರುತ್ತಿರುವ ಸುದ್ದಿಯನ್ನು ಕೇಳಿ ಹರಿಹರನು ಸಕಲ ಸಂಭ್ರಮಗಳೊಂದಿಗೆ ಪದ್ಮರಸನನ್ನು ಬರಮಾಡಿಕೊಂಡು ವಿರೂಪಾಕ್ಷಾಲಯಕ್ಕೆ ಕರೆದುಕೊಂಡು ಹೋಗಿ–

**ದೇವಕುಲ ಸಾರ್ವಭೌಮನನೆಯ್ದೆ ಕಂಡು ನಾ**

**ನಾವಿಧದೆನುತಿಸಿ ತತ್ಕರುಣಮಂ ಪಡೆದು ಸ**

**ದ್ಭಾವಿಹರಿಹರದೇವನೊಡನೆ ನಾಲ್ಕರಡು ಪಗಲೀಶ್ವರಾನುಭವಸುಖದಿಂ** [72]

ಇದ್ದು ಹೊರಡುವ ವೇಳೆಯಲ್ಲಿ, ಪದ್ಮರಸನು ಹರಿಹರನನ್ನು ಕರೆದು "ಉಮಾವರಂ ನಿಮ್ಮನಿಂದಿಂಗೆಂಟನೆಯ ದಿನಕೆ ತನ್ನೊಳನೆರಪಲಿರ್ದಪಂ" ಆದ್ದರಿಂದ ನೀವೀಗಳೊರವೀ ಮಹಾಕಾವ್ಯಮಂ ತಡೆಯದನಿತರೊಳ್ ಪಾರವೆಯ್ದಿಪುದೆಂದು" ಹೇಳಿ ಕಾಶಿಯತ್ತ ಹೊರಡುತ್ತಾನೆ. ಸರಿಯಾಗಿ ಎಂಟನೆಯ

ದಿನಕ್ಕೆ ಪಂಪಾಪುರಾಧೀಶ್ವರ  ವಿರೂಪಾಕ್ಷನು ಹರಿಹರನನ್ನು ಮೆಚ್ಚಿ ಕರುಣದಿಂದ ತನ್ನುದುರದೊಳಗೆ ಅಡಗಿಸಿಕೊಳ್ಳುತ್ತಾನೆ. ಈ ಘಟನೆಯ ಸತ್ಯಾಸತ್ಯತೆಗಳಿಗಿಂತ ಅವರಿರ್ವರ ನಡುವಿನ ಗಾಢವಾದ ಸ್ನೇಹದ ಪರಿಧಿಯನ್ನು, ಅನ್ಯೋನ್ಯವೂ ಆತ್ಮೀಯವೂ ಆದ ಭಾವುಕತೆಯನ್ನು ಧ್ವನಿಪೂರ್ಣವಾಗಿ ಗುರುತಿಸಬಹುದಾಗಿದೆ.

**ರಾಘವಾಂಕ –ಪದ್ಮರಸರ ಮೈತ್ರಿ:**

ಹರಿಹರನ ಸೋದರಳಿಯನಾದ ರಾಘವಾಂಕನೂ ಸಹ ಪದ್ಮರಸನೊಂದಿಗೆ ಅತ್ಯಂತ ಸಖ್ಯದಲ್ಲಿದ್ದನು. ಇದನ್ನು ಮೂರು ಉದಾಹರಣೆಗಳಿಂದ ತಿಳಿಯಬಹುದು:

1. ತ್ರಿಭುವನತಾತನೊಡನೆ ಪದ್ಮರಸನು ವಾದಮಾಡುವ ಸಂದರ್ಭದಲ್ಲಿ ರಾಘವಾಂಕನು ಅಲ್ಲಿ ಉಪಸ್ಥಿತನಿದ್ದನು.[73] 2. ಪದ್ಮರಸನು "ಪಂಪಾಪುರದ ಒಬ್ಬ ಜಂಗಮನ ಮುಖಾಂತರ 'ಸಿದ್ಧರಾಮಚಾರಿತ್ರ' ದ ಪದ್ಯಗಳನ್ನು ಆಲಿಸಿ  ಅದರ ಕರ್ತೃವಾದ ರಾಘವಾಂಕನನ್ನು ಭೇಟಿಯಾಗಬೇಕೆಂಬ ಆಸೆಯಿಂದ ಅವನನ್ನು  ದೋರಸಮುದ್ರಕ್ಕೆ ಬರಮಾಡಿಕೊಂಡು ಗೌರವಿಸಿದ್ದನು. [74]

3. ರಾಘವಾಂಕನು ಹರಿಹರನ ಆದೇಶದ ಮೇರೆಗೆ ಪದ್ಮರಸನನ್ನು ಕಾಣಲು ಬೇಲೂರಿಗೆ ಬಂದುಪದ್ಮರಸನನ್ನು ಕಂಡು ನಾನು ಸಮಾಧಿಯೊಳಗಡಗಬೇಕು ಎಂಬ ನಿರ್ಧಾರವನ್ನು ತಿಳಿಸಿದಾಗ ಪದ್ಮರಸನು "ಚರಮೂರ್ತಿಗಳು, ಯೋಗೀಶ್ವರರು, ಸದ್ವೈತಿಗಳು ಹಾಗೂ ಭಕ್ತಸಂತತಿ ಇವರೆಲ್ಲರನ್ನು ಆಹ್ವಾನಿಸಿ ಸಮಾರಾಧನೆಯನ್ನು ಮಾಡಿ ರಾಘವಾಂಕನ ಐಕ್ಯೋತ್ಸವವನ್ನು ನೆರವೇರಿಸಿದನು. ತದನಂತರ ರಾಘವಾಂಕನು ಅಲ್ಲಿಯೇ ಐಕ್ಯನಾದನು. ರಾಘವಾಂಕನ ಶರೀರವನ್ನು ಪದ್ಮರಸನು ಸಮಾಧಿಸ್ಥಗೊಳಿಸುವಾಗ ಬ್ರಾಹ್ಮಣರು ಬಂದು ರಾಘವಂ ವಿಪ್ರನಾತಗೆ ದಹನಕರ್ಮ ಸಲ್ಲು ಮಲ್ಲದೆ ಸಮಾಧಿಯ ಮಾಡಿಸಲೆಮ್ಮಮತಕೆ ಹೊಲ್ಲ . . . ಅಪರಕರ್ಮವ ಮಾಳ್ಪೆವು" ಎಂದು ಹೇಳುತ್ತಾರೆ. ಆಗ ಪದ್ಮರಸನು –

**ವರಯತಿಗೆ ಲಿಂಗಧಾರಿಗೆ ದಹನ ಸಲ್ಲದೀ**

**ಪುರುಷರಿಗೆ ಸಮಾಧಿಯಂ ಮಾಡುವೆಂ ಬಳಿಕ ಕೊಂ**

**ಚಿರಿ ನೀವೆ ನಿಮ್ಮ ದಹನಕ್ಕಪ್ಪಣೆಯನೆತ್ತೆನು**

ಎಂದು ಹೇಳಿ ರಾಘವಾಂಕನನ್ನು ಸಮಾಧಿಗೊಳಿಸಿ ಅದರ ಮೇಲೆ ವೇದಿಕೆಯನ್ನು ರಚಿಸುತ್ತಾನೆ. ಆದರೆ ಬ್ರಾಹ್ಮಣರು ಕೋಪಾವಿಷ್ಠರಾಗಿ ಬಂದು "ಎಲೆಯಯ್ಯಗಳಿರಾ, ನಿಮ್ಮವರ ಪ್ರಾಯಶ್ಚಿತ್ತಗಳಲಿ ಶುದ್ಧನ ಮಾಡಿ ದಹಿಸುವೆವು ನೋಡಿ" ಎಂದು ಮೂದಲಿಸುತ್ತಾ ಆ ಸಮಾಧಿಯನ್ನು ಅಗೆದು ತೆಗೆಯಲು ಅಲ್ಲಿ

ಮೃತಶರೀರದ ಬದಲಿಗೆ ವೃಷಭೇಂದ್ರನು ಪ್ರತ್ಯಕ್ಷನಾಗುತ್ತಾನೆ. ಆಗ ಅವರೆಲ್ಲ ಅವಮಾನಿತರಾಗಿ ಹಿಂದಿರುಗುತ್ತಾರೆ. ಇದು ಶೈವ –ಬ್ರಾಹ್ಮಣ ಸಂಘರ್ಷವನ್ನು ಕುರಿತು ಹೇಳುತ್ತಿರಬಹುದು.

ರಾಘವಾಂಕನ ಸಮಾಧಿಯ ಮೇಲೆ ನಂದೀಶ್ವರನನ್ನು ಸ್ಥಾಪಿಸಿ ಸುಂದರವಾದ ಮಂಟಪವೊಂದನ್ನು ನಿರ್ಮಿಸುತ್ತಾನೆ. [75] ಈ ಸಂದರ್ಭಗಳಲ್ಲಿ ರಾಘವಾಂಕ ಮತ್ತು ಪದ್ಮರಸರ ಅನ್ಯೋನ್ಯವಾದ ಸ್ನೇಹಪರತೆಯನ್ನು ತಿಳಿಸುತ್ತದೆ. ಡಾ. ಬಿ. ಶಿವಮೂರ್ತಿಶಾಸ್ತ್ರಿಗಳು ಬೇಲೂರಿನ ಪಾತಾಳೇಶ್ವರ ದೇವಾಲಯವೇ ರಾಘವಾಂಕನ ಸಮಾಧಿ ಎಂದು ಹೇಳಿದ್ದಾರೆ[76] ಚಿದಾನಂದಮೂರ್ತಿಗಳು ಸಹ ಇದನ್ನು ಸಮರ್ಥಿಸಿದ್ದಾರೆ. [77]

**ದೀಕ್ಷಾಬೋಧೆಯಲ್ಲಿ ಬರುವ ಅಲಂಕಾರಗಳ ಸೊಬಗು:**

ಈ ಕೃತಿಯಲ್ಲಿನ ಅಲಂಕಾರಗಳನ್ನು ಗಮನಿಸಿದರೆ ಅವುಗಳಲ್ಲಿ ಹೆಚ್ಚಿನವು ಸ್ಥಳೀಯ ಜನಜೀವನದಿಂದ ಎದ್ದುಬಂದವುಗಳಾಗಿರುವುದನ್ನು ಗುರುತಿಸಬಹುದು. ಉದಾ:

**ಹೆಳವನಲ್ಲಿಗೆ ಗಂಗೆ ದಳದಳನೆ ಬರ್ಪಂತೆ**

**ಅಳಲುವತಿ ನಿರ್ಧನಿಕಗೆಳಸಿ ನಿಧಿ ಬರ್ಪಂತೆ** [78]

ಶಿಷ್ಯನ ಹತ್ತಿರ ಗುರುವು ಆಗಮಿಸುವ ಸನ್ನಿವೇಶವನ್ನು ಲೋಕಾನುಭವದ ಮಾತಿನ ಮೂಲಕ ಹೀಗೆ ಹೇಳಿರುವ ಪರಿ ಸೊಗಸಾಗಿದೆ. ಈ ಉಪಮೆಗಳು ಗುರುಶಿಷ್ಯರ ಸಮಾಗಮವನ್ನು ಸಾರ್ಥಕವಾಗಿ ಚಿತ್ರಿಸುತ್ತವೆ.ಹಾಗೆಯೇ ಲಿಂಗಾಂಗ ಸಾಮರಸ್ಯವನ್ನು ಅಭಿವ್ಯಕ್ತಿಸುವ ಉಪಮೆಗಳು ಸಹಜವಾಗಿ ಕಂಗೊಳಿಸಿವೆ: ನೀರಬೊಬ್ಬಳಿಕೆಯೂ ನೀರೋಲಡಗಿರ್ದಂತೆ

**ನೀರಾಲಿ ಕಲ್ಲ ನೀರೋಳಗೆ ಬೈಚಿಟ್ಟಂತೆ**

**ಘಟ್ಟಂಗಲೀಕ ಕ್ರಿಯೆಗೆಟ್ಟು ರಸವಾದಂತೆ**

**ಮುಟ್ಟಿಯನಲನ ಕಾಷ್ಠಗೆಟ್ಟಗ್ನಿಯಾದಂತೆ** [79]

ರೂಪಕಾಲಂಕಾರವು ಔಚಿತ್ಯವರಿತು ಬಂದಿರುವುದನ್ನು ಗಮನಿಸಬಹುದು:

**ಹೆಂದದ ಭವಾರಣ್ಯವೃಂದದಾವಾನಲಂ**

**ಕುಂದದಿಹ ಸಂಸಾರಸಿಂಧು ಬಡಬಾನಳಂ** [80]

**ಕಿತ್ತಲಗಿನಿಂ ಕುತ್ತಿದೊಡೆ ಗಗನವಳಕುವುದೇ**

**ಕ್ಷುತ್ತಿಂಗೆ ಹೊಟ್ಟು ತುತ್ತಲು ಹಸಿವುಹೋಹುದೇ**[81] ಶಿಷ್ಯನು ಗುರುವಿನ ಸಾನ್ನಿಧ್ಯದಲ್ಲಿನ ಸಾರ್ಥಕ್ಯವನ್ನು ತಿಳಿಸುವ ಸಂದರ್ಭದಲ್ಲಿನ ಸಾಲುಗಳು ಹೀಗೆ ದೃಷ್ಟಾಂತಕ್ಕೆ ಉದಾಹರಣೆಯಾಗಿವೆ:

**ಹುಟ್ಟುಗುರುಡನು ಕೆಟ್ಟಕಣ್ಣವನ ಕೈಹಿಡಿದು ಬಟ್ಟೆಯಜೆಯದೆ ಗುಳಿಯ ಬಿದ್ದಹನತೆಱನಹುದು**[82]

**ಪರುಷದ ಗೃಹದೊಳಗಿಹ ಸಿರಿವಂತ ತಿರಿವನೆ ಮನೆಮನೆಗಳಲಿ ಸ್ವತಂತ್ರಮಂ [83]**

**ರಸಪ್ರತಿಪಾದನೆ :** ದೀಕ್ಷಾಬೋಧೆಯಲ್ಲಿ ವೀರಶೈವ ತಾತ್ವಿಕ ವಿಚಾರಗಳನ್ನು ನಿರೂಪಿಸುವಲ್ಲಿ ಭಕ್ತಿರಸವು ಸ್ವಚ್ಛಂದವಾಗಿ ಹರಿದಿದೆ. ಗುರುವಿನ ಮಹತ್ವ, ಶಿವಪೂಜಾ ವಿಧಾನ, ಲಿಂಗಾರ್ಚನಾಕ್ರಮ, ಶಿವದೀಕ್ಷೆಯ ಮಹತ್ವ, ಶಿವಭಕ್ತರ ಮಹಿಮೆ, ಲಿಂಗಾಂಗ ಸಾಮರಸ್ಯ, ಅಷ್ಟಾವರಣ, ಷಟ್ಸ್ಥಲ, ಪಂಚಾಚಾರ ಮೊದಲಾದವುಗಳನ್ನು ಕುರಿತು ವಿಷಯ ಪ್ರತಿಪಾದನೆ ಮಾಡುವಾಗ ಭಕ್ತಿರಸವು ಕೃತಿಯುದ್ದಕ್ಕೂ ಜೀವಾಳವಾಗಿ ಬಂದಿರುವುದನ್ನು ಕಾಣಬಹುದು. ಉದಾ : ಷಟ್ಸ್ಥಲಗಳಲ್ಲಿ ಒಂದಾದ ಮಾಹೇಶ್ವರನ ಗುಣಲಕ್ಷಣವನ್ನು ಹೇಳುವಾಗ –

**ಅನ್ಯವಧುವನ್ಯಧನವಿರಹಿತನು ಮಾಹೇಶ**
**ತನ್ನ ದೃಢಭಕ್ತಿ ಸಂಪನ್ನಹ ಮಾಹೇಶ**
**ಲಿಂಗ ನಿಷ್ಠೈಕ ವರಸಂಗ ಮಾಹೇಶ**
**ಲಿಂಗದಾಚಾರದಿ ಸುಸಂಗ ಮಾಹೇಶ್ವರಂ[84]**

**ಭಾಷಾಶೈಲಿ :** ಜನಸಾಮಾನ್ಯರ ಆಡುನುಡಿಗಳನ್ನು ಪದ್ಮರಸನು ತನ್ನ ಕಾವ್ಯದಲ್ಲಿ ಹದವರಿತು ಸುಂದರವಾಗಿ ಬಳಸಿಕೊಂಡಿದ್ದಾನೆ. ಇಲ್ಲಿ ನಾನು ಅಚ್ಚಗನ್ನಡ ದೇಸಿ ಪದಗಳನ್ನು ಸ್ಥಳೀಯ ಮೂಸೆಯಲ್ಲಿ ಗುರುತಿಸಿದ್ದೇನೆ. ಉದಾ: ಬೀಡುಬೀಸು, ಕಿಸುಗುಳಿಗ, ಕಾಳ್ಚಿನೋದ, ಹೆಪ್ಪಳಿಸು, ಉದುಭವಿಸು, ಮುಂಡಾಡು, ಎಲ್ಲಿಯಕೆ, ಏನಕ್ಕೆ ಮೊದಲಾದ ಶಬ್ದಗಳು ಕಾವ್ಯಕ್ಕೆ ಮೆರುಗನ್ನು ತಂದಿವೆ.

**ಅನ್ಯವಧುವನ್ಯಧನದಾಶೆಯಂ ಬಿಡಬೇಕು**
**ತನ್ನ ಸತಿ ತನ್ನ ಧನದುನ್ನತಿಯೊಳಿರಬೇಕು**
**ಲಿಂಗಸಂಗಿಗಳ ಸಂಗದೊಳಂಗವಿರಬೇಕು**
**ಲಿಂಗವಿರಹಿತರಂಗಳವ ಮೆಟ್ಟದಿರಬೇಕು**

ಎಂಬೆಡೆಗಳಲ್ಲಿ ಅಚ್ಚಗನ್ನಡ ಭಾಷಾಶೈಲಿಯನ್ನು ಗುರುತಿಸಬಹುದು.

**ಛಂದಸ್ಸು:** ದೀಕ್ಷಾಬೋಧೆಯಲ್ಲಿ ಒಟ್ಟು 2766 ರಗಳೆಯ ಪಾದಗಳಿವೆ. ಸ್ಥಲದ ಆದಿ ಮಧ್ಯ ಅಂತ್ಯಗಳಲ್ಲಿ ಮಾತ್ರ ಕಂದಗಳಿವೆ. ಅವುಗಳ ಸಂಖ್ಯೆ 17. ಜೊತೆಗೆ ಒಂದು ಚಂಪಕಮಾಲಾವೃತ್ತ, ಎಂಟು ಉತ್ಪಲಮಾಲೆಗಳು ಇವೆ. ಕೆರೆಯ ಪದ್ಮರಸನ ಕಾವ್ಯಶೈಲಿಯನ್ನು ಅನುಲಕ್ಷಿಸಿ ಛಂದೋವಿಚಾರವನ್ನು ದೀಕ್ಷಾಬೋಧೆಯಲ್ಲಿ ಗುರುತಿಸಿ ಹೇಳುವುದಾದರೆ ಈ ಕೆಳಗಿನ ಪದ್ಯವನ್ನು ಉದಾಹರಣೆಯಾಗಿ ನೋಡಬಹುದು:

ಲಲಿತರಗಳೆ

ಆದಡಂ ಕೇಳು ಶಿವಭಕ್ತನ ಚರಿತ್ರಮಂ

ಮೇದಿನಯೊಳಾತನಾಚರಣೆಯ ಚರಿತ್ರಮಂ

ಉತ್ಸಾಹ ಶಿವಭಕ್ತಿಯಚ್ಚಳಿಯದಿರಬೇಕು

ನಿಚ್ಚಟದ ನಿಷ್ಠೆ ದೃಢ ಕೆಚ್ಚುಗೊಂಡಿರಬೇಕು

ನಿಯತಮಪ್ಪಾಚಾರ ಸಮಯ ತಾನಿರಬೇಕು

ನಯದ ವಾಖ್ಯಂ ದಯವು ದಾಕ್ಷಿಣ್ಯವಿರಬೇಕು

ಡಂಭ ಮಾತ್ಸರ್ಯಕ್ಕೆ ಇಂಬುಗುಡದಿರಬೇಕು

ಶಂಬು ಪದ ಭಕ್ತಿ ನಂಬುಗೆಯ ಹಂಬಲುಬೇಕು

ವರ್ಮತ್ವಮಂ ನಿಜದ ನಿರ್ಮಲಾರ್ಚನೆ ಬೇಕು

ಧರ್ಮಗುಣ ನಿಷ್ಠೆ ಸತ್ಕರ್ಮ ದೃಡವಿರಬೇಕು

ಪದ ಪಾಣಿ ಗುದ ಗುಹ್ಯ ಕರ್ಮೆಂದ್ರಿಯಗಂಗಳಲಿ

ಬೆದಜೆದನಧಟ್ಟಿಸುವ ಅದಟು ಬೇಕವರಲ್ಲಿ

ಸೂಸಲೀಯದೆ ಮನವ ನೀಶವಾಸದೊಳಿರಿಸಿ

ಬೇಸರೋಗದೆ ಚಿತ್ತಮಂ ಮೀಸಲಾಗಿರಿಸಿ

ಹೀನ ದೀನತ್ವದುಮ್ಮಾನಮಂ ಬಿಡಬೇಕು

ಧ್ಯಾನ ಗುರುಭಕ್ತಿ ತದ್ಧ್ಯಾನನಾಗಿರಬೇಕು

ಇಂತಪ್ಪನಂತ ಗುಣವಿಲ್ಲದಡೆ ಶಿವಭಕ್ತಿ

ಎಂತು ದೊರಕೊಂಬುದೈ ಅತ್ಯಂತ ಘನಮುಕ್ತಿ

**(ಸ್ಥಲ–1,250–265)** ಹರಿಹರನಂತೆ ಕೆರೆಯ ಪದ್ಮರಸನು ರಗಳೆಯನ್ನು ದುಡಿಸಿಕೊಂಡರೂ ಹರಿಹರನಷ್ಟು ಯಶಸ್ವಿಯಾಗಲಿಲ್ಲ ಎಂದೆನಿಸುತ್ತದೆ. ಏಕೆಂದರೆ ಪದ್ಮರಸನಲ್ಲಿ ತತ್ವನಿರೂಪಣೆಯ ಕಡೆಗೆ ಒಲವು ಹೆಚ್ಚಿದ್ದರಿಂದ "ಹರಿಹರನ ಭಾವ, ಭಾವನೆಗಳ ಉಬ್ಬರ, ಉತ್ಸಾಹ, ಮಾತಿನ ಮೋಡಿ ಇವಾವುದೂ ಇಲ್ಲಿ ಕಂಡುಬರುವುದಿಲ್ಲ. ಆದರೆ ತನ್ನ ಪರಿಮಿತಿಯಲ್ಲಿ ಅವನ ಶೈಲಿ ಪ್ರಸನ್ನವಾಗಿದೆ. ಪ್ರವಾಹಿಯಾಗಿದೆ." ಆದರೆ ಈ ಹೇಳಿಕೆಯನ್ನು ಹೊರತುಪಡಿಸಿ ದೀಕ್ಷಾಬೋಧೆಯಲ್ಲಿ ಹರಿಹರನ, ಉಬ್ಬರಅಬ್ಬರಗಳು ಮೇರೆವರಿದಿರುವುದಕ್ಕೆ ಕೆಲವು ಉದಾಗಳನ್ನು ಕೊಡಬಹುದು.

ಆರವನು ಎಂದು ನಾನಾರ ಸಾರುವೆನಯ್ಯಾ

ಮಾರಾರಿ ನಿಮ್ಮ ದಯದಾರೈಕೆಯವನಯ್ಯಾ

ಆವ ಪರಿಯರ್ಚಿಪೆಂ ದೇವ ನಿಮ್ಮಯ ಪದವ

ಆವ ಪರಿ ಭಜಿಸುದೆಂ ದೇವ ನಿಮ್ಮಯ ಘನವ

ಎಂತು ಕಾಣ್ಬೆನೊ ವಿಶ್ವತಂತ್ರಮಯನಂಘ್ರಿಯಂ

ಎಂತರ್ಚಿಪೆನೊಅಚಿಂಥ್ಯ ವಿಶ್ವನಂಘ್ರಿಯಂ

ಎಂದಳಲುತಿರೆ ಕರುಣದಿಂದ ಸದ್ಗುರುರಾಯ

ಬಂದ ಕೈವಲ್ಯನುಂ ತಂದೀವ ನಿರ್ದಾಯ

**ಹೇಳವನಲ್ಲಿಗೆ ಗಂಗೆ ದಳದಳನೆ ಬರ್ಪಂತೆ**

**ಅಳಲುವತಿ ನಿರ್ಧನಿಕಗೆಳಸಿ ನಿಧಿ ಬರ್ಪಂತೆ**

**ಹೆಂದದ ಭವಾರಣ್ಯ ವೃಂದಾ ದಾವಾನಲಂ**

**ಕುಂದದಿಹ ಸಂಹಾರ ಸಿಂಧು ಬಡಬಾನಳಂ .. . . .. . (1ನೆಯ ಸ್ಥಲ)**

ಅನುಪ್ರಾಸಕ್ಕೆ ಉದಾಹರಣೆಯಾಗಿ ಈ ಕೆಳಗಿನ ಪದ್ಯವನ್ನು ಗಮನಿಸಬಹುದು:

**ಉತುಪತಿಗೆ ತಾನಾಗಿ ಸ್ಥಿತಿಲಯಕೆ ಶಿವನಹನೆ**

**ಮತಿಗೇಡಿಗಳ ಮಾತ ಪತಿಕರಿಸುವರೆ ಮಗನೆ** [85]

**4.3.1.6: ನೇಮಿಚಂದ್ರನ ನೇಮಿನಾಥ ಪುರಾಣ :**

ನೇಮಿಚಂದ್ರನು ಕ್ರಿ.ಶ ಸುಮಾರು 1170–1190 ರ ಅವಧಿಯಲ್ಲಿ ಬದುಕಿದ್ದನು. ಸವದತ್ತಿಯ ರಟ್ಟದೊರೆ ಲಕ್ಷ್ಮಣರಾಜನ ಆಸ್ಥಾನದಲ್ಲಿದ್ದುಕೊಂಡು ಲೀಲಾವತೀ ಗ್ರಂಥವನ್ನೂ ಹಾಗೂ ಹೊಯ್ಸಳ ದೊರೆ 2ನೆಯ ವೀರಬಲ್ಲಾಳನ ಸೆಜ್ಜೆವಳ್ಳನಾದ(?) ಪ್ರಧಾನನಾದ ಪದ್ಮನಾಭನ ಕೋರಿಕೆಯಂತೆ ನೇಮಿನಾಥ ಪುರಾಣ ವನ್ನು ಬರೆದಿದ್ದಾನೆ. ನೇಮಿಚಂದ್ರನು ಕಾವ್ಯದ ಹಿರಿಮೆ ಗರಿಮೆಯನ್ನು ಹೇಳಿರುವ ಮಾತುಗಳು ಅತ್ಯಂತ ಮಾರ್ಮಿಕ ವಾಗಿವೆ. ಎಂತಹ ಬಲಾಡ್ಯನಾದ ಅರಸನಿಂದ ನಿರ್ಮಿಸಲ್ಪಟ್ಟ ಮಹಾಮಂದಿರಗಳು, ಅರಮನೆಗಳು, ಒಂದಿಲ್ಲೊಂದು ದಿನ ಮಣ್ಣಿನಲ್ಲೆ ಮಣ್ಣಾಗಿ ಹೋಗುವುದು ಸಹಜ. ಆದರೆ ಸೂರ್ಯ ಚಂದ್ರರಿರುವವರೆಗೂ ಕಾಲಾತೀತವಾಗಿ ಮೆರೆಯುವ ವಸ್ತುವೆಂದರೆ ಮಹಾಕವಿಯಂದದಿ ರಚಿಸಲ್ಪಟ್ಟ ಮಹಾಕೃತಿ ಮಾತ್ರ. [86] ಇಂತಹ ಕಾವ್ಯ ಬೆಲೆಯನ್ನು ಕಟ್ಟಲು ಸಾಧ್ಯವೇ? –

**ಬೆಲೆಯಿಂದಕ್ಕುಮೆ ಕೃತಿಗಾ**

**ವಿಲಭುವನದ ಭಾಗ್ಯದಿಂದಮಕ್ಕುಂ ನೋಳ್ಪಂ**

**ಬೆಲೆಗೊಟ್ಟು ತಾರ ಮಧುವಂ**

**ಮಲಯಾನಿಲನಂ ಮನೋಜನಂ ಕೌಮುದಿಯಂ**[87]

ಪ್ರತಿಯೊಬ್ಬನೂ ಶ್ರೇಷ್ಠ ಕವಿಯಾಗಲಾರ. ಕವಿಗೆ ಜನ್ಮದತ್ತವಾದ ಪ್ರತಿಭೆ ಬೇಕು. ಅದರ ಜೊತೆಗೆ ಶಾಸ್ತ್ರ ಜ್ಞಾನವೂ ಬೇಕು. ಲೌಕಿಕ ಪ್ರಜ್ಞೆಯೂ ಬೇಕು ಎಂಬುದನ್ನು ಹೀಗೆ ಹೇಳಿದ್ದಾನೆ.

**ಶ್ರೀಯನೊಲಿಸವೊಡೆ ತಾಂಕವಿ**

**ನಾಯಕನೆನಿಸುವೊಡೆ ತನ್ನ ಕೃತಿ ಕಲ್ಪಾಂ**

**ಸ್ಥಾಯುಯೆನಿಸುವೊಡೆ ಬಲ್ಲಿದ**

**ಬಾಯಂ ಪೊಕ್ಕೋದಿ ಕಲ್ಗೆ ಕವಿ ಸಕಲಮಮಂ** [88]

**ನೇಮಿನಾಥ ಪುರಾಣ :** ನೇಮಿಚಂದ್ರನ 2ನೆಯ ಹಾಗೂ ಧಾರ್ಮಿಕ ಕೃತಿ ನೇಮಿನಾಥಪುರಾಣ. 22ನೆಯ ತೀರ್ಥಂಕರನಾದ ನೇಮಿನಾಥನ ಕಥೆಯೇ ಇದರ ಕಥಾವಸ್ತು. ಕೇವಲ 8 ಆಶ್ವಾಸಗಳಿಂದೊಡಗೂಡಿದ ಈ ಕೃತಿಯಲ್ಲಿ ಹರಿವಂಶ, ಕುರುವಂಶ, ಕಥೆಯೂ ಅಡಕವಾಗಿದ್ದು ಕೃಷ್ಣನು ಕಂಸನನ್ನು ಕೊಲ್ಲುವವರೆಗಿನ ಕಥೆ ಮಾತ್ರ ವರ್ಣಿತವಾಗಿ ನೇಮಿಚಂದ್ರನು ಈ ಕೃತಿಯನ್ನು ಇಲ್ಲಿಯವರೆಗೆ ಬರೆದು ಮುಗಿಸಿ ಮಡಿದುದಾಗಿ ಊಹಿಸಬಹುದಾಗಿವೆ. ಕೃತಿಯಲ್ಲಿ ಕಥೆ ಅರ್ಧವಾಗಿರುವುದರಿಂದ ಈ ಕೃತಿಯನ್ನು "ಅರ್ಧನೇಮಿನಾಥ ಪುರಾಣ" ಎಂದೂ ಕರೆಯಲಾಗಿದೆ. ನೇಮಿಚಂದ್ರನು ತನ್ನ ನೇಮಿನಾಥಪುರಾಣವನ್ನು ಕುರಿತು –

**ಎಂದೆಂದು ಪರಸಿ ಗುರುಜನ**

**ಮೊಂದೊಂದನೆ ಪೊಗಳಿ ಬುಧಜನಂ ಜಿನಕಥೆಯೊಳ್**

**ಸಂದಿಸಿ ವಸುದೇವಾಚ್ಯುತ**

**ಕಂದರ್ಪರ ಕಥೇಗಳನಿತುಮಂ ವಿರಚಿಸುವೆಂ** [89]

ಎಂದು ಹೇಳಿರುವನು. ಇದರಿಂದ ನೇಮಿಚಂದ್ರನಿಗೆ ತೀರ್ಥಂಕರನಾದ ನೇಮಿನಾಥನ ಚರಿತ್ರೆಯನ್ನು ಅದರೊಂದಿಗೆ ಹರಿವಂಶದ ವಸುದೇವ, ಅಚ್ಯುತ ಕಂದರ್ಪರ ಕಥೆಯನ್ನು ವರ್ಣಿಸುವ ಆಶಯವಾಗಿದ್ದಿತ್ತೆಂದು ತಿಳಿದುಬರುವುದು. ಗುಣಭದ್ರಾಚಾರ್ಯರ 'ಉತ್ತರಪುರಾಣ'ದಲ್ಲಿ ಹೇಳಲಾದ ನೇಮಿನಾಥನ ಕಥೇಯೇ ನೇಮಿನಾಥಪುರಾಣದ ವಸ್ತು. ಚಾವುಂಡರಾಯ, ಕರ್ಣಪಾರ್ಯರೂ ಇದನ್ನು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಕನ್ನಡದಲ್ಲಿ ಬರೆದಿರುವರು. ನೇಮಿಚಂದ್ರನು ಗುಣಭದ್ರಾಚಾರ್ಯ, ಚಾಮುಂಡರಾಯರ ಕಥೆಯನ್ನು ಅನುಸರಿಸಿದರೂ ಸಂದರ್ಭೋಚಿತವಾದ ಬದಲಾವಣೆಗಳೊಂದಿಗೆ ಕೃತಿಯ ಘನತೆಯನ್ನು ಹೆಚ್ಚುವಂತೆ ಮಾಡಿದ್ದಾನೆ. ಭಾಗವತದ ಪ್ರಭಾವದಿಂದ ಕೃಷ್ಣನ ಲೀಲಾ ವಿನೋದಗಳನ್ನು ಸ್ವಲ್ಪ ಹೆಚ್ಚಾಗಿಯೇ ವರ್ಣಿಸಲಾಗಿದೆ; ಆದರೂ ಜಿನಾಗಮವನ್ನೂ ಬೆಳಗುವ ಹಾಗೂ ನೇಮಿನಾಥನ ಕತೆ ಹೇಳುವ ಕಥಾ ವಸ್ತುವಿಗಂತೂ ಯಾವ ಭಂಗವೂ ಉಂಟಾಗಲಿಲ್ಲ. ತನ್ನ ಕೃತಿಯನ್ನು ಕುರಿತು–

**ರಸಮೊ ರಸಾಯನಮೋ ಕೃತಿ**
**ವಸಂತಮೊ ಕಿವಿಗಳಮೃತಮೋ ನೇಮಿಯ ವಾಕ್**
**ಪ್ರಸರಮದಳಸಕದಿಂ ನಿ**
**ಪ್ಪೊಸತಾದುದು ಜಗಕೆ ನೇಮಿನಾಥ ಪುರಾಣಂ** [90]

ನೇಮಿನಾಥಪುರಾಣವು ನೇಮಿಚಂದ್ರನ ಬಾಳು ಜಿನಾಗಮದಿಂದ ಪರಿಪಕ್ವವಾಗಿ ಮೂಡಿಬಂದ ಧಾರ್ಮಿಕ ಕಾವ್ಯ. ಇಲ್ಲಿ ಕವಿಯ ಪಳಗಿದ ಶೈಲಿ, ಪಾಂಡಿತ್ಯ, ಪ್ರತಿಭೆಗಳು ಸಹೃದಯಾಹ್ಲಾದಿಯಾಗಿದ್ದು ಜೈನಮತೀಯರ ಪುಣ್ಯ ಪುರಾಣವೂ ಆಗಿದೆ. ಸರ್ವಾದರಣೀಯವಾದ ಸುಂದರ ಕಾವ್ಯವೂ ಆಗಿದೆ.

ಜೈನಪುರಾಣಗಳಲ್ಲಿರಬೇಕಾದ ಲೋಕ, ದೇಶ, ಪುರ, ರಾಜ್ಯ, ತೀರ್ಥದಾನ, ತಪಸ್ಸುಗಳ ಸ್ವರೂಪ, ದೇವತೆಗಳು ಮತ್ತು ತಪೋದಾನದ ಫಲ ಎಂಬ ಅಷ್ಟಾಂಗಗಳನ್ನು ನೇಮಿಚಂದ್ರನು ತನ್ನ ಕೃತಿಯಲ್ಲಿ ತಂದಿರುವುದು ಸಹಜವಾಗಿದೆ. ಆದರೆ ವರ್ಣನೆಗಾಗಿ ವರ್ಣನೆಮಾಡುವ ರೀತಿ ನೇಮಿಚಂದ್ರನದಲ್ಲ. ಸಂಪ್ರದಾಯವನ್ನು ಕೈಬಿಡದೆ ಆದರೂ ಅದಕ್ಕೆ ಕಟ್ಟುಬೀಳದೆ ಕೃತಿಯನ್ನು ರಚಿಸುವುದೇ ನೇಮಿಚಂದ್ರನ ನೀತಿ. ಗರ್ಭಾವತರಣ, ಜನ್ಮಾಭೀಷೇಕ, ಪರಿಷ್ಕ್ರಮಣ, ಕೇವಲಜ್ಞಾನೋತ್ಪತ್ತಿ, ಸಮವಸರಣ, ನಿರ್ವಾಣ, ಕಲ್ಯಾಣಗಳ ವರ್ಣನೆಯನ್ನು ನೇಮಿಚಂದ್ರನು ಹಿತಮಿತವಾಗಿ ಮಾಡಿರುವನು. ಆರಂಭದಲ್ಲಿಯೇ ನೇಮಿನಾಥನನ್ನು ಸ್ತುತಿಸಿ ಅನಂತರ ಸಂಪ್ರದಾಯದಂತೆ ಪಂಚ ಪರಮೇಷ್ಟಿಗಳು ಯಕ್ಷಯಕ್ಷಿಯರ ಸರಸ್ವತಿಯನ್ನು ಸ್ತುತಿಸಿ ಪೂರ್ವಾಚಾರ್ಯರಿಗೆ ವಂದಿಸಿ, ಕೃತಿಯನ್ನು ಕುರಿತು ಹೇಳಿ ಕಥೆಯನ್ನು ಆರಂಭಿಸುವನು. ತ್ರಿಲೋಕಗಳ ವರ್ಣನೆಯನ್ನು 2 ಪದ್ಯಗಳಲ್ಲಿ ಮುಗಿಸಿ ಜಂಬೂದ್ವೀಪ ಅದರ ಮಧ್ಯದ ಮಂದರ ಪರ್ವತದ ಬಗ್ಗೆ ಒಂದೇ ಪದ್ಯ ಹೇಳುವನು. ಲೋಕಕಾರಕಥನ, ಮೇರುಪರ್ವತ, ಕಾಲವರ್ಣನೆಯನ್ನು ಕವಿ ವಿಸ್ತರಿಸಿಲ್ಲ. ನೇಮಿಚಂದ್ರನ ಭವಾವಳಿಗಳನ್ನು ಕುರಿತು ಮಣಿಗಳು ಸರವೇರುಪವೋಲ್ ಎಂದು ಹೇಳಿದಂತೆ ಭವಾವಳಿಗಳನ್ನು ಸಂಕ್ಷೇಪವಾಗಿ ನಿರೂಪಿಸುವನು.

ವಿಂದ್ಯಶಬರ, ಇಭ್ಯಕೇತು, ಸೌಂದರ್ಯಕಲ್ಪಜ, ಚಿಂಥಾಗತಿ, ಖಚರ, ಮಹೇಂದ್ರ ಕಲ್ಪಜ, ಅಪರಾಜಿತನರಪತಿ, ಅತ್ಯುತೇಂದ್ರ, ಸುಪ್ರತಿಷ್ಠಿ, ಪಂಚಾಣುತ್ತರಾಹಮೀಂದ್ರ ಎಂಬ ನೇಮಿಚಂದ್ರನ ಭವಾವಳಿಗಳನ್ನು ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಬಹು ಹಿತಮಿತವಾಗಿ ವರ್ಣಿಸಿರುವನು. ನೇಮಿಚಂದ್ರನು ಕರ್ಣಪಾರ್ಯನಂತೆ ಇಬ್ಯಕೇತುವಿನ ಕಥೆಯಿಂದ ಅಪರಾಜಿತನವರೆಗೆ ಭವಾವಳಿಗಳನ್ನು ವರ್ಣಿಸದೆ ಪರಾಜಿತನ ಕಥಯನ್ನೆ ಆರಂಭದಲ್ಲಿ ತೆಗೆದುಕೊಂಡು ಆತನ ಹಿಂದಿನ ಕಥೇಗಳನ್ನು ಹೆಚ್ಚು ವಿಸ್ತರಿಸದೆ ವರ್ಣಿಸಿರುವನು. ಆದರೆ ಮಹಾಕಾವ್ಯದಲ್ಲಿ ಇರಬೇಕಾದ ಪುರ, ಉದ್ಯಾನ, ರಾಜ, ರಾಣಿ, ರಾಜಪುತ್ರ, ರಾಜಕುಮಾರಿ, ಅಡವಿ, ಆನೆ, ಆಮ್ರ, ಮುಂತಾದ ಸನ್ನಿವೇಶಗಳಲ್ಲಿ ನೇಮಿಚಂದ್ರನು ಹೆಚ್ಚು ವರ್ಣಿಸಿರುವನು. ಇದರಿಂದ ಕವಿಗೆ ಈ ಪುರಾಣ ಕೃತಿಯನ್ನು ಸುಂದರ ಕಾವ್ಯವಾಗಿ ರಚಿಸಬೇಕೆಂಬ ಆಸೆಯಿದ್ದಂತೆ ತೋರುವುದು. ಕುರುವಂಶದ ಕಥೆಯ ಆರಂಭದ ಭಾಗ ಮಾತ್ರ ಈ ಕೃತಿಯಲ್ಲಿದೆ. ಕೃಷ್ಣನ ಬಾಲ್ಯ, ಅವನು ಪೂತನಿ ಮುಂತಾದ ರಕ್ಕಸರನ್ನು ಕೊಂದಿದ್ದು, ನಾಗಶಯ್ಯ ಮೊದಲಾದವರನ್ನು ವಶಪಡಿಸಿಕೊಂಡುದು, ಕಾಳಿಂಗ ಸರ್ಪವನ್ನು ಸಂಹರಿಸಿದ ಜಾಣೂರ ಮಲ್ಲನನ್ನೂ, ಕೈಟಭ ಆನೆಯನ್ನು ಸೀಳಿದ ವೃತ್ತಾಂತವನ್ನು ಇಲ್ಲಿ ಸುಂದರವಾಗಿ ವರ್ಣಿಸಿದ್ದಾನೆ.

ಚತುರ್ಭಾಷಾ ಪರಿಣತನಾದ ನೇಮಿಚಂದ್ರ ವಿದಗ್ದವಿದ್ಯಾಧರೇಂದ್ರನೂ ಉಚಿತ ಶಬ್ದವಿದ್ಯಾಸದನನೂ ಲೌಕಿಕ ತಿಲಕನೂ ಆದ ಬಹುಮುಖ ವ್ಯಕ್ತಿತ್ವದ ಪ್ರತಿಭಾವಂತ ಹಾಗೂ ಪ್ರಜ್ಞಾವಂತ ಕವಿ; ಕ್ಲಿಷ್ಟಪದ ಪ್ರಯೋಗ, ದೀರ್ಘಸಮಾಸ, ಶ್ಲೇಷೆ, ಭಾಷೆಯ ಬಿಗುವಿನಿಂಧ ಪಂಡಿತ ರಂಜಿತವಾದ ಸನ್ನಿವೇಶಗಳನ್ನೂ ನಿರ್ಮಿಸುವ ಪಾಂಡಿತ್ಯವೂ ಆತನಲ್ಲಿದೆ; ಅಚ್ಚಗನ್ನಡ ಪದಗಳಲ್ಲಿ ಜನಸಾಮಾನ್ಯರಿಗೂ ವೇದ್ಯವಾಗುವಂತೆ ಅಷ್ಟೇ ಸಹಜವಾದ ಭಾಷೆಯಲ್ಲಿ ಸನ್ನಿವೇಶಗಳನ್ನು ನಿರೂಪಿಸಿವ ಕೌಶಲ್ಯವೂ ಈತನಲ್ಲಿದೆ; ಪ್ರಕೃತಿಯ ಅಂಗ ಅಂಗಳನ್ನು ಅಲ್ಲಿಯ ಪಶುಪಕ್ಷಿಗಳನ್ನು ನದೀ ಪರ್ವತಗಳನ್ನು ಹಾಗೂ ಸೂರ್ಯೋದಯ, ಚಂದ್ರೋದಯದಂತ ಸುಂದರ ಸನ್ನಿವೇಶಗಳನ್ನು ವರ್ಣಿಸುವುದೆಂದರೆ ನೇಮಿಚಂದ್ರನಿಗೆ ಎಲ್ಲಿಲ್ಲದ ಉತ್ಸಾಹ; ಆನಂದ.

ಸರೋವರದ ಚಿತ್ರ : **ಗಂಗೆಯ ಗೋತ್ರವೋ, ಸೊದೆಯ ಸಾರಮೊ ಬೆಳ್ನಗೆಯೊಂದು ಬಿತ್ತೊದು**
**ತ್ತಿಂಗಡಲಿರ್ದ ಬೇರೋ ಪೊಸಮುತ್ತಿನ ಪುಟ್ಟುವ ನೀರೊ ತೋರ್ಪಬೆ**
**ಳ್ದಿಂಗಳ ಬೈಕೆಯೊ ಬಿನದ ದೀವರೆಯರ್ಕಳ ಕಣ್ಣಬೆಳ್ಪು ಬೆ**
**ಳ್ಪಂಗೆಡೆದತ್ತೊಪೇಳೆಮನೆ ನಿರ್ಮಲಮಾದುದು ನೀರಾಜಾಕರಂ** [91]

ಸಿಂಹದ ವರ್ಣನೆ– **ಹರಿಹೀರೋದ್ರೇಕದಿಂ ಕುಂಜರಗಿರಿಶಿರದೊಳ್ಪಾಯ್ವುದುಂ ಪಿಂತೆಮೇಗಂ**
**ಬರದೊಳ್ ಮೇಘವ್ರಜಂ ಘರ್ಜಿಸೆ ಶರವಾಶಂಕೆಯಿಂ ನಟ್ಟ ಕಾಲ್ನ**
**ಟ್ಟಿರೆ ಬೆನಲ್ನೊಳ್ಪೊಯ್ದುಗುರ್ವಾಯ್ದಿರೆ ಬಿದುತಟದೊಳ್ಕಂದದೊಳ್ಪೊಕ್ಕಮೆಯ್ ಪೊ**
**ಕ್ಕಿರೆ ಸೋತ್ಕಂಠಂ ಸಧೀರಂಸಚಳಿತಪಟವೊಂದಾಯ್ತು ಸಿಂಹಾವಲೋಕಂ** [92]

ಈ ಬಗೆಯ ವರ್ಣನೆಗಳು ಮನೋಹರವಾಗಿವೆ. ಇವು ಇವನ ಪಾಂಡಿತ್ಯಕ್ಕೂ ಕಲ್ಪನಾವಿಲಾಸಕ್ಕೂ ನಿದರ್ಶನಗಳು. ನೇಮಿನಾಥ ಪುರಾಣದಲ್ಲಿ **ಮಹಾಪ್ರಧಾನಿ ಪದ್ಮನಾಭನನ್ನು** ಪ್ರತ್ಯಕ್ಷ ತೀರ್ಥಂಕರನೆಂದು ವರ್ಣಿಸಿದ ಬಗೆ ಹೀಗಿದೆ – **ವದನಂ ಚಂದ್ರಪ್ರಭಂ ವಿಕ್ರಮಭುಜಮಜಿತಂ ಪಾಣಿ ಪದ್ಮಪ್ರಭಂ ಸಂ**
**ಪದಮೆಂದುದ ವರ್ಧಮಾನ ಗುಣತತಿವಿಮಳಂ ತನ್ನಪೆಂಪೊಂದನಂತಂ**
**ಹೃದಯಂ ಸ್ವಾದೀನಧರ್ಮಂ ಮತಿಪುರುಚರಿತಂ ಶೀತಲಂ ಸುವೃತಂ ತಾ**
**ನದರಿಂ ಪ್ರತ್ಯಕ್ಷ ತೀರ್ಥೇಶ್ವರನೆನೆ ನೆಗಳ್ದ ವಿಶ್ವವಿದ್ಯಾವಿನೋದಂ** [93]

ಈ ಪದ್ಯ ಶ್ಲೇಷಾಲಂಕಾರಕ್ಕೆ ಸುಂದರವಾದ ಉದಾಹರಣೆಯಾಗಿದೆ. ಇಂತಹ ಶ್ಲೇಷೆಗಳಿಗೆ ಕಾವ್ಯದಲ್ಲಿ ಕೊರತೆಯಿಲ್ಲ. ಇಂತಹ ಪಂಡಿತನಾದ ಕವಿ ಅಷ್ಟೇ ಸುಂದರವಾದ ದೇಶಿಯಲ್ಲಿ ಪದ್ಯಗಳನ್ನು ಬರೆಯುವ

ಕೌಶಲ್ಯವೂ ಕರತಲಾಮಲಕ ಮಾಡಿಕೊಂಡಿದ್ದಾನೆ. ವಿಂದ್ಯಕ ಎಂಬ ಬೇಡನಿಗೆ ಪಂಚ ಅಣುವ್ರತಗಳನ್ನು ಹೇಳುವ ಸನ್ನಿವೇಶದ ಪದ್ಯಗಳನ್ನು ನೋಡಬಹುದು–

**ಕೊಲಲಾಗದು ಕಳಲಾಗದು**

**ಕುಲಟೆಯರೊಳ್ ನೆರೆಯಲಾಗದಾರ್ತದಿನರ್ಥ**

**ಕ್ಕೆಲವರಲಣಮಾಗದು ಪುಸಿ**

**ಯಲಾಗದು ಬ್ರತಮನೈದುವಂ ಪಿಡಿ ಮಗನೇ** [94]

ಜನಸಾಮಾನ್ಯರು ನಿತ್ಯಜೀವನದಲ್ಲಿ ಬಳಸುವ ಉಪಮೆ, ರೂಪಕಗಳೂ ಜಾಣ್ನುಡಿಗಳೂ ಹಿತೋಕ್ತಿಗಳೂ ಹೇರಳವಾಗಿ ಆತ ಬಳಸಿರುವುದು ಅವನ ಲೋಕಾನುಭವದ ದ್ಯೋತಕ. ಉದಾಹರಣೆಗೆ **ಗಾಳಿಗೆ ಗರಿಮೂಡಿದಂತೆ, ಪಾವಡರ್ದ ಪಂದಿಯಂತೆ, ಇಲಿಯುಲಿಪುಗಳ್ದಬೇಕ್ಕನಂತೆ, ಕೋಣನೇರಿದ ಭಗವತಿಯಂತೆ, ಪೋವಂ ತೋರದೆ ಪನಸು ಫಲ ಪಡೆದಂತೆ, ಚಾಗಿಯ ಬಡತನಮುಂ ಖಳನ ಸಿರಿಯಂ ಅಗ್ಗಳಮಲ್ತೆ, ಪುಣ್ಯವಂತರ್ಗೆ ಮಣ್ಣಂಪಿಡಿದೊಡಂ ಪೊನ್ನಕ್ಕುಂ , ಕಾರ್ಯವಶಕ್ಕೆ ಕತ್ತೆ ಕಾಲ್ಪಿಡಿದೆನ್,ಪೂಮಾಲಿಗಂ ಪಾಶಕ್ಕಂ ಅಜಗಜಾಂತರಂ** ಇತ್ಯಾದಿ

ನೇಮಿಚಂದ್ರನ ಶೈಲಿಯನ್ನು ಕುರಿತು ಹೇಳುವುದಾದರೆ "ಪಂಡಿತನೂ ಲೋಕವ್ಯವಹಾರವನ್ನೂ ಅರಿತವನೂ, ರಸಿಕ ಶಿರೋಮಣಿ ಯಾದ ಪ್ರತಿಭಾನ್ವಿತ ಕವಿ ನೇಮಿಚಂದ್ರನ ಶೈಲಿಯು, ಒಂದು ಕಡೆ ಕವಿಯ ಸಂಸ್ಕೃತ, ಪ್ರಾಕೃತ ಭಾಷೆಗಳ ಬಂಧದಿಂದ ಅತಿ ಬಿಗುವಾಗಿ ಬಂಧಿತವಾಗಿದ್ದರೆ ಇನ್ನು ಕೆಲವು ಕಡೆ ಸರಳ ದೇಸಿಯಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತದೆ. ಪಂಡಿತನಾದ ಕವಿಯ ಕಾವ್ಯ ಸಂಸ್ಕೃತ ಛಂದಸ್ಸಿನ ಪ್ರಭಾವಕ್ಕೆ ಒಳಗಾಗಿ ಅನೇಕ ಸಂಸ್ಕೃತ ಛಂದೋವೃತ್ತಗಳಿಲ್ಲಿ ಹರಿದು ಬರುತ್ತಿದ್ದರೂ ದೇಸಿ ರೂಪಗಳಾದ ರಗಳೆ, ತ್ರಿಪದಿಗಳಲ್ಲಿ ಮೂಡಿಬರುತ್ತದೆ, ಪಾಂಡಿತ್ಯ ಪ್ರದರ್ಶನಕ್ಕಾಗಿ ಅಲ್ಲಲ್ಲಿ ಹಲವು ವಿಶೇಷ ಅಲಂಕಾರಗಳಲ್ಲಿ ಕಾಣಿಸಿಕೊಳ್ಳುತ್ತಿದ್ದರೆ ಅನೇಕ ಸಲ ರೂಢಿಯಲ್ಲಿದ್ದ ಸಾಮಾನ್ಯ ಅಲಂಕಾರಗಳಿಂದಲೇ ಅಲಂಕೃತವಾಗಿವೆ; ಅವನ ಲೌಕಿಕ ಜ್ಞಾನವನ್ನು ಹೊರಹೊಮ್ಮಿಸುವ ಅನೇಕ ನಾಣ್ಣುಡಿಗಳಿಂದ ತುಂಬಿಕೊಂಡ ಆತನ ಶೈಲಿ ಅನೇಕ ನೀತಿಯ ನುಡಿಗಳಿಂದ ನಯವೇರಿದೆ" ಎಂದು ಬಿ.ಎಸ್. ಕುಲಕರ್ಣಿಯವರು ಬಹು ಮಾರ್ಮಿಕವಾಗಿ ಹೇಳಿದ್ದಾರೆ.

ಷಡಕ್ಷರಿ, ಸುರಂಗರಂತಹ ಮಹಾಕವಿಗಳು ಆತನಿಂದ ಪ್ರಭಾವಿತರಾಗಿರುವುದು ಗಮನಾರ್ಹ. ಮಲ್ಲಿಕಾರ್ಜುನ, ಅಭಿನವವಾದಿವಿದ್ಯಾನಂದ, ಸಾಳ್ವರು ಆತನ ಪದ್ಯಗಳನ್ನು ಉದ್ಧರಿಸಿರುವುದು ನೇಮಿಚಂದ್ರನ ಹೆಗ್ಗಳಿಕೆಯಾಗಿದೆ. ಪಾರ್ಶ್ವ, ಜನ್ನ, ಕಮಲಭವ, ಮಧುರ, ಕವಿಮಲ್ಲ, ಬಾಹುಬಲಿ, ದೇವಚಂದ್ರ ಮೊದಲಾದ ಕವಿಗಳು ಈತನನ್ನು ಮನಸಾರೆ ಸ್ತುತಿಸಿರುವುದು ಈತನ ಹಿರಿಮೆಯೇ ಸರಿ.

ಪ್ರತಿಭೆ ಪಾಂಡಿತ್ಯಗಳೊಂದಿಗೆ ದೇಸಿನುಡಿಗಳನ್ನು ಮಿಗಿಲಾಗಿ ಪ್ರಯೋಗಿಸಿ ಕನ್ನಡಕ್ಕೆ ಕೊಟ್ಟ ಕೊಡುಗೆ ಮಹತ್ವದ್ದು. ಈ ಮೂಲಕ ದೇಸಿಸಂವರ್ಧನೆಗೆ ಕಾರಣೀಭೂತನಾಗಿದ್ದಾನೆ.

**4.3.2 : ಹೊಯ್ಸಳ ಮಹಾಮಂಡಳೇಶ್ವರರು : ಕಲಿಗಳು –ಕವಿಗಳು**

ಹೊಯ್ಸಳ ಮಹಾಮಂಡಳೇಶ್ವರರಲ್ಲಿ ಕೆಲವರು ಕವಿಗಳಿಗೆ ಆಶ್ರಯನೀಡಿ ಕನ್ನಡ ಸಾಹಿತ್ಯ ಸಂವರ್ಧನೆಗೆ ಕಾರಣರಾಗಿದ್ದರೆ ಇನ್ನು ಕೆಲವರು ಸ್ವತಃ ತಾವೇ ಉತ್ತಮ ಕವಿಗಳೇ ಆಗಿದ್ದರು ಎಂಬುದು ವಿಶೇಷ. ಆದರೆ ಅವರ ಕೃತಿಗಳು ಸದ್ಯಕ್ಕೆ ಲಭ್ಯವಿಲ್ಲವಷ್ಟೆ. ಉದಾಹರಣೆಗೆ ಈ ಕೆಳಗಿನ ಅಧಿಕಾರಿಗಳನ್ನು ನಾವು ಗಮನಿಸಬಹುದು.

**4.3.2.1. ಸಂಧಿವಿಗ್ರಹಿ ಬೂಚಿಮಯ್ಯ :** ಇಮ್ಮಡಿ ಬಲ್ಲಾಳನ ಪಟ್ಟಾಭಿಷೇಕ ಸಮಯದಲ್ಲಿ ಹುಟ್ಟಿದ ಮರ್ಕುಲಿ ಶಾಸನವು ತಿಳಿಸುವಂತೆ **ಸಂಧಿವಿಗ್ರಹಿ ಬೂಚಿಮಯ್ಯನು** ಆ ಗ್ರಾಮದಲ್ಲಿ ತ್ರಿಕೂಟ ಜಿನಾಲಯವನ್ನು ಕಟ್ಟಿಸಿ ದ್ರಮಿಳಸಂಘ ಮತ್ತು ಅರಂಗಳಾನ್ವಯಕ್ಕೆ ಸೇರಿದ ಶ್ರೀಪಾಳತ್ರೈವಿದ್ಯದೇವರ ಶಿಷ್ಯನಾದ ವಾಸುಪೂಜ್ಯ ಸಿದ್ಧಾಂತದೇವರ ಕಾಲಂಕರ್ಚ್ಚಿ ಸೀಗೆನಾಡಿನ ಮಱುಕುಲಿ ಗ್ರಾಮವನ್ನು ದಾನಮಾಡಿದನು. ಈ ಮೊದಲು ಪ್ರಸ್ತಾಪಿಸಿದ ಮದ್ದಿಮಯ್ಯನ ಮಗ ಬೂಚಿಮಯ್ಯನಿಗಿಂತ ಈತ ಭಿನ್ನ. ಜೈನಮತವೊಲವುಳ್ಳ ಈತನನ್ನು ವಾಚಕವಾಚಸ್ಪತಿ, ಕಾವ್ಯದಲ್ಲಿ ರಸಾಭಿವ್ಯಕ್ತಿ ಪರಿಣತ, ಸಂಸ್ಕೃತ ಹಾಗೂ ಕನ್ನಡ ಕಾವ್ಯದ ರಚನೆಯಲ್ಲಿ ನಿಪುಣ ಎಂದು ಹೊಗಳಲಾಗಿದೆ. ಈತನು ಕನ್ನಡ ಕುಲಕ್ಕೆ ಸೇರಿದಾತನೆಂದು ಹೇಳಿದೆ. ಈತನ ಪತ್ನಿ ಶಾಂತಲೆ. ಈಕೆಯ ತಂದೆ ಭರತ ಹಾಗೂ ದೊಡ್ಡಪ್ಪ ಮರಿಯಾನೆ. ಬೂಚಿರಾಜ ಮತ್ತು ಶಾಂತಲೆಯರ ಮಕ್ಕಳನ್ನೂ ಈ ಶಾಸನ ಉಲ್ಲೇಖಿಸುತ್ತದೆ. ಇವನ ಬಿರುದುಗಳನ್ನು ಗಮನಿಸಿದರೆ ಇವನೂ ಸಹ ಕಾವ್ಯಕೃತಿಗಳನ್ನು ಬರೆದಿರುವ ಸಾಧ್ಯತೆ ಇದೆಯಾದರೂ ಆತನ ಕೃತಿಗಳು ಇಂದಿಗೆ ಅಲಭ್ಯವಾಗಿದೆ.

**4.3.2.2 : ಇರುಗಪ್ಪದಂಡನಾಯಕ :** ಇರುಗಪ್ಪ ದಂಡನಾಯಕನು ಒಬ್ಬ ಸಾಹಿತಿಯೂ ಆಗಿದ್ದನು. **'ನಾನಾರ್ಥ ರತ್ನಮಾಲ'** [95] ಎಂಬ ಸಂಸ್ಕೃತ ಗ್ರಂಥವನ್ನು ಈತ ರಚಿಸಿರುವನು. ಇದರಲ್ಲಿ ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಚತುರಕ್ಷರ, ಸಂಕೀರ್ಣ, ಅವ್ಯಯ ಎಂಬ ಆರು ಖಂಡಗಳಿವೆ. ಈ ಕೃತಿಯು ಒಂದು ನಿಘಂಟಾಗಿದೆ. ಇದರಲ್ಲಿ 2640 ಪದ್ಯಗಳಿವೆ. ಮಧ್ಯಕಾಲೀನ ಕರ್ನಾಟಕದಲ್ಲಿ ಒಂದೆಡೆ ಶೈವ–ವೀರಶೈವ ಪರಂಪರೆಗಳು, ಮತ್ತೊಂದೆಡೆ ಭಕ್ತಿಪಂಥದ ಮೇಲ್ಮೈ, ಮಗದೊಂದೆಡೆ ವೈಷ್ಣವ ಸಂಪ್ರದಾಯದ ಪ್ರಚುರತೆ, ಇನ್ನೊಂದೆಡೆ ಮಹಾರಾಷ್ಟ್ರದ ವಾರಕರಿ ಸಂಪ್ರದಾಯದ ಬೆಳವಣಿಗೆ –ಹೀಗೆ ನಾನಾ ರೀತಿಯಲ್ಲಿ ಸಾಂಸ್ಕೃತಿಕತೆಯು ಮೇಳೈಸಿದ್ದಿತು. ಇಂಥ ಚಾರಿತ್ರಿಕ ಕಾಲಘಟ್ಟದಲ್ಲಿ ಕನ್ನಡ, ತಮಿಳು, ತೆಲುಗು ಭಾಷೆಗಳಲ್ಲಿ ಸೃಜನಶೀಲ ಬರವಣಿಗೆಗಳು ಹೆಚ್ಚಾಗಿದ್ದವು. ಈ ಎಲ್ಲ ಸಂದಿಗ್ಧತೆಗಳ ನಡುವೆ ಇರುಗಪ್ಪ ದಂಡನಾಯಕನು ಒಂದು ನಿಘಂಟನ್ನು ಸಂಸ್ಕೃತದಲ್ಲಿ ಬರೆಯುವುದರ ಕಾರಣವೇನು? ಸೃಜನೇತರ

ಬರಹವಾದ ನಿಘಂಟನ್ನು ಬರೆಯುವ ಮೂಲಕ ವಿಶೇಷ ಅಸ್ಮಿತೆಯನ್ನು ಮತ್ತು ಸೃಜನಶೀಲ ಬರಹಗಳಿಗೆ ಸಹಾಯವಾಗಲಿ ಎಂಬ ಸದುದ್ದೇಶವನ್ನು ಆತ ಸಾಧಿಸಲು ಈ ನಿಘಂಟನ್ನು ಬರೆದಿರಬಹುದು.

**ಯತ್ಪಾದಾಂಬುರುಹಾಭಾಯ ದೇವಚೂಡಮಣಿಯತೆ।**

**ಯಸ್ಯ ಜ್ಞಾನಾದಯೋನ್ನತಃ ಸ ದೇವಃ ಶ್ರೇಯಸೇಸ್ತು ನಃ॥**

ಎಂದು ಪ್ರಾರಂಭವಾಗುವ 'ನಾನಾರ್ಥರತ್ನಮಾಲ'ವು ಇರುಗಪ್ಪ ದಂಡಾಧೀಶನನ್ನು ಪ್ರಚಂಡ ಬುದ್ಧಿವಂತ, ಸದ್ವ ೃತ್ತಿಯುಳ್ಳವ, ದಂಡೇಶವಂಶದಲ್ಲಿ ಮುಕ್ತಾಮಣಿಯಂತಿರುವ ಹರಿಹರನಿಗೆ 2ನೆಯ ಅಂತಃಕರಣದಂತಿರುವವ, ಚುರುಕುಮತಿಯುಳ್ಳವ, ವಿವಿಧ ಗ್ರಂಥಗಳನ್ನು ಅಧ್ಯಯನಮಾಡಿ ಸರಸ್ವತಿಯ ಕನ್ನಡಿಯಂತಹ ತೇಜಸ್ಸುಳ್ಳವನು ಎಂದು ಕೀರ್ತಿಸಿದೆ. ಈ ಕೃತಿಯನ್ನು ಇರುಗಪ್ಪದಂಡನಾಯಕನು ಬರೆದನೆಂಬುದಕ್ಕೆ ಕೃತಿಯ ಈ ಮುಂದಿನ ಸಾಲು ಸಾಕ್ಷಿಯೊದಗಿಸುತ್ತದೆ.

**ಸೋಯಂ ಗ್ರಥ್ನಾತಿ ನಾನಾರ್ಥರತ್ನಮಾಲಾಂ ಗುಣೋಜ್ವಲಾಂ**

**ಶ್ರೀಮಾನಿರುಗಪದಂಡೇಶೋ ನಾತ್ಯಲ್ಪಂ ನಾತಿವಿಸ್ತರಂ॥**

ಈ ಕೃತಿಯ ನಾಲ್ಕು ಪ್ರತಿಗಳು ನಮಗೆ ದೊರೆತಿವೆ. ಒಂದು 1919ರಲ್ಲಿ ಮದ್ರಾಸಿನಲ್ಲಿ ದೊರೆತ ಗ್ರಂಥಲಿಪಿಯ ಪ್ರತಿ; 2ನೆಯದು ಬರೋಡಾದ ಓರಿಯಂಟಲ್ ಇನ್ಸಿಟ್ಯೂಟ್‌ನಲ್ಲಿ ದೊರೆತಿರುವ ತೆಲುಗು ಲಿಪಿಹೊಂದಿರುವ ಹಸ್ತಪ್ರತಿ; 3ನೆಯದು ಬರೋಡಾದ ಓರಿಯೆಂಟಲ್ ಇನ್ಸಿಟ್ಯೂಟ್‌ನಲ್ಲಿರುವ ಗ್ರಂಥ ಲಿಪಿಯಲ್ಲಿರುವ ಹಸ್ತಪ್ರತಿ; ನಾಲ್ಕನೆಯದು ಲಂಡನ್‌ನ India office library ಯಲ್ಲಿರುವ ತೆಲುಗು ಭಾಷೆಯಲ್ಲಿರುವ ಮುದ್ರಿತ ಪ್ರತಿ. ಈ ನಾಲ್ಕು ಪ್ರತಿಗಳನ್ನು ಅಭ್ಯಸಿಸಿ, ಸಂಪಾದಿಸಿ ವಿಮರ್ಶಾತ್ಮಕವಾಗಿ ಸಂಕಲಿಸಿ ಬೆಳ್ಳಿಕೋಟೆ ರಾಮಚಂದ್ರ ಶರ್ಮರು 1954ರಲ್ಲಿ ಪೂನಾದ ಡೆಕ್ಕನ್ ಕಾಲೇಜಿನ ಸ್ನಾತಕೋತ್ತರ ಸಂಶೋಧನಾ ಸಂಸ್ಥೆಯಿಂದ ಹೊರತಂದಿದ್ದಾರೆ.

ಸಂಸ್ಕ ೃತ ಕವಿಚರಿತ್ರೆಯ ಕರ್ತೃ ಎಂ.ಎಸ್. ಶ್ರೀನಿವಾಸ ಅಯ್ಯಂಗಾರರು "ಇರುಗಪದಂಡನಾಯಕನಿಗೆ ಭಾಸ್ಕರ ಎಂಬ ಹೆಸರೂ ಇತ್ತು. ವೇದಭಾಷ್ಯವನ್ನು ಬರೆದ ಸುಪ್ರಸಿದ್ಧ ಸಾಯಣನ ಸೋದರ; ಮಾಯಣನ ಮಗ" ಎಂದು ಹೇಳಿದ್ದಾರೆ. [96] ಆದರೆ ಈ ಮಾತನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಭಾಸ್ಕರನೆಂಬ ಕವಿಯು ಹರಿಹರನ ಕಾಲದಲ್ಲಿ ಇದ್ದದೂ ನಿಜ; ಆತ ಸಾಯಣನ ಸೋದರ ಹಾಗೂ ಮಾಯಣನ ಮಗ ಎಂಬುದೂ ನಿಜ; ಆದರೆ ಭಾಸ್ಕರನೇ ಬೇರೆ ಈ ಇರುಗಪ್ಪನೇ ಬೇರೆ. ಇಡೀ ನಾನಾರ್ಥರತ್ನಮಾಲದ ಯಾವ ಪದ್ಯಗಳಲ್ಲಿಯೂ ಇವನಿಗೆ ಭಾಸ್ಕರನೆಂಬ ಹೆಸರಿರುವ ಉಲ್ಲೇಖಗಳಿಲ್ಲ. ಬದಲಿಗೆ 2ನೇ ಹರಿಹರನ ದಂಡನಾಥ ಇರುಗಪ್ಪನು ನಾನಾರ್ಥರತ್ನಮಾಲ ಕೃತಿಯನ್ನು ಬರೆದನೆಂಬುದಕ್ಕೆ ಪ್ರತಿಖಂಡದ ಕೊನೆಗೂ ಉಲ್ಲೇಖವಿದೆ. ಅಲ್ಲದೆ ಇದನ್ನು ಸಂಕಲಿಸಿರುವ ಶರ್ಮರು ಈ ಕೃತಿಯ ಮುನ್ನುಡಿಯಲ್ಲಿ ದೊರೆತಿರುವ 4 ಹಸ್ತಪ್ರತಿಗಳ ಸಹಾಯದಿಂದ ಇದನ್ನು ರಚಿಸಿದವನು ಹರಿಹರನ ದಂಡೇಶ ಇರುಗಪ್ಪನೇ ಎಂಬುದನ್ನು ಸಾಧಾರಾವಾಗಿ, ವಿಶ್ಲೇಷಣಾತ್ಮಕ–ವಿಮರ್ಶಾತ್ಮಕವಾಗಿ

ನಿರೂಪಿಸಿದ್ದಾರೆ. ಹಾಗೆಯೇ ಎಚ್.ಎಂ. ನಾಗರಾಜು ಅವರು ತಮ್ಮ ಕೃತಿಯಲ್ಲಿ[97] ನಾನಾರ್ಥರತ್ನಮಾಲದ ಕರ್ತೃ ಇರುಗಪ್ಪನು ಇಮ್ಮಡಿ ದೇವರಾಯನ ದಂಡಾಧಿಪತಿಯಾಗಿದ್ದನೆಂದು ಅಭಿಪ್ರಾಯಿಸಿದ್ದಾರೆ. ಇಮ್ಮಡಿ ದೇವರಾಯನ ದಂಡನಾಯಕನಾಗಿ ಇರುಗಪ್ಪನೆಂಬುವವನು ಇದ್ದನಾದರೂ ಆತ ಹರಿಹರನ ದಂಡನಾಥನಲ್ಲ. ಅಂದರೆ 2ನೇ ಹರಿಹರನಲ್ಲಿದ್ದ ಇರುಗಪ್ಪದಂಡನಾಯಕನೆ ಬೇರೆ. ಅವನ ಅಣ್ಣನಾದ ಮಂಗಪ್ಪದಂಡನಾಯಕ ಮತ್ತು ಜಾನಕಿ ದಂಪತಿಗಳ ದ್ವಿತೀಯ ಪುತ್ರನಾದ ಇರುಗಪ್ಪ ದಂಡನಾಯಕ ಬೇರೆ. ಇವನನ್ನು 2ನೆಯ ಇರುಗಪ್ಪದಂಡನಾಯಕ ಎನ್ನಬಹುದು. ಇಮ್ಮಡಿ ಹರಿಹರನ ಅಧೀನದಲ್ಲಿದ್ದ ಇರುಗಪ್ಪದಂಡನಾಯಕನು 'ನಾನಾರ್ಥ ರತ್ನಮಾಲ'ದ ಕರ್ತೃವೇ ಹೊರತು ಇಮ್ಮಡಿ ದೇವರಾಯನ ಪ್ರಧಾನಿ ಇಮ್ಮಡಿ ಇರುಗಪ್ಪ ದಂಡನಾಯಕನಲ್ಲ.[98] ಮೊದಲನೆಯ ಇರುಗಪ್ಪ ದಂಡನಾಯಕನನ್ನು (2ನೆಯ ಹರಿಹರನ ಅಧಿಕಾರಿ) ಉಲ್ಲೇಖಿಸುವ ಶಾಸನಗಳು ಕ್ರಿ.ಶ. 1397ಕ್ಕೆ ಕೊನೆಯಾಗುತ್ತದೆ. ಇನ್ನು ಇಮ್ಮಡಿ ದೇವರಾಯನ ಪ್ರಧಾನಿ ಇಮ್ಮಡಿ ಇರುಗಪ್ಪದಂಡನಾಯಕನನ್ನು ಉಲ್ಲೇಖಿಸುವ ಮೊದಲ ಶಾಸನದಲ್ಲಿ ಕಾಲ ಕ್ರಿ.ಶ. 1422 ಹೀಗಾಗಿ ಕಾಲದ ದೃಷ್ಟಿಯಿಂದಲೂ ಇವರೀರ್ವರೂ ಭಿನ್ನರು.

ಒಟ್ಟಿನಲ್ಲಿ ಕ್ರಿ.ಶ. 14ನೆಯ ಶತಮಾನದ ಮಧ್ಯಭಾಗದಿಂದ ಕೊನೆಯ ಕಾಲದವರೆಗೆ ಶಾಸನಗಳು 1ನೆಯ ಇರುಗಪ್ಪದಂಡನಾಯಕನು ಹೊಯ್ಸಳರ ಕಾಲದಲ್ಲಿ ದಂಡನಾಯಕ ಪದವಿಯಲ್ಲಿದ್ದು, ತನ್ನ ಶೌರ್ಯ–ಪರಾಕ್ರಮಗಳಿಂದ ಮಹಾಪ್ರಧಾನಿಯಾಗಿ ವಿಸ್ತಾರವಾದ ಹಲವು ಪ್ರದೇಶಗಳ ಒಡೆಯನಾಗಿ ಸಂಗಮ ದೊರೆಗಳ ಆಳ್ವಿಕೆಯವಧಿಯಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿದ್ದನು. ಶಾಂತಿ–ಸೌಹಾರ್ದತೆಗಳಿಂದ ರಾಜ್ಯಾಡಳಿತದಲ್ಲಿ ಪಾಲ್ಗೊಂಡಿದ್ದುದು ಮಾತ್ರವಲ್ಲದೆ ಸಾಂಸ್ಕೃತಿಕವಾಗಿಯೂ ಅನನ್ಯತೆಯನ್ನು ಸಾಧಿಸಿದ್ದಾನೆ.

**4.3.2.3 : ಪೋಲಾಳ್ವದಂಡನಾಥ:** ಪೋಲಾಳ್ವದಂಡನಾಥನು ಹೊಯ್ಸಳ ವೀರಬಲ್ಲಾಳ ಮತ್ತು ಅವನ ಮಗ ವೀರನರಸಿಂಹ ಇವರಿಬ್ಬರ ಕಾಲದಲ್ಲಿಯೂ ಅಮಾತ್ಯನಾಗಿದ್ದನು. ಈತನು ವಿಷ್ಣುಭಕ್ತನಾಗಿದ್ದು ಪರಾಕ್ರಮಶಾಲಿಯೂ ಆಗಿದ್ದನು. ಆಂಧ್ರದೇಶದ ನಾರಾಯಣಪುರದ ಅತ್ತಿರಾಜ ಮತ್ತು ನವಿಲಾಡೆಯಕ್ಕ ದಂಪತಿಗಳು ಈತನ ತಂದೆ ತಾಯಿಗಳು. ಹರಿಹರಕ್ಷೇತ್ರದಲ್ಲಿ ಕ್ರಿ. ಶ 1145ರಲ್ಲಿ ಸ್ವಭಾನು ಸಂವತ್ಸರ ಮಾಘ ಶುದ್ಧ ಏಕಾದಶೀ ಬೃಹಸ್ಪತಿ ವಾರದಲ್ಲಿ 115ಹೊನ್ನ ಕಳಶದಿಂದೊಡಗೂಡಿ ಶೋಭಿಸುವ ಹರಿಹರ ದೇವಾಲಯವನ್ನು ಈತನು ನಿರ್ಮಿಸಿದನು. ಅಲ್ಲದೆ ಬಾನವಳ್ಳಿಯಲ್ಲಿ ಲಕ್ಷ್ಮೀನಾರಾಯಣ ದೇಗುಲವನ್ನು ನಿರ್ಮಿಸಿ ಆ ದೇವಾಸ್ಥಾನಕ್ಕೆ 4 ವೃತ್ತಿಯನ್ನು ಬಿಟ್ಟನು. ಕ್ರಿ. ಶ 1224ರಲ್ಲಿ ರಚಿತವಾದ ಶಾಸನದಲ್ಲಿ [99]

**ಗುರುಧರ್ಮದ್ವತಯಕ್ಕೆ ನೀನೆ ದಿಟದಿಂ ಪೋಲಾಳ್ವ ಕೇಳ್ ಮುನ್ನಮಾ**

**ದರೊಳಿನ್ನಪ್ಪರೊಳಿಂದು ವರ್ತಿಪರೊಳಾರ್ಗುಂಟಾದುವೀ ಧರ್ಮಮಾರ್**

**ಹರಿ ಚಾರಿತ್ರಮನೊಲ್ದು ಪಟ್ಟದದೆ ಪೇಳ್ದರ್ ನಿನ್ನವೊಲ್**

**ಧರೆ ಚೋದ್ಯಯಿಡುವಂತಿರಾರ್ ಹರಹರಡಾಗೇಹಮಂ ಮಾಡಿದರ್**

ಎಂದು ಪೋಲಾಳ್ವ ದಂಡನಾಥನನ್ನು ಮನವಾರೆ ಸ್ತುತಿಸಲಾಗಿದೆ. ಜೊತೆಗೆ ಈ ಮಾಹಿತಿಯನ್ನು ಲಕ್ಷಿಸಬಹದು –ಹೊಯ್ಸಳ ವೀರನಾರಸಿಂಹನು ಆಳುತ್ತಿದ್ದಾಗ **"ಆ ಚಕ್ರವರ್ತಿಯ ತೇಜಕ್ಕೆ ಕಾಯ್ಪಿನಂತೆ ಕಯದುಗೆ ಕೂರ್ಪಿನಂತೆ ಮಂತ್ರಕ್ಕೆ ಶಕ್ತಿಯಂತೆ ರಾಜ್ಯಕ್ಕೆ ವಜ್ರಸನ್ನಾಹದಂತಭೇದಭಾವದಿಂ ಮನಸಂದು ಮಹಾಪ್ರಧಾನಪದವಿಗಧಿನಾಥನಾದ ತೊಲಗದಕಂಬಮೆಂಬ ಬಿರುದ ಧ್ವಜಾಡಂಬರಮನವಲಂಬಿಸಿದ ಸಂಗೀತಸಾರನ ಸಜ್ಜನಾಧಾರನ ಕಾವ್ಯಕರ್ತಾರನ ಕೀರ್ತಿಭರ್ತಾರನ ಕವಿಜನಾಭರಣನ ಸೂಕ್ತಿಸುಧಾಕಿರಣನ ವಿತರಣ ವಿಳಾಸನ ಲಕ್ಷ್ಮೀನಿವಾಸನ ವೈಷ್ಣವ ಚಕ್ರವರ್ತಿಯ ಜಗನ್ಮೋಹನಮೂರ್ತಿಯ ಸತ್ಯಸ್ವಭಾವನ ಪೋಲಾಳ್ವದೇವನ ಪೆರ್ಮೆಯ ವಿಸ್ತಾರಮಂ ಪೇಟಿಳ್ವೊಡೆ**

**ಕರುವಿಟ್ಟಂ ಸತ್ಯದಿಂ ಕಣ್ದೆಱೆದನಸಮಸಾಹಿತ್ಯದಿಂ ಬಣ್ಣವಿಟ್ಟಂ**
**ಸಿರಿಯಿಂ ಕೂರ್ತಾಯುವೊಯ್ದಂ ಪರಹಿತಚರಿತೋದ್ಯೋಗದಿಂ ಬರ್ಮನೆಂಬಂ ।**
**ತಿರೆ ಸತ್ಯಜ್ಞಾನಲಕ್ಷ್ಮೀ ಪರಹಿತಚರಿತೋದ್ಯೋಗದೊಳ್ ತಾನೆ ಧಾತ್ರೀ**
**ಗುರುವಾದಂ ನಾರಸಿಂಹಾಧಿಪನ ಕಟಕದೊಳ್ ಮಂತ್ರಿಪೋಲಾಳ್ವ ದೇವಂ ॥**

**ಬಗೆಗೇನುಂ ಕವಲಲ್ಲ ವಾಕ್ಯಮೆರಡಿಲ್ಲೌದಾರ್ಯದೊಳ್ ಮಾಂದ್ಯಮಿ**
**ಲ್ಲ ಗುಣಪ್ರೀತಿಯೊಳಾತ್ಮಪಕ್ಷಪರಪಕ್ಷಾಸಂಗಮಿಲ್ಲಾಳ್ದನು ।**
**ಜ್ಜುಗದೊಳ್ ಲಾಭದ ಲೋಭಮಿಲ್ಲ ಸಿರಿಯೊಳ್ ಸೊರ್ಕಿಲ್ಲ ಪೋಲಾಳ್ವನಂ**
**ಪೊಗೞ್ದಿನ್ನನ್ಯರನಣ್ಣ ಪೇೞ್ ಪೊಗೞ್ವುದು ಪಾಲುಂಡು ಮೇಲುಂಬುದೇ॥**

ಈ ಶಾಸನದಿಂದ ಈತನು **'ಹರಿಹರಚಾರಿತ್ರ'** ಎಂಬ ಗ್ರಂಥವನ್ನು ರಚಿಸಿರುವುದಾಗಿ ತಿಳಿದುಬರುವುದು. ಆದರೆ ಈ ಗ್ರಂಥ ಉಪಲಬ್ಧವಾಗಿಲ್ಲ. ಸಂಗೀತಸಾರ ಸಜ್ಜನಾಧಾರ ಕವಿಜನಾಭರಣ ವೈಷ್ಣವ ಚಕ್ರವರ್ತಿ ಎಂದು ಈತನನ್ನು ಹೊಗಳಲಾಗಿದೆ.

**4.3.2.4 : ವಿಷ್ಣುದಂಡಾಧಿಪ :** ಹೊಯ್ಸಳ ದೊರೆ ವಿಷ್ಣುವರ್ಧನನ ಆಶ್ರಯದಲ್ಲಿದ್ದಂತಹ ರಾಯಣದಂಡನಾಥನ ಮಗ ಈತ. ಈತನನ್ನು "ಉಪನಿಷದ್ಗಿರಾಂ ಆಹರ್ತಾ", "ಸತ್ಕಾವ್ಯಗೋಷ್ಠಿಶ್ರೀಯಃ ಜನಯಿತಾ" ಎಂದು ಹೊಗಳಲಾಗಿದೆ. ಈ ಉದ್ಧೃತವಾಕ್ಯಗಳನ್ನು ಆಧರಿಸಿ ಈತನು ಒಬ್ಬ ಕವಿಯಾಗಿದ್ದಿರಬಹುದೆಂದು ಊಹೆ ಮಾಡಬಹುದು.[100]

**4.3.2.5 : ರೇಚಣ ಮಂತ್ರಿ:** ರೇಚಣಮಂತ್ರಿಯನ್ನು ಸಾಹಿತ್ಯ ವಿದ್ಯಾಧರ ಎಂದು ಕರೆಯಲಾಗಿದೆ. "ಬೆಂಗಳೂರಿನಲ್ಲಿ ಅಚ್ಚಾಗಿರುವ ನೀತಿಸಾರ ಎಂಬ ಗ್ರಂಥದಲ್ಲಿ ಒಂದು ಪದ್ಯದಲ್ಲಿ ದುರ್ಗಸಿಂಹ, ರುದ್ರಭಟ್ಟ, ಅಗ್ಗಳ ಮೊದಲಾದ ಕವಿಗಳ ಗೋಷ್ಠಿಯಲ್ಲಿ ರೇಚುಗ ಎಂಬ ಒಬ್ಬ ಕವಿಯ ಹೆಸರು ಹೇಳಿದೆ. ಇವನೇ ಆಗಿರಬಹುದೇನೋ ಏನೋ ತಿಳಿಯದು" ಎಂದು ನರಸಿಂಹಾಚಾರ್ಯರು ಅನುಮಾನ ವ್ಯಕ್ತಪಡಿಸಿದ್ದಾರೆ.

ಆದರೆ ಇದನ್ನು ಪುಷ್ಟೀಕರಿಸುವ ಇತರೆ ಶಾಸನಗಳಾಗಲೀ, ಕೃತಿಗಳಾಗಲೀ ಲಭ್ಯವಿಲ್ಲದ ಕಾರಣ ಏನನ್ನೂ ಹೇಳಲು ಬಾರದು.[101]

**4.3.2.6 : ಬೂಚಿರಾಜ :** ಇವನು ವೀರಬಲ್ಲಾಳನಿಗೆ ಮಂತ್ರಿಯಾಗಿದ್ದನು. ಶ್ರೀಪಾಳತ್ರೈವಿಧ್ಯನಿಂದ ಶಾಸ್ತ್ರಗಳನ್ನು ಕಲಿತಂತಹ ಜೈನಕವಿ. ಇವನು ರಚಿಸಿರುವ ಶಾಸನಲ್ಲಿ ಇವನನ್ನು "ಚತುರ್ವಿಧಪಾಂಡಿತ್ಯ ಮಂಡಿತಂ", ವಾಚಕವಾಚಸ್ಪತಿ ಕವಿತಾಚಾರ್ಯಂ ಶ್ರವ್ಯಕಾವ್ಯಪದ್ಯಪದಾರ್ಥಳೋಚನಚಕ್ಷು ಪರಾರ್ಥ . . . . . ಪ್ರಿಯಹಿತಾರ್ಥವಾಚಂ ಬೂಚಂ" ಎಂದೂ ಸ್ತುತಿಸಿದೆ.[102] ಆದರೆ ಇವನು ರಚಿಸಿರುವ ಗ್ರಂಥಗಳು ದೊರೆತಿಲ್ಲ.

**4.3.3. ಹೊಯ್ಸಳ ಮಹಾಮಂಡಳೇಶ್ವರರು ಸಂವರ್ಧಿಸಿದ ಶಾಸನಕವಿಗಳು :**

ಇಲ್ಲಿ ಮೊದಲಿಗೆ ನಾನು ಹೊಯ್ಸಳ ಮಹಾಮಂಡಳೇಶ್ವರರ ಅಧೀನರಾಗಿ ಘನತೆಯಿಂದ ಕೂಡಿದ ಕನ್ನಡ ಶಾಸನಗಳನ್ನು ರಚಿಸಿದ ಪ್ರತಿಭಾನ್ವಿತವಾದ ರಚಕರನ್ನು ಮೊದಲಬಾರಿಗೆ ಕವಿಗಳೆಂದು ಕರೆಯಲಿಚ್ಚಿಸಿದ್ದೇನೆ. ಕೆಲವು ಕವಿಗಳನ್ನು ಮಾತ್ರ ಸಂಶೋಧನ ಲೋಕವು ಈಗಾಗಲೇ ಶಾಸನಕವಿಗಳೆಂದು ಸಾಂದರ್ಭಿಕವಾಗಿ ಕರೆಯಲ್ಪಟ್ಟಿದ್ದರೆ, ಇಂತಹ ಅನೇಕರನ್ನು ಶಾಸನಕವಿಗಳೆಂದು ಕರೆಯುವ ಅವಶ್ಯಕತೆಯಿದೆ. ಇವರ ವಿವರ ಮುಂದಿನಂತಿದೆ;

ಮಧ್ಯಕಾಲೀನ ಕಾಲಘಟ್ಟದ ವಿಶಾಲ ಕನ್ನಡ ನಾಡಿನಾದ್ಯಂತ ವ್ಯಾಪಿಸಿರುವ ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳನ್ನು ರಚಿಸಿದವರಲ್ಲಿ ಪ್ರತಿಭಾನ್ವಿತರಾದ ಅನೇಕ ಕವಿಗಳು ಇದ್ದಾರೆ. ಇವರ ಕಾವ್ಯಪ್ರತಿಭೆಯು ನಿಜಕ್ಕೂ ಅದ್ಭುತವೆಂಬುದರಲ್ಲಿ ಎರಡು ಮಾತಿಲ್ಲ. ಕಿರಿದರೊಳ ಪಿರಿದರ್ಥವನ್ನು, ಸಾಹಿತ್ಯಿಕವಾದ ಅನನ್ಯತೆಯನ್ನು ಶಾಸನಗಳಲ್ಲಿ ಮುದದಿಂದ ಅಡಕಗೊಳಿಸಿರುವುದರಲ್ಲಿ ಇವರ ಜಾಣ್ಮೆ ಮೇರೆವರಿದಿದೆ. ಹಾಗಾಗಿ ಈ ಶಾಸನಕವಿಗಳ ಮತ್ತು ಇವರು ರಚಿಸಿದ ಶಾಸನಗಳ ವಿಚಾರಗಳು ಇಂತಿವೆ–

**4.3.3.1 : ಸಾಂತಮಹಂತ:** ಈತನು ವಿಷ್ಣುವರ್ಧನನ ದಂಡನಾಥನಾದ ಏಚಿರಾಜನು ತಾನು, ದೊರೆಯಿಂದ ಪಡೆದ ಲಾಲನಕೆರೆ ಎಂಬ ಗ್ರಾಮವನ್ನು ಮೂಲಸ್ಥಾನದ ಮಲ್ಲಿಕಾರ್ಜುನದೇವರಿಗೆ ಕೊಟ್ಟಿರುವ ವಿಚಾರವಿರುವ ನಾಗಮಂಗಲದ 28ನೆಯ ಶಾಸನವನ್ನು ಬರೆದ ಕವಿ. [103] ತನ್ನ ಶಾಸನಪದ್ಯದಲ್ಲಿ ತನ್ನ ಬಗ್ಗೆ ಹೀಗೆ ಹೇಳಿಕೊಂಡಿದ್ದಾನೆ.

**ಕ್ಷಿತಿವಿನುತೆ ಸರ್ಬದೇವನ**
**ಸುತೆ ಸನ್ನುತೆ ಸೋಮಿಯಕ್ಕನಣುಗಿನ ಪುತ್ರಂ**
**ಸತುಕವಿ ಸಾಂತಮಹಂತಂ**
**ಸ್ಥಿತಿಸಾರಂ ಪೇಟಿದ್ದನಟಿಳ್ತಿಯಿಂ ಸಾಸನಮಂ**

**ಪತ್ತಿರೆ ಗಂಗೆಯ ಪನಿಗಳ್**
**ಮುತ್ತಿನ ಬಾಸಿಗಮಿದೆನಿಸಿ ವಾಸುಗಿ ಸುಖದಿಂ**
**ಸುತ್ತಿರ್ದ ಜೂಟದಾ ದೇ**
**ವೋತ್ತಮನೆಮಗೊಸೆದು ಕುಡುಗೆ ಸುಖಸಂಪದಮಂ**

ಎಂದು ಮುಂತಾದ ಪದ್ಯಗಳಲ್ಲಿನ ಸೊಗಸುಗಾರಿಕೆಯಿಂದ ಈತನೊಬ್ಬ ಗಣ್ಯ ಕವಿ ಎಂಬುದರಲ್ಲಿ ಸಂಶಯವಿಲ್ಲ.

**4.3.3.2 : ದೇವಭದ್ರಮುನಿ:** ಮಹಾಮಂಡಳೇಶ್ವರನಾದ ಗೋವಿದೇವನು ಹೆಗ್ಗೆರೆಯ ಚೆನ್ನಪಾರ್ಶ್ವದೇವರ ಬಸದಿಗೆ ಸವಣುಗೆರೆಯನ್ನು ಕೊಟ್ಟ ವಿವರವಿರುವ ಚಿಕ್ಕನಾಯಕನಹಳ್ಳಿಯ 21ನೆಯ ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ ಪದ್ಯದಿಂದ ತಿಳಿಯುತ್ತದೆ. [104]

**ಉಚಿತಪದಾಳಂಕಾರಂ**

**ಪ್ರಚುರರಸಂ ನೆಗಟಲಿಂತು ಜಿನಶಾಸನಮಂ**

**ರಚಿಯಿಸಿದಂ ಹರಹಾಸ**

**ದ್ರುಚಿರಯಶಂ ದೇವಭದ್ರಮುನಿಪೋತ್ತಂಸಂ**

ಶಾಸನದಲ್ಲಿ ಬಳಕೆಯಾಗಿರುವ ಸಂಸ್ಕೃತ ಕನ್ನಡಗಳ ಸಂಯೋಗವನ್ನು ಮತ್ತು ಪ್ರಭುತ್ವವನ್ನು ಗಮನಿಸಿದರೆ ಈತನು ಖಂಡಿತ ಸಂಸ್ಕೃತ ಕನ್ನಡಗಳಲ್ಲಿ ಉದ್ದಾಮವಾದ ಕವಿತ್ವದ ಸಿದ್ದಿಯನ್ನು ಪಡೆದಿದ್ದಿರಬಹುದು ಎನಿಸುತ್ತದೆ. ಉದಾಹರಣೆಗೆ :

**ಕರವಾಳೋನ್ಮುಖಚಣ್ಣವಜ್ರಹತಿಯಂ ಬಿಳ್ದನ್ಯಮತ್ತೇಭಭೂ**
**ವರದಿಂದುಂಣ್ಮಿದ ರಕ್ತವಾಹಿನಿಯುಮಂ ಕಣ್ಣಿಯ್ದಿ ಭೂತಬ್ರಜಂ**
**ತ್ವರಿತಂ ಮಣ್ಣದ ತೆಪ್ಪದಿಂ ಶಿರದಲಾಂಬುಬದ್ಧದಿಂ ದಾಟು ಭೀ**
**ಕರವಾಗಿಟ್ಟುದು ಬಿಟ್ಟಿದೇವನಿರೇದತ್ಯುಗ್ರಾಜಿರಂಗಾಂಗಣಂ**

ಈ ಪದ್ಯದ ಸೊಗಸುಗಾರಿಕೆಯು ಅವನೊಬ್ಬ ಪ್ರತಿಭಾವಂತನಾದ ಕವಿ ಎಂಬುದಕ್ಕೆ ಸಾಕ್ಷಿಯಾಗಿದೆ.ಆದರೆ ಇದಕ್ಕೆ ಪುಷ್ಟಿಯೊದಗಿಸುವ ಬೇರೆ ಆಧಾರಗಳು ಸದ್ಯಕ್ಕೆ ಲಭ್ಯವಿಲ್ಲ. ಇಷ್ಟೇ ಅಲ್ಲದೆ ದೇವಭದ್ರಮುನಿ ಕೃತ ಇದೇ ಶಾಸನವು ಸಂಸ್ಕೃತದ ಛಂದಸ್ಸಿಗನಾದ ಜಯಕೀರ್ತಿಯ ಕಾಲನಿರ್ಧಾರಕ್ಕೂ ಸಹಾಯಕವಾಗಿದೆ. ಜಯಕೀರ್ತಿಗೆ ಚಾಂದ್ರಾಯಣದೇವ ಎಂಬ ಹೆಸರೂ ಇದ್ದಿರುವುದನ್ನು ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ. ಈ ಹೆಗ್ಗೆರೆಯ ಶಾಸನದಲ್ಲಿ ಗೋವಿದೇವನಿಗೆ ಚಾಂದ್ರಾಯಣದೇವನು ಗುರುವಾಗಿದ್ದನೆಂಬ ವಿಚಾರವು ಉಲ್ಲೇಖಗೊಂಡಿದೆ. ಈ ಶಾಸನದ ಕಾಲ ಕ್ರಿ.ಶ 1149. ಜಯಕೀರ್ತಿಯ ಛಂದೋನುಶಾಸನದ ರಚನೆಯ ಕಾಲ ಕ್ರಿ.ಶ 1135 ಎಂದು ಸುನಿಶ್ಚಿತವಾಗಿದೆ. ಹೀಗಾಗಿ 1149ರಲ್ಲಿ ಸಾಮಂತ ಗೋವಿದೇವನಿಂದ ಜಯಕೀರ್ತಿಯು (ಚಾಂದ್ರಯಣದೇವ)ಪಾದಪೂಜೆಗೊಂಡನೆಂಬುದು ಪ್ರಕೃತ ಶಾಸನದಿಂದ ಸುಸ್ಪಷ್ಟವಾಗುತ್ತದೆ. ಹಾಗಾಗಿ 11ನೆಯ ಶತಮಾನದ ತುತ್ತತುದಿ ಮತ್ತು 12ನೆಯ ಶತಮಾನದ

ಪೂರ್ವಾರ್ಧದಲ್ಲಿ ಎಂದರೆ ಕ್ರಿ.ಶ. 1100ರ ಎಡಬಲದಲ್ಲಿ ಆತ ಬಾಳಿಬದುಕಿದನೆಂದಬುದು ಖಚಿತವಾಗುತ್ತದೆ. ಈ ಶಾಸನದಲ್ಲಿರುವ "ನಲಿದುಲಿದಟ್ಟಿಕೊಂಡು ಕವಿತಪ್ಪ ವಿರೋಧಿ ಬಳಕ್ಕೆ ಭೀತಿಯಿಂ" ಎಂಬ ಪದ್ಯವು ಚಂಪಕಮಾಲೆವೃತ್ತದಲ್ಲಿದ್ದು ಇದನ್ನು ದೇವಭದ್ರಮುನಿಯು ಇದನ್ನು ಚಿತ್ರಲತೆ ಎಂದು ಕರೆದಿರುವನು. ಛಂದಸ್ಸಿನ ಚರಿತ್ರೆಯಲ್ಲಿ ಜಯಕೀರ್ತಿಯ ವಿನಃ ಬೇರಾವ ಛಂದಶ್ಶಾಸ್ತ್ರಜ್ಞನೂ ಚಂಪಕಮಾಲೆಯನ್ನು ಚಿತ್ರಲತೆ ಎಂದು ಕರೆದಿಲ್ಲ. ಆದ್ದರಿಂದ ದೇವಭದ್ರಮುನಿಯು ಜಯಕೀರ್ತಿಯನ್ನು ಬಲ್ಲವನಾಗಿದ್ದು ಅವನ ಛಂದೋನುಶಾಸನವನ್ನು ಅನುಸರಿಸಿರಬೇಕು. ಹೀಗಾಗಿ ಈ ಸಾಮಂತ ಗೋವಿದೇವನ ಶಾಸನವು ಬಹುದೃಷ್ಠಿಯಿಂದ ಮುಖ್ಯವಾದುದು ಆಗಿದೆ.

**4.3.3.3 : ರಾಮೇದೇವ:** ಇವನು ಹೊನ್ನಾಳಿಯ 50ನೆಯ ಶಾಸನವನ್ನು ರಚಿಸಿರುವನು. ಇದರಲ್ಲಿ ಮಹಾದೇವದಂಡನಾಯಕನು ಸಿದ್ಧೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತಹ ವಿಚಾರವಿದೆ. [105]

**ಪರಿಧಾವನ್ಮತ್ಸ್ಯ ಪುಚ್ಛಾಹತಮಕುರಕರಾಸ್ಫಾಳನಾಭೀಳನಕ್ರ**

**ಸ್ಫುರಿತೋದ್ಯಚ್ಚಿಂಶುಮಾರಕ್ರಮಣಸಮುದಿತೋಚ್ಚಂಡವಾತಾಭಿಘಾತೋ**

**ದ್ದುರವೀಚೀಶೀಕರೌಘಸ್ಥಗಿತನಿಖಿಳದಿಙ್ಮಂಡಲಂ ರಂಜಿಕುಂ ಭಾ**

**ಸುರಜಂಬೂದ್ವೀಪಮಂ ಸುತ್ತಿಱಿದಧರಾಭೋಗಭದ್ರಂಸಮುದ್ರಂ**

ಇದರಲ್ಲಿನ ಇನ್ನು ಹಲವುಪದ್ಯಭಾಗಗಳನ್ನು ಲಕ್ಷಿಸಿದರೆ ಇವನು ಒಬ್ಬ ಸಮರ್ಥ ಕವಿಯೆಂದು ತಿಳಿಯಬಹುದು.

**4.3.3.4 : ಮಾಳೆಯ :** "ಕವಿರಾಜರ ಪಂಡಿತ ಮಾಳೆಯನ ಕವಿತೆ" ಎಂದು ಶಿಕಾರಿಪುರದ 105ನೆಯ ಶಾಸನದಲ್ಲಿ ಉಕ್ತವಾಗಿದೆ. ಈ ಶಾಸನದಲ್ಲಿ ಎರಗದಂಡನಾಥನು ದಕ್ಷಿಣ ಕೇದಾರೇಶ್ವರ ದೇವರಿಗೆ ದತ್ತಿಯನ್ನು ನೀಡಿದ ವಿಚಾರವಿದೆ. [106]

**4.3.3.5 : ಹರಿಹರಸೂರಿ :** ಈತನು ಅರಸಿಯಕೆರೆಯ 118ನೆಯ ಶಾಸನವನ್ನು ಬರೆದಿದ್ದಾನೆ. "ಹರಿಹರಸೂರಿ ಸೀಗುರಿಯ ಕಾಮನ ತಮ್ಮನುಮೇಶದತ್ತವಾ ಗ್ವಿರಚಿಸಿದಂ ತ್ರಿವಿಕ್ರಮಕವೀಶ್ವರನೂರ್ಜಿತವಾಣಿ ತಿರ್ದಿ ತಾಂ ಬರೆದಂ" ಎಂಬ ಸಾಲುಗಳ ಮೂಲಕ ಹರಿಹರಸೂರಿಯು[107] ಸೀಗುರಿಯ ಕಾಮನ ತಮ್ಮನೆಂದೂ ತಿಳಿದುಬರುತ್ತದೆ; ಇವನ ಕೃತಿಯನ್ನು ತ್ರಿವಿಕ್ರಮಪಂಡಿತನು ತಿದ್ದಿದನೆಂದು ಹೇಳಿರುವುದು ಅತಿಶಯವಾಗಿದೆ ; ಈ ಶಾಸನದಲ್ಲಿ ವೀರಬಲ್ಲಾಳನ ದಂಡನಾಯಕನಾದ ಮಾಚಿದಂಡನಾಥನು ಮಲ್ಲಿಕಾರ್ಜುನ ಮಧುಸೂದನ ದೇವರುಗಳಿಗೆ ದತ್ತಿಯನ್ನು ಬಿಟ್ಟಿದ್ದಾನೆ.

**ಕರಚಕ್ರಂ ಮುರವಿದ್ವಷಂಗೆ ಬಳವಿದ್ವಿಷ್ಟಂಗೆ ವಜ್ರಂ ಭಯಂ**

**ಕರಭಾಳಪ್ರಬಳೇಕ್ಷಣಂ ಪುರಹರಂಗೌರ್ವಂಗೆ ಕಾಯ್ಪುಗ್ರಕೇ**

**ಸರಿಗುಚ್ಚಂಡನಖಂ ಪ್ರಧಾನಮದುವೋಲ್ ಬಲ್ಲಾಳಭೂಪಂಗಿಳಾ**

**ಭರಣಂ ದ್ರೋಹರಘರಟ್ಟ ಮಾಚಣನೆ ನಚ್ಚಿಂದುಂ ಜಯಕ್ರೀಡೆಯೊಳ್**

**4.3.3.6. ಚಿದಾನಂದ ಕವಿ –**

**ಧರೆಪೊಗಟಿ ಚಿದಾನಂದಂ**

**ವಿರಚಿಸಿದಂ ಸತ್ಕವೀಶ್ವರಂ ಶಾಸನಮಂ**

**ಪರಮಪ್ರಕಾಶ ಯೋಗೀ**

**ಶ್ವರತನಯಂ ಬ್ರಹ್ಮವಿದ್ಯೆಗಾಸ್ಪದರೂಪಂ**

ಇವನು ಪರಮಪ್ರಕಾಶಯೋಗೀಶ್ವರನ ಮಗನು. ಬ್ರಹ್ಮವಿದ್ಯಾವೇತ್ತನೆಂದೂ ಸತ್ಕವೀಶ್ವರನೆಂದೂ ಈ ಪದ್ಯದಿಂದ ತಿಳಿಯುತ್ತದೆ. ಈತನು [108] ಮಂಡ್ಯದ 121(ಹೊಯ್ಸಳ 2ನೆಯ ನಾರಸಿಂಹನ ಆಳಿಕೆಯ ಕ್ರಿ.ಶ. 1234ರಕಾಲದ್ದು), 122(ಹೊಯ್ಸಳ ಸೋಮೇಶ್ವರನ ಆಳಿಕೆಯ ಕ್ರಿ.ಶ 1237ರಕಾಲದ್ದು) ಶಾಸನಗಳನ್ನು ರಚಿಸಿದ್ದಾನೆ. ಇವುಗಳಲ್ಲಿ ಈ ಇಬ್ಬರು ಅರಸರಲ್ಲಿ ಮಹಾ ಪ್ರಧಾನನಾಗಿದ್ದ ಅಡ್ಡಾಯದ ಹರಿಹರದಂಡನಾಯಕನು ಬಸಿರಾಳಿನಲ್ಲಿ ಮಲ್ಲಿಕಾರ್ಜುನದೇವಸ್ಥಾನವನ್ನು ಕಟ್ಟಿಸಿ ದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ದೇಗುಲವು ತನ್ನ ಚಿತ್ರ ಕೆಲಸದಿಂದ ಶೋಭಾಯಮಾನವಾಗಿ ರಮಣಿಯವಾಗಿರುವ ವಿಚಾರ ಈ ಶಾಸನದಿಂದ ತಿಳಿಯುತ್ತದೆ. ಅಡ್ಡಾಯದದ ಹರಿಹರದಂಡನಾಯಕ–

**ಚರಿತಂ ಗಂಗಾನದೀಸಂಗಮಸಹಚರಮಾಸ್ಯೇಂದು ಸತ್ಯಾಮೃತಶ್ರೀ**

**ಭರಿತಂ ಲಕ್ಷ್ಮೀವಿಳಾಸಂ ದ್ವಿಜಗುರುಬುಧಗೋತ್ರಾದಿಸದ್ದಾನದೀಕ್ಷಂ**

**ಗುರುಚಿತ್ತಂ ಪಾರ್ವತೀವಲ್ಲಭಪದಕಮಳಧ್ಯಾನಸಂಧಾನಸಾರಂ**

**ನರಸಿಂಹೋರ್ವಿಶನಡ್ಡಾಯದದ ಪರಿಹರಂ ಲೋಕದೊಳ್ ತಾನೆ ಧನ್ಯಂ**

**ಕಡುಪಿಂ ಮುತ್ತಿದ ವೀರಸೇವುಣರ ಸೇನ್ಯಾನೀಕಮಂ ಪೊಕ್ಕು ಮೆ**

**ಯ್ದಡೆ ಕೊಂದಿಕ್ಕಿದನೊಕ್ಕಲಿಕ್ಕಿ ತುಟಿದಂ ಬೆನ್ನಟ್ಟಿದಂ ಮೆಟ್ಟಿದಂ**

**ಪಿಡಿದಂ ಸಾಲೆ ತುರುಂಗಮಂ ಹರಿಹರಂ ತನ್ನೊಂದೆ ಜಾತ್ಯಶ್ವದಿಂ**

**ಗಡ ವಿಶ್ವಾವನಿ ಮೆಚ್ಚೆ ಮಂತ್ರಿತಿಲಕಂ ವಇದ್ವಿಷ್ಟವಿದ್ರಾವಣಂ**

**4.3.4 : ಹೊಯ್ಸಳ ಮಹಾಮಂಡಳೇಶ್ವರರ ಪೋಷಣೆಯಲ್ಲಿ ಶಾಸನ ಸಾಹಿತ್ಯ ಸಂವರ್ಧನೆ :**

ಆಳುತ್ತಿರುವ ರಾಜನ ಅವನ ವಂಶಾವಳಿಯ ವರ್ಣನೆ, ತಿಥಿವಾರ ನಕ್ಷತ್ರಗಳು, ದಾನಕೊಟ್ಟವನ ವಿವರ, ದಾನ ಪಡೆದವನ ವಿವರ, ದಾನದ ಉದ್ದೇಶ ಮತ್ತು ಅದರ ಸಂಪೂರ್ಣ ವಿವರ ಮುಂತಾದವುಗಳನ್ನು ಶಾಸನಕರ್ತನು ಅಡಕಗೊಳಿಸಿ ಹೇಳಬೇಕಾಗಿದ್ದರೂ ಈ ಒಂದು ಚೌಕಟ್ಟಿನಲ್ಲಿಯೇ ತನ್ನ ಪ್ರತಿಭಾ ಸ್ಪರ್ಶದಿಂದ, ಬೌದ್ಧಿಕ ಕುಶಲತೆಯಿಂದ ವೈವಿಧ್ಯಮಯವಾದ ಸಾಹಿತ್ಯಕ ಸೌಂದರ್ಯವನ್ನು ಲೇಪಿಸಿ ಶಾಸನಕವಿಯೂ ಆಗಿಬಿಟ್ಟಿರುತ್ತಾನೆ. ರಾಜಾಜ್ಞೆಯ ಪರಿಧಿಯ ಒಳಗಡೆ ಸಾಹಿತ್ಯಾಂಶವೂ ಸೇರ್ಪಡೆಯಾಗಲು ಶಾಸನಕವಿಯ ಔಚಿತ್ಯಪೂರ್ಣತೆಯು ಮುಖ್ಯವಾಗಿ ಕೆಲಸಮಾಡಿರುತ್ತದೆ.

ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದರೆ, ಶಾಸನಗಳು ತಮ್ಮ ಕಾಲದ ಅಥವಾ ತಮ್ಮ ಹಿಂದಿನ ಸಾಹಿತ್ಯಿಕ ಪ್ರಭಾವಗಳನ್ನು ಗುರುತಿಸಲು ಮೂಲಸಾಮಗ್ರಿಗಳಾಗುತ್ತವೆ. ಪಂಪನಂತಹ ಸತ್ವಶಾಲಿ ಕವಿಯ ಪ್ರಭಾವವನ್ನು ಮತ್ತೊಂದು ಸಾಹಿತ್ಯ ಕೃತಿಯನ್ನು ಗಮನಿಸುವಷ್ಟೆ ಮುಖ್ಯ ಈ ಶಾಸನಗಳಲ್ಲಿಯೂ ಗಮನಿಸಬಹುದಾಗಿದೆ. ಕಲಬುರ್ಗಿಯವರು ಹೇಳುವಂತೆ ಶಾಸನಗಳು **"ಕವಿಸಾಹಿತ್ಯಾಧ್ಯಯನಕ್ಕೆ ಪೂರಕವಾಗಿವೆ"**.

ಶಾಸನಕಾರರು ಶಾಸನಗಳಲ್ಲಿ ಒಂದು ರೀತಿಯ ನಿಯಮದಿಂದ ಕೂಡಿದ ಪದ್ಧತಿಯನ್ನು ಕಾಲಾನುಕ್ರಮದಲ್ಲಿ ಕಂಡುಕೊಂಡಿದ್ದರೂ ಈ ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ಒಂದು ವಿಶಿಷ್ಟ ಸ್ವರೂಪವು ಮನೋಜ್ಞವಾದ ರೀತಿಯಲ್ಲಿ ವಿಕಾಸಗೊಂಡು ವಿಸ್ತೃತ ಪ್ರಮಾಣದಲ್ಲಿ ಕಂಗೊಳಿಸುತ್ತದೆ. ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ನಿಯಮವನ್ನು ಹೀಗೆ ಗುರುತಿಸಬಹುದಾಗಿದೆ. ಆರಂಭದಲ್ಲಿ ದೇವತಾಸ್ತುತಿ, ರಾಜನ, ಅವನ ವಂಶಾವಳಿಯ ಪ್ರಶಸ್ತಿ, ದೇಶ ಅಥವಾ ಪ್ರದೇಶದ ಪ್ರಶಂಸೆ ಅಥವಾ ಊರಿನ ವರ್ಣನೆ, ದಾನಿಯ ಮತ್ತು (ಕೆಲವೊಮ್ಮೆ) ಅವನ ವಂಶೀಯರ ವಿವರಣೆ, ದಾನದ ವಿವರಣೆ, ಶಾಪಾಶಯ. ಈ ನಿಯಮ ಕನ್ನಡ ಶಾಸನಗಳ ಮಟ್ಟಿಗೆ ಸಾರ್ವತ್ರಿಕವಾದರೂ ಅವುಗಳಲ್ಲಿನ ವರ್ಣನಾಭಾಗದಲ್ಲಿ ಅನುಪಮವಾದ ಕಾವ್ಯಾತ್ಮಕತೆಯು ಇಣುಕಿರುವುದನ್ನು ಹೊಯ್ಸಳ ಮಹಾಮಂಡಳೇಶ್ವರರ ಹಲವು ಶಾಸನಗಳಲ್ಲಿ ಕಾಣಬಹುದಾಗಿದೆ. ಇವರ ಶಾಸನಗಳು ಚಂಪೂ ಶೈಲಿಯಲ್ಲಿ ರಚಿತವಾಗಿರುವುದನ್ನು ಗಮನಿಸಬೇಕು. ಇದಕ್ಕೆ ಮುಖ್ಯ ಕಾರಣವೆಂದರೆ, ಕವಿಗೆ ಶಾಸನವನ್ನು ರಚಿಸುವಾಗ ಬರುವ ನಿಯಮಗಳ ಬಂಧನ, ಶಾಸನದಲ್ಲಿ ಕೆಲವು ವಿಷಯಗಳನ್ನು ಖಚಿತವಾಗಿ, ವಿವರವಾಗಿ, ಸಂಗ್ರಹವಾಗಿ, ಹೇಳಬೇಕಾಗುತ್ತದೆ. ಅಂತಹ ಕಡೆಗಳಲ್ಲಿ ಶಾಸನಕಾರರು ಸಾಮಾನ್ಯವಾಗಿ ಗದ್ಯವನ್ನು ಬಳಸುತ್ತಾರೆ ಉಳಿದ ಕಡೆಗಳಲ್ಲಿ ಅಂದರೆ ಸ್ತುತಿಪರವಾದ ಕಡೆಗಳಲ್ಲಿ ವರ್ಣನೆಗಳು ಬರುವೆಡೆಗಳಲ್ಲಿ ಸಂಸ್ಕೃತ ವೃತ್ತಗಳನ್ನು ಬಳಸುತ್ತಾ ಚಂಪೂ ಶೈಲಿಯನ್ನು ಶಾಸನಗಳಲ್ಲಿಯೂ ಸಾಧಿಸಿಕೊಂಡರಿವುದು ಪ್ರಸ್ತುತ ಪ್ರಬಂಧದಲ್ಲಿ ಬಹಳ ಮುಖ್ಯವಾಗಿ ಗಮನಿಸಿರುವ ಸಂಗತಿಯಾಗಿದೆ.

**4.3.4.1 : ಹೊಯ್ಸಳ ಮಹಾಮಂಡಳೇಶ್ವರರ ಶಾಸನ ಸಾಹಿತ್ಯ : ಪ್ರಭಾವ ಮತ್ತು ಪ್ರೇರಣೆಗಳು :**

ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳನ್ನು ಸಾಹಿತ್ಯದೃಷ್ಟಿಯಿಂದ ಗಮನಿಸುವಾಗ ಎರಡು ಹಂತಗಳಲ್ಲಿ ಗುರುತಿಸಿ ವಿವೇಚಿಸಿದ್ದೇನೆ–

- ❖ ಶಾಸನ ಪಾಠದ ಮೇಲೆ ಕಾವ್ಯಲಕ್ಷಣಗಳ ಪ್ರಭಾವ
- ❖ ಶಾಸನ ಕವಿಗಳ ಮೇಲೆ ಸಮಕಾಲೀನ ಅಥವಾ ಹಿಂದಿನ ಕವಿಗಳ ಪ್ರಭಾವ

ಮೊದಲನೆಯದಾಗಿ, ಶಾಸನ ಪಾಠದ ಮೇಲೆ ಕಾವ್ಯ ಲಕ್ಷಣಗಳ ಪ್ರಭಾವವನ್ನು ನಾನು ಅಧ್ಯಯನಮಾಡುವ ಸಂದರ್ಭದಲ್ಲಿ ಗೋಚರಿಸಿದ ಸಂಗತಿಗಳೆಂದರೆ, ಶಾಸನಕಾರರು ಕಾವ್ಯ ಪರಿಣತರೂ ಉತ್ತಮ ಕಾವ್ಯಲಕ್ಷಣಗಳನ್ನು ಅರಿತಿದ್ದವರೂ ಆಗಿದ್ದ ಕಾರಣ ಶಾಸನದ ಪಠ್ಯದ ಅಂಗವು ಸುಂದರಾಂಗವಾಗುವಂತೆ ಪ್ರದರ್ಶಿಸಿದ್ದಾರೆ. ದಾನ ಕೊಟ್ಟವನ ಹಾಗೂ ಪಡೆದವನ ವಿವರಗಳನ್ನು ನೀಡುವಾಗ ಜಂಬೂದ್ವೀಪದಿಂದ ಆರಂಭಿಸಿ ಸಮುದ್ರ, ಭರತವರ್ಷ ಅಲ್ಲಿನ ಹಿಮಾಚಲ, ಕುಂತಲದೇಶ ಅದರಲ್ಲಿನ ಪ್ರಾಂತಗಳು ಪ್ರಾಂತ್ಯದ ಗ್ರಾಮ, ಆ ಗ್ರಾಮದ ವಿಶಿಷ್ಟತೆ ಧರ್ಮ ದೃಷ್ಟಿಯಿಂದ ಅದರ ಕೋಟೆ ಕಂದಕ ಮುಂತಾದವುಗಳ ವರ್ಣನೆಯನ್ನು ತರಲು ಆರಂಭಿಸಿದರು. ಇದಾದನಂತರ ಆ ದೇಶದ ರಾಜರ, ಜನರ, ಊರಿನ, ಆ ಊರಿನ ಕೆಲವು ಬೀದಿಗಳ ವರ್ಣನೆಗಳು ಬರುತ್ತವೆ. ಊರಿನ ವರ್ಣನೆ ಮಾಡುವಾಗ ಆ ಕಾಲದ ಜಾತಿ ವ್ಯವಸ್ಥೆಯಲ್ಲಿಯೂ ಪ್ರತ್ಯೇಕವಾಗಿ ಬೇರೆ ಬೇರೆ ಜಾತಿಗಳವರ ಕೇರಿಗಳ ವರ್ಣನೆಗಳು ಬರುತ್ತವೆ.

ಶಾಸನಗಳಲ್ಲಿ ನಮಗೆ ದೇವದಾಸಿಯರ ಬಗ್ಗೆ ಪ್ರಾಸಂಗಿಕವಾಗಿ ಉಲ್ಲೇಖಗಳು ಕಂಡುಬರುತ್ತವೆ. ಈ ವರ್ಣನೆ ಶಾಸನದ ಅಂಗವಾಗಿ ಬರದೆ ಅದರ ಸಾಹಿತ್ಯಿಕ ಅಂಶವಾಗಿ ಬಂದಿದೆ. ಈ ರೀತಿಯ ವರ್ಣನೆಯ ಪ್ರವೇಶಕ್ಕೆ ಮುಖ್ಯಕಾರಣ ಎಂದರೆ ಶಾಸನಕಾರರ ಮುಂದಿದ್ದ ಕಾವ್ಯಲಕ್ಷಣಗಳು. ಅಷ್ಟಾದಶ ವರ್ಣನೆಗಳಲ್ಲಿ ಕೆಲವನಾದರೂ ತರುವ ಪ್ರಯತ್ನಮಾಡುವುದರ ಮೂಲಕ ಶಾಸನಕಾರರು ತಮ್ಮ ಶಾಸನಗಳನ್ನು ಶಾಸನಗಬ್ಬವನ್ನಾಗಿ ಮಾಡಲು ಹೊರಟರು. ನನಗೆ ತೋರುವ ಮಟ್ಟಿಗೆ ಶಾಸ್ತ್ರಕಾರರಾದ ಗುರುಗಳಿಂದ ವಿದ್ಯಾಭ್ಯಾಸವನ್ನು ಪಡೆದು ತಾವು ಕವಿಗಳಾಗಲು ಒಂದು ಅಭ್ಯಾಸದಂತೆ ಅವರು ಶಾಸನಗಳನ್ನು ರಚಿಸಿದ್ದಿರಬೇಕು. ಹಾಗಾಗಿಯೇ ಬಂಧವನ್ನು ತೊರೆಯದ ಹಾಗೆ ಈ ಕವಿಗಳು ಕನ್ನಡ ಕಾವ್ಯಲಕ್ಷಣಗಳನ್ನು ಶಾಸನಗಳ ಮೂಲಕ ಕಟ್ಟುವ ಅಭ್ಯಾಸಿಗಳಾಗಿದ್ದರು. ಎಂದೆನಿಸುತ್ತದೆ.

ಎರಡನೆಯದಾಗಿ, ಶಾಸನ ಕವಿಗಳ ಮೇಲೆ ಸಮಕಾಲೀನ ಅಥವಾ ಹಿಂದಿನ ಕವಿಗಳ ಪ್ರಭಾವದ ಬಗ್ಗೆ ವಿವೇಚಿಸಹೊರಟಾಗ ಹಳಗನ್ನಡ ಕಾವ್ಯ ಸರಕುಗಳೆಂದು ಕರೆಯಬಹುದಾದ ಅಪ್ರತಿಮ ಪ್ರತಾಪ, ಕದನ ತ್ರಿಣೇತ್ರ, ಮನುಜ ಮಹೇಶ್ವರ, ವಾರಣಹಂಸ ಮಯೂರಯಾನೆ, ಕೋಕತಾಳಫಳ ಹೇಮಘಟಸ್ತನಿ ಈ ತೆರನಾದ ಹಲವು ಪದಪ್ರಯೋಗಗಳು ಆ ಸಂಬಂಧದ ಭಾವ ಕಲ್ಪನೆಗಳೂ ಪ್ರಾಚೀನ ಹಳಗನ್ನಡ ಕಾವ್ಯಗಳಲ್ಲಿ ಬಳಕೆಯಾಗಿ ರುವುದನ್ನು ಶಾಸನಕವಿಗಳು ಅನಾಮತ್ತಾಗಿ ಎತ್ತಿಕೊಂಡಿರುವುದನನ್ನು ಹೊಯ್ಸಳ ಮಹಾಮಂಡಳೇಶ್ವರರ ಪೋಷಣೆಯಲ್ಲಿ ರಚಿತವಾದ ಹಲವಾರು ಶಾಸನಗಳಲ್ಲಿ ಕಾಣಬಹುದು.

ಇನ್ನೊಂದು ವಿಶೇಷ ಅಂಶವೆಂದರೆ ನನಗೆ ಪಂಪನ ಪ್ರಭಾವವನ್ನು ದಟ್ಟವಾಗಿ ಬಹುಪಾಲು ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ಗೋಚರಿಸಿರುವುದು. ಇದಕ್ಕೆ ಕಾರಣ ಬಹುಶಃ ಕವಿಗಳಾಗಬೇಕಾದವರು ಅನಿವಾರ್ಯವಾಗಿ ಪಂಪನನ್ನು ಪ್ರಧಾನಕೇಂದ್ರವಾಗಿ ಅಧ್ಯಯನ ಮಾಡಲೇಬೇಕಿತ್ತು ಎಂದೆನಿಸುತ್ತದೆ. ಇವು ಎರಡು ತೆರನಾಗಿವೆ:

- ಪಂಪ ತನ್ನ ಕಾವ್ಯದಲ್ಲಿ ನಿರೂಪಿಸಿದ ಮೌಲ್ಯಗಳ ಪ್ರಸಾರ
- ಪಂಪನ ಕೃತಿಗಳ ಪ್ರಸ್ತುತಿಯ ಪ್ರಭಾವ

ಮೊದಲನೆಯ ವರ್ಗದ ಬಗ್ಗೆ ಎಂ. ಚಿದಾನಂದಮೂರ್ತಿ ಹೇಳುವಂತೆ "ಪಂಪನ ಸಮಕಾಲೀನ ಮೌಲ್ಯಗಳೆಲ್ಲವೂ ಪಂಪನ ನಂತರದ ಶಾಸನಗಳಲ್ಲಿ ಕಂಡುಬರುತ್ತವೆ. ಇವು ಹೆಚ್ಚು ಸಂಖ್ಯೆಯಲ್ಲಿ ಕಂಡುಬರುವುದು ಮಾತ್ರವಲ್ಲದೆ ಭಾರತದ ಪಾತ್ರಗಳೊಡನೆ ಹೆಚ್ಚು ಕಡಿಮೆ ಪಂಪ ಸೇರಿಸುವಂತೆ ಸೇರಿಸಿ ಹೇಳುತ್ತಾರೆ. ಪಂಪಪೂರ್ವದಲ್ಲಿ ಒಂದೆರಡು ಕಡೆ ಅರ್ಜುನನ ಶೌರ್ಯವನ್ನು ಕರ್ಣನ ತ್ಯಾಗವನ್ನೂ ಪ್ರಶಂಸಿದ್ದರೂ ಪಂಪನ ನಂತರ ಶಾಸನಗಳಲ್ಲಿ ಎಲ್ಲಿ ನೋಡಿದರೂ ಭೀಮಾರ್ಜುನರ ಸಾಹಸ ಕೀರ್ತಿಗಳೂ ಭೀಷ್ಮರ ವೀರ ಮತ್ತು ಶೌಚ ಕರ್ಣನ ನನ್ನಿ ಮತ್ತು ಚಾಗ ಕೌರವನ ಚಲ ಮತ್ತು ಅಭಿಮಾನಿಗಳ ಪ್ರಸಕ್ತಿಯೇ ಪ್ರಸಕ್ತಿ . ಪಂಪ ತನ್ನ ಕಾಲದ ಮೌಲ್ಯಗಳಿಗೆ ಕಾವ್ಯದಲ್ಲಿ ಸ್ಥಾನವನ್ನು ಕೊಟ್ಟು ಅವುಗಳಿಗೆ ಬೆಲೆಯನ್ನೂ ಘನತ್ವವನ್ನೂ ನಿರ್ದಿಷ್ಟತೆಯನ್ನೂ ತಂದುಕೊಟ್ಟಿದ್ದರ ಫಲವಾಗಿ ಅವುಗಳ ಪ್ರಸಾರವಾಗಲು ಪಂಪನ ಕೃತಿಯೊಂದೇ ಕಾರಣ, ಅಂತಹ ಮೌಲ್ಯಗಳನ್ನು ಜನರ ಕಣ್ಣಿಗೆ ಬೀಳುವಂತೆ ಬಾಳಿದ ಆ ಕಾಲದ ಮಹನೀಯರು ಕಾರಣವಲ್ಲ. ಪಂಪನ ಕೃತಿಯೂ ಕಾರಣ, ಬಹುಮಟ್ಟಿಗೆ ಕಾರಣ ಎಂದರ್ಥವಷ್ಟೆ." [109] ಹೀಗೆ ಪಂಪನಲ್ಲಿ ಪ್ರತಿಪಾದಿತವಾಗಿರುವ ಮೌಲ್ಯಗಳು ಅವನ ಕಾವ್ಯದಲ್ಲಿನ ಪದ್ಯಗಳ ಪಡಿಯಚ್ಚುಗಳಾಗಿ ಬಂದಿವೆ. ಹೊಯ್ಸಳ ಎರಡನೇ ಬಲ್ಲಾಳನ ಸಾಮಂತನಾದ ಮಂಡಲಸ್ವಾಮಿಯನ್ನು ಹೊಗಳುವ ಕ್ರಿ.ಶ. 1199ರ ನಾಗಮಂಗಲ ಶಾಸನದಲ್ಲಿ ಇದನ್ನು ಬಹಳ ಸೊಗಸಾಗಿ ನೋಡಬಹುದು.

**ರವಿ ಸುತನೊಂದು ನನ್ನಿ ಪವಮಾನ ತನೂಜನದೊಂದು ಬಲ್ಪುವಾ**
**ಸವಸುತನೊಂದು ವಿಕ್ರಮದನುಕ್ರಮಮಶ್ವಿನಿದೇವಪುತ್ರರೊಂ**
**ದವಿಚಳಮಪ್ಪ ಶಸ್ತ್ರದ ನೆಗಟ್ಟೆಯ ಶಾಸ್ತ್ರದ ಪೆರ್ಮೆ ತನ್ನೊಳೊ**
**ಪ್ಪುವುದೆನೆ ಪಾಂಡವ ಪ್ರತಿಮನಲ್ಲನೆ ಮಂಡಳಸ್ವಾಮಿಲೋಕದೊಳ್** [110]

ಎಂಬುದಾಗಿ ಹೊಗಳುತ್ತದೆ. ಎರಡನೆಯ ವರ್ಗವಾದ ಪಂಪನ ಕೃತಿಗಳ ಪ್ರಭಾವವನ್ನು ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ಹುಡುಕಹೊರಟಾಗ ನನಗೆ ಈ ಕೆಳಗಿನ ಪದ್ಯ ಬಹಳ ಮುಖ್ಯವೆನಿಸುತ್ತದೆ. ಪಂಪನು ಕರ್ಣನ ವ್ಯಕ್ತಿತ್ವವನ್ನು ಕೊಂಡಾಡುವಾಗಿನ ಪ್ರಸಿದ್ದ ಪದ್ಯವೊಂದು ಹೀಗಿದೆ –

"ನೆನೆಯದಿರಣ್ಣ ಭಾರತದೊಳಿಂ ಪೆಱರಾನುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ" ಎಂಬ ಪ್ರಸಿದ್ದವಾದ ಪಂಪನ ಪದ್ಯದ ಪೂರ್ಣ ಛಾಯೆಯನ್ನು ಒಳಗೊಂಡ ಶಾಸನ ಪದ್ಯವೊಂದು

ಹೀಗಿದೆ. ಈ ಪದ್ಯದಲ್ಲಿ ಕರ್ಣನನ್ನು ಹೊಗಳುವಂತೆಯೇ ಮಹಾಸಾಮಂತನಾದ ಚಟ್ಟನನ್ನು ಶಾಸನಕವಿ ಮನದುಂಬಿ ಹಾಡಿ ಹೊಗಳಿರುವ ಪರಿ ಇಂತಿದೆ– **ಚಟ್ಟನೆ ದಾನಿ ಚಟ್ಟನೆ ಮಹಾಗುಣಿ ಚಟ್ಟನೆ ಶೌರ್ಯಸಾಗರಂ**

**ಚಟ್ಟನೆ ಭೋಗಿ ಚಟ್ಟನೆ ಪಸಾಯಿತನೆಲ್ಲಿಯುವೆಂತು ನೋಳ್ಪಡಂ**

**ಚಟ್ಟನೆ ಶೌಚಿಚಟ್ಟನೆ ದೃಢಬ್ರತಿ ಚಟ್ಟನೆ ಸತ್ಯಸಂಗತಂ**

**ಚಟ್ಟನೆ ಮಾನಿ ಚಟ್ಟನೆ ಮಹಾಪ್ರಭು ಚಟ್ಟನೆ ಮಂದರಸ್ಥಿರಂ** [111]

**4.3.4.2 : ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳ ರಚನಾಶೈಲಿ :**

ನಮ್ಮ ವಿದ್ವಾಂಸರು ಕವಿಗಳನ್ನು, ಶಾಸನಕವಿಗಳನ್ನು ಭೇದದಿಂದಲೇ ನೋಡಿದ್ದಾರೆ. ಕವಿತ್ವವೆನ್ನುವುದು ಎಲ್ಲಿದ್ದರೂ ಶ್ರೇಷ್ಠವೇ. ಅದು ಕಾವ್ಯದಲ್ಲಿರಲೀ, ಶಾಸನಗಳಲ್ಲಿಯೇ ಇರಲೀ ಎರಡೂ ಒಂದೇ. ಶಾಸನಗಳನ್ನು ಬರೆದವರು ತಮ್ಮನ್ನು ಕವಿಗಳೆಂದು ಕರೆದುಕೊಂಡಿದ್ದಾರೆ ; ಶಾಸನಗಳನ್ನು ಕ್ರಮಬದ್ಧವಾಗಿ ಬರೆಯುವ ಸಾರ್ವಭೌಮರೆಂದೂ ಕರೆದುಕೊಂಡಿದ್ದಾರೆ. ಶಾಸನ ಪದ್ಧತಿಯಲ್ಲಿ ಬರುವುದು ಒಂದು ರೀತಿಯಲ್ಲಿ ವಿಶಿಷ್ಟಗುಣವೆ. ಶಾಸನಕಾರರಿಗೆ ಮುಖ್ಯವಾಗಿ ಗಮನದಲ್ಲಿರಬೇಕಾದುದು ಎಂದರೆ **'ಶಾಸನಮಾಗಿರೆ ಪೇಳ್ವುದು'** ಅದನ್ನು **'ಬರೆವುದಂತೆ ಶಾಸನಮಾಗಲ್'** ಈ ಎರಡೂ ನಿಯಮಗಳಿಗೆ ಬಾಧಕವಾಗದಂತೆ ಶಾಸನ ರಚಿತವಾಗಬೇಕು. ಇದಕ್ಕೆ ಇನ್ನೊಂದು ಮಹತ್ವದ ಉದಾಹರಣೆಯೊಂದನ್ನು ನೀಡಬಹುದು. ಪುಣಿಸಮಯ್ಯ ದಂಡನಾಯಕನು ವಿಷ್ಣುವರ್ಧನನ ಸೇನಾಪತಿಯೂ ಸಂಧಿವಿಗ್ರಹಿಯೂ ಆಗಿದ್ದನು. ಮಹಾಮಾತ್ಯ ಕುಲೋದ್ಭವನಾಗಿದ್ದ ಪುಣಿಸಮಯ್ಯನಿಗೆ ಮಂತ್ರಿಪದವಿಯು ವಂಶಪಾರಂಪರ್ಯವಾಗಿ ಬಂದಿರುವಂತೆ ತೋರುತ್ತದೆ. ಇವನ ವಂಶದವರು ಜೈನಮತಾನುಯಾಯಿಗಳಾಗಿದ್ದರು. ಇವರಲ್ಲಿ ಮೊದಲಿಗನು ಚಾಮಚಮೂಪ. ಆತನ ಮಗ ಪುಣಿಸಚಮೂಪ. ಇವನನ್ನು "ಸಕಳಶಾಸನ ವಾಚಕಚಕ್ರವರ್ತಿ" ಎಂದು ವರ್ಣಿಸಲಾಗಿದೆ. [112] ಜೊತೆಗೆ ಮಿತ್ರಕುಳಾಬ್ಧಿವರ್ಧನ ಸುಧಾಂಶು, ವಿರೋಧಿ ಬಳಾಂತಕಂ ಎಂತಲೂ ಕೀರ್ತಿತನಾಗಿದ್ದಾನೆ.

ಇನ್ನು ಕೆಲವು ಶಾಸನಕಾರರು ತಮ್ಮ ಶಾಸನಗಳ ಶೈಲಿಯ ಬಗ್ಗೆ ಹೇಳಿಕೊಂಡಿದ್ದಾರೆ. ಕ್ರಿ. ಶ 1161ರ ತುಮಕೂರು ಜಿಲ್ಲೆಯ ಹೆಗ್ಗೆರೆಯ ಶಾಸನದಲ್ಲಿ [113] ಆ ಶಾಸನವನ್ನು ಬರೆದವನು ತನ್ನ ಶಾಸನದ ರೀತಿ ಮತ್ತು ಶೈಲಿಯ ಬಗ್ಗೆ ಹೀಗೆ ಹೇಳಿಕೊಂಡಿದ್ದಾನೆ ;

**ಉಚಿತಪದಾಳಂಕಾರಂ**

**ಪ್ರಚುರ ರಸಂ ನೆಗಳಲಿನ್ತು ಜಿನಶಾಸನಮಂ**

**ರಚಿಯಿಸಿದಂ ಹರ ಹಾಸರಚಿತಯಶಂ**

**ದೇವಭದ್ರ ಮುನಿಪೋತ್ತಂಸಂ**

ದಾವಣಗೆರೆ ತಾಲೂಕಿನ ಈಶ್ವರಾಚಾರ್ಯನೆಂಬ ಶಾಸನಕಾರ [114] ತನ್ನ ಶಾಸನರಚನಾ ಸಂಕ್ಷಿಪ್ತ ವೈಖರಿಯನ್ನು ತಾನೇ ಪ್ರಶಂಸಿಸಿಕೊಂಡಿದ್ದಾನೆ.

**ಆ ಚಂದ್ರಾರ್ಕಂ ಸಲುವಿನ**
**ಮಾಚರಿಸಿದನತುಳ ಧರ್ಮಮಂ ತಿಪ್ಪರಸಂ**
**ವಾಚಸ್ಪತಿಗರಿದೆನೆ ಸಂ**
**ಕೋಚದೆ ಶಾಸನಮನೀಶ್ವರಾಚಾರ್ಯಂ ಪೇಳ್ದಂ**

ಈಶ್ವರಾಚಾರ್ಯನ ಸಂಗ್ರಹಶಕ್ತಿ ಬ್ರಹ್ಮನಿಗೂ ಅಚ್ಚರಿಯನ್ನೂ ಮೂಡಿಸಿತ್ತಂತೆ. ಮತ್ತೆ ಕೆಲವರು ತಮ್ಮ ಶಾಸನಗಳನ್ನು ಶಾಸನಗಬ್ಬಗಳೆಂದೂ ತಮ್ಮನ್ನು ಕವಿಗಳೆಂದೂ ಕರೆದುಕೊಂಡಿದ್ದಾರೆ. ಶಾಸನಕವಿಗಳು ಹೀಗೆ ತಮ್ಮನ್ನು ತಾವು ಕರೆದುಕೊಳ್ಳಬೇಕಾದರೆ ಅದಕ್ಕೆ ರಾಜಮಾನ್ಯತೆಯೂ ಸಿಗಬೇಕಾಗಿತ್ತು. ಕಾವ್ಯವನ್ನು ಯಾರು ಬೇಕಾದರೂ ತಮ್ಮಿಷ್ಟದಂತೆ ಬರೆಯುವ ಸ್ವಾತಂತ್ರ್ಯವು ಇದ್ದಿತಾದರೂ ರಾಜಾಧಿಕಾರಿಗಳಿಂದ ಪೋಷಿಸಲ್ಪಡುತ್ತಿದ್ದ ಶಾಸನಗಳಲ್ಲಿ ಏನಾದರೂ ಅಧಿಕೃತವಾಗಿ ತಮ್ಮ ವೈಯಕ್ತಿಕ ಸಂಗತಿಗಳನ್ನು ಬರೆದುಕೊಳ್ಳಬೇಕಾದರೆ ಅಂತಹ ಶಾಸನರ ರಚನೆಕಾರರಿಗೆ ಮಹಾಮಂಡಲೇಶ್ವರರ ಬೆಂಬಲವೂ ಇತ್ತೆಂದು ಕಂಡುಬರುತ್ತದೆ.

**ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳ ಗದ್ಯಶೈಲಿ** : ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ಅವರ ಬಿರುದಾವಳಿಗಳನ್ನು ತಿಳಿಸುವ ಗದ್ಯಶೈಲಿ ಗಂಭೀರ ನಿನದದಿಂದ ಕೂಡಿದೆ. ಈ ಬಿರುದಾವಳಿಗಳು ಮಾಲೆ ಮಾಲೆಯಾಗಿ, ಲಯಬದ್ದ ನುಡಿಗಟ್ಟುಗಳಿಂದ ಕೂಡಿ ಅದ್ಭುತ ಸ್ತುತಿಮಾಲಿಕೆಯಾಗಿ ಆಹ್ಲಾದಮಯವಾಗಿವೆ. ಉದಾ: ಮಹಾಪ್ರಧಾನ ದಂಡನಾಯಕ ಗಂಗರಾಜನ ಈ ಬಿರುದಾವಳಿಗಳನ್ನು ಗಮನಿಸಬಹುದು –

**“ಸಮಧಿಗತಪಂಚಮಹಾಶಬ್ದ ಮಹಾಸಾಮನ್ತಾದಿಪತಿ ಮಹಾಪ್ರಚಂಡದಂಡನಾಯಕಂ ವೈರಿಭಯದಾಯಕಂ ಗೋತ್ರಪವಿತ್ರಂ ಬುಧಜನಮಿತ್ರ ಶ್ರೀಜೈನಧರ್ಮಾಮೃತಾಂಬುಧಿ ಪ್ರವರ್ಧನಸುದಾಕರಂ ಸಮ್ಯಕ್ತ್ವರತ್ನಾಕರ ಆಹಾರಾಭಯಭೈಶಜ್ಯಶಾಸ್ತ್ರದಾನವಿನೋದ ಭವ್ಯಜನಹೃದಯಪ್ರಮೋದ ವಿಷ್ಣುವರ್ಧನ ಭೂಪಾಳ ಹೊಯ್ಸಳ ಮಹಾರಾಜ ರಾಜ್ಯಾಭಿಷೇಕ ಪೂರ್ಣ್ನಕುಂಭ ಧರ್ಮ್ಮಹರ್ಮ್ಯೋದ್ಧರಣ ಮೂಳಸ್ತಂಭ ನುಡಿದನ್ತೆಗಣ್ಡಪಗೆವರಂ ಬೆಂಕೊಂಡಂ ದ್ರೋಹಘರಟ್ಟ”** [115]

ಇಂತಹ ಎಡೆಗಳಲ್ಲಿ ಸಂಸ್ಕೃತಮಯತೆ ಭಾಷೆಯಲ್ಲಿ ಒಳಹರಿದಿರುವುದನ್ನು ಲಕ್ಷಿಸಬಹುದು. ಇದಕ್ಕೆ ಕಾರಣ ಶಾಸನಕವಿ ತನ್ನ ಪೋಷಕನನ್ನು ಒಪ್ಪಿಸಬೇಕಿರುತ್ತದೆ. ಅವನಿಗೆ ಸಂತೋಷವನ್ನು ಒದಗಿಸಬೇಕಾಗುತ್ತದೆ. ತನ್ಮೂಲಕ ತನ್ನ ಬರಹಕ್ಕೂ ಮಾನ್ಯತೆಯನ್ನು ಹೊಂದಬೇಕಾಗಿರುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ತನ್ನನ್ನು ಇದೇ ದಾರಿಯಲ್ಲಿ ಮುಂದುವರೆಯಲು ಮಾರ್ಗದರ್ಶನ ಮಾಡಿ ಅವಕಾಶವನ್ನು

ಕಲ್ಪಿಸಿಕೊಟ್ಟ ಪ್ರಭುತ್ವವನ್ನು ಕವಿಯಾದವನು ಅಭಿಮಾನದಿಂದಲೇ ನೆನೆಯುವುದು ಆ ಕಾಲದ ಸಂಸ್ಕೃತಿ ಸಂವರ್ಧನೆಯ ಬಹುಮುಖ್ಯವಾದ ಸಂಗತಿಯಾಗಿದೆ.

ಕೆಲವೊಮ್ಮೆ ಒಂದೇ ಶಾಸನವನ್ನು ಇಬ್ಬರು ಮೂವರು ಸೇರಿ ಬರೆಯುತ್ತಿದ್ದ ವಿಷಯ ನಮಗೆ ತಿಳಿದುಬರುತ್ತದೆ. ಅಂತಹ ಕಡೆಗಳಲ್ಲಿ ತನ್ನ ಶಾಸನವನ್ನು ತಿದ್ದಿದವರ, ತನ್ನೊಡನೆ ಕೂಡಿ ಶಾಸನವನ್ನು ರಚಿಯಿಸಿದವರ ಹೆಸರನ್ನು ಶಾಸನಕಾರರು ಹೇಳುತ್ತಾರೆ. ಇದಕ್ಕೆ ಕಾರಣ ನನಗೆ ತೋರುವ ಮಟ್ಟಿಗೆ ಶಾಸನಗಳನ್ನು ರಚಿಸುವುದೇ ಒಂದು ಕಲೆ; ಅದು ರಾಜಕಲೆಯಾಗಿತ್ತು. ಹಾಗಾಗಿ ತುರ್ತಿಗೆ ಅನುಸಾರವಾಗಿ ಶಾಸನಲೇಖಕರನ್ನು ಈ ಮಹಾಮಂಡಳೇಶ್ವರರು ನೇಮಿಸಿಕೊಳ್ಳುತ್ತಿದ್ದರೆಂದು ತೋರುತ್ತದೆ. ಕಾದಂಬ ಕಾಮಭೂಪಾಲನು ಕಯ್ಯಾಡಿವಳ್ಳಿಯನ್ನು ರಾಮೇಶ್ವರನ ದೇವಾಲಯಕ್ಕೆ ದತ್ತಿಯನ್ನು ಕೊಟ್ಟ ವಿಷಯ ಹೇಳುವ ಕುಪ್ಪೆಗುಡ್ಡೆಯ ಸುದೀರ್ಘ ಶಾಸನವನ್ನು ಒದವಿದ ಕುಪ್ಪಟೂರ ಸುಜನಾಗ್ರಣಿ ಚಿಮ್ಮರ ವಾಸುದೇವನುಂ ಸದಗುಣಯುಕ್ತನಪ್ಪಕವಿ ದೊಡ್ಡ ಬಾಚಿಯನುಂ ಸಮಸ್ತ . . . ಕೇಶವನೆಂಬೀ ಮರ್ಯಾದೆಯೊಳೆ ಕೂಡಿ ಪೇಳ್ದರಿದು ಸಲ್ಗು ಶಶಾಂಕ ದನೇಶರುಳ್ಳಿನಂ –ಎಂಬುದಾಗಿ ಮೂವರು ಕೂಡಿ ಹೇಳಿದ ಶಾಸನವನ್ನು ತಿಳಿಸುತ್ತದೆ.

ಶಾಸನ ಬರೆಯುವವರು ಪದ್ಯವೇ ಇರಲೀ ಗದ್ಯವೇ ಇರಲೀ ರಾಜಕೀಯ ಸಂಗತಿಯೊಂದನ್ನು ಹೇಳುತ್ತಿದ್ದರೂ ಅದು ಏಕಕಾಲಕ್ಕೆ ಸಾಮಾಜಿಕವಾದ, ಆರ್ಥಿಕವಾದ, ನೈತಿಕವಾದ, ಮುಂತಾದ ವಿಷಯಗಳನ್ನು ತಿಳಿಸಬೇಕಿದ್ದರೆ ಅವರು ನಿಜವಾಗಿಯೂ ಸಾಹಿತ್ಯಾತ್ಮಕವಾದ ಬಂಧದಲ್ಲಿ ಗಟ್ಟಿಗರಿರಬೇಕಿತ್ತು. ಅದಕ್ಕೆ ಬೇಕಾದ ಪೋಷಣೆಯನ್ನು ಮಾಡಲು ಮಹಾಮಂಡಳೇಶ್ವರರು ಸಿದ್ಧರಿದ್ದರು. ಅನೇಕ ಮಹಾಮಂಡಳೇಶ್ವರರು ತಮ್ಮ ಕಾಲದ ಎಲ್ಲಾ ಬಹಳ ಮುಖ್ಯವಾದ ಲೇಖಕರನ್ನು ಗುರುತಿಸಿ ಅವರಿಗೆ ಶಾಸನಗಳನ್ನು ಬರೆಯುವುದಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟು ಅವರ ಕುಟುಂಬ ನಿರ್ವಹಣೆಯನ್ನು ತಾವೇ ಮಾಡಿರುವ ಉದಾಹರಣೆಗಳು ಶಾಸನಗಳಲ್ಲಿ ದೊರೆಯುತ್ತವೆ. ದತ್ತಿಗಳನ್ನು ನೀಡುವ ಸಂದರ್ಭದಲ್ಲಿ ಕವಿಗಳಿಗಿರುವಂತೆ ಶಾಸನಕವಿಗಳಿಗೂ ಕೆಲವು ಭಾಗಗಳನ್ನು ಕೊಡುತ್ತಿದ್ದರು. ಇದರರ್ಥ ಈ ಶಾಸನಕವಿಗಳು ತಮ್ಮ ರಚನೆಗಳ ಕಡೆಗೆ ಗಮನವನ್ನು ನೀಡಿದರೆ ಸಾಕಿತ್ತು, ತಮ್ಮ ಕುಟುಂಬ ನಿರ್ವಹಣೆ ಮತ್ತು ತಮ್ಮ ಮಕ್ಕಳ ವಿದ್ಯಾಭ್ಯಾಸದ ಖರ್ಚನ್ನು ರಾಜತ್ವವೇ ನೋಡಿಕೊಳ್ಳುತ್ತಿತ್ತು. ಈ ವಿಷಯದಲ್ಲಿ ಸ್ಥಳೀಯ ಸಾಹಿತ್ಯ ನಿರ್ಮಾಣದಲ್ಲಿ ಮಹಾಮಂಡಳೇಶ್ವರರ ಪಾತ್ರ ಹಿರಿದಾದುದಾಗಿದೆ.

**4.3.4.3 : ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿನ ವ್ಯಕ್ತಿಚಿತ್ರಗಳು :**

ಶಾಸನಗಳನ್ನು ಸಾಹಿತ್ಯದ ದೃಷ್ಟಿಯಿಂದ ಗಮನಿಸಿದಾಗ ಅವುಗಳಲ್ಲಿ ಕಂಡುಬರುವ ಒಂದು ವಿಶಿಷ್ಟ ಗುಣವೆಂದರೆ ಶಾಸನಕಾರರು ನೀಡುವ ವ್ಯಕ್ತಿಚಿತ್ರಗಳು. ಕೆಲವೇ ಪದ್ಯಗಳಲ್ಲಿ ವ್ಯಕ್ತಿಗುಣಗಳು, ಆಡಳಿತ ದಕ್ಷತೆ, ಅವನ ಧಾರ್ಮಿಕ ಜೀವನ, ಮುಂತಾದ ಎಲ್ಲ ವಿವರಗಳುನ್ನು ಒಂದೆರಡು ಪದ್ಯಗಳ ಚೌಕಟ್ಟಿನಲ್ಲಿ

ಪರಿಣಾಮಕಾರಿಯಾಗಿ ನೀಡುತ್ತಾರೆ. ಉದಾಹರಣೆಗೆ ಅಡ್ಡಾಯದದ ಹರಿಹರದಂಡನಾಯಕನ [116] ವಂಶಕ್ರಮದಲ್ಲಿ ಮೊದಲ ತಲೆಯೆಂದರೆ, ಚಿಕ್ಕಹಡೆವಳ್ಳ. ಇವನಿಗೆ ನಾಗಲೆ ಮಡದಿ. ಇವರಿಗೆ ಮಗನಾಗಿ ಮಲ್ಲೆಯನಾಯಕ ಜನಿಸಿದುದನ್ನು ಶಾಸನಪದ್ಯವು ಸೊಗಸಾಗಿ ವರ್ಣಿಸುತ್ತದೆ.

**ಭೋಗನಿಧಿಪತಿಹಿತಬ್ರತೆ**

**ನಾಗಲೆಗಂ ಚಿಕ್ಕಹಡೆವಳಂಗಂ ಧಂರ್ಮ್ಮೋ**

**ದ್ಯೋಗಂ ಮಲ್ಲೆಯನಾಯಕ**

**ನಾ ಗೌರೀಶರ್ಗ್ಗೆ ಶಣ್ಮುಖನವೋಲೊಗೆದಂ**

ಶಾಸನಕವಿ ಹೊಯ್ಸಳರ ಇಮ್ಮಡಿ ಬಲ್ಲಾಳನ ಕಾಲದಲ್ಲಿನ ಆದಿಗೌಂಡನೆಂಬುವನ ಚಿತ್ರಣವನ್ನು ಹೀಗೆ ಕೊಡುತ್ತಾನೆ **ಹಸಿದರ ಮೊಗಮಂ ನೋಡಂ**

**ಹಸಿವುಂ ನೀರಟ್ಕೆಯಿಲ್ಲಂ ಕಂಡೊಡೆ ತನ್ನಂ**

**ವಸುಮತಿಗೆನಿಪ ಮಹಾಪ್ರಭು**

**ವಸುಧೆಯೊಳಾರ್ ಕಾಣ್ಬರಾದಿಗೌಂಡಂಗೆಣೆಯಂ**

**ಹಸುಗೂಸುಗಳ್ಗೆ ಹಾಲಂ**

**ಹಸಿದರ್ಗ್ಗನ್ನಮುಮನ್ಕಟಿಂದಂ ನಿಚ್ಚಂ**

**ಹಸಗಾಲದೊಳಂ ಸಲಿಸುವ**

**ಬೆಸನದಿನಾರಾದಿಗೌಡನಂ ಪೋಲ್ವನ್ನರ್**

**ಕೆಱಿಯಂ ಕಟ್ಟಿಸುತ್ತಿರ್ಪ್ಪುದು**

**ಮಱವಂಟಿಗೆಯಿಡಿಸುತಿರ್ಪದೆಸೆ ವಾರವೆಯಂ**

**ನೆಱಿಮಾಡಿಸುವುದುಮಲ್ಲದೆ**

**ಪೆಱತೊಂದಿಲ್ಲಾದಿಗೌಂಡನುಜ್ಜುಗಮೆಂದುಂ** [117]

ಕನ್ನಡ ಸಾಹಿತ್ಯದಲ್ಲಿ ವಿರಳವಾಗಿರುವ ವ್ಯಕ್ತಿಚಿತ್ರಗಳು ಶಾಸನ ಸಾಹಿತ್ಯದಲ್ಲಿ ವಿಪುಲವಾಗಿ ದೊರೆಯುತ್ತದೆ. ಕನ್ನಡ ಶಾಸನಕಾವ್ಯಗಳನ್ನು ತೆಗೆದುಕೊಂಡರೆ ಪ್ರತಿಯೊಂದ ಶಾಸನವೂ ಸಹ ಅನೇಕ ವ್ಯಕ್ತಿಗಳನ್ನು ಹೀಗೆ ವರ್ಣಿಸುತ್ತವೆ. ಹೀಗೆ ವರ್ಣಿಸುತ್ತಲೇ ತಮ್ಮ ಕಾಲದ ಅನೇಕ ಮಹತ್ವದ ಸಂಗತಿಗಳನ್ನು ಕಟ್ಟಿಕೊಡುತ್ತವೆ. ಹೀಗೆ ಕಟ್ಟಿಕೊಡುವಾಗ ಹುಟ್ಟುವ ಎಲ್ಲಾ ಲೀಲೆಗಳು ಸ್ಥಳೀಯತೆಗೆ ವಿಶೇಷವಾದ ಒತ್ತನ್ನು ನೀಡುತ್ತದೆ. ಹೀಗೆ "ಶಾಸನಕಾವ್ಯಗಳು ಐತಿಹಾಸಿಕವಾದರೂ ಲಿಖಿತಕಾವ್ಯಗಳಾಗಿವೆ. ನಮ್ಮ ನಾಡು, ನಮ್ಮ

ನದಿಗಳು, ನಮ್ಮ ಊರು, ನಮ್ಮ ಗುಡಿಗಳು, ನಮ್ಮ ದೇವರು, ನಮ್ಮ ರಾಜರು, ನಮ್ಮ ಜನಗಳನ್ನು ಸುಂದರವಾಗಿ ಅಭಿಮಾನ ಪೂರ್ವಕವಾಗಿ ಆದರೂ ವಾಸ್ತವವಾಗಿ ವರ್ಣಿಸುವುದರಿಂದ ಇವು ನಾಡಗಬ್ಬಗಳಾಗಿವೆ”.

**4.3.4.4 : ವಿಶಿಷ್ಟವಾದ ವರ್ಣನೆಗಳು :**

ಸಾಹಿತ್ಯದ ಅಧಿಕೃತ ರಾಯಭಾರಿಗಳೇನೋ ಎನ್ನುವಂತೆ ಕಾಣುವ ವರ್ಣನೆಗಳು ಶಾಸನಗಳಲ್ಲಿ ವಿಶೇಷವಾಗಿ ಕಿರಿದರೊಳ್ ಹಿರಿದರ್ಥಂ ಎಂಬಂತೆ ಪ್ರಯೋಗಗೊಂಡಿವೆ. ಅಂತೆಯೇ ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ಕೂಡ ಅನುಪಮವಾದ ವರ್ಣನೆಗಳು ಹೇರಳವಾಗಿವೆ. ಪುರಾಣ ಪ್ರಪಂಚದ ವ್ಯಕ್ತಿಗಳಾದ ರಾಮ, ಶಿವ, ಅರ್ಜುನ, ವಿಷ್ಣು, ಆದಿಶೇಷರೊಂದಿಗೆ ರತಿ, ಸೀತೆ,ಗೌರಿ, ಅರುಂಧತಿಯರೇ ಮುಂತಾದವರು ಕವಿಕಲ್ಪನೆಯ ಮೂಲಸಾಮಗ್ರಿಯಾಗಿ ಇಲ್ಲಿ ಬಂದಿದ್ದಾರೆ. ಅದರಲ್ಲೂ ಮುಖ್ಯವಾಗಿ ವ್ಯಕ್ತಿವರ್ಣನೆ, ಸ್ಥಳ ವರ್ಣನೆ, ಯುದ್ಧವರ್ಣನೆಗಳು ರೋಚಕವಾಗಿವೆ. ಇವುಗಳ ವಿವರ ಈ ಮುಂದಿನಂತಿದೆ; ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿರುವ ವ್ಯಕ್ತಿವರ್ಣನೆಗಳಲ್ಲಿ ಪುರುಷ ವರ್ಣನೆ, ಸ್ತ್ರೀ ವರ್ಣನೆಗಳೆಂದು ವಿಭಾಗಿಸಿಕೊಂಡು ವಿವರಿಸಬಹುದಾಗಿದೆ.

**ಪುರುಷ ವರ್ಣನೆ:** ಈ ಪುರುಷ ವರ್ಣನೆಯ ಭಾಗದಲ್ಲಿ ಮಹಾಮಂಡಳೇಶ್ವರರನ್ನು ಮತ್ತು ಅವರ ಅಧೀನತೆಯಲ್ಲಿ ರಚಿತವದ ಸಾಹಿತ್ಯದಲ್ಲಿ ಪ್ರತಿಪಾದಿತವಾದ ಶಾಸನ ವರ್ಣನೆಗಳನ್ನು ಗಮನಿಸಬಹುದು. ಏಚರಸನ ಮೊದಲ ಮಗ ಮುದ್ದನು[118] ತನ್ನ ದಾನಗುಣಸಂಪನ್ನತೆಯಿಂದ ನಿರ್ಮಲ ವ್ಯಕ್ತಿತ್ವದಿಂದ ಲೋಕಪ್ರಸಿದ್ಧನಾಗಿದ್ದನು. ಇದನ್ನು ಶಾಸನೋಕ್ತ ಸಾಲಿನಲ್ಲಿಯೇ ಹೇಳುವುದಾದರೆ–

**ಕಡು ಚಲ್ವನಪ್ಪ ದೇಗುಲ**
**ಬಡವರ ಬಂಧುಗಳ್ಗೆ ಕುಡುವ ದಾನೋನ್ನತಿಯಿಂ**
**ಮೃಡನ ಸುತ ಕರ್ಣ್ನ ಧರ್ಮಜ**
**ಪಡಿಯೆನಲುಂ ಮುದ್ದಂ ಲೋಕದೊಳಗೆ ಪ್ರಸಿದ್ಧ**

ಸಾಮಂತ ಮಾಚನು ಸಾಮಂತ ಭೀಮ ಮತ್ತು ಚಟ್ಟಿಯಕ್ಕ ದಂಪತಿಗಳ ಹಿರಿಯಪುತ್ರ. (ಕ್ರಿ.ಶ. 1170ರ ಮರುವಂಜಿಯ ಶಾಸನವು [119] ಮಾಚನನ್ನು ಹೀಗೆ ವರ್ಣಿಸಿದೆ.

**ಅತಿಬಳವೀರಮಂಡಳಿಕ ವಿಷ್ಣುನಿಲಪಾಳನೀ ಬೀಡನೋಳೇಕರಂ**
**ಸಿತಗರಗಂಡನೆಂಬ ಬಿರುದುನ್ನತಿಯಂ ಸಲೆ ತಾಳ್ದಿದಾತನಂ**
**ಕ್ಷಿತಿತಳ ಮೆಚ್ಚಿಕೊಂಡು ಬಿರುದಂ ಪಡೆದಾಹವರಂಗ ಮಾಚನಂ**
**ತತಿಸಯವಿಕ್ರಮಕ್ರಮಮನೇವೊಗೆಳ್ವೆಂ ಕಲಿಕಾಲಕರ್ಣನಂ**

ಈ ಶಾಸನದಲ್ಲಿ ಮಾಚನಿಗೆ ಮಾಳವ್ವೆ ಎಂಬ ಪತ್ನಿಯೂ, ಮಲ್ಲನೆಂಬ ಮಗನೂ ಇದ್ದುದು ಉಕ್ತವಾಗಿದೆ. ಈ ಮೂರು ಪದ್ಯಗಳು ಮಲ್ಲನು ಹೆಸರಿನಲ್ಲಿ ಮಾತ್ರವಲ್ಲ ಯುದ್ಧರಂಗದಲ್ಲಿಯೂ ಮಲ್ಲನೇ ಸರಿ ಎಂಬುದನ್ನು ಸುಸ್ಪಷ್ಟಗೊಳಿಸುತ್ತವೆ.

**"ಪುಟ್ಟಲೊಡಂ ಚಾತುರ್ಯ್ಯಂ**
**ಕಟ್ಟಾಯಂ ಶೌರ್ಯ್ಯಬಾಪ್ಪುಮೊಳ್ಪಂ ಸೊಬಗುಂ**
**ನೆಟ್ಟವಿನ್ತಿವು ತನ್ನೊಡ**
**ವುಟ್ಟಿದುವೆನೆ ನೆಗರ್ದ್ದ ಮಲ್ಲನ ಸುಹ್ರಿತ್ತೆಲಂ"**

ಜನನಾರಭ್ಯ ಅವನಲ್ಲಿ ಚಾತುರ್ಯ. ಪರಾಕ್ರಮ, ಶೌರ್ಯ, ವೀರತ್ವ, ಸೊಬಗುಗಳು ಆವಿರ್ಭವಿಸಿ ಅವನು ಹೆಸರಿಗೆ ಅನ್ವರ್ಥಕವಾಗಿದ್ದನು. ಮಹಾಪ್ರಧಾನ ಬಲ್ಲಯ್ಯದಂಡನಾಯಕರ ಮೈದುನ ಬಂಮಯ್ಯನು ಮೇಳೇಶ್ವರ ದೇವರ ನಂದಾದೀವಿಗೆಗೆ 2 ಗದ್ಯಾಣಗಳನ್ನು ಅವನ ಬಲುಮನುಷ್ಯ ಮಲ್ಲನು 5ಪಣಗಳನ್ನು ದಾನವಿತ್ತನು. ಈ ಸಂದರ್ಭದಲ್ಲಿ ಎಕ್ಕಟಿಗರ ಹಿರಿಮೆಯ ವರ್ಣನೆ ಹೀಗೆ ಮೂಡಿಬಂದಿದೆ.

**ಪತಿಯುಂ ದರೆಯುಂ ಗುಣಮಂ**
**ಸತತಂ ವರ್ಣ್ನಿಪ್ಪತೆರದೆ ನಡವೀಪ್ರಾಗಲ್**
**ಭ್ಯತೆಯಂಗರಕ್ಕವಡೆಯ ಧಿ**
**ಪತಿಯುಂನತಕಳುವ ಮಲ್ಲೆಯಂಗದು ಸಾಜಂ**

**ಧುರದೊಳಿದಿರ್ಚ್ಚಿದ ಪಗೆವರ**
**ನುರವಣೆಯಿಂ ಗೆಲ್ವ ತಕ್ಕು ರಿಪುಗಳ್ಕುಟಿಳೋ**
**ತ್ಕರಮಂ ನೆಗಳ್ ಚಿ ಪತಿಯಂ**
**ಗಕ್ಷೆಯಂ ಮಾಳ್ಪುದಂಗರಕ್ಕೆಗೆ ನಿಜಂ**

**ಉರವಣೆಸಿ ನೂಂಕಿ ಹೊಯ್ಸಳ**
**ಧರಣೀಶಂ ಮೆಚ್ಚೆ ಪಗೆವರಂಗೆಲ್ವದಟೀ**
**ಧರೆಯೊಳ್ಸಲೆ ಯೆಕ್ಕಟಿಗಂ**
**ಗರಕ್ಷಕರ್ನ್ನಾಲ್ಪದಿಂಬರೊಳ್ ಶೋಬಿಸುಗುಂ** [120]

ವ್ಯಕ್ತಿವರ್ಣನೆಯ ಸಂದರ್ಭದಲ್ಲಿಯೇ ಸರ್ವಸಂಗಪರಿತ್ಯಾಗಿಯಾದ ಮುನಿಯೊರ್ವನನ್ನು ಸಹ ಶಾಸನವು ಮನೋಜ್ಞವಾಗಿ ವರ್ಣನೆಮಾಡಿರುವುದನ್ನು ಗಮನಿಸಬಹುದು–

**ಧರೆಗೆಲ್ಲಂ ಕೀರ್ತ್ತಿ ಓಡಲ್ವರಕಲಿಸಿರವಿಂ ದೇಷಮಾಣಕ್ಯಮೀಯೂರರ್ಪ್ಪರಮಾತ್ಯಂ**

**ಲಿಂಗದೇವರ್ಚ್ಚಳಿಸಿದಡೆ ಪುನಃ ಸ್ರಿಷ್ಟಿಯಂ ಬೇಗ ಲೋಕೋತ್ತಮಾಗಲ್ಮಾಡಿದರ್ತ್ತಾಂ**

**ಗುರುಗಳುಮವರೀಯೂರ ಗಾಉಣ್ಡರಿರ್ವ್ವ ಬ್ರ್ವರದಿಂದಂ ಗೇತದೇವಾಲಯಮೆಸೆವಿನೆಗಂ**

**ಧರ್ಮರಾಶಿಬ್ರತೀಷಂ** [121]

**ಸ್ತ್ರೀ ವರ್ಣನೆ :** ಈ ಸ್ತ್ರೀ ವರ್ಣನೆಯ ಭಾಗದಲ್ಲಿ ಮಹಾಮಂಡಳೇಶ್ವರರನ್ನು ಮತ್ತು ಅವರ ಅಧೀನತೆಯಲ್ಲಿ ರಚಿತವಾದ ಸಾಹಿತ್ಯದಲ್ಲಿ ಪ್ರತಿಪಾದಿತವಾದ ಶಾಸನ ವರ್ಣನೆಗಳನ್ನು ಗಮನಿಸಬಹುದು. ಮಹಾಮಂಡಳೇಶ್ವರರ ಪತ್ನಿಯರು, ಪುತ್ರಿಯರು ಹಾಗೂ ಸಾಮಾನ್ಯ ಮಹಿಳೆಯರ ವರ್ಣನೆಗಳನ್ನು

ವಿಶೇಷವಾಗಿ ಗಮನಿಸಬಹುದು. ಚಟ್ಟ ಮತ್ತು ಚಂದವ್ವೆ ದಂಪತಿಗಳ ಈರ್ವರು ಕುವರಿಯರಲ್ಲಿ ಹಿರಿಯಳನ್ನು [122] ಶಾಸನಕವಿ ವರ್ಣಿಸಿದ ಪರಿಯಿಂತಿದೆ:

**ಪೊಳುನುಡಿ ಮತ್ತಕೋಕಿಳಮನೀಕ್ಷಣಮುತ್ಪಳಮಂ ವಿನೀಳಕುಂ**
**ತಳಚೆಲುವಪ್ಪ ತುಂಬಿಗಳ ಬಂಬಲುಮಂ ಯೆಸೆದಿಪ್ಪು ಕೇಸಭಾ**
**ರಂಸಲೆ ನವಿಲುಮಂ ನಡೆಗಳೊಳು ಪೊಳೆದೊಪ್ಪುವ ಹಂಸೆಯಂದ**
**ಮಂಚಂದಲೆದೇವಿಯಾತ್ಮಜೆ ಮಹಾಸತಿ ದೇಮಲೆಯೆಂತು ಪೋಲುತಳೋ**

ಕೋಗಿಲೆ ಇಂಪಾದ ದನಿಯಂತಹ ಮಾತು, ಕನ್ನೈದಿಲೆಯ ನೋಟದ ಸೌಂದರ್ಯ, ದುಂಬಿಗಳ ಗುಂಪಿನಂತಹ ಜಡೆಯ ಹೆಣಿಗೆ, ನವಿಲು ಗರಿಗಳ ಸಮೂಹದಂತಿರುವ ಕೇಶರಾಶಿ, ಹಂಸೆಯನ್ನು ಹೋಲುವಂತಹ ನಡಿಗೆಯಿಂದ ದೇಮಲೆಯು ಶೋಭಾಯಮಾನವಾಗಿದ್ದಳು. ಇನ್ನು ಈಕೆಯ ತಂಗಿ ಕಾಚವ್ವೆಯು [123] ಕುಲದ, ಚಲದ, ಬಳ್ವಿನ, ನೆಲಯಾಗಿ, ನೀತಿಯ ಮೂರ್ತಿಯಾಗಿ, ಕೀರ್ತಿಗೆ ಆಶ್ರಿತಳಾಗಿ, ಸೌಂದರ್ಯದಲ್ಲಿ ರತಿಯಾಗಿ, ನಾರಿಯರಲ್ಲಿ ರತ್ನಮಣಿ(ಶ್ರೇಷ್ಠ)ಯಾಗಿ ಪ್ರಸಿದ್ಧಳಾಗಿದ್ದಳು. ಚಟ್ಟಯ್ಯನ ಮಡದಿ ಶಾಂತಲೆಯ ವ್ಯಕ್ತಿತ್ವವನ್ನು ಗುಣಾತಿಶಯವನ್ನು ಶಾಸನಗಳು ಸೊಗಸಾಗಿ ಕಟ್ಟಿಕೊಟ್ಟಿವೆ:

**ನುಡಿದಡೆ ಮಂದರಾಚಳದಲಂ 'ಬುಜಭವಂ ಬರದಕ್ಕರಕ್ಕವಿಂ**
**ಮ್ಮಡಿ ನೆನಗೀವೆನೆಂದಡೆ ಭವಂ ಕುಡಲಿತ್ತ ಬರಕ್ಕದಂತು ನಾ**
**ಲ್ವಡಿ ಸರಣಾರ್ತ್ಥಿಗಂಜದಿರೀವೆಂದಡೆ ವಜ್ರದ ಕೋಟಿಗಂ ಪದಿ**
**ರ್ಮ್ಮಡಿಯೆನೆ ಶಾಂತೆ ಶಾಂತಲೆ ಜಸಂ ಬಡೆದಿರ್ದ್ದಳಳಾತಳಾಗ್ರದೊಳು** [124]

ಮಾತನಾಡುವಿಕೆಯಲ್ಲಿ ಮಂದರಪರ್ವತದಂತೆ ಗಂಭೀರ, ಬ್ರಹ್ಮನ ಬರವಣಿಗೆಗೂ ಇಮ್ಮಡಿ. ದಾನ ಮಾಡುವುದರಲ್ಲಿ ನಾಲ್ಕುಪಟ್ಟು ಕೊಡುಗೈದಾನಿ, ಶರಣು ಬಂದವರಿಗೆ ಆಶ್ರಯ ನೀಡುವಲ್ಲಿ ಹತ್ತುಪಟ್ಟು ಮಿಗಿಲಾದವಳು ಈ ಶಾಂತಲೆ.

**ತೆರೆನಳಿತೋಳಳಂಬುರುಹವಾನನವುದ್ಗತ ಕಂಬಂಕನ್ಧರಂ**
**ಸುರುಚಿರಸಪ್ರವಾಳ ವಧರಂ ದಷನದ್ಯುತಿ ಮೌಕ್ತಿಕೋತ್ಕರಂ**
**ಗುರುಕಚಭಾರನೀಳರತ್ನಂ ನಗೆವಾಃ ಕಣವಾಗೆ ಹೋಲ್ತಳೀ**
**ನಿರುಪಮಕಾನ್ತೆ ಸಾನ್ತಲೆ ಶುಧಾಂಶುಕಳಾಶ್ರಿತ ದುಗ್ಧವಾರ್ದ್ಧಿಯಂ** [125]

ನಿಡಿದಾದ ತೋಳುಗಳು, ಕಮಲದಂತಹ ಮುಖ, ನೀಳವೂ ತೇಜೋಮಯವೂ ಆದ ಕೊರಳು, ರಸಮಯವಾದ ಅರುಣರಾಗವನ್ನು ಹೋಲುವ ಅಧರ, ಮುತ್ತುಗಳ ರಾಶಿಯಂತ ಹಲ್ಲುಗಳು, ವಿಸ್ತಾರವಾದ ಕೇಶರಾಶಿ, ಸುಂದರವಾದ ನಗೆ ಒಟ್ಟಿನಲ್ಲಿ ಹಾಲಿನ ಸಾಗರವೆಂಬಂತೆ ಶುದ್ಧ ವ್ಯಕ್ತಿತ್ವವನ್ನು ಶಾಂತಲೆ ಹೊಂದಿದ್ದಳು.

**ಸ್ಥಳ ವರ್ಣನೆ** : ಈ ವಿಭಾಗದಲ್ಲಿ ನಾನು ಊರು,ದೇವಾಲಯ ಮತ್ತು ಕೆರೆಗಳು ವಿಶೇಷವಾಗಿ ವರ್ಣಿತವಾಗಿರುವುದನ್ನು ಉದಾಹರಿಸುತ್ತೇನೆ . ಚಂದವಾದ ಅರಸಿಯಕೆರೆಯನ್ನು ಅಂದವಾಗಿ ವರ್ಣಿಸಿರುವ ಪರಿ ಮನೋಜ್ಞವಾಗಿದೆ. ಉದಾಹರಣೆಗೆ

**"ಸಾರಂ ನೋಳ್ಪಗ್ಗೆ ಪೆಂಪುಳ್ಳರಸಿಯ ಕೆರೆಯೊಳ್ವಿಶ್ವವೇದಾಂಕ ವಿಪ್ರವ್ವೀರರ್ಕ್ಕಾ**
**ಯ್ವಾಳ್ಗಳಾಢ್ಯರ್ಪ್ವರೆದರ್ ಅಚಲ ವಾಕ್ಯರ್ತ್ತುರೀ ಯುವ್ವಿನುತಾಕಾರಂ ಕಾನ್ತಾಜನಂ**
**ಕಾರುಗಳಮದರಿಳಾಮಂಡನಂ ದೇಗುಳಂ ಗಂಭೀರೊದಾರಂ ತಟಾಕಂ ಫಳಭರಿತವನಂ**
**ಪೂತಪೂದೋಟವೆಂದುಂ"** [126]

**"ಪರಮೇಷ್ಠಿಪ್ರಖ್ಯ ಪ್ರಪ್ರತತಿಗಳಿನಿಳಾಪ್ರಖ್ಯ ಶೂದ್ರಾಳಿಯಿಂ ಕಿಂನರಕಾಂತಪ್ರಖ್ಯರ. . . . ಜರಿನಿನಜ ಪ್ರಖ್ಯಕೊಯ್ಲಾಳ್ಗಳಿಂ ಸಾಗರಮಂ ಪೋಲ್ವೀತಟಾಕಂಗಳಿನ್ ಅಮರಪುರೋದ್ಯಾನಮಂ ಪೋಲ್ತು ಶೋಭಾಕರ ಮಪ್ಪುದ್ಯಾನದಿಂದೀಯರಸಿಯಕೆರೆ ಶೋಭಾವಹಂ ಭೂಮಿಗೆಂದುಂ"** [127] ಅದೇ ರೀತಿ ಬಾಗಿಯೂರನ್ನು ವರ್ಣಿಸುವಾಗಿನ ಶಾಸನ ಕವಿಯೊರ್ವನ ಕಾವ್ಯಪ್ರಜ್ಞೆಯನ್ನು ಗುರುತಿಸಬಹುದು. ಉದಾ: "ಪೂತರಗಿರ್ದ್ದ ಮಾಮರನ ನೋಡೆ ಜನಂ ಸೊಗಯಿಪ್ಪುದೇಂ . . ಸ್ಥಳಗಳಿನೊಪ್ಪೆ ಪೆರ್ಗ್ಗೆರೆಯು ಕೋಕಿಳನಾದವು ಸುತ್ತಲೆತ್ತಲುಂ ಮೊರೆವಮದಾಳಿ ಪೂತ ನಿಡುಸಂಪಗೆ ಪಾದರಿಯೆತ್ತಸುತ್ತಲುಂ ಭಕ್ತಿ ವಿಶೇಷದಿಂದೆಸೆದು ತೋರ್ಪ್ಪುದು ಯೀಸಲೆ ಬಾಗಿಯೂರೊಳುಂ" [128] ಹರಿಹರದಂಡನಾಯಕನು ಕಟ್ಟಿಸಿದ ಮಲ್ಲಿಕಾರ್ಜುನ ದೇವಾಲಯದ ವರ್ಣನೆ ಹೀಗಿದೆ–

**ಮೊದಲಿಂದಂ ಕಲಶಂಬರಂ ಮೆಱೆವ ನಾನಾಚಿತ್ರಪತ್ರಂಗಳಿಂ**
**ಮುದಮಂ ಬೀಱುವ ಭಾರತಾದಿ ಕಥೆಯಿಂ ಮೆಯ್ವೆತ್ತ ಕೂಟಂಗಳಿಂ**
**ದಿದು ಪಾಂಚಾಳಿಕೆ ತಳ್ತಮೇರುಗಿರಿಯೋ ಪೇಟಿಕೆಂಬಿನಂ ವಿಭ್ರಮಾ**
**ಸ್ಪದಮಾಗಿರ್ಪುದು ಮಲ್ಲಿಕಾರ್ಜುನ . . . ದೇವಾಲಯ** [129]

**ಯುದ್ಧವರ್ಣನೆಗಳು :** ಕದಂಬ ಮಂಡಳಿಕ ತೈಲನ ಗರುಡನಾದ ಮಸಣುಗನು ಬಳೆಮೆರೆಯೆಂಬಲ್ಲಿ ಬೀಡುಬಿಟ್ಟಿದ್ದಾಗ ಅವನನ್ನು ಎದುರಿಸಿ, ಸೋಲಿಸಿ ಅವನ ಅಶ್ವಗಳನ್ನು ವಿಷ್ಣುವರ್ಧನನಿಗೆ ಒಪ್ಪಿಸಿದ ಚಟ್ಟನ ಪರಾಕ್ರಮ ಅತಿಶಯವಾದುದು. ರಿಪುಘರಟ್ಟನೆನಿಸಿದ ಚಟ್ಟನನ್ನು ಇನ್ನೆರಡು ಪದ್ಯಗಳು ಹೀಗೆ ವರ್ಣಿಸಿದೆ:

**ಮೀಱಿ ಕಡಂಗಿ ಹೊಱೇ ಮದವೇರಿ ಚಲಂ ತಲೆದೋರೆ ಬಿಲ್ಲನಾ**
**ರ್ದ್ದೇಱಿಸಿ ನೀವಿ ಜೀವೊಡೆದು ಸಜ್ಜರರಂಗದೊಳಾನ್ತು ಪಚ್ಚಳಂ**
**ದೋರಿದೆ ನಿನ್ದನ ಪ್ಪೊಡಿದನೊನ್ದನೆ ಕೇಳು ಜವನುಣ್ಣ**
**ಜೀರ್ಣ್ನದಿಂ ಕಾಱಿದನೆಂಬವೊಲಹಿತರಂ ಕೊಲ್ವಂ ಹುಳಿಯೇಱ ಚಟ್ಟಮಂ** [130]

**ಕರವಾಳಾಘಾತದಿನ್ದಂ ರಿಪು**
**ಕರಿಶಿರಸಂದೋಹಸದ್ರಕ್ತಮುಕ್ತೋತ್ಕರವೀರಬ್ರಾತನಿಱ್ಪೇಡಿತ ನಿಬಿಡಕಬನ್ಧಂಗಳಿಂ ರಕ್ತ**

**ಧಾರಾಧರಹಸ್ತಬ್ಯಭೂತಾವಳಿಪಿಶಿ**
**ತರಸೋದ್ರಿಪ್ತಸಂತ್ರಿಪ್ತಿಯೆಂ ಕಾದ್ರರಸಂ ಪೊಣ್ಮಲ್ಕೆ ಕೊಂದಂ ರಣದೊಳಹಿ** [131]

**ಉರದೆಯ್ತಂದ ವಿರೋಧಿ ವರ್ಗ್ಗವಿಂದಿರೊಳು ಬಂದೊಡ್ಡಿನಿಂದಿರ್ದ್ದೊಡಂ**
**ನೆರೆಕಂಡಾಹವಲಂಪಟಂ  ಮುಳಿದುಕೊಂಡು ಗ್ರಾಸಿಯಂ ಕಿತ್ತು ತಾಂ ತೆಱಪಂ**
**ನೋಡಿ ಕನಲುದು ತನ್ನ ಬಲಮುಂ ಕಯ್ವೀಸೆ**
**ಕೋಪಾಗ್ನಿಯಿಂದಿದೆಯಲು. ಕೆಲಬರಂಜಿ ಮುಳಿಸಂ ನೀಂ ಬಿಟ್ಟು ಕಾಯೆಂಮನೇ ತೆರದಿಂದಂದ**
**ಬೆಸವೇಳು ಚಟ್ಟ ಮುದದಿಂ ಸಾಮಂತ ಚೂಡಾಮಣೀ.** [132]

ಯುದ್ಧಲಾಲಸಿಯಾದ ಮಹಾಮಂಡಳೇಶ್ವರ ಚಟ್ಟಯ್ಯನು ಸುಮ್ಮನಿರದೆ ಎದುರಾಳಿಗಳಾಗಿ ಬಂದ ವೈರಿಪಡೆಯನ್ನು  ಮಹಾಕೋಪದಿಂದ ತನ್ನ ಭಯಂಕರ ಖಡ್ಗವನ್ನು ಒರೆಯಿಂದ ತೆಗೆದಕೂಡಲೇ ಅದನ್ನು ಕಂಡು ಶತ್ರುಪಕ್ಷವು ಕನಲಿಹೋಯಿತು. ಇನ್ನು ತನ್ನ ಸೈನ್ಯದೆಡೆಗೆ ಮುತ್ತಿಗೆಹಾಕಲು ಕೈಬೀಸಿದಾಗ ಚಟ್ಟನ ಕೋಪವೆಂಬ ಅಗ್ನಿಯನ್ನು ನೋಡಿ ಬೆದರಿದ ವಿರೋಧಿಬಣವು ಕಾಪಾಡಲು ಅಂಗಲಾಚಿತು. ಇಂತಹ ಅಸಾಮಾನ್ಯ ಶೌರ್‍ಯಾತಿಶಯ ಚಟ್ಟನದಾಗಿತ್ತು.

**ಮದಕರಿದಂತಮಂ ಮುಳಿಸೆನೊಳು ಮುಱಿವಂ ಹರಿಯಾಂತು ನಿಂದೊಡಂ**
**ಮಿನುಗುವ ಕೇಸರಂಗಳನಸುಂಗೊಳೆ ಪಾಯ್ದುಗಿವಂ ಮಹಾಬ್ದಿಯೇ**
**ಳುಂ ಸಲೆ ಮೇರೆಯಿಂದ ಕವಿತಪ್ಪಡೆ ಸಾಹಸದಿಂದೆ ಕೋಪದಿಂ**
**ಕುದಿಯದೆ ಮಾಣ ಸುಱ್ರೆಸಲು ಮಚ್ಚರದಿಂದಿದಿರಾಂತ ವೈರಿಯಂ**
**ಮಡಿಪದೆ ನಿಲುವನಲ್ಲ ಕಲಿನಾಯಕ ಚಟ್ಟಗಿದಾವ ಸಾಹಸಂ.**[133]

ಚಟ್ಟನು ಎಂತಹ ಪರಾಕ್ರಮಿ ಸಾಹಸಿಯೆಂದರೆ ಮದವೇರಿದ ಆನೆಯ ದಂತವನ್ನು ಮುರಿದುಹಾಕಬಲ್ಲ; ಸಿಂಹವು ಎದುರಿಗೆ ಬಂದು ನಿಂತರೆ ಅದರ ಕೇಸರಗಳನ್ನು ಪ್ರಾಣತೆಗೆದಂತೆ ಕಿತ್ತುಹಾಕಬಲ್ಲ; ಮಹಾಸಾಗರವೇ ಮೇರೆ ಮೀರಿ ಬಂದು ಇವನನ್ನು ಆವರಿಸಿದರೆ ಸಾಹಸದಿಂದ, ಕೋಪದಿಂದ ಅದನ್ನು ಕುಡಿದುಬಿಡಬಲ್ಲ. ಹೀಗಿರುವಾಗ ಮಾತ್ಸರ್ಯದಿಂದ ಎದುರಾದ ವೈರಿಗಳನ್ನು ಕೊಲ್ಲದೆ ಬಿಡುವನಲ್ಲ. ವೀರಾಗ್ರಣಿಯಾದ ಚಟ್ಟನಿಗೆ ಶತ್ರುಗಳನ್ನು ಮಣಿಸುವುದು ದೊಡ್ಡಸಾಹಸವೇನೂ ಅಲ್ಲ.

**ಉಡಿಗುಂ ಸಿಂಗದ ದಾಡಿಯಂ ಛಳಿಲೆನಲು ಸಂಕ್ರುದ್ಧನಾಗೇಂದ್ರನಂ**
**ಪೊಡೆಗುಂದೋರ್ವನೆ ಮೇರೆದಪ್ಪಿ ಕವಿತಪ್ಪಂಭೋನಿಧಾನಂಗಳಂ**
**ಕುಡಿಗಂ ಸುಱ್ರೆ..... ಡನಾಡೆ ಮುಳಿಸಿಂದೆಂದಂದು ಮಾಱಾಂತವಲಾ**
**ಪ್ಪಡೆಯಂ ಚಟ್ಟೆಯನಾಯಕಂ ಮಡಿದನೇ ಸಂಗ್ರಾಮರಂಗಾಗ್ರದೊಳು.**

ಮಹಾಕೇಸರಿಯನ್ನು, ಉಗ್ರಸರ್ಪವನ್ನು, ಸಾಗರಗಳನ್ನು ಮಣಿಸುವ ಸಾಮರ್ಥ್ಯವುಳ್ಳ ಚಟ್ಟಯ್ಯನಿಗೆ ಎದುರಾದ ವೈರಿಗಳನ್ನು ರಣರಂಗದಲ್ಲಿ ಮಣಿಸುವುದು ಅತಿಸುಲಭ,

**ಪೆರ್ಮೆಯನೇನ ಬಣ್ಣಿಸುವೆ ಪಾಣ್ಡ್ಯನೃಪಂ ಮುನಿದಾಸ್ತು ತೂಲ್ದಿ ಬ**

**ನ್ನೆಮ್ಮೆಗನೂರಲೊಡ್ಡಿದಡೆ ವಿಷ್ಣುನೃಪಾಳಕ ನೋಡೆ. ವೈರಿಯಂ**

**ದುಮ್ಮಳಿನ್ನೆರ್ತೆವಾಜಿಗಜಯೂಥಮನಾಜ್ಜಿದೆಯಟ್ಟಿ ಪೊಯ್ಯೆ ನಿಂ**

**ದಣ್ಣೆದ ಗನ್ಧಸಿನ್ಧುರಮ ತನ್ದುಮಹೀಪತಿಗಿತ್ತಂ ಚಟ್ಟಮಂ**[134]

ಪಾಂಡ್ಯದೊರೆಯು ಎಮ್ಮೆಗನೂರಿನಲ್ಲಿ ದಂಡೆತ್ತಿ ಬಂದಾಗ ಅರಸನಾದ ವಿಷ್ಣುವರ್ಧನನ ಕಣ್ಣೆದುರಿನಲ್ಲಿ ಪಾಂಡ್ಯನ ಗಜಪಡೆ ಯನ್ನು ಸದೆಬಡಿದು 'ಗನ್ಧಸಿನ್ಧುರ'ವನ್ನು ತಂದು ಅರಸನಿಗಿತ್ತ ಮಹಾವೀರ ಈತ· ಮಹಾಸಾಮಂತ ಮಲ್ಲನನ್ನು [135] ಶಾಸನಗಳು ಬಹುವಾಗಿ ಬಣ್ಣಿಸಿರುವುದನ್ನು ಕಾಣಬಹುದು.

**ಪ್ರಕಟಂ ದೋರ್ಬ್ಬಳದುರ್ವ್ವಿನಿಂ ಸುಭಟನಾ ಸಾಮಂತಮಲ್ಲಂ ರಣಾ**
**ನುಕದೊನೊಲುಕಿದಿರಾಗಿ ತಾಗಿದರಿಸೇನಾಚಕ್ರ ಸೀಟೆಪೊಯ್ಯೆ ಕಬಂ**
**ಧಂಕುಣಿದಾಡೆ ವೀರರ ಸಿರಂ ಜೀರೇಳೆ ಮಾರಾಂತ ರಾಉತ**
**ನಂಕೊಂದೆರಡಾನೆಯಂ ಪಿಡಿದನಾ ಚಂಗಾಳುವನುಗ್ರಾಜಿಯೊಳು.**

ಮಲ್ಲನು ರಣಾಂಗಣದಲ್ಲಿ ವೈರಿವೀರರ ಶಿರಗಳನ್ನು ಚಂಡಾಡಿ, ಶತ್ರು ಸೈನ್ಯರೇ, ಮುಣ್ಣುಮುಕ್ಕಿಸುತ್ತಿದ್ದ ಪರಿ ಅನನ್ಯವಾದುದು, ತನ್ನ ಶೌರ್ಯದ ಉನ್ನತಿಗೆ ಕಳಶವಿಟ್ಟಂತೆ ಚಂಗಾಳ್ವರ ವಿರುದ್ಧದ ಸೆಣಸಾಟದಲ್ಲಿ ಮಾವುತನನ್ನು ಸಾಯಿಸಿ 2 ಆನೆಗಳನ್ನು ಸೆರೆಹಿಡಿದನು. ಬಿಟ್ಟಿಗನ ಶೌರ್ಯವನ್ನು ಮತ್ತೊಂದು ಶಾಸನ ಹೀಗೆ ತಿಳಿಸುತ್ತದೆ. [136]

**ಕರವಾಳೋನ್ಮುಖಚಣ್ಣವಜ್ರಹತಿಯಂ ಬಿಳ್ದನ್ಯಮತ್ತೇಭಭೂ**
**ವರದಿಂದುಂಣ್ಮಿದ ರಕ್ತವಾಹಿನಿಯುಮಂ ಕಣ್ಣಿಯ್ದಿ ಭೂತಬ್ರಜಂ**
**ತ್ವರಿತಂ ಮಣ್ಣದ ತೆಪ್ಪದಿಂ ಶಿರದಲಾಂಬುಬದ್ಧದಿಂ ದಾಟು ಭೀ**
**ಕರವಾಗಿಟ್ಟುದು ಬಿಟ್ಟಿದೇವನಿರೇದತ್ಯುಗ್ರಾಜಿರಂಗಾಂಗಣಂ**

ರಣರಂಗದಲ್ಲಿ ಬಿಟ್ಟಿದೇವನು ತನ್ನೊರೆಯಿಂದ ಭಯಂಕರ ಖಡ್ಗವನ್ನು ತೆಗೆದು ಸಿದ್ಧನಾಗಿ ವಜ್ರದಂತಹ ಕಠಿಣ ಹೊಡೆತವನ್ನು ವೈರಿಗಳೆಂಬ ಮದಗಜಗಳಿಗೆ ಹೊಡೆಯಲು ಆ ಗಜಗಳ ನೆತ್ತಿಯಿಂದ ರಕ್ತವಾಹಿನಿಯು ಧುಮ್ಮಿಕ್ಕುವುದನ್ನು ಕಂಡು ಅಲ್ಲಿದ್ದ ಭೂತಗಳ ಸಮೂಹವು ವೇಗವಾಗಿ ಧಾವಿಸಿ ಬಂದು ಬಾಣಗಳಿಂದ, ಖಡ್ಗದಿಂದ ಇರಿಯಲ್ಪಟ್ಟ ವೈರಿಪಡೆಯ ಶಿರಗಳಲ್ಲಿ ಕೂತು ರಕ್ತಹೀರುತ್ತಿದ್ದುದು ಭೀಕರವಾಗಿದ್ದಿತು.

**ನಲಿದುಲಿ ದಟ್ಟಿಕೊಂಡು ಕವಿತಪ್ಪ ವಿರೋಧಿಬಳಕ್ಕೆ ಭೀತಿಯಿಂ**
**ನೆಲವಲನೆನ್ನದಲ್ಲದಿದು ಪೆರ್ಬಲವೆನ್ನದೆ ದೋಃ ಪ್ರತಾಪದಿಂ**
**ಗಿಲಿಗಿಲಿಗಂಬಪಾಡಿಸುವ ಸಾಹವದೊಳು ಕಲಿ ಬಿಟ್ಟಿದೇವನಿಂ**
**ನೆಲಗಿಳವಂಗೆ ಸಂಗರದೊಳಾಂಪನೆ ಗಾಂಪನವಾರ್ಯ್ಯಕಾರ್ಯ್ಯನೊಳು** [137]

ತನ್ನನ್ನು ಸುಲಭವಾಗಿ ಸೋಲಿಸಬಹುದೆಂದು ಸಂತೋಷದಿಂದ, ಸಡಗರದಿಂದ ಎದುರಾಗುವ ಶತ್ರುಸೈನ್ಯವನ್ನು ಕಂಡು ಭೂಸೈನ್ಯ ಮಾತ್ರವಲ್ಲದೆ ಹಿರಿಯ ಸೈನ್ಯವನ್ನು ಲೀಲಾಜಾಲವಾಗಿ ಗಿಲಿಕೆ ಆಡಿಸುವಂತೆ ತನ್ನ ಉದ್ದಂಡ ಪ್ರತಾಪದಿಂದ ಸೋಲಿಸುವಂತಹ ಬಿಟ್ಟಿದೇವನೊಡನೆ ಯುದ್ಧಕ್ಕಿಳಿಯುವವನು ಗಾಂಪನೆ ಸರಿ.

ಬಿಟ್ಟಿದೇವನ ಬಗೆಗಿನ ಯುದ್ಧಚಿತ್ರಗಳು ಸೊಗಸಾದ ಕಾವ್ಯಚಿತ್ರಗಳಂತೆ ಶೋಭಿಸುತ್ತಿವೆ.

**ಯುದ್ದಚಿತ್ರಗಳು** : ಚಂಗಾಳ್ವರು ಮಾಂಡಲಿಕರಾಗಿದ್ದರೂ ಆಗಾಗ ಹೊಯ್ಸಳರೊಡನೆ ಯುದ್ಧ ಮಾಡುತ್ತಿದ್ದರು. ಇಂತಹುದೇ ಒಂದು ಕಾದಾಟದಲ್ಲಿ ಮಾಚನು ಚಂಗಾಳ್ವರ ವಿರುದ್ಧ ಹೋರಾಡಿದ್ದನ್ನು ಈ ಶಾಸನ ಹೀಗೆ ತಿಳಿಸುತ್ತಿದೆ. [138]

**ಆನ್ತಡೆ ಕೊನ್ತನಂದೆಬಗೆ ವೈರಿನಿಕಾಯಮನರ್ದ್ಧಿ ಕಾದಿ**
**ಕೈಯಾಂತಡೆ ಕೊಟ್ಟನೆಂದೆ ಬಗೆ ಬೇಡಿದುದುಂ ಶರಣೆಯೆಂದು**
**ಬಂದರಂ ಭ್ರಾಂತಿಯೆ ಕಾದೆನೆಂದೆ ಬಗೆ ವೀರದ ಚಾಗದ ಕಾವದೆ**
**ಪೆಮ್ಮೆಗಾವಂ ತೊಣೆಯೆಂದು ಬಣ್ಣಿಪರು ಮಲ್ಲನನುದ್ಭಯಶಕೆ ನಲ್ಲನಾ**

**ಪಲರೊಂದಾಗಿರಲೆತ್ತಿಬಂದು ಬಯಲೊಟು ಮಾರಾನ್ತ ಸಾಮನ್ತರಂ**
**ತುರುಗಂ ಬೆಳುಗೊಡೆಯದಳು ಚತುರಮಂ ನಿಸ್ಸಾಣಮಂ**
**ಪ್ರಾಣಮನಿರ್ಯ್ಯಾಣಿಹಲವಡ್ಡಣಂ ಗುಡಿಯಂ ಗೂಡಾರಂಗಳಂ**
**ಕಾಯ್ದಿನಿಂ ಪಾರದೆ ಕೊಂಡನಶ್ರಮದೆ ಕೇಳು ಶ್ರೀಮಲ್ಲಸಂಗ್ರಾಮದೊಳು**

**"ತೋಳ್ವಲದಬಲದೆ ಮಲ್ಲಂ**
**ಬಳುವಳ ಬಗೆದೊಗೆದ ಕೋಪದಿಂದಂ ಹಯವಂ**
**ತಳುವಿಲ್ಲದೆ ಪಾಯಿಸಿ ಚಂ**
**ಗಾಳ್ವನ ಮದಕರಿಯ ನಿಜಿದು ಕೋಡೆಯಂ ಕೊಂಡಂ"**

ಇನ್ನು ಏಚರಸನ ಮತ್ತೊಬ್ಬಮಗ ದೇಕರಸನ ವ್ಯಕ್ತಿತ್ವ ಹಾಗೂ ಅವನುಮಾಡಿದ ಕಾಳಗಗಳ ಯುದ್ಧಚಿತ್ರಣ[139] ಇಂತಿದೆ

**ತುಱುಪರಿಗವೆಂಬ ಪುಯ್ಯಲ**
**ನೆಱಿಯೊಲಿಸಿ ಕೇಳ್ದುದೇಕಭೂಪತಿ ಬೇಗಂ**
**ಪೊಱಮಟ್ಟು ಬನ್ದು ತಾಗಿದ**
**ನೆಱವಿನದೊರ್ವ್ವಳದೀ ಕಳರನಾಕ್ಷಣದಿಂದ**

**ಕಲಿಯುಗಪಾರ್ತ್ಥಂ ದೇಕಂ**
**ಬಿಲ್ವೊಯ್ದಿರೆ ಕೊಲದೊಗೆಯ ಮಂಬಿನ ಕಿಡಿಯುಂ**
**ಪಲಿಕಲಿಸಿರ್ದ್ದರ್ವ್ವಯರಿ ಬಂ**
**ಬಳಪೊಲಗೆಟ್ಟುದು ಪೆಣದ ಬ್ರಣದ ರಣಗತ್ತಲೆಯೊಳು**

ದೇಕರಸನು ಅನ್ತು ಕಾದಿ ತನ್ನ ಸಾಮರ್ಥ್ಯ ಬಲದಿಂದ ಎದುರಾಳಿಯ ಬಲವನ್ನು ಸೋಲಿಸಿ ತುರುಗಳನ್ನು ಮರಳಿ ತರುತ್ತಿದ್ದನು. ಇಂತಹುದೇ ಒಂದು ತುರುಗಾಳಗದಲ್ಲಿ ದೇಕರಸನು ಮರಣಹೊಂದಿದನು.

**ಹೊತ್ತಗೆಯಟವಣೆಕೋಲ್ಗಳ**
**ಲೆತ್ತಿದ ತೆಱದನ್ತೆ ಸರದ ತನ್ದಲು ತನುವಂ**
**ತೆತ್ತಿ ಸಲ್ಕಮರಕಾಂತಾ**
**ಜತ್ತಕಿಯರುಯ್ಯೆ ದೇಕಂ ನಾಕಕ್ಕೋದ**

ಸಾಮಂತ ಸೋಮೆಯನಾಯಕ "ಕೆಚ್ಚನ ಮಾಚೆಯನಾಯಕನಣುಗಿನ ಪುತ್ರ ಮಹಾದೇವನಾಯಕ, ಮಹಾದೇವ ನಾಯಕನ ಸುಪುತ್ರ ಸಾಮಂತ ಸೋಮೆಯನಾಯಕ" ಎಂಬ ಶಾಸನೋಕ್ತ ಸಾಲು ಈತನು ಕೆಚ್ಚನ ಮಾಚಯನಾಯಕನ ಮೊಮ್ಮಗ ಎಂಬುದನ್ನು ಖಚಿತವಾಗಿ ತಿಳಿಸುತ್ತದೆ. ಈ ಸೋಮೆಯ ನಾಯಕನು ಎಂತಹ ವೀರಾಗ್ರಣಿಯೆಂದರೆ[140]

**ಕಟ್ಟಿದಿರೊಳಾಂತ ಸುಭಟರ**
**ನಿಟ್ಟೆಲುವಂ ಮುಱಿದು ತೇದು ತಿಲಕಮನಿಡುವಂ**
**ಸುಟ್ಟುರಿಪುವ ರಿಪುಪುರಮಂ**
**ನೆಟ್ಟನೆ ಸಾಮಂತ ಸೋಮ ಸಿತಗರಗಂಡಂ**

ಬಹುಶಃ ಸೋಮೆಯನಾಯಕನು ಹೊಯ್ಸಳರ ಪರವಾಗಿ ನಿಂತು ಶತ್ರುಗಳೊಂದಿಗೆ ಉಗ್ರವಾಗಿ ಹೋರಾಡಿದುದರ ಒಂದು ಯುದ್ಧ ಚಿತ್ರವನ್ನು ಇಲ್ಲಿ ನೋಡಬಹುದು.

**ಉಡಿಗುಂ ಸಿಂಗದ ದಾಡಿಯಂ ಛಳಿಲೆನಲು ಸಂಕ್ರುದ್ಧನಾಗೇಂದ್ರನಂ**
**ಪೊಡೆಗುಂದೋರ್ವನೆ ಮೇರೆದಪ್ಪಿ ಕವಿತಪ್ಪಂಭೋನಿಧಾನಂಗಳಂ**
**ಕುಡಿಗಂ ಸುಱ್ರೆ..... ಡನಾಡೆ ಮುಳಿಸಿಂದೆಂದಂದು ಮಾಱಾಂತವಲಾ**
**ರ್ಪ್ಪಡೆಯಂ ಚಟ್ಟೆಯನಾಯಕಂ ಮಡಿದನೇ ಸಂಗ್ರಾಮರಂಗಾಗ್ರದೊಳು.[141]**

ಮಹಾಕೇಸರಿಯನ್ನು, ಉಗ್ರಸರ್ಪವನ್ನು, ಸಾಗರಗಳನ್ನು ಮಣಿಸುವ ಸಾಮರ್ಥ್ಯವುಳ್ಳ ಚಟ್ಟಯ್ಯನಿಗೆ ಎದುರಾದ ವೈರಿಗಳನ್ನು ರಣರಂಗದಲ್ಲಿ ಮಣಿಸುವುದು ಅತಿಸುಲಭ,

**ಪೆರ್ಮ್ಮೆಯನೇನ ಬಣ್ಣಿಸುವೆ ಪಾಣ್ಡ್ಯನ್ರಿಪಂ ಮುನಿದಾಸ್ತು ತೂಟ್ದೆ ಬ**
**ನ್ನೆಮ್ಮೆಗನೂರಲೊಡ್ಡಿದಡೆ ವಿಷ್ಣುನ್ರಿಪಾಳಕ ನೋಡೆ. ವೈರಿಯಂ**
**ದುಮ್ಮಳಿನ್ನೆರ್ತೆವಾಜಿಗಜಯೂಥಮನಾಱ್ದೆಯಟ್ಟಿ ಪೊಯ್ಯೆ ನಿಂ**
**ದಣ್ಣಿದ ಗನ್ಧಸಿನ್ದುರಮ ತನ್ದುಮಹೀಪತಿಗಿತ್ತಂ ಚಟ್ಟಮಂ[142]**

ಪಾಂಡ್ಯದೊರೆಯು ಎಮ್ಮೆಗನೂರಿನಲ್ಲಿ ದಂಡೆತ್ತಿ ಬಂದಾಗ ಅರಸನಾದ ವಿಷ್ಣುವರ್ಧನನ ಕಣ್ಣೆದುರಿನಲ್ಲಿ ಪಾಂಡ್ಯನ ಗಜಪಡೆಯನ್ನು ಸದೆಬಡಿದು 'ಗನ್ಧಸಿನ್ಧುರ'ವನ್ನು ತಂದು ಅರಸನಿಗಿತ್ತ ಮಹಾವೀರ

ಈತ. **ತರಂ ಕೂಡೆ ಸಾಮನ್ತ ಚಟ್ಟಂ** ಯುದ್ಧರಂಗದಲ್ಲಿ ಶತ್ರುಪಡೆಯನ್ನು ನಿರ್ಮೂಲನೆ ಮಾಡುತ್ತಿದ್ದ ಚಟ್ಟನ ಯುದ್ಧರೀತಿಯನ್ನು ಸೊಗಸಾಗಿ ಈ ಎರಡು ಕಾವ್ಯಚಿತ್ರಗಳು ಚಿತ್ರಿಸಿದೆ.

ಗೋವಿದೇವನ ಅಧೀನ ಅಧಿಕಾರಿಯಾಗಿದ್ದ ಪೆರ್ಗಡೆ ಕೇತಣ್ಣನಿಂದ ಆಲಯ ನಿರ್ಮಿತ ಸ್ಥಳವಾದ ಮತ್ತೂರು ಇವನಿಗೆ ಹೇಗೆ ಕೊಡುಗೆಯಾಗಿ ಬಂತು ಎಂದು ಹೇಳುವಾಗ, ಸೊಗಸಾದ ಯುದ್ಧ ಚಿತ್ರದೊಂದಿಗೆ ಕೇತಣ್ಣನು ಆಳರಸನೊಂದಿಗೆ ವೈರಿಗಳೊಂದಿಗೆ ಹೋರಾಡಿದ ವಿಷಯವನ್ನು ಮತ್ತೂರಿನ ಈ ಶಾಸನ ಹೀಗೆ ತಿಳಿಸುತ್ತದೆ:

> **"ಆಳ್ದನ ಅನುವರದೊಳಂ ಬಯಲು**
> **ಗಾಳೆಗದೊಳಂ ಕೋಟೆಗಾಳಗದೊಳಂಮಾಱೌಂತವೈರಿ**
> **ಗಳನಿಱಿದೋಡಿಸಿ ತ ನ್ನಿಱಿದ ತೊಡರಂ ಎತ್ತಿದಾನೆಯ**
> **ಮೊಗವಡದಬಿರುದಂ ನೆಗರ್ತ್ತಯುಂ ಕೀರ್ತ್ತಿಯುಂ ಸಲಲು"** [143]

### 4.3.4.5. ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳು ಮತ್ತು ಅಲಂಕಾರಗಳು :

ಭರತನ ಕಾಲದಲ್ಲಿಯೇ ಅಲಂಕಾರಗಳ ವಿವೇಚನೆ ನಡೆದಿದೆ. ಅಲ್ಲಿ ಹೇಳಲ್ಪಟ್ಟಿರುವುದು ಉಪಮಾ, ರೂಪಕ, ದೀಪಕ, ಯಮಕ ಎಂಬ ನಾಲ್ಕೇ ನಾಲ್ಕು ಅಲಂಕಾರಗಳು ಮಾತ್ರ. ಇವುಗಳ ಬಗ್ಗೆ ಹೆಚ್ಚು ವಿವರಪೂರ್ಣವಾಗಿ ಪ್ರಸ್ತಾಪಿಸಿದವನು ಭಾಮಹ. ಕೇವಲ ನಾಲ್ಕಿದ್ದ ಅಲಂಕಾರಗಳ ಸಂಖ್ಯೆ ಈತನಲ್ಲಿ ಮೂವತ್ತಕ್ಕೆ ಏರಿದೆ. ಭಾಮಹನ ನಂತರ ಇವುಗಳ ಬಗ್ಗೆ ಹೆಚ್ಚು ಗಮನಹರಿಸಿ ಶಾಸ್ತ್ರೀಯ ವಿಶ್ಲೇಷಣೆ ಮತ್ತು ವಿಂಗಡಣೆ ಮಾಡಿದವರು ರುದ್ರಟ ಮತ್ತು ಉದ್ಭಟರು. ದಂಡಿ ವಾಮನರೂ ಅಲಂಕಾರಗಳ ಪ್ರಸ್ತಾಪ ಮಾಡಿದ್ದಾರೆ. ಅಲಂಕಾರಗಳನ್ನು ಭೂಷಣಗಳಿಗೆ ಅನ್ವಯಿಸಿ ಹೇಳಿದ್ದನ್ನು ಸ್ಮರಿಸಬಹುದು. ಇದರಿಂದ ಇವು ಕಾವ್ಯ ಶರೀರದ ಮೇಲ್ಮೈಗೆ ಸಂಬಂಧಿಸಿದವೆಂಬ ಭಾವನೆಯೂ ಮೂಡಿತ್ತು. ವೈವಿಧ್ಯಮಯವಾದ ಅಲಂಕಾರಾಭರಣಗಳನ್ನು ಗುರುತಿಸುತ್ತಾ ಸಾಗಿದ್ದರಿಂದಾಗಿ ಅಲಂಕಾರಗಳ ಸಂಖ್ಯೆ ನೂರನ್ನೂ ದಾಟಿತು. ಕಾವ್ಯಕ್ಕೆ ಶೋಭೆಯನ್ನು ಉಂಟು ಮಾಡುವ 'ಎಲ್ಲ'ವೂ ಅಲಂಕಾರಗಳು ಎಂಬ ಅರ್ಥವನ್ನು ಪಡೆಯಿತು.

ಇದರಿಂದಾಗಿ 'ಗುಣ' ಗಳೂ ಕೂಡ ಅಲಂಕಾರಗಳೆಂಬ ಪರಿಧಿಯೊಳಗೆ ಅಡಗಬೇಕಾಯಿತು. ಅಲಂಕಾರವೆಂಬುದು ಒಂದು ಬಗೆಯ ಉಕ್ತಿವೈಚಿತ್ರ್ಯವಾಗಿದ್ದು ರೀತಿ ಅಥವಾ ಮಾರ್ಗವನ್ನು ನಿರ್ಧರಿಸುವಲ್ಲಿ ಕವಿಯ ಮನೋವ್ಯಾಪಾರ ವಕ್ರತೆಯಾಗಿ ಪರಿಭಾವಿಸುವ ವ್ಯಾಪ್ತಿಗೆ ಬೆಳೆಯಿತು. ಮುಂದೆ ಅಲಂಕಾರಗಳನ್ನು ಶಾಸ್ತ್ರೀಯವಾದ ರೀತಿಯಲ್ಲಿ ವಿಂಗಡಿಸಿದವನು ರುದ್ರಟ. ಅಲಂಕಾರಗಳನ್ನು ಮೀಮಾಂಸಕರು 1.ಶಬ್ದಾಲಂಕಾರಗಳು 2. ಅರ್ಥಾಲಂಕಾರಗಳು ಎಂದು ಎರಡು ಬಗೆಯಲ್ಲಿ ವಿಂಗಡಿಸಿದರು. ವರ್ಣ ಅಥವಾ ಶಬ್ದ ಪ್ರಧಾನವಾದುದು ಶಬ್ದಾಲಂಕಾರ. ಅರ್ಥಪ್ರಧಾನವಾದುದು ಅರ್ಥಾಲಂಕಾರ. ವಿಶೇಷವೆಂದರೆ ಕಾವ್ಯಗಳಲ್ಲಿರುವಂತೆಯೇ ಶಾಸನಗಳಲ್ಲಿ ಅದರಲ್ಲೂ ಮುಖ್ಯವಾಗಿ

ಹೊಯ್ಸಳ ಮಹಾಮಂಡಲೇಶ್ವರರ ಶಾಸನಗಳಲ್ಲಿ ಈ ಎಲ್ಲ ಅಲಂಕಾರಗಳು ನುಸುಳಿರುವುದನ್ನು ಪ್ರಕೃತ ಅಧ್ಯಯನವು ಮುನ್ನೆಲೆಗೆ ತಂದು ತೋರಿಸುತ್ತಿದೆ.

❖ **ಶಬ್ದಾಲಂಕಾರಗಳು :**

ಕಾವ್ಯದಲ್ಲಿ ಪ್ರಯೋಗವಾಗುವ ಶಬ್ದಗಳು ನಿರ್ದಿಷ್ಟವಾದ ಸ್ಥಾನ ಮತ್ತು ವಿಧಾನಗಳಲ್ಲಿ ವಿಶಿಷ್ಟವಾಗಿ ಪ್ರಯೋಗಗಳ್ಳುವುದೇ ಶಬ್ದಾಲಂಕಾರಗಳ ಸ್ವರೂಪ. ಇವುಗಳಲ್ಲಿ ಅನುಪ್ರಾಸ, ಯಮಕ, ಚಿತ್ರಕವಿತ್ವ ಎಂದು ಮುಖ್ಯವಾಗಿ ಮೂರುವಿಧ. ಈ ಬಗೆಯು ಶಾಸನಗಳಲ್ಲಿಯೂ ಗೋಚರವಾಗುತ್ತದೆ.

- **ಅನುಪ್ರಾಸ :**

ಪದ್ಯದ ಪ್ರತಿಪದದಲ್ಲೂ ಅಕ್ಷರಗಳ ಆವೃತ್ತಿಯೇ ಅನುಪ್ರಾಸದ ಮುಖ್ಯ ಲಕ್ಷಣ. ಒಂದನ್ನೊಂದು ಹೋಲುವ ಅಕ್ಷರಗಳನ್ನು ಒಂದೆಡೆ ಪ್ರಯೋಗಿಸಿದರೆ ಅದನ್ನು ಅನುಪ್ರಾಸವೆನ್ನುವರು. ಅನುಪ್ರಾಸದ ಸ್ಥಾನದಲ್ಲಿ ಒಂದೋ ಅಥವಾ ಒಂದಕ್ಕಿಂತ ಹೆಚ್ಚಿನ ಅಕ್ಷರಗಳು ಪುನರಾವರ್ತನೆಯಾಗುತ್ತಿದ್ದರೆ ಅದು ವೃತ್ಯನುಪ್ರಾಸ ಎನಿಸಿಕೊಳ್ಳುತ್ತದೆ.

ಅ. **ವೃತ್ಯನುಪ್ರಾಸಕ್ಕೆ ಉದಾ :**

**ಹರಿಯಂ ವಾರಣವಟ್ಟೆವಾರಣಘಟಾನೀಕಂಗಳು ಕೋಪದಿಂ**
**ತುರಗಾನೀಕವದಟ್ಟಲುರ್ವ್ವಿಸೆ ಹಯಾನೀಕಂ ನರಾನೀಕಮ**
**ಮರಳುಟ್ಟುತ್ತಿರೆ ನಾರದಂ ನಲಿಯಲಾಜಿಕ್ಷೋಣಿಯೊಳು ಕೊನ್ದು**
**ದುರ್ದ್ಧರ ಕೋಪಂ ನಲಿಯುತ್ತಮಿರ್ಪುದಂ ಭುಜಂ ಸಾಮನ್ತಗೋವಿಂದನಂ**[144]

'ರ'ಕಾರವು ಇಲ್ಲಿ ಪುನರಾವರ್ತನೆಯಾಗಿ ವೃತ್ಯನುಪ್ರಾಸಕ್ಕೆ ತಕ್ಕ ಉದಾಹರಣೆಯಾಗಿದೆ.

**ಆ.ಛೇಕಾನುಪ್ರಾಸಕ್ಕೆ ಉದಾ :**

ಎರಡೆರಡು ಪದಗಳು ಜೊತೆಜೊತೆಯಾಗಿ ಪ್ರಯೋಗಗೊಳ್ಳುವುದು ಛೇಕಾನುಪ್ರಾಸದ ಲಕ್ಷಣ. ಇಲ್ಲಿ ಪ್ರಯೋಗ ಗೊಂಡಿರುವ 'ಹರಿ' ಎಂಬ ಪದಗಳು ಒಂದೇ ತೆರನಾಗಿದ್ದರೂ ಭಿನ್ನವಾದ ಅರ್ಥಗಳನ್ನು ಹೊಂದಿವೆ ಎಂಬುದು ಗಮನಿಸಬೇಕಾದ ಅಂಶ. ಉದಾ :

**ಹರಿ ಮುಳಿದಾರ್ದ್ದು ಗೆಲ್ದುದೆಐದಿಂದಿದಿರಾಂತವಿರೋಧಿವರ್ಗ್ಗಮಂ**
**ಹರಿಯಿರದೆಯ್ದಿ ಹಾಯ್ದ ಗಜದಂದವೊಲಿರ್ದ್ದರರಾತಿಭೂಭುಜ**
**ಹರ್ರಿಯಣ ಮುಟ್ಟಿ ಮೂದಲಿಸಿ ತಾಗಿ ಮೊಗಂದಿರುವಂ ಹೊಯ್ಸಲಾ**
**ಹರಿಣದ ಮಾಳ್ಕೆಯಿಂದ ಕೆಲರೋಡಿದರಾಹವ ರಂಗಭೂಮಿಯೊಳು.** [145]

ಪುರುಷೋತ್ತಮನಾದ ಹರಿಯು ರಾಕ್ಷಸವರ್ಗವನ್ನು ಗೆದ್ದ ರೀತಿಯಂತೆ, ಗಜದ ಮೇಲೆ ಆಕ್ರಮಣ ಮಾಡಿದ ತೆರದಂತೆ, ಹರಿಯಣ್ಣನು(ಹರಿಹರನು) ಶತ್ರುರಾಜರೊಡನೆ ಹೋರಾಟಕ್ಕಿಳಿದಾಗ ವೈರಿಪಡೆಯು ಸಿಂಹವನ್ನು ಕಂಡು ಪಲಾಯನ ಮಾಡುವ ಜಿಂಕೆಯಂತೆ ರಣರಂಗದಿಂದ ಓಡಿಹೋಯಿತು. ಚಟ್ಟನ ಮಗ

ಹರಿಹರನ ಹೆಸರಿನಲ್ಲಿ ಮಾತ್ರ ಸಿಂಹವಿಲ್ಲ; ಬದಲಿಗೆ ಅವನ ಭುಜಬಲದಲ್ಲಿಯೂ ಸಿಂಹಪರಾಕ್ರಮವಿದ್ದು, ಆತ ಅದ್ವಿತೀಯ ವೀರಗ್ರಣಿಯಾಗಿದ್ದನು.

- **ಯಮಕಾಲಂಕಾರ :** ಮೂರು ಅಥವಾ ಅದಕ್ಕಿಂತ ಹೆಚ್ಚು ಅಕ್ಷರಗಳುಳ್ಳ ಪದವೋ ಅಥವಾ ಪದಭಾಗವೋ ಪದ್ಯದ ಆದಿ, ಮಧ್ಯ, ಅಂತ್ಯಗಳಲ್ಲಿ ನಿಯತವಾಗಿ ಪುನಃ ಪುನಃ ಬಂದರೆ ಅದು ಯಮಕಾಲಂಕಾರವಾಗುತ್ತದೆ. ಇದಕ್ಕೂ ಸಹ ಒಂದು ಶಾಸನ ಪದ್ಯವನ್ನು ಉದಾಹರಿಸಬಹುದು–

**ಕಲಿಯುಗಬಲಿ ಕಲಿಯುಗಶಿಬಿ**

**ಕಲಿಯುಗವಿದ್ಯಾಧರೇಶಿ ಕಲಿಯುಗಕರ್ಣ್ನಂ**

**ಕಲಿಯುಗಕಳ್ಪಕ್ಷ್ಮಾಜಂ**

**ಕಲಿಯುಗಸುರಧೇನುವೆನಿಸಿ ಕೊಟ್ಟಂ ಚಟ್ಟಂ**[146]

'ಕಲಿಯುಗ' ಎಂಬ ಪದವು ಈ ಪದ್ಯದಲ್ಲಿ ಆದಿ ಮಧ್ಯ ಮತ್ತು ಅಂತ್ಯದಲ್ಲಿ ನಿಯಮಿತವಾಗಿ ಬಂದಿರುವುದನ್ನು ಗಮನಿಸಬಹುದು.

- **ಚಿತ್ರಕವಿತ್ವ::** ಅಕ್ಷರ ಮತ್ತು ಪದಗಳನ್ನು ಚತುರತೆಯಿಂದ ಕೂಡಿ ಕಟ್ಟಿದ ಬಂಧವೇ ಚಿತ್ರಕವಿತ್ವ. ಇದೊಂದು ಪೂರ್ಣವಾದ ರಚನಾ ವಿಶೇಷ. ನಿರೋಷ್ಠ್ಯ, ಅತಾಲವ್ಯ, ಏಕಾಕ್ಷರ, ದ್ವ್ಯಕ್ಷರ , ಹಾರಬಂಧ, ಮುರಜಬಂಧ ಎಂದು ಮುಂತಾಗಿ ಇದರಲ್ಲಿ ವಿಧಗಳಿವೆ. ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಿಂದ ಅತಾಲವ್ಯಕ್ಕೆ (ಈ ಶಾಸನ ಪದ್ಯದಲ್ಲಿ ಎಲ್ಲಿಯೂ ತಾಲವ್ಯಕ್ಷರಗಳು ಇಲ್ಲದಿರುವುದನ್ನು ಗಮನಿಸಬೇಕು) ಒಂದು ಉದಾಹರಣೆಯನ್ನು ಕೊಡಬಯಸುತ್ತೇನೆ **ಶ್ರೀಮನ್ಮಹಾಪ್ರಧಾನಶಿ**

**ಖಾಮಣಿಭಂಡಾರವಾಡದಧಿಪಂ ಲಕ್ಷ್ಮೀ**

**ರಾಮಾಧಿಪಭವನಮನಬಿ**

**ರಾಮತಿಯಿಂ ಹರಿಹರಾರ್ಯ್ಯವಿಭು ಮಾಡಿಸಿದಂ**[147]

❖ **ಅರ್ಥಾಲಂಕಾರಗಳು :**

ಅರ್ಥಾಲಂಕಾರಗಳಲ್ಲಿ ಮುಖ್ಯವಾಗಿ ಉಪಮೆ, ರೂಪಕ, ಉತ್ಪ್ರೇಕ್ಷೆ, ಅರ್ಥಾಲಂಕಾರಗಳು ಔಚಿತ್ಯಪೂರ್ಣವಾಗಿ ಶಾಸನಗಳಲ್ಲಿ ಪ್ರಯೋಗಗೊಂಡಿರುವುದನ್ನು ಉದಾಹರಿಸಬಯಸುತ್ತಾನೆ.

✓ **ಉಪಮಾಲಂಕಾರ:** ಅರ್ಥಾಲಂಕಾರಗಳಲ್ಲಿ ಇದು ಮುಖ್ಯವಾದ ಅಲಂಕಾರವಾಗಿದೆ. ಎರಡು ವಸ್ತುಗಳಿಗೂ ನಡುವೆ ಇರುವ ಹೋಲಿಕೆಯನ್ನು ಇದು ಹೇಳುತ್ತದೆ. ಉದಾ: ಗೋವಿದೇವನ ಮಗನಾದ ಬಿಟ್ಟಿದೇವನ ವ್ಯಕ್ತಿತ್ವವನ್ನು ಮತ್ತು ಅವನ ಪರಾಕ್ರಮಗಳನ್ನು ಶಾಸನಗಳು ಮನದುಂಬಿ ಹಾಡಿಹೊಗಳಿವೆ :

**ಬಲಯುಕ್ತಂ ಬಲಭದ್ರನಂತಿನ ಜನಂತೌದಾರ್ಯ್ಯಯುಕ್ತಂ ವಚೋ**

**ಲಲನಾವಿಭ್ರಮಯುಕ್ತನಬಂಜಭವನಂತಬುಜಾಕ್ಷನಂತೂರ್ಜ್ಜಿತೋ**

**ಜ್ವಳಲಕ್ಷ್ಮೀವಧುಯುಕ್ತನೆಂದನುದಿನಂ ಸಂವರ್ಣ್ನಿಕುಂ ಧಾತ್ರಿ ಶಾ**

**ನ್ತಲದೇವೀಸುತನಂ ಚರಿತ್ರಯುತನಂ ಶ್ರೀವಿಷ್ಣು ಸಾಮನ್ತನಂ[148]**

ಶಕ್ತಿಸಾಮರ್ಥ್ಯಗಳಲ್ಲಿ ಬಲರಾಮನಂತೆ, ಔದಾರ್ಯದಲ್ಲಿ ಕರ್ಣನಂತೆ, ವಾಗ್ವೈಕರಿಯಲ್ಲಿ ಬ್ರಹ್ಮನಂತೆ, ಶ್ರೇಷ್ಠಳಾದ ಲಕ್ಷ್ಮಿಯಂತಹ ವಧುವನ್ನು ಪಡೆದಿರುವಲ್ಲಿ ವಿಷ್ಣುವಂತೆ ಹೆಸರಾಂತನಾಗಿದ್ದನು ಈ ಸಾಮಂತ ಬಿಟ್ಟಿದೇವನು. "ನುಡಿವಹಿತರ ನಿಟ್ಟೆಲುವ ಮುರಿದು ತೇಯುವ". ಈ ಶಾಸನಪದ್ಯದಲ್ಲಿ ಉಪಮೇಯ ಉಪಮಾನಗಳು ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ಇದು ಪೂರ್ಣೋಪಮೆ ಎಂದೆನಿಸಿಕೊಳ್ಳುವುದಕ್ಕೆ ಸೂಕ್ತವಾಗಿದೆ. ಇಂತಹ ಹಲವು ಪೂರ್ಣೋಪಮೆಯುಕ್ತವಾದ ಪದ್ಯಗಳು ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ಹೇರಳವಾಗಿವೆ.

✓ **ರೂಪಕಾಲಂಕಾರ :**

ಉಪಮಾನಕ್ಕೂ ಉಪಮೇಯಕ್ಕೂ ವ್ಯತ್ಯಾಸವನ್ನು ಮಾಡದೆ ಉಪಮಾನವೇ ಉಪಮೇಯವೆಂದು ಪರಿಗಣಿಸುವುದು ಈ ಅಲಂಕಾರದ ಮುಖ್ಯ ಲಕ್ಷಣ. ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ಕೆಲವನ್ನು ಇಲ್ಲಿ ಈ ಅಲಂಕಾರಕ್ಕೆ ಉದಾಹರಿಸಬಹುದಾಗಿದೆ–

ಗೋವಿದೇವನ ಅಧೀನವರ್ತಿಯಾದ ಏಚಭೂಪನು **"ಪಾರದಲಕ್ಷ್ಮಿಯಂ ಪಡೆದು ಸಂಪದದಿಂದ ವಿಭ್ರಾಳಿಗಳ್ಗೆ ಕೈಯ್ಯಾದನಿತ್ತು ಶೋಭಿಸುವ ಕೀರ್ತಿಗೆ ಪಾತ್ರನಾಗಿದ್ದನು"**. ಇವನ ಧಾರ್ಮಿಕ ನಿಷ್ಠೆಯಿಂದ **"**ಕಲಿಕಾಲದ ಕಳ್ಪಭೂಜ**"** [149] ಎಂದು ಹೆಸರಾಂತವನಾಗಿದ್ದನು.

ಮಾಚನು ಒಬ್ಬ ಶೂರ, ಪರಾಕ್ರಮಿಯಾಗಿದ್ದುದರ ಜೊತೆಗೆ ಕಲಿಯುಗದ ಕರ್ಣನೆಂಬ ಅಭಿದಾನಕ್ಕೂ ಪಾತ್ರನಾಗಿದ್ದನು. ಆಹವರಂಗ ಮಾಚ ಎಂಬ ಮಾತು ಬಹುಶಃ ತನ್ನ ಆಳರಸರು ನಡೆಸುತ್ತಿದ್ದ ಯುದ್ಧಗಳಲ್ಲಿ ಈತ ವೀರಾವೇಶದಿಂದ ಹೋರಾಡಿ ಶತ್ರುಗಳನ್ನು ಮಣಿಸಿ ವಿಜಯಕ್ಕೆ ಕಾರಣನಾಗಿದ್ದುದನ್ನು ಸೂಕ್ಷ್ಮವಾಗಿ ಧ್ವನಿಸುತ್ತದೆ. ಅಂತೆಯೇ ಚಟ್ಟಯ್ಯನಾಳುತ್ತಿದ್ದ ನೀರ್ಗುಂದದ ವ್ಯಾಪ್ತಿಗೆ ಬರುವ 'ಪ್ರತ್ಯಕ್ಷಲಕ್ಷ್ಮಿಗೃಹ'ವೆನಿಸಿದ್ದ ಹಿರಿಯೂರಿನ ನಾಡಪ್ರಭು ಸಂಕಗೌಡ.[150] ಈ ಮೂರು ಪದಗಳಾದ ಕಲಿಕಾಲದ ಕಳ್ಪಭೂಜ, ಕಲಿಯುಗದ ಕರ್ಣ, ಪ್ರತ್ಯಕ್ಷಲಕ್ಷ್ಮಿಗೃಹ ಎಂಬ ಉಕ್ತಿಗಳು ಸಾದೃಶ್ಯ ಎರಡರಲ್ಲೂ ಒಂದೇ ಎಂಬ ಅಭೇದ್ಯ ಕಲ್ಪನೆಯನ್ನು ಕಾಣಬಹುದು. ಹಾಗಾಗಿ ಇವು ರೂಪಕಾಲಂಕಾರಕ್ಕೆ ಸೂಕ್ತ ಉದಾಹರಣೆಗಳಾಗಿವೆ. ಇನ್ನೊಂದು ಉದಾಹರಣೆಯನ್ನು ಇದೇ ಸಂದರ್ಭದಲ್ಲಿ ಕಾಣಬಹುದು.

**ಘನಬಾಹಾಬಹಳೋರ್ಮ್ಮಿಭಾಸಿತೆ ಮುಖವ್ಯಾಕೋಶಪಂಕೇ**

**ಜಮಂಡನೆ ದೃಗ್ಮೀನವಿಳಾಸೆ ನಾಭಿವಿತಾತವರ್ತ್ತಾಂಕೆ ಲಾವಣ್ಯಪಾ**

**ವನವಾಸ್ಸಂಭೃತೆ  ಚಂದ್ರಮೌಳಿವಧುವೀ ಶ್ರೀ ಆಚಿಯಕ್ಕಂ ಜಗ**

**ಜ್ಜನಸಂಸ್ತುತೈಕಳಂಕದೂರೆನುತೆಗಂಗಾದೇವಿತಾನಲ್ಲಳೇ** [151]

ಚಂದ್ರಮೌಳಿಯ ಪ್ರಿಯತಮೆಯಾದ ಆಚಿಯಕ್ಕನ ಸದೃಢ ಬಾಹುಗಳು ಅಲೆಯಂತೆ ಇತ್ತು. ಇವಳ ಮುಖವು ಅರಳಿದ ಕಮಲವಾಗಿ ರಾರಾಜಿಸಿತ್ತು. ಇವಳ ನಾಭಿಯು ಸುಳಿಯಾಗಿ ಸುತ್ತಿದಂತಿದ್ದು ಆಕರ್ಷಕವಾಗಿತ್ತು. ಲಾವಣ್ಯ ಗಂಗೆಯಾಗಿ ಈಕೆ ಶೋಭಿಸುತ್ತಿದ್ದಳು. ಕಳಂಕದೂರೆಯಾದ ಇವಳು ಪೂಜ್ಯವಾದ ಗಂಗಾದೇವಿಯೆ ಇರಬಹುದೇನೋ ಎನಿಸಿತ್ತು.

✓ **ಶ್ಲೇಷಾಲಂಕಾರ :**

ಒಂದು ಶಬ್ದಾನುಪೂರ್ವಿಯಲ್ಲಿ ನಾನಾರ್ಥಗಳನ್ನಿಟ್ಟು ಆ ಅರ್ಥಗಳ ಮೂಲಕ ಬೇರೆ ಬೇರೆ ವಸ್ತುಗಳನ್ನು ವರ್ಣಿಸುವುದು ಶ್ಲೇಷಾಲಂಕಾರವೆನಿಸಿಕೊಳ್ಳುತ್ತದೆ. ಇದಕ್ಕೆ ಉದಾಹರಣೆಯಾಗಿ ಮಹಾಮಂಡಲೇಶ್ವರನಾದ ಕೂಸ ಚಟ್ಟನ ಮಡದಿಯ ವರ್ಣನಾ ಪದ್ಯವನ್ನು [152] ಉಲ್ಲೇಖಿಸುತ್ತಿದ್ದೇನೆ –

**ಹರಹಾಸಂ ದರಹಾಸವಾಗೆ ಹಿಮವತ್ಕುತ್ಕೀಳಮುಂ ಶಂಭುಭೂ**

**ಧರಮುಂ ತುಂಗಕುಚಂ ಗಳಾಗೆ ಮುಖವಾಗಲ್ಚಂದ್ರಮಂ ಚಿಂನದಾ**

**ವರಣಂ ದುಗ್ಧಸಮುದ್ರವಾಗೆ ದಶನಂ ದಿಗ್ದಂತಿದಂತಂಗಳಾಗಿರೆ**

**ತಾರಾನಖಕೂಸಚಟ್ಟನ ಯಶಃಶ್ರೀ ಲೋಕದೊಳ್ ವರ್ತ್ತಿಪಳ್**

✓ **ದೃಷ್ಟಾಂತಾಲಂಕಾರ**

ಬೇರೆ ಬೇರೆ ವಾಕ್ಯಗಳಾದರೂ ಅರ್ಥದಲ್ಲಿ ಸಾಮ್ಯತೆಯಿಂದ ಒಂದು ಮತ್ತೊಂದರಿಂದ ಅರ್ಥವಾಗುವಂತಿದ್ದರೆ ಅದು ದೃಷ್ಟಾಂತಾಲಂಕಾರವೆನಿಸುತ್ತದೆ. ಇದಕ್ಕೆ ಹೊಯ್ಸಳ ಮಹಾಮಂಡಳೇಶ್ವರನಾದ 'ಅಂಣ್ಣನ ಗಂಧವಾರಣ' (ಚಟ್ಟನ ಪ್ರಿಯನಾದ) ಗೋವಿದೇವನು ಅಣ್ಣನಂತೆ ವೀರಾಗ್ರಣಿಯಾಗಿದ್ದನು ಎಂಬುದನ್ನು ತಿಳಿಸುವಾಗಿನ ಈ ಶಾಸನೋಕ್ತ ಪದ್ಯಗಳು [153] ದೃಷ್ಟಾಂತಕ್ಕೆ ಸಾಕ್ಷಿಯಾಗಿವೆ :

**ಚಂಗಾಳುವನೇಱಿದ ಮಾ**
**ತಂಗದ ಮೊಗದೊಡ್ಡಿನಲ್ಲಿ ಸಬಳದ ಮಸೆಗಳು**
**ಪಿಂಗದೆ ಪೋಲ್ತೆಸದಿರ್ದ್ದಿವು**
**ಸಂಗತಗುಣ ಗೋವಿಯಿಱಿದ ಸಾಸನಲಿಪಿಯಂ**

ಚೆಂಗಾಳ್ವ ದೊರೆಯನ್ನು ಸೋಲಿಸಿದುದು ಗೋವಿದೇವನ ಬಹುದೊಡ್ಡ ಸಾಧನೆ. ಈ ಶಾಸನೋಕ್ತ ಸಾಲಿನ ಅರ್ಥವೇನೆಂದರೆ, ಗೋವಿದೇವನು ಚೆಂಗಾಳ್ವ ಅರಸನೊಡನೆ ಯುದ್ಧ ಮಾಡುತ್ತಿದ್ದಾಗ, ಆ ಅರಸನು ಕುಳಿತಿದ್ದ ಆನೆಯ ಮುಖದ ಮೇಲೆ ಭರ್ಜಿಯಿಂದ ಇರಿದು ಮಾಡಿದ ಗಾಯಗಳು ಗೋವಿದೇವನ ಶೌರ್ಯವನ್ನು ವರ್ಣಿಸುವ ಶಾಸನದ ಅಕ್ಷರಗಳಂತೆಯಿದ್ದವು.

✓ **ಉತ್ಪ್ರೇಕ್ಷಾಲಂಕಾರ :**

ಒಂದು ವಸ್ತುವನ್ನು ಇನ್ನೊಂದು ವಸ್ತುವಾಗಿ ಇಲ್ಲಿ ಭಾವಿಸಲಾಗಿರುತ್ತದೆ. ಹಾಗೂ ಅಸಂಭಾವ್ಯತೆಯ ಅಂಶ ಪ್ರಧಾನವಾಗಿರುತ್ತದೆ. ಉದಾಹರಣೆಗೆ :

**ವಜ್ರಂವಜ್ರಭೃತೋಹಳಂ ಹಳಭೃತಶ್ಚಕ್ರಂ ತಥಾ ಚಕ್ರಿಣ**

**ಶ್ಯಕ್ತಿಶ್ಯಕ್ತಿಧರಸ್ಯಗಾಂಡಿವಧನುರ್ಗ್ಗಾಂಢಿವಕೋದಂಡಿನಃ**

**ಯಸ್ತದ್ವತ್ವಿತನೋತಿ ವಿಷ್ಣುನೃಪತೇಷ್ಕಾರ್ಯ್ಯಂ ಕಥಂ ಮಾದೃಶೈ**

**ಗ್ಗಂಗೋಗಾಂಗತರಂಗರಂಜಿತಯಶೋರಾಶಿಸ್ಸವರ್ಣ್ಯೋರ್ಽ ಭವೇತು** [154]

ವಜ್ರಧರನಿಗೆ ವಜ್ರಾಯುಧವಾಗಿ, ಹಲಾಯುಧನಿಗೆ(ಬಲರಾಮ) ಹಲಾಯುಧವಾಗಿ, ಚಕ್ರಧರನಿಗೆ ಚಕ್ರಾಯುಧವಾಗಿ ಶಕ್ತಿಧರನಿಗೆ(ಸ್ಕಂಧ)ಶಕ್ತಿಯಾಗಿ, ಗಾಂಢಿವಿಗೆ ಗಾಂಢಿವವಾಗಿ ಕಂಗೊಳಿಸುತ್ತಿದ್ದ ಗಂಗರಾಜನು ವಿಷ್ಣುವರ್ಧನನ ರಾಜಕಾರ್ಯದುರಂಧರನಾಗಿದ್ದನು. (ರಾಜಕಾರ್ಯದಲ್ಲಿ ತಾನೇ ತಾನಾಗಿದ್ದನು)

ಬೆಟ್ಟರಸದಂಡನಾಯಕನ ಶಾಸನವು ಹೊಯ್ಸಳ ಸೇವುಣ ಸಂಘರ್ಷದ ದೃಷ್ಟಿಯಿಂದ ಕುತೂಹಲವನ್ನುಂಟುಮಾಡುತ್ತದೆ. ಇಮ್ಮಡಿ ಬಲ್ಲಾಳನ ಮರಣದಿಂದ ಸಿಂಘಣನು ಸೇವುಣರ ವಶದಿಂದ ಜಾರಿಹೋಗಿದ್ದ ಪ್ರದೇಶಗಳನ್ನು ಪುನಃ ಗೆದ್ದುಕೊಳ್ಳಲು ಉತ್ತೇಜಿತನಾಗಿ ಕೂಡಲೇ ಹೊಯ್ಸಳರಾಜ್ಯದ ಮೇಲೆ ದಾಳಿ ಮಾಡಿದ್ದನು. ಆದರೆ 2ನೆಯ ನರಸಿಂಹನ ಸೇವುಣ ಸೈನ್ಯವನ್ನು ತಡೆದನು. ವೀರರೂ ಶೂರರೂ ಅಗಿದ್ದ ವಿಕ್ರಮ ಪಾಲ ಮತ್ತು ಪಾವುಷ ಎಂಬುವವರು ಸೇವುಣದ ಸೈನ್ಯದ ನೇತೃತ್ವವನ್ನು ವಹಿಸಿದ್ದನು. ಆದರೆ ಇಮ್ಮಡಿ ನರಸಿಂಹನು ಸೇವುಣರನ್ನು ಸೋಲಿಸಿ ಆ ಇಬ್ಬರನ್ನೂ ಕೊಂದನು. [155]

ಈ ದೃಶ್ಯವನ್ನು ಹೊಯ್ಸಳ ಶಾಸನಗಳು ವರ್ಣಿಸುತ್ತವೆ. " ಹೊಯ್ಸಳ ನರಸಿಂಹನು ತುಂಗಭದ್ರೆಯ ಸೇವಣರ ರಕ್ತದಿಂದ ತುಂಬಿಸಿದನು. ವಿಕ್ರಮಪಾಲ , ಪಾವುಷ ಮತ್ತಿತರರನ್ನು ಕೊಂದು ಅಪ್ಸರೆಯರ ಲೋಕವನ್ನು ಸೇವುಣರ ರಕ್ತದಿಂದ ತುಂಬಿದನು. ಇದರಿಂದ ಅವನು ಮಧು ಮತ್ತು ಕೈಟಭರನ್ನು ಜ್ಞಾಪಕಕೆ ತಂದನು. ಆನೆಯ ಮೇಲಿದ್ದ ಅಂಬಾರಿಯ ಎರಡೂ ಧ್ವಜಸ್ಥಂಭಗಳಲ್ಲಿ ನೇತುಹಾಕಿದ್ದ ವಿಕ್ರಮಪಾಲನು ಮತ್ತು ಪಾವುಷರ ರುಂಡಗಳು ನರಸಿಂಹನ ಶೌರ್ಯವನ್ನು ಹೊಗಳುತ್ತಿವೆಯೋ ಎನ್ನುವಂತೆ ಅಲ್ಲಾಡುತ್ತಿದ್ದವು".[156]

**4.3.4.6 : ಕಾವ್ಯದ ಗುಣ–ರೀತಿ–ಧ್ವನಿ ಸಿದ್ಧಾಂತಗಳ ಛಾಯೆಗಳು :**

 **ಕಾವ್ಯಗುಣ–ಶಾಸನಗುಣ :**

ಅಲಂಕಾರಗಳು ಕಾವ್ಯಕ್ಕೆ ಶೋಭೆಯನ್ನು ತರುವ ಸಾಧನಗಳೇನೋ ನಿಜ. ತಮ್ಮ ವಿಕಾಸದ ಹಂತದಲ್ಲಿ ಗುಣಗಳೂ ಕೂಡ ಅಲಂಕಾರಗಳು ಎಂಬರ್ಥವನ್ನು ಪಡೆದಿವೆ. ಕಾವ್ಯದ ಅಭಿವ್ಯಕ್ತಿಯಲ್ಲಿ ಕಾಣುವ ವಿಶೇಷತೆಯೇ ಗುಣ; ಇದನ್ನೇ ಕಾವ್ಯದ 'ಗುಣ' ಎಂದು ಕರೆಯುತ್ತಾರೆ. ಭರತನ ಕಾಲದಿಂದಲೂ ಕಾವ್ಯದ ದಶಗುಣಗಳ ವಿಚಾರವು ಪ್ರಸ್ತಾಪಗೊಂಡಿದ್ದರೂ ಸಹ ಹತ್ತು ಗುಣಗಳ ಮುಖ್ಯ ಪ್ರತಿಪಾದಕ ದಂಡಿಯೆಂದು ಗುರುತಿಸಲಾಗಿದೆ. ಈ ಕಾವ್ಯದ ಗುಣವಿಚಾರವನ್ನು ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿಯು ಸಹ ಗುರುತಿಸಿದ್ದೇನೆ. ಶ್ಲೇಷೆ, ಪ್ರಸಾದ, ಸಮತೆ, ಮಾಧುರ್ಯ, ಸುಕುಮಾರತಾ, ಅರ್ಥವ್ಯಕ್ತಿ, ಉದಾರತ್ವ, ಓಜಸ್ಸು, ಕಾಂತಿ, ಸಮಾಧಿಗಳು ಕಾವ್ಯಗುಣಗಳೆಂದು ಕರೆಯಲ್ಪಟ್ಟಿವೆ. ಈ ಗುಣಗಳ ಲಕ್ಷಣಗಳಾದ (ಕ್ರಮವಾಗಿ) ಅಲ್ಪಪ್ರಾಣಗಳು ಸುಭಗ ಪ್ರಯೋಗ, ಎಲ್ಲರಿಗೂ ತಿಳಿಯುವಂತಹ ಅರ್ಥ, ಮೃದುವಾದ ಪದ ಬಂಧುತ್ವವಿರುವಿಕೆ, ರಸವತ್ತಾದ ಮಾತುಗಳು, ಪರುಷ ವರ್ಣಗಳ ಪ್ರಯೋಗ, ಅರ್ಥಸ್ಪಷ್ಟತೆ, ವಿಶೇಷಣ, ಸಮಾಸದಿಂದ ಕೂಡಿರುವಿಕೆ, ಲೋಕ ಪ್ರಸಿದ್ಧವಾದ ಅರ್ಥ, ಉಜ್ವಲವಾದ ರಚನೆಗಳು ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ವಿಪುಲವಾಗಿ ಕಂಡುಬಂದಿವೆ. ಆದರೆ ಬಹುಪಾಲು ಪದ್ಯಗಳಲ್ಲಿ 'ಅರ್ಥವ್ಯಕ್ತಿ' ಗುಣವು ಯಥೋಚಿತವಾಗಿ ಬಳಕೆಯಾಗಿರುವುದು ಸಹ ಒಂದು ವಿಶೇಷವೆ ಸರಿ. ಇದು ಆಯಾ ಶಾಸನಕವಿಗಳ ಲೀಲಾಜಾಲವಾದ ಸೃಜನಶಕ್ತಿಯನ್ನು ಮನಗಾಣಿಸುತ್ತದೆ.

 **ಕಾವ್ಯರೀತಿ– ಶಾಸನರೀತಿ:**

ಶಬ್ದ ಮತ್ತು ಅರ್ಥಗಳ ವಿಶಿಷ್ಟ ಬಗೆಯ ವಿನ್ಯಾಸವೆ ರೀತಿಯನ್ನು ನಿರ್ಣಯಿಸುವ ಮಾರ್ಗ. ಭಾಷೆಯ ಬಳಕೆಯೇ ಇಲ್ಲಿ ಪ್ರಧಾನವಾದ ಅಂಶ. ಕವಿ ಬಳಸುವ ಭಾಷೆ ಸಾಮಾನ್ಯ ಭಾಷೆಗಿಂತ ಭಿನ್ನವಾದುದು. ಅದು ಒಂದು ರೀತಿಯಲ್ಲಿ ಅತಿಶಯವಾಗಿರುತ್ತದೆ. ಈ ಬಗೆಯ ಕಾವ್ಯದ ರೀತಿಯನ್ನು ನಿರ್ಧರಿಸುವುದರಲ್ಲಿ 'ಗುಣ'ಗಳ ಪಾತ್ರವು ಮುಖ್ಯವಾಗಿರುತ್ತದೆ. ಏಕೆಂದರೆ ಗುಣ ಮತ್ತು ರೀತಿ ಇವೆರಡಕ್ಕೂ ತೀರ ನಿಕಟವಾದ ಸಂಪರ್ಕವಿರುತ್ತದೆ. ಪಾಚೀನ ಲಾಕ್ಷಣಿಕರು ರೀತಿಯನ್ನು ಗುರುತಿಸುವಾಗ 'ಪ್ರಾದೇಶಿಕತೆ'ಯನ್ನು ಮುಖ್ಯವಾಗಿ ಪರಿಗಣಿಸಿದ್ದಾರೆ. ವಿದರ್ಭ, ಗೌಡ, ಪಾಂಚಾಲ ಪ್ರದೇಶಗಳ ಹಿನ್ನೆಲೆಯಿಂದ ರೀತಿಯನ್ನು ನೋಡುವಂತಹುದನ್ನು ನಂತರದ ಮೀಮಾಂಸಕರು ಬದಿಗೊತ್ತಿ ಪ್ರಾದೇಶಿಕತೆಗಿಂತ ಪದರಚನೆಗೆ ಹೆಚ್ಚಿನ ಮಹತ್ವ ಕೊಟ್ಟು ವಿವೇಚಿಸಿದರು. ಹಾಗಾಗಿ ವೈದರ್ಭೀ, ಗೌಡಿ, ಪಾಂಚಾಲಿ ಎಂಬ ಮೂರು ಬಗೆಯ ರೀತಿಗಳಲ್ಲಿ ಕಾವ್ಯದ ಒಳಗೆ ಹುದುಗಿರುವ ಬಹುಮುಖ್ಯವಾದ ತತ್ತ್ವಸತ್ವವನ್ನು ಅವಲಂಬಿಸಿ ನಿರ್ಧರಿಸಿದರು. ಹಾಗಾಗಿ ಕುಂತಕನು ಈ ರೀತಿಗಳಿಗೆ ಮಾರ್ಗಗಳೆಂದು ಹೆಸರಿತ್ತು ಸುಕುಮಾರಮಾರ್ಗ, ವಿಚಿತ್ರಮಾರ್ಗ, ಮಧ್ಯಮಮಾರ್ಗಗಳೆಂದು ಕರೆದು ಕಾವ್ಯದ ಅಂತಸತ್ವಕ್ಕೆ

ಮಹತ್ವ ನೀಡಿದ್ದಾನೆ. ಹೊಯ್ಸಳ ಮಹಾಮಂಡಲೇಶ್ವರರ ಶಾಸನಗಳ ಗದ್ಯಭಾಗಗಳಲ್ಲಿ ಸರಳ ಮತ್ತು ಆಕರ್ಷಕ ಪದ ವಿನ್ಯಾಸ, ದೀರ್ಘ ಸಮಾಸವಿಲ್ಲದಿರುವಿಕೆ, ಮನಮುಟ್ಟುವ ಗುಣ, ಕವಿ ಆಶಯ ಗ್ರಾಹ್ಯತೆ, ರಸಗ್ರಾಹಿತ್ವಗಳುಳ್ಳ ಸುಕುಮಾರಮಾರ್ಗವು ಕಂಡುಬರುತ್ತದೆ. ಇನ್ನು ಪದ್ಯಭಾಗಗಳಲ್ಲಿ ಸಮಾಸಪದಗಳು, ಬಂಧಗಳಲ್ಲಿನ ಬಂಧುರತೆ, ಭಾಷೆಯ ಔನ್ನತ್ಯ, ಪ್ರಸನ್ನತೆ, ಲುಪ್ತವಲ್ಲದ ವಿಸರ್ಗಾಂತಗಳು, ಶಾಸನಕವಿಗಳ ಪ್ರೌಢಿಮೆ, ಹೊಸ ಬಗೆಯ ಪದಲಾಲಿತ್ಯಗಳು, ಅನುಭವ ವೇದ್ಯವಾಗುವ ಮಂಜುಳ ರಚನೆ, ಸಹಜವಾದ ವರ್ಣನಾ ಭಾಗಗಳುಳ್ಳ ವಿಚಿತ್ರಮಾರ್ಗವು ಇರುವುದನ್ನು ನನ್ನ ಪ್ರಸ್ತುತ ಪ್ರಬಂಧವು ಹೇಳಬಯಸುತ್ತದೆ.

### ಕಾವ್ಯಧ್ವನಿ –ಧ್ವನಿಯ ವ್ಯಾಪಕತ್ವ –ಶಾಸನಧ್ವನಿ:

ಭಾರತೀಯ ಕಾವ್ಯಮೀಮಾಂಸೆಯ ರಂಗದಲ್ಲಿ ಧ್ವನಿಗೆ ಅಪೂರ್ವವಾದ ಸ್ಥಾನವಿದೆ. ಅದೊಂದು ಸಶಕ್ತವಾದ ವಿಚಾರಧಾರೆ. ಆನಂದವರ್ಧನನು ಧ್ವನಿಸಿದ್ಧಾಂತದ ಪ್ರತಿಪಾದಕ. ಶಬ್ದಗಳಿಗೆ ವಾಚ್ಯಾರ್ಥವಲ್ಲದೆ ಲಕ್ಷ್ಯಾರ್ಥ, ವ್ಯಂಗ್ಯಾರ್ಥಗಳನ್ನು ನೀಡುವ ಸಾಮರ್ಥ್ಯವುಂಟು. ಈ ವ್ಯಂಗ್ಯಾರ್ಥವನ್ನು ನೀಡುವ ಶಬ್ದಶಕ್ತಿಯೇ ಧ್ವನಿ ಎಂದು ಆನಂದವರ್ಧನನು ನಿರ್ದೇಶಿಸಿದ್ದಾನೆ. ಆದರೂ ಧ್ವನಿಯ ವ್ಯಾಪಕತ್ವವು ವರ್ಣಧ್ವನಿ, ಪದಧ್ವನಿ ಮತ್ತು ಪ್ರಬಂಧಧ್ವನಿಗಳಲ್ಲಿ ಅಡಗಿದೆ. ಹೀಗಾಗಿ ಕಾವ್ಯಗಳಲ್ಲಿ ಮಾತ್ರವಲ್ಲದೆ ಶಾಸನಗಳಲ್ಲಿಯೂ ಇದಕ್ಕೆ ಉದಾಹರಣೆಗಳನ್ನು ಗುರುತಿಸಲು ಸಾಧ್ಯವಿದೆ. ಅದರಲ್ಲೂ ನನ್ನ ಪ್ರಕೃತ ಅಧ್ಯಯನದಲ್ಲಿ ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ಈ ವರ್ಣಧ್ವನಿ, ಪದಧ್ವನಿ, ಪ್ರಬಂಧಧ್ವನಿಗಳನ್ನು ಲಕ್ಷೀಕರಿಸಲು ಸಾಧ್ಯವಿದೆ.

○ **ವರ್ಣಧ್ವನಿ:** ಕಾವ್ಯದಲ್ಲಿ ವರ್ಣವಿನ್ಯಾಸದಿಂದ ಉಂಟಾಗುವ ವ್ಯಂಜಕತ್ವಕ್ಕೆ ವರ್ಣಧ್ವನಿ ಎಂದು ಕರೆಯುತ್ತಾರೆ. ಅಂತೆಯೇ ಶಾಸನದಲ್ಲಿ ಕೂಡ ವರ್ಣಗಳಿಂದ ಪದ್ಯದಲ್ಲಿ ಪ್ರತಿಯೊಂದು ಅಂಶವೂ ವ್ಯಂಜಕವಾಗಬಲ್ಲದು. ಉದಾ:

**ಎತ್ತಿದನೆಲ್ಲಿಗಲ್ಲಿ ನೆಲೆವೀಡನೆ ಮಾಡಿದನೆಲ್ಲಿಗಲ್ಲಿ ಕ**
**ಣ್ವತ್ತಿದುದೆಲ್ಲಿಗಲ್ಲಿ ಮನಮಾವೆಡೆಯೆಯ್ದಿದುದೆಲ್ಲಿಗಲ್ಲಿ**
**ಪತ್ತಿನ ಜೈನಗೇಹಮನೆ ಮಾಡಿಸೆ ದೇಶದೊಳಲ್ಲಿಗಲ್ಲಿಗೆ**
**ತ್ತೆತ್ತಲು ಮಾವಗಂ ಪಳೆಯ ಮಾಳ್ಕೆವೊಲಾದುದು ಗಂಗರಾಜನಿಂ** [157]

ಗಂಗರಾಜನು ಹೋದ ಕಡೆಯಲೆಲ್ಲ, ತಂಗಿದ್ದ ಕಡೆಯಲ್ಲೆಲ್ಲ, ದೃಷ್ಟಿಬಿದ್ದ ಕಡೆಯಲ್ಲೆಲ್ಲ, ಇವನ ಮನಸ್ಸು ಹರಿದ ಕಡೆಯಲ್ಲೆಲ್ಲ ಜಿನಾಲಯಗಳು ಉದ್ಭವಿಸಿದವು. ಇವರಿಂದ ಮತ್ತೆ ಜೈನಧರ್ಮದ ಗತವೈಭವವು ಮರುಕಳಿಸಿತು. ಈ ಪದ್ಯದಲ್ಲಿ ಪ್ರಯೋಗಗೊಂಡಿರುವ ತ, ದ, ಲ, ನ, ಗಳೆಂಬ ದಂತ್ಯಗಳು ಮೃದುವಾದ ಗತಿಯನ್ನು ಒಳಗೊಂಡು ಪದ್ಯದಿಂದ ವೇದ್ಯಗೊಳ್ಳುವ ಶಾಂತರಸಕ್ಕೆ ಪೋಷಕವಾಗುವಂತಿದೆ. ಜೊತೆಗೆ ಉತ್ಪಲಮಾಲಾವೃತ್ತದ ಸೌಮ್ಯ ನಡೆಗೂ ಸಹಕಾರಿಯಾಗಿದೆ. ಇದೇ ವರ್ಣಧ್ವನಿ.

○ **ಪದಧ್ವನಿ :** ಎರಡು ಶಬ್ದಗಳ ವಾಚ್ಯಾರ್ಥ ಒಂದೇ ಆಗಿದ್ದರೂ ಅವುಗಳ ವ್ಯಂಜಕತ್ವವು ಮಾತ್ರ ಬೇರೆಬೇರೆಯಾಗಿರುತ್ತದೆ. ಅದೇ ಪದಧ್ವನಿ. ಉದಾ–

**ಗಂಗವಾಡಿಯ ಬಸದಿಗಳೆನಿತೊಳವನಿತಂ ತಾನೆಯ್ದೆ ಪೊಸಯಿಸಿದಂ**
**ಗಂಗವಾಡಿಯ ಗೊಮ್ಮಟದೇವರ್ಗ್ಗೆ ಸುತ್ತಾಲಯಮನೆಯ್ದೆ ಮಾಡಿಸಿದಂ**
**ಗಂಗವಾಡಿಯ ತಿಗುಳರಂ ಬೆಂಕೊಣ್ಡು ವೀರಗಂಗಂಗೆ ನಿಮಿರ್ಚ್ಚಿಕೊಟ್ಟಂ**
**ಗಂಗರಾಜನಾ ಮುನ್ನಿನ ಗಂಗರ ರಾಯಂಗಂ ನೂರ್ಮ್ಮಡಿ ಧನ್ಯನಲ್ತೆ** [158]

ಗಂಗವಾಡಿಯಲ್ಲಿ ಎಷ್ಟು ಜಿನಾಲಯಗಳಿವೆಯೋ ಅಷ್ಟನ್ನೂ ಈ ಗಂಗರಾಜನು ಜೀರ್ಣೋದ್ಧಾರ ಮಾಡಿಸಿದ್ದನು. ಗೊಮ್ಮಟಮೂರ್ತಿಗೆ ಸುತ್ತಾಲಯವನ್ನು ಮಾಡಿಸಿದನು ಎಂದು ಹೊಗಳುವ ಸಂದರ್ಭದಲ್ಲಿ ಇದರಲ್ಲಿ ನಾಲ್ಕನೆಯ ಸಾಲಿನಲ್ಲಿ ಹೇಳಲಾಗಿರುವ ವಿಷಯಕ್ಕೆ ನಾವು ವಿಶೇಷವಾದ ಗಮನವನ್ನು ನೀಡಬೇಕು. ಗಂಗರಾಜನಿಗಿಂತ ಹಿಂದೆ ಇದ್ದ ಗಂಗದೊರೆಗಳ ಸಾಹಸಗಳಿಗಿಂತ ಗಂಗರಾಜನ ಸಾಹಸವು ನೂರುಪಟ್ಟು ಹಿರಿದಾದುದಾಗಿತ್ತು. ಈ ಮಾತಿನ ಬಲದಿಂದ ನಾವು ಗಂಗರಾಜನು ಗಂಗದೊರೆಗಳ ಸಂಬಂಧಿ ಆಗಿದ್ದಿರಬಹುದು ಎಂದು ಕೂಡ ಊಹಿಸಬಹುದಾಗಿದೆ. ಕೆಲವರು ಮುನ್ನಿನ ಗಂಗರ ರಾಯ ಎಂದರೆ ಚಾವುಂಡರಾಯ ಎಂದು ಹೇಳುತ್ತಾರೆ. ನಾನು ಮುನ್ನಿನ ಗಂಗರ ರಾಯ ಎಂದರೆ ಹಿಂದೆ ಇದ್ದ ಗಂಗದೊರೆಗಳು ಎಂದೇ ಹೇಳಲು ಬಯಸುತ್ತೇನೆ.

○ **ಪ್ರಬಂಧಧ್ವನಿ:** ಮಹಾಕಾವ್ಯಗಳನ್ನು ಮಹಾಪ್ರಬಂಧಧ್ವನಿ ಎಂದು ಕರೆಯುತ್ತಾರೆ. ಒಟ್ಟು ಕಾವ್ಯದಿಂದ ಹೊರಡುವ ಧ್ವನಿಗೆ ಪ್ರಬಂಧಧ್ವನಿ ಎಂದು ಹೆಸರು. ಕಾವ್ಯದ ಪ್ರಬಂಧಧ್ವನಿ ಯಾವುದೆಂಬುದನ್ನು ಗುರುತಿಸುವುದು ಇಡೀ ಕಾವ್ಯದ ಪರಿಣಾಮರಮಣೀಯತೆಯಿಂದ; ಕಾವ್ಯದ ಯಾವುದೋ ಒಂದು ಭಾಗದಿಂದಲ್ಲ. ಅಂತೆಯೇ ಒಂದೊಂದು ಶಾಸನವು ಒಂದೊಂದು ಪುಟ್ಟಕಾವ್ಯವಾಗಿರುವುದಕ್ಕೆ ಅನೇಕ ಉದಾಹರಣೆಗಳು ದೊರೆಯುತ್ತವೆ. ಅದರಲ್ಲೂ ಮುಖ್ಯವಾಗಿ ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ರಾಜಕೀಯ ನಡೆಗಳ, ಹೋರಾಟದ, ಯುದ್ಧಚಿತ್ರದ ಸಂಗತಿಗಳು ವರ್ಣಿತವಾಗಿವೆ. ಇಲ್ಲೆಲ್ಲ ನಾನು ವೀರರಸವು ಪ್ರಧಾನವಾಗಿ ಪ್ರಣೀತವಾಗಿದೆ ಎಂದು ಹೇಳಲಿಚ್ಚಿಸುತ್ತೇನೆ. ಜೊತೆಜೊತೆಗೆ ಅವರು ನೀಡಿದ ದಾನದ ವಿವರವಿರುವ ಶಾಸನಗಳಲ್ಲಿ ಸಾಮಾಜಿಕ, ಆರ್ಥಿಕ, ಧಾರ್ಮಿಕ ಸಂಗತಿಗಳು ಇಡಿಕಿರಿದಿರುವುದನ್ನು ಗಮನಿಸಿದಾಗ ಶಾಂತರಸವೂ ಮೇರೆವರಿದಿರುವುದನ್ನೂ ಲಕ್ಷಿಸಬಹುದು. ಈ ಶಾಂತ ಭಾವದ ಪ್ರತೀತಿಯೆ ಪ್ರಬಂಧಧ್ವನಿ.

ಛಂದೋಬಂಧಗಳಾದ ಕಂದ, ರಗಳೆ, ಖ್ಯಾತಕರ್ಣಾಟಕಗಳು ಈ ಅಧ್ಯಾಯದಲ್ಲಿ ಸಂದರ್ಭೋಚಿತವಾಗಿ ಉದಾಹರಣೆಗಳಲ್ಲಿ ಮಿಳಿತವಾಗಿರುವುದನ್ನು ಗಮನಿಸಬಹುದು.ಹಾಗಾಗಿ ಇಲ್ಲಿ ಮತ್ತೆ ವಿವರಿಸ ಹೋಗಿಲ್ಲ. ರಗಳೆ, ಖ್ಯಾತಕರ್ಣಾಟಕಗಳ ಎಲ್ಲ ಭೇದಗಳು ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳಲ್ಲಿ ಬಳಕೆಯಾಗಿವೆ. ಕಂದಪದ್ಯವಂತೂ ಎಲ್ಲೆಡೆ ಮೇರೆವರಿದಿದೆಯೆಂದರೆ ಅತಿಶಯೋಕ್ತಿಯಲ್ಲ.

## ಕೊನೆಟಿಪ್ಪಣಿಗಳು ಮತ್ತು ಆಕರಸೂಚಿ

01. ಎಕ 12: (ಪ) ಕ, 200
02. ಎಕ 24 (ಪ): ಚಿನಾ 95
03. ಎಕ 24 (ಪ) : ಚಿನಾ 35
04. ಎಕ 2(ಪ): ಶ್ರಬೆ 157
05. ಎಕ 2(ಪ) : ಶ್ರಬೆ 136
06. ಎಕ 24 (ಪ), ಚಿನಾ 40
07. ಎಕ 2(ಪ) : ಶ್ರಬೆ 82
08. ಎಕ 24 (ಪ): ಚಿನಾ 13
09. ಎಕ 2(ಪ) : ಶ್ರಬೆ 69
10. ಎಕ 2(ಪ) : ಶ್ರಬೆ 362
11. ಎಕ 2(ಪ): ಶ್ರಬೆ 158,
12. ಎಕ 2(ಪ): ಶ್ರಬೆ 82
13. ಎಕ 2(ಪ): ಶ್ರಬೆ 342
14. ಎಕ 24(ಪ): ಚಿನಾ 13
15. ಎಕ 9(ಪ): ಬೇ 300
16. ಎಕ 2(ಪ) : ಶ್ರಬೆ 444
17. ಎಕ 10 (ಪ) : ಅಕೆ 84
18. ಡಾ. ಡಿ.ಎಲ್. ನರಸಿಂಹಾಚಾರ್: 1959: ಶಬ್ಧಮಣಿದರ್ಪಣ: ಶಾರದಾಮಂದಿರ: ಮೈಸೂರು
19. ಶ್ಯಾಮಾಶಾಸ್ತ್ರಿ. ಆರ್. (ಡಾ) : 1923: ರುದ್ರಭಟ್ಟ ವಿರಚಿತಮಾದ ಜಗನ್ನಾಥ ವಿಜಯ : ಓರಿಯಂಟಲ್ ರಿಸರ್ಚ್ ಪಬ್ಲಿಕೇಷನ್ಸ್: ಮೈಸೂರು
20. ಶಾಮಾಶಾಸ್ತ್ರಿ. ಆರ್. (ಡಾ) : ಜಗನ್ನಾಥ ವಿಜಯ : 1.16
21. ಶಾಮಾಶಾಸ್ತ್ರಿ. ಆರ್. (ಡಾ) : ಜಗನ್ನಾಥ ವಿಜಯ : 14.38
22. ಶಾಮಾಶಾಸ್ತ್ರಿ. ಆರ್. (ಡಾ) : ಜಗನ್ನಾಥ ವಿಜಯ : 14.10
23. ಶ್ಯಾಮಾಶಾಸ್ತ್ರಿ ಆರ್. (ಡಾ) : ಜಗನ್ನಾಥ ವಿಜಯ : 14.42
24. ಶಾಮಾಶಾಸ್ತ್ರಿ. ಆರ್. (ಡಾ) : ಜಗನ್ನಾಥ ವಿಜಯ : 14.40
25. ಶ್ಯಾಮಾಶಾಸ್ತ್ರಿ. ಆರ್. (ಡಾ) : ಜಗನ್ನಾಥ ವಿಜಯ : 14.26
26. ಶ್ಯಾಮಾಶಾಸ್ತ್ರಿ. ಆರ್. (ಡಾ) : ಜಗನ್ನಾಥ ವಿಜಯ : 14.33
27. ಮರಿಯಪ್ಪ ಭಟ್ಟ ಎಂ: 1924: ವ್ಯವಹಾರಗಣಿತ : ಮೈಸೂರು ವಿಶ್ವವಿದ್ಯಾನಿಲಯ : ಮೈಸೂರು
28. ಮರಿಯಪ್ಪ ಭಟ್ಟ ಎಂ: 1924: ವ್ಯವಹಾರಗಣಿತ : ಮುನ್ನುಡಿ ಪುಟ 1
29. ಮರಿಯಪ್ಪ ಭಟ್ಟ ಎಂ: 1924: ವ್ಯವಹಾರಗಣಿತ : 1.5
30. ಮರಿಯಪ್ಪ ಭಟ್ಟ ಎಂ: 1924: ವ್ಯವಹಾರಗಣಿತ :1.6
31. ಮರಿಯಪ್ಪ ಭಟ್ಟ ಎಂ: 1924: ವ್ಯವಹಾರಗಣಿತ : 1.7
32. ಮರಿಯಪ್ಪ ಭಟ್ಟ ಎಂ: 1924: ವ್ಯವಹಾರಗಣಿತ : ಮುನ್ನುಡಿ ಪುಟ 1
33. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ {ಸಮಗ್ರ ಕನ್ನಡ ಜೈನ ಸಾಹಿತ್ಯ ಮಾಲೆ 12} ಮುನ್ನುಡಿ ಪು 4 ಕನ್ನಡ ವಿಶ್ವವಿದ್ಯಾಲಯ : ಹಂಪಿ
34. ಅದೇ
35. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ.ಪು ಆ 1. ಪ24
36. ಎಕ 10 (ಪ) : ಅಕೆ77
37. ಎಕ 10 (ಪ) : ಅಕೆ 69
38. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ.ಪು ಆ 16, ಪ 90
39. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ.ಪು ಆ 1 ಪ 25
40. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ ಪು ಆ 16 ಪ 91
41. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ.ಪು ಆ 1 ಪ 21
42. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ.ಪು ಆ 2 ಪ 7
43. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವಪು ಆ 3 ಪ 39

44. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವಮು ಆ 2 ಪ
45. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ.ಮು ಆ 3 ಪ 6
46. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ.ಮು ಆ 1 ಪ 47
47. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ.ಮು ಆ 7 ಪ 52
48. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ.ಮು ಆ 2 ಪ 12
49. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವ.ಮು ಆ 9 ಪ 61
50. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: ವಮು ಆ 9 ಪ 64
51. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ: 28, 51
52. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ:63, 71
53. ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ:219, 78
54. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ {ಸಮಗ್ರ ಕನ್ನಡ ಜೈನ ಸಾಹಿತ್ಯ ಮಾಲೆ 13} ಕನ್ನಡ ವಿಶ್ವವಿದ್ಯಾಲಯ : ಹಂಪಿ
55. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ ಅ.ಮು ಆ 1 ಪ 56
56. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ : ಅ ಮು ಆ 1 ಪ 51
57. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ ಅ ಮು ಆ 1 ಪ 53
58. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ ಅ.ಮು ಆ 1 ಪ 50
59. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ ಅ.ಮು ಆ 4 ಪ 60
60. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ ಯ.ಚ ಆ 1 ಪ 21
61. ಸಾಹಿತ್ಯ ಮತ್ತು ಶಾಸನಗಳಲ್ಲಿ ಜಲತಂತ್ರಜ್ಞಾನ –ಡಾ. ಹರಿಹರ ಶ್ರೀನಿವಾಸರಾವ್
62. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ ಯ.ಚ ಆ 2 ಪ 28
63. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ : ಅ.ಮು ಆ 3 ಪ 100
64. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ ಅ.ಮು ಆ 11 ಪ 65
65. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ ನಅ.ಮು ಆ 12 ಪ 16
66. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ ಅ.ಮು 12 ಪ 49
67. ಪ್ರೊ. ಸಿ. ಪಿ. ಕೃಷ್ಣಕಮಾರ್ (ಸಂ) : 2007: ಜನ್ನ ಸಂಪುಟ ಅ.ಮು ಆ 12 ಪ 50
68. ಹೆಂಡಿ ಬಿ. ಬಿ.(ಸಂ) :1973: ದೀಕ್ಷಾಬೋಧೆ, ಕರ್ನಾಟಕ ವಿಶ್ವವಿದ್ಯಾಲಯ: ಧಾರವಾಡ.
69. ಹೆಂಡಿ ಬಿ. ಬಿ :1973: ದೀಕ್ಷಾಬೋಧೆ 1.1
70. ಹೆಂಡಿ ಬಿ. ಬಿ :1973: ದೀಕ್ಷಾಬೋಧೆ 3.13
71. ಹಿರೇಮಠ. ಆರ್. ಸಿ. : 1958: ಪದ್ಮರಾಜ ಪುರಾಣ :ಶ್ರೀಮೃತ್ಯುಂಜಯ ಮಹಾಸ್ವಾಮಿಗಳು, ಧಾರವಾಡ 5–6ರಿಂದ 36)
72. ಪದ್ಮರಾಜಪುರಾಣ 13–97
73. ಬಸಪ್ಪ. ಎಸ್ : 1975: ಸಾನಂದ ಚರಿತೆ : ಮೈಸೂರು ವಿವಿ: ಮೈಸೂರು ಉಪೋದ್ಘಾತ,
74. ಎಸ್.ಎಂ ಹರದಗಟ್ಟಿ : 1985: ಕವಿರಾಘವಾಂಕ ಮತ್ತು ಅವನ ಕೃತಿಗಳು: ಕರ್ನಾಟಕ ವಿಶ್ವವಿದ್ಯಾಲಯ
: ಧಾರವಾಡ: ಮು 51
75. ಮಾಳವಾಡ. ಸ. ಸ: 1954: ರಾಘವಾಂಕ ಚಾರಿತ್ರ್ಯ: ಮುರುಘಾಮಠ: ಧಾರವಾಡ 19– 34ರಿಂದ 68ವರೆಗೆ
76. ಶಿವಮೂರ್ತಿಶಾಸ್ತ್ರಿ ಬಿ: 1966: ವೀರೇಶಚರಿತೆ: ಶಾರದಾ ಮಂದಿರ: ಮೈಸೂರು ಪ್ರಸ್ತಾವನೆ, ಮು 18.
77. ಎಂ. ಚಿದಾನಂದ ಮೂರ್ತಿ : 1990: ರಾಘವಾಂಕನ ಸಮಾಧಿ ಮತ್ತು ಕೆರೆಯ ಪದ್ಮರಸನ ಕೆರೆ, ಸಾಧನೆ
19– 3,4, ಮು 1–6
78. ಹೆಂಡಿ ಬಿ. ಬಿ. ದೀಕ್ಷಾಬೋಧೆ ಮು 6
79. ಹೆಂಡಿ ಬಿ. ಬಿ. ದೀಕ್ಷಾಬೋಧೆ ಮು 134
80. ಹೆಂಡಿ ಬಿ. ಬಿ. ದೀಕ್ಷಾಬೋಧೆ ಮುಟ 67
81. ಹೆಂಡಿ ಬಿ. ಬಿ. ದೀಕ್ಷಾಬೋಧ ಮು 7
82. ಹೆಂಡಿ ಬಿ. ಬಿ. ದೀಕ್ಷಾಬೋಧೆ ಮು 18
83. ಹೆಂಡಿ ಬಿ. ಬಿ. ದೀಕ್ಷಾಬೋಧೆ ಮು 25
84. ಹೆಂಡಿ ಬಿ. ಬಿ. ದೀಕ್ಷಾಬೋಧೆ: ಮು 118
85. ಹೆಂಡಿ ಬಿ. ಬಿ. ದೀಕ್ಷಾಬೋಧೆ: ಮು 39

86. ಕುಲಕರ್ಣಿ. ಬಿ. ಎಸ್. 1968: ನೇಮಿನಾಥ ಪುರಾಣಂ : ಧಾರವಾಡ ಆಶ್ವಾಸ 1, ಪದ್ಯ 45
87. ಕುಲಕರ್ಣಿ. ಬಿ. ಎಸ್. 1968: ನೇಮಿನಾಥ ಪುರಾಣಂ : ಆಶ್ವಾಸ 1, ಪದ್ಯ 45
88. ಕುಲಕರ್ಣಿ. ಬಿ. ಎಸ್. 1968: ನೇಮಿನಾಥ ಪುರಾಣಂ : ಅ 1 ಪ 34
89. ಕುಲಕರ್ಣಿ. ಬಿ. ಎಸ್. 1968: ನೇಮಿನಾಥ ಪುರಾಣಂ : ಆ 1 ಪ 40
90. ಕುಲಕರ್ಣಿ. ಬಿ. ಎಸ್. 1968: ನೇಮಿನಾಥ ಪುರಾಣಂ : ಆ 1: ಪ 48
91. ಕುಲಕರ್ಣಿ. ಬಿ. ಎಸ್. 1968: ನೇಮಿನಾಥ ಪುರಾಣಂ ಅ 5, ಪ 100)
92. ಕುಲಕರ್ಣಿ. ಬಿ. ಎಸ್. 1968: ನೇಮಿನಾಥ ಪುರಾಣಂ ಅ 6, ಪ 27)
93. ಕುಲಕರ್ಣಿ. ಬಿ. ಎಸ್. 1968: ನೇಮಿನಾಥ ಪುರಾಣಂ ಅ 1 ಪ 43
94. ಕುಲಕರ್ಣಿ. ಬಿ. ಎಸ್. 1968: ನೇಮಿನಾಥ ಪುರಾಣಂ ಆ 3 ಪ 72
95. ಬೆಳ್ಳಿಕೋಟೆ ರಾಮಚಂದ್ರಶರ್ಮ : 1954: ನಾನಾರ್ಥ ರತ್ನಮಾಲಾ ಆಫ್ ಇರುಗಪ್ಪ ದಂಡನಾಥ: ಡೆಕ್ಕನ್ ಕಾಲೇಜ್: ಪೂನಾ
96. ಎಂ. ಎನ್. ಶ್ರೀನಿವಾಸ ಅಯ್ಯಂಗಾರ್ : 1982: ಸಂಸ್ಕೃತ ಕವಿ ಚರಿತ್ರೆ ಸಂಪುಟ 2: : ಸಂಸ್ಕೃತ ಕವಿತೆ ಪ್ರಕಾಶನ: ಬೆಂಗಳೂರು
97. ಎಚ್. ಎಂ. ನಾಗರಾಜು : 1999: ವಿಜಯನಗರದ ಇಮ್ಮಡಿ ದೇವರಾಯ: ಸಂವಹನ ಪ್ರಕಾಶನ: ಮೈಸೂರು: ಪುಟ 251
98. ಗಂಗಾಂಬಿಕೆ ಎಸ್: 2014: ಮಹಾಪ್ರಧಾನಿ ಬೈಚಯದಂಡನಾಯಕ ಮತ್ತು ಅವನ ವಂಶೀಯರು : ವಿಜಯನಗರ ಅಧ್ಯಯನ: ಸಂಪುಟ 18. ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ: ಮೈಸೂರು
99. ಎ.ಕ 11 (ರೈಸ್) : ದಾವ 25
100. ಎಕ 6 (ರೈ): ಚಿಮ 137
101. ಎಕ 5 (ರೈ) ಅಕೆ 69
102. ಎಕ 5(ರೈ) ಹಾ 119
103. ನರಸಿಂಹಾಚಾರ್ಯ.ಆರ್: 2005: (ಪ.ಮು): ಕರ್ನಾಟಕ ಕವಿ ಚರಿತೆ ಸಂ 1 ಪುಟ 159
104. ನರಸಿಂಹಾಚಾರ್ಯ.ಆರ್: 2005: (ಪ.ಮು): ಕರ್ನಾಟಕ ಕವಿ ಚರಿತೆ ಸಂ 1 ಪುಟ 250
105. ನರಸಿಂಹಾಚಾರ್ಯ.ಆರ್: 2005: (ಪ.ಮು): ಕರ್ನಾಟಕ ಕವಿ ಚರಿತೆ ಸಂ 1 ಪುಟ 308–309
106. ನರಸಿಂಹಾಚಾರ್ಯ. ಆರ್: 2005: (ಪ.ಮು): ಕರ್ನಾಟಕ ಕವಿ ಚರಿತೆ ಸಂ 1 ಪುಟ 340
107. ನರಸಿಂಹಾಚಾರ್ಯ.ಆರ್: 2005: (ಪ.ಮು): ಕರ್ನಾಟಕ ಕವಿ ಚರಿತೆ ಸಂ 1 ಪುಟ 341
108. ನರಸಿಂಹಾಚಾರ್ಯ.ಆರ್: 2005: (ಪ.ಮು): ಕರ್ನಾಟಕ ಕವಿ ಚರಿತೆ ಸಂ 1 ಪುಟ 420
109. ಚಿದಾನಂದ ಮೂರ್ತಿ ಎಂ: ಪಂಪಕವಿ ಮತ್ತು ಮೌಲ್ಯ ಪ್ರಸಾರ : ಸಂಶೋಧನ ತರಂಗ : ಭಾಗ 1 : ಪುಟ 13–14 ಬೆಂಗಳೂರು
110. ಎ.ಕ 4 (ರೈ) ನಾಗ 47
111. ಎಕ 8(ಪ) ; ಬೇ 409, 410
112. ಎಕ 4(ಪ) ಚಾನ 2
113. ಎಕ 24(ಪ) : ತುಮ
114. ಎಕ 11 (ರೈ) ದಾವ 70
115. ಎಕ 2 (ಪ) : ಶ್ರಬೆ 136
116. ಎಕ 6(ಪ): ಮಂ 29
117. ಎಕ 5 (ರೈ) ಬೇ 137
118. ಎಕ 24(ಪ) ಚಿನಾ 32
119. ಎಕ 12 (ಪ): ಕ 179
120. ಎಕ 10 (ಪ) : ಅಕೆ 59
121. ಎಕ 10 (ಪ) : ಅಕೆ 254
122. ಎಕ 12 (ಪ) ಕ 201
123. ಎಕ 12 (ಪ) ಕ 201
124. ಎಕ 24 (ಪ) ಚಿನಾ 95
125. ಎಕ 24 (ಪ) ಚಿನಾ 13
126. ಎಕ 10 (ಪ) ಅರ 42

127. ಎಕ 10 (ಪ)ಅರ 44
128. ಎಕ 10 (ಪ) ಚಪ 51
129. ಎಕ 6 (ಪ) : ಮಂ 121, 122
130. ಎಕ 24 (ಪ) : ಚಿನಾ 35
131. ಎಕ 12 (ಪ) ಕ 38
132. ಎಕ 24 (ಪ) ಚಿನಾ 40
133. **ಎಕ 12(ಪ) : ಕ 201**
134. **ಅದೇ 200**
135. ಎಕ 12 (ಪ) ಕ 101
136. ಎಕ 24 (ಪ) ಚಿನಾ 13
137. **ಅದೇ 39**
138. ಎಕ 12 (ಪ): ಕಡೂ 101, 199
139. ಎಕ 24 (ಪ) : ಚಿನಾ 32
140. ಎಕ 10 (ಪ) : ಅರ 88 :
141. **ಎಕ 12(ಪ) : ಕ 200**
142. **ಎಕ 24 (ಪ) : ಚಿನಾ 13**
143. **ಎಕ 24 (ಪ) : ಚಿನಾ 13**
144. **ಎಕ 12(ಪ) : ಕ 200**
145. **ಎಕ 12(ಪ) : ಕ 200**
146. **ಎಕ 8 (ಪ) : ಬೇ 409–410**
147. ಎಕ 6 (ಪ) : ಮಂ 121, 122
148. **ಎಕ 24 (ಪ) : ಚಿನಾ 13**
149. ಎಕ (ಪ) :ಚಿನಾ 32
150. ಎಕ 12 (ಪ) : ಕ 234
151. ಎಕ 2 (ಪ ) : ಶ್ರಬೆ 444
152. ಎಕ 8 (ಪ) : ಬೇ 409, 410
153. ಎಕ 24(ಪ) ಚಿನಾ 13
154. ಎಕ 2 (ಪ) : ಶ್ರಬೆ 154
155. ಎಕ 11(ಪ): ಚಿಮ 87
156. ಎಕ 8(ಪ): ಹಾ 112
157. ಎಕ 2(ಪ): ಶ್ರಬೆ 82
158. ಎಕ 2(ಪ): ಶ್ರಬೆ 82

# ಅಧ್ಯಾಯ 5

## ಕುಶಲಕಲೆಗಳ ಅಭಿವೃದ್ಧಿ ಮತ್ತು ಸ್ಥಳೀಯ ಆರ್ಥಿಕ ಸಂವರ್ಧನೆ

ಜನಸಮುದಾಯಗಳು ತಮ್ಮ ದೈನಂದಿನ ಬದುಕನ್ನು ನಿಯಮಿತವಾಗಿ ಸಾಗಿಸಬೇಕಾದರೆ ಅವರಿಗೆ ಅನೇಕ ಸಲಕರಣೆಗಳ ಅವಶ್ಯಕತೆ ಇದ್ದೇ ಇರುತ್ತದೆ. ತಮ್ಮ ಕಸುಬುಗಳನ್ನು ಅವರು ಸರಿಯಾಗಿ ನಿರ್ವಹಿಸಬೇಕಾದರೆ ತಮ್ಮ ಕುಲಕಸುಬುಗಳಿಗೆ ಇಂಬಾಗುವಂತಹ ಮುಖ್ಯವಾದ ಕಚ್ಚಾ ಸಾಮಗ್ರಿಗಳು ಹಾಗೂ ಕರ್ಮಸಾಧನಗಳ ಲಭ್ಯತೆಯ ಪರಿಸರದಲ್ಲೇ ತಮ್ಮ ವೃತ್ತಿಗಳನ್ನು ಸಾಧಿಸಬೇಕಾಗುತ್ತದೆ. ಪ್ರತಿಯೊಂದು ವೃತ್ತಿಯೂ ಕೂಡ ಇಂತಹ ಮೂಲಭೂತವಾದ ವಸ್ತುವಿಶೇಷಗಳನ್ನು ಅವಲಂಬಿಸಿರುತ್ತದೆ. ಹಾಗೆ ಅವಲಂಬಿತ ವಸ್ತುಗಳು ಒಂದೆಡೆ ಸಿಗುವಂತಾಗುವುದು ಅತ್ಯಂತ ಪ್ರಮುಖವಾದ ಸಂಗತಿಯಾಗುತ್ತದೆ. ಹೀಗೆ ಅಲ್ಲೊಂದು ಸ್ಥಳೀಯ ಮಾರುಕಟ್ಟೆಯು ರೂಪುಗೊಳ್ಳುವುದರ ಮೂಲಕ ಆರ್ಥಿಕ ಕೇಂದ್ರಗಳಾಗಿ ರೂಪುಗೊಳ್ಳುವುದು ಸಾಧ್ಯವಾಗುತ್ತದೆ. ಅಲ್ಲೇ ಜನವಸತಿಯ ನೆಲೆಗಳು ಕೂಡ ಇದರಿಂದ ಏರ್ಪಡುವುದು ಅನುಕೂಲವಾಗುತ್ತದೆ. ಹಾಗಾಗಿ ಜನಸಮುದಾಯ ಗಳು ಹಾಗೂ ಕುಲಕಸುಬುಗಳನ್ನು ನಿರ್ವಹಿಸುವ ಕುಶಲಕರ್ಮಿಗಳು ಪರಸ್ಪರ ಹೊಂದಿಕೆಯಾಗುವಂತಹ ಸ್ಥಳೀಯ ಪರಿಸರವನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಹೀಗಿದ್ದಾಗ ಮಾತ್ರ ಅವರಿಂದ ನಿರ್ಮಿತವಾದ ಕುಶಲ ಕಲೆಗಳ ಸಾಮಗ್ರಿಗಳು ಮತ್ತು ವ್ಯಾಪಾರ ಕೇಂದ್ರಗಳು ಅಭಿವೃದ್ಧಿಯಾಗುವುದಕ್ಕೆ ಸಹಕಾರಿಯಾಗಿರುತ್ತದೆ. ಹೀಗೆ ಸ್ಥಳೀಯ ಮಾರುಕಟ್ಟೆಯ ಮೂಲಕ ಉಂಟಾದ ಸ್ಥಳೀಯ ಆರ್ಥಿಕ ಸಂವರ್ಧನೆಯನ್ನು ಅರಿಯುವುದು ಈ ಅಧ್ಯಾಯದ ಪರಮ ಉದ್ದೇಶವಾಗಿದೆ. ಅವರ ಪ್ರತಿ ನಡೆಯಲ್ಲಿಯೂ ಸ್ಥಳೀಯ ಸಂಪನ್ಮೂಲಗಳಿಂದ ಆದಾಯವನ್ನು ಗಳಿಸಿ ಯೋಗ್ಯ ರೀತಿಯಲ್ಲಿ ಅದನ್ನು ಸಂಚಯನಗೊಳಿಸಿ ಸ್ಥಳೀಯವಾಗಿ ಆರ್ಥಿಕ ಸಂವರ್ಧನೆಗೆ ದಾಂಗುಡಿ ಇಡುತ್ತಿದ್ದುದನ್ನು ಈ ಅಧ್ಯಾಯವು ನಿಚ್ಚಳಗೊಳಿಸುತ್ತದೆ.

ಹೀಗೆ ಒಂದು ಕಾಲವು ಪ್ರಭಾವಶಾಲಿಯಾಗಿ ರೂಪು ಗೊಳ್ಳುವುದರ ಹಿಂದೆ ಹೊಯ್ಸಳ ಮಹಾಮಂಡಳೇಶ್ವರರ ಪಾತ್ರ ಹಿರಿದಾದುದಾಗಿದೆ. ಎಲ್ಲೋ ಒಂದು ಮೂಲೆ ಯಲ್ಲಿದ್ದು ಮಾರುಕಟ್ಟೆಯಿಂದ ವಿಮುಖವಾಗಿದ್ದ ಕುಶಲಕರ್ಮಿಗಳಿಗೆ ಒಂದು ನಿರ್ದಿಷ್ಟವಾದ ಸಹಾಯವನ್ನು ಮಾಡಿ ಇಂತಹ ಸಂತೆ, ಮಾರುಕಟ್ಟೆಗಳಲ್ಲಿ ತಮ್ಮ ವ್ಯಾಪಾರವನ್ನು ಬಲಗೊಳಿಸಿಕೊಳ್ಳುವಂತೆ ಮಹಾಮಂಡಳೇಶ್ವರರು ಇವರಿಗೆ ಅನೇಕ ಬಗೆಯಲ್ಲಿ ಸಹಾಯವನ್ನು ಮಾಡಿ ಅವರಿಗೆ ದಾನ–ದತ್ತಿಗಳನ್ನು ನೀಡಿ, ದೇಗುಲಗಳು ಹಾಗು ಶ್ರೀಮಂತರ ಸಹವಾಸವನ್ನು ಸಾಧಿಸಿ ಆರ್ಥಿಕ ಪ್ರಗತಿಗೆ ಹೇರಳವಾದ ಕೊಡುಗೆಗಳನ್ನು ನೀಡಿದ್ದಾರೆ. ಸ್ವತಃ ಹೊಯ್ಸಳ ಮಹಾಮಂಡಳೇಶ್ವರರೇ ಅದ್ಭುತವಾದ ಆರ್ಥಿಕ ಅರಿವನ್ನು ಹೊಂದಿದವರಾಗಿದ್ದರು. ಉದಾ: ಸೋಮಯದಂಡನಾಯಕನಿಗಿದ್ದ 'ನಿಯೋಗಯೋಗಂಧರ' ಎಂಬ ಬಿರುದು ಅವನು ವಾಣಿಜ್ಯ ಸಂಬಂಧಿ ವಿಚಾರಗಳಲ್ಲಿ ನಿಷ್ಣಾತನಾಗಿದುದನ್ನು ತಿಳಿಸುತ್ತದೆಂದು ಅಭಿಪ್ರಾಯಿಸಲಾಗಿದೆ[1] ಆರ್ಥಿಕತೆಗೆ ಪೂರಕವಾಗುವಂತಹ ಕುಶಲಕರ್ಮಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಇದರೊಂದಿಗೆ ವ್ಯಾಪಾರವು

ಅಭಿವೃದ್ಧಿಯನ್ನು ಕಾಣಬೇಕಾದರೆ ಕೇವಲ ಕೃಷಿ ಮತ್ತು ಮಾರುಕಟ್ಟೆಗಳು ಮಾತ್ರ ಸಾಕಾಗುವುದಿಲ್ಲ. ಇನ್ನಿತರ ಪ್ರಭುತ್ವದ ಆಕರಗಳೊಂದಿಗೆ ಅನುಸಂಧಾನಿಸುವ ಸಂಸ್ಥೆಗಳಿಂದ ನಿಷ್ಪನ್ನಗೊಂಡ ವ್ಯವಹಾರಗಳನ್ನೂ ಕೂಡ ನಾವು ಇದೇ ಹಿನ್ನೆಲೆಯಲ್ಲಿ ಗಮನಿಸಬೇಕಾಗುತ್ತದೆ. ಇಂತಹ ಸಂಗತಿಗಳನ್ನು ಇನ್ನು ಮುಂದೆ ಚರ್ಚಿಸಲಾಗಿದೆ.

**5.1 ಕೃಷಿಯೇತರ ಭೂಮಿಗಳ ಪರಿವರ್ತನಾ ಪ್ರಕ್ರಿಯೆಗಳು :**

ಹೊಯ್ಸಳರ ಕಾಲದಲ್ಲಿ ನಿರಂತರ ಯುದ್ಧಗಳು ಜರುಗುತ್ತಿದ್ದವು. ರಾಜನಾದರೋ ತನ್ನ ಸ್ಥಾನವನ್ನು ಉಳಿಸಿಕೊಳ್ಳಲು ಹಾಗು ತನ್ನ ವ್ಯಾಪಾರಿ ಕೇಂದ್ರಗಳನ್ನು ಉಳಿಸಿಕೊಳ್ಳಲು ನಿರಂತರವಾಗಿ ಪ್ರಯತ್ನಶೀಲನಾಗಿರುತ್ತಿದ್ದನು. ಸಾಮ್ರಾಜ್ಯವನ್ನು ವಿಸ್ತರಿಸುವುದು ಎಂದರೆ ಅತೀಪ್ರಮುಖವಾದ ಸುಂಕಗಳನ್ನು ಆಕರಗೊಳಿಸಿಕೊಳ್ಳುವ ಕೇಂದ್ರಗಳ ಮೇಲಿನ ಹತೋಟಿಯಲ್ಲದೇ ಬೇರಲ್ಲ. ಅತ್ಯಂತ ಹಿರಿದಾದ ತೆರಿಗೆ ಬರುವ ಅನುಕೂಲ ಇದ್ದುದ್ದು ಕೃಷಿರಂಗದಲ್ಲಿಯೇ ಆಗಿದ್ದರಿಂದ ಹೇಗಾದರೂ ಮಾಡಿ ಕೃಷಿ ಚಟುವಟಿಕೆಗಳನ್ನು ವಿಸ್ತರಿಸುವುದು ಅವರ ಆದ್ಯತೆಯಾಗಿತ್ತು. ಇದರ ಸಂಪೂರ್ಣ ಜವಾಬ್ದಾರಿಯನ್ನು ಹೊಯ್ಸಳ ಮಹಾಮಂಡಳೇಶ್ವರರ ಮೇಲೆ ವಿಧಿಸಲಾಗಿತ್ತು. ಅವರು ತಮ್ಮ ಅಧೀನ ವ್ಯಕ್ತಿಗಳೊಂದಿಗೆ ಇದನ್ನು ಸಾಧಿಸಿದರು. ಕೃಷಿಯೇತರ ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸುವ ಪ್ರಕ್ರಿಯೆ ಈ ಮಹಾಮಂಡಳೇಶ್ವರರ ಆಳ್ವಿಕೆಯ ಅವಧಿಯಲ್ಲಿ ವಿಶೇಷವಾಗಿ ಹೆಚ್ಚಾಯಿತು ಎಂಬುದಕ್ಕೆ ಸಾಕಷ್ಟು ಆಧಾರಗಳಿವೆ. ಈ ಬಗೆಯ ಪರಿವರ್ತನಾ ಪ್ರಕ್ರಿಯೆಯ ಮೂಲ ಉದ್ದೇಶ ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದು. ಇದರಿಂದ ಎರಡು ರೀತಿಯಲ್ಲಿ ಉಪಯೋಗಗಳು ಸಮಾಜಕ್ಕೆ ಉಂಟಾಗುತ್ತಿತ್ತು. ಅವುಗಳು ಯಾವುವು ಎಂದರೆ–

1. ಕೃಷಿಯೋಗ್ಯವಲ್ಲದ ಪ್ರದೇಶಗಳನ್ನು ಕೃಷಿಭೂಮಿಯನ್ನಾಗಿ ಪರಿವರ್ತಿಸುವುದರಿಂದ ಕೃಷಿ ಚಟುವಟಿಕೆಗಳಿಗ ವಿಶೇಷವಾದ ಸ್ಥಾನಮಾನವನ್ನು ದೊರಕಿಸಿಕೊಡುವುದು ಒಂದೆಡೆಯಾದರೆ, ಇನ್ನೊಂದೆಡೆ ಸ್ವತಃ ಕೃಷಿ ಭೂಮಿಯನ್ನು ಹೊಂದಿಲ್ಲದ ವ್ಯಕ್ತಿಗಳಿಗೆ ಕೃಷಿ ಭೂಮಿಯನ್ನು ಒದಗಿಸಿಕೊಡುವವಂತಾಗುವುದು ಇನ್ನೊಂದು ವಿಶೇಷವಾದ ಸಂಗತಿಯಾಗಿದೆ. ಇದರಿಂದ ರಾಜ್ಯದ ಬೊಕ್ಕಸಕ್ಕೆ ಆದಾಯವೂ ಕೂಡ ಹೆಚ್ಚಾಗುವುದು.
2. ಕೃಷಿಯೋಗ್ಯ ಭೂಮಿಯಿರುವ ಕಡೆಗಳಲ್ಲಿ ಸಹಜವಾಗಿಯೇ ಜನರು ವಾಸಿಸತೊಡಗುವುದು. ಇದು ಹೊಸ ಜನವಸತಿನೆಲೆಗಳ ನಿರ್ಮಾಣಕ್ಕೆ ಅಂದರೆ ನೂತನ ಬಡಾವಣೆಗಳಿಗೆ ಕಾರಣವಾಗತೊಡಗಿತು. ತತ್ಫಲವಾಗಿ ಜನಸಂಖ್ಯೆಯು ಕೆಲವು ಪ್ರದೇಶಗಳಲ್ಲಿ ಮಾತ್ರ ಸಾಂದ್ರಗೊಳ್ಳುವುದು ಕಡಿಮೆಯಾಯಿತು. ಕೃಷಿ ಭೂಮಿಗಳ ದೆಸೆಯಿಂದ ಆರಂಭವಾದ ಬಡಾವಣೆಗಳ ಮೂಲಕ ನಗರೀಕರಣ ಪ್ರಕ್ರಿಯೆ ಅಭಿವೃದ್ಧಿ ಹೊಂದಿತು. ಇದರಿಂದ ವಸತಿ ನೆಲೆಗಳ ಮೇಲಿನ ತೆರಿಗೆಯಿಂದಲೂ ಹಣದ ಸಂಗ್ರಹ ಆರಂಭವಾಯಿತು. ಇದರಿಂದಲೂ ಹಲವು

ಕುಶಲಕರ್ಮಿಗಳು ಈ ನಗರಗಳ ಜನರ ಮೂಲಭೂತ ಅಗತ್ಯ ಸಾಮಗ್ರಿಗಳನ್ನು ಪೂರೈಸುವ ಗುರುತರವಾದ ಜವಾಬ್ದಾರಿಯನ್ನು ಹೊರಬೇಕಾಯಿತು.

ಹೊಸ ಜನವಸತಿಗಳಲ್ಲಿ ಜನರಿಗೆ ಮೂಲಭೂತವಾದ ಅವಶ್ಯಕತೆಗಳನ್ನು ಈಡೇರಿಸುವ ಪ್ರಯತ್ನಗಳು ಹೇರಳವಾಗಿ ಜರುಗಿದವು. ಇಂತಹ ವ್ಯವಸ್ಥೆಯ ಕೇಂದ್ರನಿರ್ಮಾತೃಗಳೆಲ್ಲರೂ ಮಹಾಮಂಡಳೇಶ್ವರರೇ ಆಗಿರುತ್ತಿದ್ದರು. ಕೆಲವೆಡೆಗಳಲ್ಲಿ ಮಹಾಮಂಡಳೇಶ್ವರರ ಪರವಾಗಿ ಅವರ ಅಧೀನ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದರು. ಅಲ್ಲಿ ಸಾಮಾಜಿಕ ಪ್ರಾಮುಖ್ಯತೆಯ ಬಾವಿ, ಕಟ್ಟೆ, ಕೆರೆ ಮತ್ತು ಧಾರ್ಮಿಕ ಪ್ರಾಮುಖ್ಯತೆಯ ಕಲ್ಯಾಣಿ, ದೇವಾಲಯಗಳನ್ನು ನಿರ್ಮಿಸಲಾಗುತ್ತಿತ್ತು ಎನ್ನುವುದಕ್ಕೆ ಅನೇಕ ಶಾಸನಗಳಲ್ಲಿ ಮಾಹಿತಿ ದೊರೆಯುತ್ತದೆ. ಕೃಷಿಯ ಚಟುವಟಿಕೆಗಳಿಗಾಗಿ ನೀರಾವರಿ ಉದ್ಧೇಶಗಳಿಗಾಗಿ ಕೆರೆಯ ನಿರ್ಮಿತಿ ಮಾಡಲಾಗುತ್ತಿತ್ತು. ದೇವಾಲಯಗಳ ಸ್ಥಾಪನೆ ಮತ್ತು ಅವುಗಳ ಬೆಳವಣಿಗೆಯಲ್ಲಿ ಧಾರ್ಮಿಕ ಮನೋಭಾವವೇ ಮೊದಲ ಸಹಸ್ರಮಾನದಲ್ಲಿ ವಿಜೃಂಬಿಸುತ್ತಿತ್ತು. ಆದರೆ ಹೊಯ್ಸಳ ಮಹಾಮಂಡಳೇಶ್ವರರ ಕಾಲದಲ್ಲಿ ನಡೆದ ಬಹುಮುಖ್ಯವಾದ ಅಭಿವೃದ್ಧಿಯೆಂದರೆ ಧಾರ್ಮಿಕ ಕೇಂದ್ರಗಳಾಗಿದ್ದ ದೇವಾಲಯಗಳನ್ನು ವಿಸ್ತರಿಸಿ ಸಾಮಾಜಿಕ ಹಾಗೂ ಆರ್ಥಿಕ ಕೇಂದ್ರಗಳನ್ನಾಗಿ ರೂಪಿಸಲಾಯಿತು. ಇದರ ಜೊತೆಗೆ ಕೃಷಿ ವ್ಯವಸ್ಥೆಯನ್ನು ವಿಸ್ತರಿಸುವ ಹೊಣೆಗಾರಿಕೆಯು ಅತ್ಯಂತ ಗಣ್ಯವ್ಯಕ್ತಿಗಳ ಹಿಡಿತದಲ್ಲಿ ಇದ್ದವೆಂಬುದನ್ನು ತಿಳಿಯಬೇಕಾಗಿದೆ. ಇದರಿಂದ ದೇವಾಲಯಗಳು ಮತ್ತು ಅವುಗಳ ಉಸ್ತುವಾರಿ ಹೊಂದಿದ್ದ ವ್ಯಕ್ತಿಗಳ ಸ್ಥಾನವನ್ನು ಕೂಡ ಗುರುತಿಸಬಹುದು. ಹೊಯ್ಸಳ ಮಹಾಮಂಡಳೇಶ್ವರರ ಆಳ್ವಿಕೆಯ ಸಂದರ್ಭಗಳನ್ನು ಉದಾಹರಣೆಯನ್ನಾಗಿ ಸ್ವೀಕರಿಸಿ ಈ ಮಂದೆ ಚರ್ಚಿಸಬಹುದು. ಸಹಜವಾಗಿ ಊರನ್ನು ನಿರ್ಮಿಸುವುದು ಹಾಗೂ ಕೃಷಿ ಭೂಮಿಯನ್ನು ವಿಸ್ತರಿಸುವುದು ಎಂದರೆ ಕಾಡನ್ನು ಕಡೆದು ಅಲ್ಲಿನ ವಿಸ್ತರಣೆಯನ್ನು ಏರ್ಪಡಿಸುವುದೇ ಆಗಿದೆ.

- ವೀರಯ್ಯದಂಡನಾಯಕನು ತನ್ನ ಅರಸನ ಮೇಲಿನ ಪ್ರೀತಿಯಿಂದ ಅವರಿಗೆ ರಾಜ್ಯಾಭ್ಯುದಯ ಉಂಟಾಗಲಿ ಎಂದು ಹಾರೈಸಿ ತಾನೆ ಮುಂದೆ ನಿಂತು ಕಾಡುಕಡಿಸಿ, ವೀರಬಲ್ಲಾಳಪುರವೆಂಬ ಊರನ್ನು ನಿರ್ಮಿಸಿದನು. ಆ ಊರನ್ನು ಊರ್ಜಿತಗೊಳಿಸುವ ಉದ್ದೇಶದಿಂದ ತಾನೆ ಮೊದಲು 4 ಗದ್ಯಾಣಗಳನ್ನು 32 ಬ್ರಾಹ್ಮಣರಿಗೆ ಸರ್ವನಮಸ್ಯವಾಗಿ ದಾನವಿತ್ತನು. ಜೊತೆಗೆ ವೀರಸಮುದ್ರ, ರುದ್ರಸಮುದ್ರ, ಗಂಗಸಮುದ್ರ, ಅಚ್ಯುತಸಮುದ್ರಗಳೆಂಬ 5 ಕೆರೆಗಳನ್ನು ಕಟ್ಟಿಸಿದನು. ಕಲ್ಲಿನಲ್ಲಿ ದೇವಾಲಯವನ್ನು ನಿರ್ಮಿಸಿ, ಅಲ್ಲಿ ಶ್ರೀ ವೀರನಾರಾಯಣದೇವರು ಮತ್ತು ಅಚ್ಯುತದೇವರನ್ನು ಪ್ರತಿಷ್ಠಾಪಿಸಿದನು. ದೇವರ ವಿವಿಧ ಸೇವೆಗಳಿಗೆಂದು ಮೈಸೆನಾಡಿನ ಮುದುಗೆರೆಯನ್ನು ಅಗ್ರಹಾರವನ್ನಾಗಿ ಮಾಡಿ ಅದನ್ನು ದತ್ತಿಯಾಗಿ ನೀಡಿದನು. ಕೆಲವು ಭೂಮಿಗಳನ್ನು ಮತ್ತು ಗದ್ಯಾಣಗಳನ್ನು ಸಹ ಅರ್ಪಿಸಿದನು.[2]
- ಕ್ರಿ.ಶ. 1307ರ ವಿಭೂತಿಪುರದ ಶಾಸನದಲ್ಲಿ[3] ಮಹಾಪಸಾಯಿತನಾದ ನಿನ್ರಾನ್ (ಮಾಸಂದಿನಾಡಿನ ಪಶ್ಚಿಮಭಾಗದ ಅಧಿಕಾರಿ), ಸೆಂಬಿದೇವ, ವಿಲ್ಲಗಾಮುಂಡ ಮೊದಲಾದವರು ಪೆರುಎರಮೂರಿಗೆ

ಹೊಂದಿಕೊಂಡಂತಿರುವ ಕಾಡನ್ನು ಕಡಿದು ಊರನ್ನು ಕಟ್ಟಿ, ಆ ಊರಿಗೆ 'ವಾಚ್ಚಿದೇವಪುರ' ಎಂದು ಹೆಸರಿಟ್ಟರು. ಆ ಊರಿನ ನಿರ್ವಹಣೆಗೆಂದು ಹಲವು ಹೊಲಗದ್ದೆಗಳನ್ನು ವಾಚ್ಚಿದೇವರು ಎಂಬ ಮಠಪತಿಗೆ ಮಡಪುರದತ್ತಿಯಾಗಿ ನೀಡಿದರು. (ವಾಚ್ಚಿದೇವಪುರವೇ ಈಗಿನ ವಿಭೂತಿಪುರ)

- ಕ್ರಿ.ಶ. 1269ರ ಬೆಳ್ಳೂರಿನ ಶಾಸನದ[4] ಪ್ರಕಾರ, ಪೆರುಮಾಳೆ ದೇವದಂಡನಾಯಕನು ಬೆಳ್ಳೂರನ್ನು ಅರಸನಿಂದ ಪಡೆದ ತರುವಾಯ ಅಲ್ಲಾಳ ಸಮುದ್ರ, ಅವ್ವೆಯರಕೆಱೆ, ತಗಚೆಗೆಱೆಗಳನ್ನು ತೋಡಿಸಿ ಅವುಗಳ ಕಾಲುವೆಯ ಕೆಳಗಿನ ಬರಡು ಭೂಮಿಯನ್ನು ಫಲವತ್ತಾದ ಗದ್ದೆಯನ್ನಾಗಿ ಪರಿವರ್ತಿಸಿದನು.

ಕೃಷಿಯೋಗ್ಯವಲ್ಲದ ಭೂಮಿಯನ್ನು ವಿಸ್ತರಿಸಿ ಕೃಷಿಯೋಗ್ಯ ಭೂಮಿಯನ್ನಾಗಿ ಮಾಡುವುದಕ್ಕೆ ಮಹಾಮಂಡಳೇಶ್ವರರು ಅಪಾರವಾಗಿ ಶ್ರಮಿಸುತ್ತಿದ್ದರು. ಇಂತಹ ಕಾರ್ಯಗಳನ್ನು ಅವರು ಮಹಾಜನರ ಮೂಲಕ ಸಾಧಿಸುತ್ತಿದ್ದರು. ಜೊತೆಗೆ ಈ ಪ್ರಕ್ರಿಯೆಯ ಊರ್ಜಿತತೆಗೆ ಬೇಕಾದ ಸ್ವಾತಂತ್ರ್ಯವನ್ನು ಮಹಾಜನರಿಗೆ ನೀಡಿದ್ದರು. ಹಾಗಾಗಿಯೇ ಅನಾದಿ ಅಗ್ರಹಾರವಾದ ಶ್ರಿಹರಿಹರಪುರವಾದ ಕೆಲ್ಲಂಗೆರೆಯ ಅಶೇಷ ಮಹಾಜನಗಳು ಸೇರಿಕೊಂಡು ಮಹಾಪಸಾಯಿತರಾದ ಭಂಡಾರಿ ಕಾವಣ್ಣನವರ ಮಕ್ಕಳು ಕಾವಣ್ಣನವರಿಗೆ ಈ ಹಿಂದೆ ಸಂಕಣ್ಣ ಗೋಪಣ್ಣರು ತಾವು ಕೆಲ್ಲಂಗರೆಯ ಪ್ರದೇಶವನ್ನು ಕೃಷಿ ಮಾಡಲಾರದೆ ಮತ್ತು ಆದಾಯ ಗಳಿಸಲಾರದೆ ಬಿಟ್ಟು ಅದರ ಉಸ್ತುವಾರಿಯನ್ನು ಮಹಾಜನಗಳಿಗೆ ನೀಡಿದ್ದರು; ಅದನ್ನು ಕಾವಣ್ಣನವರಿಗೆ 8 ಗದ್ಯಾಣಗಳ ಕಟ್ಟುಗೆ ಕಾಣಿಕೆಯಾಗಿ ಪಡೆದು ಮಹಾಜನರು ನೀಡಿದರು.[5] ಎಷ್ಟೋ ವೇಳೆ ಈ ಅಧಿಕಾರಿಗಳು ಮುಂದೆ ನಿಂತು ಈ ಪ್ರಕ್ರಿಯೆಯಲ್ಲಿ ನೇರವಾಗಿ ಭಾಗಿಗಳಾಗುತ್ತಿದ್ದರೆ, ಕೆಲವೊಮ್ಮೆ ಅವರ ಕೈಕೆಳಗಿನ ಅನೇಕ ಗೌಡರು (ಗ್ರಾಮದ ಮುಖಂಡರು) ಸೇರಿ ಈ ಬಗೆಯ ಪರಿವರ್ತನಾ ಪ್ರಕ್ರಿಯೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದುದು ಶಾಸನಗಳಿಂದ ವೇದ್ಯವಾಗುತ್ತದೆ. ಉದಾಹರಣೆಗೆ ಬಂಕಿಹಳ್ಳಿ ಎನ್ನುವ ಹಳ್ಳಿಯನ್ನು ಕೆಲವು ಗೌಡರು ಸ್ಥಾಪಿಸಿ ಅಲ್ಲಿ ಒಂದು ಕೆರೆ ಮತ್ತು ದೇವಾಲಯವನ್ನು ನಿರ್ಮಿಸಿದರು[6]

ಇದರಂತೆಯೇ ಇರುವ ಹಲವು ಉದಾಹರಣೆಗಳನ್ನು ಸ್ವಲ್ಪ ಸೂಕ್ಷ್ಮವಾಗಿ ಲಕ್ಷಿಸಿದರೆ, ಕೃಷಿ ಭೂಮಿಯನ್ನು ವಿಸ್ತರಿಸುವ ಜನರಿಗೆ ರಾಜ್ಯವು ಸಹಾಯ ಸಹಕಾರಗಳನ್ನು ನೀಡುತ್ತಿತ್ತು. ಅಂಥ ವ್ಯಕ್ತಿಗಳಿಗೆ ಅಥವಾ ಅಧಿಕಾರಿಗಳಿಗೆ ಭೂಮಿಯನ್ನು ದಾನ ನೀಡಲಾಗುತ್ತಿತ್ತು. ಅದು ಯಾವುದೇ ರೀತಿಯಲ್ಲಿ ಅನೂರ್ಜಿತಗೊಳ್ಳಬಾರದು ಎಂದು ಕೆಲವೊಮ್ಮೆ ತೆರಿಗೆಗಳಲ್ಲಿ ವಿನಾಯಿತಿಯನ್ನು ಮಂಜೂರು ಮಾಡಲಾಗುತ್ತಿತ್ತು. ಈ ಅಂಶದ ಜೊತೆಗೆ ಗಮನಿಸಬೇಕಾದ ವಿಷಯವೆಂದರೆ, ಹೀಗೆ ರೂಪುಗೊಂಡ ಹೊಸ ಊರುಗಳು ಅಥವಾ ಹಳ್ಳಿಗಳು ಮಹಾಜನರ ಇಲ್ಲವೆ ಗ್ರಾಮದ ಮುಖಂಡರ ಅಧೀನದಲ್ಲಿರುತ್ತಿದ್ದವು. ಇದಕ್ಕೊಂದು ಸಾಂಸ್ಥಿಕ ರೂಪವನ್ನು ನೀಡಲಾಗುತ್ತಿತ್ತು. ಅದರ ಮೂಲಕ ಅದೇ ರೀತಿ ಭೂಮಾಲಿಕರು ಹಳ್ಳಿಗಳ ಮೇಲೆ ಹಿಡಿತವನ್ನು ಹೊಂದಿದ್ದರು. ಈ ಕಾರಣದಿಂದಾಗಿ ಕೃಷಿಯ ವಿಸ್ತರಣೆ ಅರಸರಿಗೆ ಮತ್ತು ಭೂಮಾಲಿಕರಿಗೆ ಹೆಚ್ಚು ಲಾಭದಾಯಕವಾಗಿರುತ್ತಿತ್ತು.

ಹೀಗೆ ಪರಿವರ್ತನೆಗೊಂಡ ಸಾಗುವಳಿ ಭೂಮಿಯನ್ನು ಗದ್ದೆ, ಬೆದ್ದಲು, ತೋಟ ಎಂದು ವರ್ಗೀಕರಿಸಲಾಗಿತ್ತು. ಉದಾಹರಣೆಗೆ, 928 ಮರಗಳಿರುವ ಮಾವಿನ ತೋಟ[7] 200 ವೀಳ್ಯದೆಲೆ ಕುಳಿ(ಎಲೆಯ ಕುಳಿ)ಗಳಿರುವ ತೋಟ[8] ಹೂವಿನ ತೋಟ[9] ಅಡಕೆ ತೋಟ[10] 15ಗುಳ್ಳ ಏಲಕ್ಕಿ ತೋಟ(ಎಲೆಯಟ್ಟಿ)[11] ಹರಳಿನ ಎಣ್ಣೆ ತೋಟ, 200 ಗುಳಿಗಳಿರುವುದು (ಬೆದ್ದಲು ಹರಳಿನ ಎಣ್ಣೆ ಗುಳಿ)[12] ಚೋಳದ ಭೂಮಿ(ಚೋಳದ ಮಣ್ಣು)[13] ಕಾದಕ್ಕಿ ಭೂಮಿ(ಒಂದು ಬಗೆಯ ಬತ್ತದ ಭೂಮಿ)[14]

ಇಂತಹ ಕೃಷಿಭೂಮಿಯಲ್ಲಿ ಭತ್ತ, ರಾಗಿ, ಜೋಳ, ಗೋಧಿ, ತೊಗರಿ, ಹೆಸರು, ಉದ್ದು ಇತ್ಯಾದಿಗಳ ಜೊತೆಗೆ ಸಾಂಬಾರು ಪದಾರ್ಥಗಳನ್ನು ಹಣ್ಣುಹಂಪಲು, ತರಕಾರಿ, ಉತ್ತಮಜಾತಿಯ ಮರ ಹೂಗಳನ್ನು ಬೆಳೆಸುತ್ತಿದ್ದರು.[15] ದೇಗುಲಗಳಿಗೆ ನೀಡಿದ ದಾನದ ವಿವರವಿರುವ ಭಾಗಗಳಲ್ಲಿನ ವನಮಾಲೆ, ತೋಟಗಳ ಉಲ್ಲೇಖಗಳು ಇದಕ್ಕೆ ಸಾಕ್ಷಿಯನ್ನೊದಗಿಸುತ್ತವೆ.

ಈ ಕೃಷಿ ಭೂಮಿಯನ್ನು ಅಳೆಯಲು ಬಳಸುತ್ತಿದ್ದ ಅಳತೆಗಳನ್ನು ಸಹ ಶಾಸನಾಧಾರಗಳಿಂದ ತಿಳಿಯಬಹುದಾಗಿದೆ. 15 ಖಂಡುಗ ಗದ್ದೆ[16] 800 ಖುಷ್ಕಿ ಭೂಮಿ[17] 50 ಮಣ್ಣು ಭೂಮಿ[18] 30 ಕೊಳಗ ತರಿ ಭೂಮಿ[19] 10 ಕೊಳಗ ಖುಷ್ಕಿ ಭೂಮಿ[20] ಕಮ್ಮ ಭೂಮಿ[21] 25ಸಲಗೆ ಭೂಮಿ[22] 1000 ಮತ್ತರು ಭೂಮಿ[23] 5ಕುಳ ಕಪ್ಪುಮಣ್ಣಿನ ಭೂಮಿ[24] ಇತ್ಯಾದಿ. ಹೀಗೆ ಹೊಯ್ಸಳ ಮಹಾಮಂಡಳೇಶ್ವರರು ಕೃಷಿಯನ್ನು ಪ್ರೋತ್ಸಾಹಿಸುತ್ತಾ ಅದರಿಂದ ರಾಜಾಯವನ್ನು ಕ್ರೋಡೀಕರಿಸುತ್ತಾ ಭೂಮಿಯ ಉತ್ಪಾದಕ ಶಕ್ತಿ ಮತ್ತು ಬಿತ್ತನೆ ವ್ಯಾಪ್ತಿ ಪರಿಗಣಿಸುತ್ತಿದ್ದರು. ಆದರೆ ಭೂಮಿಯ ಅಳತೆ ಮತ್ತು ಅದರ ಮೇಲೆ ವಿಧಿಸುತ್ತಿದ್ದ ತೆರಿಗೆಗಳು ಈ ಮಹಾಮಂಡಲೇಶ್ವರರು ಅಧಿಕಾರ ನಡೆಸುತ್ತಿದ್ದ ಪ್ರದೇಶಗಳಲ್ಲಿ ಏಕರೂಪವಾಗಿರಲಿಲ್ಲ. ಏಕೆಂದರೆ ಅದು ಸಾಧ್ಯವೂ ಆಗುತ್ತಿರಲಿಲ್ಲ. ಇದಕ್ಕೆ ಕಾರಣವನ್ನು ಊಹಿಸುವುದಾದರೆ, ಆಗ ತಾನೆ ಹೊಸದಾಗಿ ಕೃಷಿ ಭೂಮಿಯನ್ನು ವಿಸ್ತರಿಸಿ ಹೊಸಹೊಸ ವ್ಯಕ್ತಿಗಳಿಗೆ ಭೂದಾನವನ್ನು ನೀಡುತ್ತಿದ್ದುದರಿಂದ ಕೃಷಿಯ ಹೊಸ ಪರಿಚಯ ಸಾಧಿಸಿದವರು ಆಗಾಗಲೇ ಕೃಷಿಯಲ್ಲಿ ಪರಿಣತರಾಗಿರುವವರ ಮುಂದೆ ಸ್ಪರ್ಧಾಳುಗಳಾಗಿದ್ದರು. ಹಾಗಾಗಿ ಇಳುವರಿಯು ಎಲ್ಲೆಡೆಯಲ್ಲಿಯೂ ಒಂದೇ ರೀತಿ ಇರುತ್ತಿರಲಿಲ್ಲ. ನಿಧಾನವಾಗಿ ಕೃಷಿ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಅವರಿಗೆಲ್ಲರಿಗೂ ಮಹಾಮಂಡಳೇಶ್ವರರು ಸಹಾಯಹಸ್ತವನ್ನು ಚಾಚಿದರು. ಇದರಿಂದ ಸ್ಥಳೀಯ ಬೆಳೆಗಳಿಗೆ ಹೆಚ್ಚಿನ ಬೇಡಿಕೆಯೂ ಸಿಗುವಂತಾಯಿತು. ಇದರೊಂದಿಗೆ ಈ ಮಹಾಮಂಡಳೇಶ್ವರರು ಸ್ಥಳೀಯವಾಗಿ ಹಿಂದಿನಿಂದ ನಡೆದುಕೊಂಡು ಬಂದಿದ್ದ ಅಳತೆ ಮತ್ತು ತೆರಿಗೆಗಳ ನಿಬಂಧನೆಗಳನ್ನೆ ಪರಿಪಾಲಿಸುತ್ತಿದ್ದರೂ ಅಗತ್ಯವಿರುವೆಡೆಯಲ್ಲೆಲ್ಲಾ ಹೊಸಪರಿಕ್ರಮಗಳನ್ನು ಹೊಂದಲು ಅವಕಾಶಗಳನ್ನು ಮಾಡಿಕೊಡುತ್ತಿದ್ದರು ಎಂಬುದು ಇವರ ಶಾಸನಗಳ ಸೂಕ್ಷ್ಮ ಅವಲೋಕನದಿಂದ ವೇದ್ಯವಾಗುತ್ತದೆ. ಇದಕ್ಕೆ ಕಾರಣ ಸ್ಥಳೀಯ ಮಾರುಕಟ್ಟೆಯ ನಿರ್ವಹಣೆಯಲ್ಲಿದ್ದ ನಿಯಂತ್ರಣಗಳೇ ಆಗಿದ್ದವು. ಸ್ಥಳೀಯ ಇಳುವರಿಯನ್ನು ಆಧರಿಸಿಕೊಂಡು ಸ್ಥಳೀಯ ಅಗತ್ಯಗಳಿಗೆ ತಕ್ಕಂತೆ

ಇಂತಹ ತೆರಿಗೆ ವ್ಯವಸ್ಥೆಯನ್ನೇ ಮುಂದುವರೆಸಲು ಹಾಗೂ ಪರಿಷ್ಕರಿಸಲು ಸಾಧ್ಯವಾಗಿರುವುದರಲ್ಲಿ ಮಹಾಮಂಡಳೇಶ್ವರರ ಪಾತ್ರವು ಹಿರಿದಾದುದಾಗಿರುತ್ತಿತ್ತು.

ಕೃಷಿಯ ಪ್ರಗತಿಯು ಕೃಷಿಯೇತರ ಚಟುವಟಿಕೆಗಳ ಹುಟ್ಟಿಗೂ ಕಾರಣವಾಯಿತು. ಕೃಷಿಯ ವಿಸ್ತರಣೆಯು ಉಳುಮೆಯ ವಿಧಾನದಲ್ಲಿಯೂ ಬದಲಾವಣೆಗಳು ಕಾಣಿಸಿಕೊಂಡವು. ಕೃಷಿಗೆ ಬಳಸುವ ಉಪಕರಣಗಳಲ್ಲಿ ಬದಲಾವಣೆಗಳಿಗಾಗಿ ಅದು ಕೃಷಿ ಉತ್ಪಾದನೆಯ ಮೇಲೆ ಮಹತ್ತರ ಪರಿಣಾಮಗಳನ್ನು ಬೀರಿತು. ಇದರಿಂದ  ಸಾಮಾಜಿಕ ಸಂಬಂಧಗಳು ಹೊಸ ರೂಪವನ್ನು ಪಡೆದುಕೊಳ್ಳುವಂತಾಯಿತು. ಈ ವಿಚಾರಗಳು ಮಧ್ಯಕಾಲೀನ ಕರ್ನಾಟಕದ ಸಂದರ್ಭದಲ್ಲಿ ತುಂಬಾ ಮುಖ್ಯವಾದವು. ಇದನ್ನು ಮಾರ್ಕ್ಸ್‌ವಾದಿ ಸಿದ್ಧಾಂತದ ಹಿನ್ನೆಲೆಯಲ್ಲಿ ಗಮನಿಸಿದರೆ ಅನೇಕ ಹೊಸ ಒಳನೋಟಗಳು ನಮಗೆ ಮನವರಿಕೆಯಾಗಲಿವೆ. ಈ ಬಗೆಯ ಅಧ್ಯಯನ ವಿಧಿವಿಧಾನಗಳನ್ನು  ಹುಟ್ಟುಹಾಕಿದವರು ಕಾರ್ಲ್‌ಮಾರ್ಕ್ಸ್ ಮತ್ತು ಏಂಗೆಲ್ಸ್. ಇದನ್ನು ಚಾರಿತ್ರಿಕ ವಸ್ತುವಾದ ಎನ್ನುತ್ತಾರೆ. ಈ ಸಿದ್ದಾಂತವು ವಸ್ತುಗಳನ್ನು ಉತ್ಪಾದಿಸಲು ಮಾನವನು ಯಾವ ವಿಧಾನವನ್ನು ಅನುಸರಿಸುತ್ತಿದ್ದ ಹಾಗೂ ಅವನ ಉತ್ಪಾದನಾ ಸಲಕರಣೆಗಳು ಯಾವುವು ಎಂಬುದನ್ನು ವಿಶ್ಲೇಷಿಸುತ್ತದೆ. ಉಪಕರಣ ಮತ್ತು ಅದರಿಂದ ಉತ್ಪಾದಿಸಿದ ವಸ್ತು ಇವೆರಡನ್ನೂ ಆಧಾರವಾಗಿಟ್ಟುಕೊಂಡು ಆಯಾ ಕಾಲದ ಜನರ ಬದುಕನ್ನು ಅರ್ಥೈಸಿಕೊಳ್ಳಬಹುದು. ಇದನ್ನೇ ವಸ್ತುವಾದಿ ವಿಶ್ಲೇಷಣೆ ಎನ್ನುತ್ತಾರೆ.[25] ಹೊಯ್ಸಳ ಯುಗದಲ್ಲಿ ಮಹಾಮಂಡಳೇಶ್ವರರು ಸಾಂಪ್ರದಾಯಿಕ ಉಳುಮೆ ಪದ್ಧತಿಯನ್ನೇ ಅನುಸರಿಸಲು ಪ್ರೋತ್ಸಾಹ ನೀಡುತ್ತಿದ್ದರು ಎಂಬುದು ತಿಳಿದುಬರುತ್ತದೆ. ಕೃಷಿ ಭೂಮಿಯನ್ನು ಸಾಗುವಳಿ ಮಾಡಲು ಬಳಸುತ್ತಿದ್ದ ಉಪಕರಣಗಳೆಂದರೆ ಎರಡು ಎತ್ತುಗಳು, ನೇಗಿಲು, ನೊಗ. ಇಲ್ಲಿ ಎತ್ತುಗಳು ಪ್ರಾಣಿಗಳಾದರೂ ಅವುಗಳನ್ನು ಉಪಕರಣ ಸಾಲಿಗೆ ಸೇರಿಸಲಾಗಿದೆ. ಈ ಕಾರಣಕ್ಕಾಗಿಯೇ ಕೃಷಿ ವ್ಯವಸ್ಥೆಯಲ್ಲಿ ಪಶುಸಂಗೋಪನೆ ಪ್ರಮುಖ ಸ್ಥಾನವನ್ನು ಪಡೆದಿತ್ತು. ಭೂಮಿಯನ್ನು ಸರಿಯಾಗಿ ಉತ್ತು ಬಿತ್ತು, ಗೊಬ್ಬರ ನೀರುಗಳನ್ನು ಪೂರೈಸಿ ಕೃಷಿಯ ಸರ್ವಾಂಗೀಣ ಪ್ರಗತಿಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿತ್ತು. ಇದನ್ನು ಆಯಾ ಮಹಾಮಂಡಳೇಶ್ವರರ  ಆಳ್ವಿಕೆಯ ಕಾಲಘಟ್ಟದಲ್ಲಿ ನೀಡಿರುವ ದಾನದ ಭೂಮಿಗಳನ್ನು ಅವುಗಳ ಸ್ವರೂಪಗಳನ್ನು ಲಕ್ಷಿಸಿದರೆ ಅರಿವಿಗೆ ಬರುತ್ತದೆ. ಎತ್ತುಗಳನ್ನು ಕೃಷಿಗೆ ಉಪಯೋಗಿಸಿದ್ದರ ಪರಿಣಾಮವಾಗಿ ದನಗಳ ಜಾತ್ರೆಯಂತಹ ಮಾರುಕಟ್ಟೆ ವ್ಯವಸ್ಥೆ ರೂಪುಗೊಳ್ಳಲು ಕಾರಣವಾಯಿತು. ಇದರ ಪರಿಣಾಮವಾಗಿ ಕೃಷಿ ಮಾಡುತ್ತಿದ್ದ ರೈತರು ಪ್ರತಿಷ್ಠೆಗೆ ಕಟ್ಟುಬಿದ್ದು ಬಲಶಾಲಿಯಾದ ದನಗಳನ್ನು ಕೊಂಡುಕೊಂಡು ಹೈನುಗಾರಿಕೆಯನ್ನು ಪೋಷಿಸಿದರು. ಹಾಗೂ ಉತ್ತಮ ತಳಿಯ ಎತ್ತುಗಳನ್ನು ಕೊಂಡುಕೊಂಡು ಕೃಷಿಗೆ ವಿಶೇಷವಾದ ಪ್ರಾಮುಖ್ಯತೆಯನ್ನು ನೀಡಿದರು. ಇದೊಂದೆಡೆಯಾದರೆ ಸ್ಥಳೀಯ ಮಾರುಕಟ್ಟೆಗಳು ಕೃಷಿಗೆ ಬೇಕಾಗಿರುವ ಸಲಕರಣೆಗಳನ್ನು ಮಾರಾಟ ಮಾಡುವ ವ್ಯವಸ್ಥೆಯನ್ನು ಊರ್ಜಿತಗೊಳಿಸಿತು. ಇದರಿಂದ ಚಮ್ಮಾರರು, ಬಡಗಿಗಳು, ಅಕ್ಕಸಾಲಿಗಳು, ತೆಲ್ಲಿಗರು, ಕಮ್ಮಾರರು ಮಂತಾದ ಕುಶಲಕರ್ಮಿಗಳಿಗೆ ವಿಶೇಷವಾದ ಸ್ಥಾನಮಾನಗಳು ಲಭಿಸುವಂತಾಯಿತು. ಇದರಿಂದ ನಾನಾಜಾತಿಯ ಜನ ಇಂತಹ ಬಡಾವಣೆಗಳಲ್ಲಿ ಅನಿವಾರ್ಯವಾಗಿ ಬದುಕುವಂತಾಯಿತು.

ಪರಸ್ಪರ ಹೊಂದಾಣಿಕೆಯಿದ್ದಾಗ ಮಾತ್ರ ಆರ್ಥಿಕ ಪ್ರಗತಿ ಎನ್ನುವುದನ್ನು ಮಹಾಮಂಡಳೇಶ್ವರರ ಮೂಲಕ ಸಾಬೀತಾದಂತಾಯಿತು.

**5.1.1 ಗೇಣಿ ಪದ್ಧತಿ:** ಗೇಣಿಪದ್ದತಿಯೆಂದರೆ ನಮ್ಮದಲ್ಲದ ಭೂಮಿಯನ್ನು ನಿರ್ದಿಷ್ಟ ವಾರ್ಷಿಕ ಮೊತ್ತಕ್ಕೆ ಗೇಣಿಗೆ ಕೊಂಡು ಅದನ್ನು ತಮ್ಮ ಅನುಭವದ ಆಧಾರದಿಂದ ಕೃಷಿ ಮಾಡಿ, ವಾರ್ಷಿಕ ಗೇಣಿಯನ್ನು ನೀಡಿ ಹೆಚ್ಚುವರಿಯಾದ ಅಲ್ಲಿನ ಲಾಭವನ್ನು ತಾವು ಅನುಭವಿಸುವ ಕ್ರಮವಾಗಿತ್ತು. ಹೀಗೆ ಮಾಡಬೇಕಾದರೆ ರಾಜಾಲಯಕ್ಕೋ ಅಥವಾ ದೇವಾಲಯಕ್ಕೋ ನಿಗಧಿತ ಮೊತ್ತವನ್ನು ಸಲ್ಲಿಸಿ ಲಾಭವನ್ನು ತಾನು ಪಡೆಯಬೇಕಾದರೆ ತಾನು ಹೆಚ್ಚು ಹೆಚ್ಚು ಲಾಭವನ್ನು ಹೊಂದುವಂತಹ ಸ್ಪರ್ಧೆಗೆ ಆತನು ಬೀಳಲೇ ಬೇಕಾಗಿತ್ತು. ನಮ್ಮ ನಾಡಿನಲ್ಲಿ ಹಲವಾರು ಸದುದ್ದೇಶಗಳಿಂದ ಭೂಮಿಗಳನ್ನು ದೇವಾಲಯಗಳಿಗೆ ದಾನವೀಯಲಾಗುತ್ತಿತ್ತು. ಹೀಗೆ ಸಂಚಯನಗೊಂಡ ಭೂಮಿಯನ್ನು ದೇವಾಲಯಗಳು ಹೊರಗುತ್ತಿಗೆಗೆ ಕೊಡುತ್ತಿದ್ದುದರ ಮೂಲಕ ಅದನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಮಾಡಿ ಅದರಿಂದ ಸದೃಢವಾದ ಕೃಷಿ ವ್ಯವಸ್ಥೆ ಬಲಗೊಳ್ಳುವಂತೆ ಮಾಡಿದರು. ಇದಕ್ಕಾಗಿ ಕೆರೆ–ಕಟ್ಟೆಗಳ ನಿರ್ಮಾಣವನ್ನು ಮಾಡುವುದರ ಜೊತೆಗೆ ದೇವಾಲಯಗಳಲ್ಲಿ ನಡೆಯುತ್ತಿದ್ದ ಅನ್ನಛತ್ರಗಳಿಗೆ ಮುನಿಗಳ, ವಿದ್ಯಾರ್ಥಿಗಳ, ಯತಿಗಳ, ಯಾತ್ರಾರ್ಥಿಗಳ ಆಹಾರದಾನಗಳಿಗೆ ಬೇಕಾದ ಬೆಳೆಯನ್ನು ಬೆಳೆಯುವುದರ ಜೊತೆಗೆ ಹೇರಳವಾದ ರಫ್ತಿನ ಮೂಲಕ ಆರ್ಥಿಕ ಲಾಭವನ್ನು ಕೂಡ ಪಡೆಯಲಾಗುತ್ತಿತ್ತು. ದೇಗುಲದ ಭೂಮಿಯನ್ನು ಗೇಯ್ಮೆ ಮಾಡಬಹುದಾಗಿತ್ತು. ಹೆಚ್ಚುವರಿ ಲಾಭವನ್ನು ಹೊಂದಬಹುದಾಗಿತ್ತು. ಆದರೆ ಭೂಮಿಯ ಒಡೆತನವನ್ನು ಮಾತ್ರ ಹೊಂದುವಂತೆ ಇರಲಿಲ್ಲ.

ಅಸಂಖ್ಯ ದೇವಾಲಯಗಳಲ್ಲಿ ಈ ಗೇಣಿ ಪದ್ಧತಿ ಇತ್ತು. ಉದಾಹರಣೆಗೆ ಶೃಂಗೇರಿಯ ಶಾರದಾಪೀಠದ ಬೆಳವಣಿಗೆಯಲ್ಲಿ ಈ ಭೂಮಿಯ ಕೃಷಿಯ ಚಟುವಟಿಕೆ ಯಾವ ಫಲಿತಾಂಶವನ್ನು ನೀಡಿತು ಎನ್ನುವುದರ ಮೂಲಕ ಇಡೀ ರಾಜ್ಯದ ಗೇಣಿ ವ್ಯವಸ್ಥೆಯ ಸ್ಥೂಲಚಿತ್ರಣವನ್ನು ಕಲ್ಪಿಸಿಕೊಳ್ಳಬಹುದು ಎಂದೆನಿಸುತ್ತದೆ. ಶೃಂಗೇರಿ ಪರಿಸರದಲ್ಲಿ ಮಠಕ್ಕೆ ಸೇರಿದ್ದ ಆಸ್ತಿಯನ್ನು ಹೇಗೆ ಗೇಣಿಗೆ ಒಳಪಡಿಸಲಾಗಿತ್ತು. ಯಾವ ರೀತಿ ಗೇಣಿದಾರರು ಮಠಕ್ಕೆ ತಮ್ಮ ಸಿದ್ದಾಯವನ್ನು ನಿಗದಿಯಾಗಿ ಸಲ್ಲಿಸುತ್ತಿದ್ದರು. ನಡು ನಡುವೆ ಬರಬಹುದಾದ ಎಲ್ಲ ರೀತಿಯ ಭೂವ್ಯವಹಾರಗಳನ್ನು ಯಾವ ರೀತಿ ಪರಿಹರಿಸಿಕೊಳ್ಳುತ್ತಿದ್ದರು ಮುಂತಾದ ವಿವರಗಳು ಶಾಸನಸ್ಥವಾಗಿದೆ.[26] ಅಂತೆಯೇ ನಾಡಿನ ವಿವಿಧ ಭಾಗಗಳಲ್ಲಿ ಇದ್ದ ದೇವಾಲಯಗಳು ತಮಗೆ ಸೇರಿದ್ದ ಭೂಮಿಯನ್ನು ಹೇಗೆ ಗೇಣಿಪದ್ಧತಿಗೆ ಒಳಪಡಿಸಿ ದೇವಾಲಯಗಳಿಗೆ ಇಂತಿಷ್ಟು ಸಿದ್ಧಾಯವನ್ನು ಸಲ್ಲಿಸಿ ಹೆಚ್ಚುವರಿಯಾಗಿ ಬಂದದ್ದನ್ನು ತಾವೇ ಅನುಭವಿಸಿಕೊಂಡು ಹೋಗುತ್ತಿದ್ದರು ಎಂದು ಕೂಡ ನಾವು ತಿಳಿಯಬಹುದಾಗಿದೆ.

ದೇವಾಲಯಗಳು ಮತ್ತು ಬ್ರಾಹ್ಮಣರಿಗೆ ಇಂತಿಷ್ಟು ಭೂಮಿಯನ್ನು ದಾನವಾಗಿ ನೀಡಲಾಗುತ್ತಿತ್ತು. ಆ ಭೂಮಿಯನ್ನು ಅವರು ತಮ್ಮ ಗೇಣಿದಾರರಿಂದ ಗೇಯ್ಮೆ ಮಾಡಿಸಿಕೊಂಡು ಬಂದ ಹಣದಲ್ಲಿ

ದೇವಾಲಯಕ್ಕೆ ಸಲ್ಲಿಸಬೇಕಾಗಿದ್ದ ಸಿದ್ಧಾಯವನ್ನು ಸಲ್ಲಿಸಿ ಹೆಚ್ಚುವರಿಯಾಗಿ ಬಂದದ್ದನ್ನು ತಾವು ಅನುಭವಿಸಬೇಕು ಎಂದು ಅರ್ಥವಾಗಿದೆ. ಬ್ರಾಹ್ಮಣರು ತಮಗೆ ದಾನವಾಗಿ ಬಂದಿದ್ದ ಭೂಮಿಯನ್ನು ತಾವೇನೂ ನಿಂತು ಮಾಡುವುದಿಲ್ಲ ಬದಲಿಗೆ ನಿಂತು ಮಾಡಿಸುತ್ತಿದ್ದರು. ಇದರಿಂದ ದೊಡ್ಡ ದೊಡ್ಡ ಭೂಮಿಯನ್ನು ದೇವಾಲಯವೊಂದೇ ನಿರ್ವಹಿಸುವ ಹೊಣೆಗಾರಿಕೆಯಿಂದ ತಪ್ಪಿಸಿಕೊಂಡು ಅದನ್ನು ಕೆಲವು ನಂಬಿಕಸ್ಥ (ದೇವಾಲಯಗಳಿಗೆ) ವ್ಯಕ್ತಿಗಳಿಗೆ ನೀಡಿ ಕೇವಲ ಹಣವನ್ನು ಸಂಗ್ರಹಿಸುವ ಸೌಲಭ್ಯವನ್ನು ದೇವಾಲಯಗಳು ಉಳಿಸಿಕೊಂಡವು.

ಒಂದು ಖಂಡುಗ ಬೀಜ ಬೆಳೆಯಬಹುದಾದ ಜಾಗವು ಎಲ್ಲ ಜಾಗದಲ್ಲಿಯೂ ಒಂದೇ ರೀತಿಯ ಅಳತೆಯನ್ನು ಹೊಂದಿರುತ್ತಿರಲಿಲ್ಲ. ಇದು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತಿತ್ತು. ಹಾಗಾಗಿ 1 ಖಂಡುಗ ಹೊಲವೆಂದರೆ ನಿರ್ದಿಷ್ಟ ಅಳತೆಯಲ್ಲ. ಬದಲಿಗೆ ಒಂದು ಖಂಡುಗೆ ಭತ್ತ ಮುಂತಾದ ದಾನ್ಯಗಳು ಎಷ್ಟು ಜಾಗದಲ್ಲಿ ಬೆಳೆಯುತ್ತಿತ್ತೋ ಅಷ್ಟು ಪ್ರಮಾಣದ ಭೂಮಿ ಎಂದು ಅರ್ಥ. ಈ ಭೂಮಿಯಲ್ಲಿ ನಡೆಯಬಹುದಾಗಿದ್ದ ಎಲ್ಲಾ ರೀತಿಯ ವ್ಯವಹಾರಗಳಿಗೆ ದೇವಾಲಯಗಳೇ ಸಂಪೂರ್ಣ ಜವಾಬ್ದಾರಿಯಾಗಿರುತ್ತಿತ್ತು. ಯಾವ ರೀತಿಯ ವ್ಯಾಜ್ಯಗಳನ್ನೇ ಆಗಲಿ ನಿಯಂತ್ರಿಸುವ ಅಧಿಕಾರ ದೇವಾಲಯಗಳಿಗಿತ್ತು. ಗೇಣಿಯನ್ನು ನಿರ್ಧರಿಸುವ ಸಂಗ್ರಹಿಸುವ ಕರವನ್ನು ಆಕರಗೊಳಿಸುವ ಹಕ್ಕು ದೇವಾಲಯಗಳಿಗೆ ಇತ್ತು. ಒಂದು ವೇಳೆ ಈ ಭೂಮಿಯಲ್ಲಿ ತೆರಿಗೆ ಮನ್ನಾ ಮಾಡಬೇಕೆಂದರೆ ದೇವಾಲಯಗಳು ರಾಜಸ್ವವನ್ನು ಕೇಳಬೇಕಾಗಿತ್ತು. ಅನೇಕ ಸಂದರ್ಭಗಳಲ್ಲಿ ದೇವಾಲಯಗಳು ತೆರಿಗೆ ಸಂಗ್ರಹ ಕೇಂದ್ರಗಳಾಗಿದ್ದವೇ ಹೊರತು ಅದಕ್ಕೆ ಸ್ವಾತಂತ್ರ್ಯವಿರಲಿಲ್ಲ. ಆಗ ಕೆಲವರು ರಾಜಸ್ವದೊಂದಿಗೆ ವ್ಯವಹರಿಸಿ ಕರವನ್ನು ಮನ್ನಾ ಮಾಡಿಸಿಕೊಳ್ಳುತ್ತಿದ್ದರು. ಆದ ಕಾರಣವೇ ಅಂತಹ ಸಣ್ಣಪುಟ್ಟ ವಿನಾಯಿತಿಗಳಿಗೂ ಕೆಲವರು ಶಿಲಾಶಾಸನಗಳನ್ನು ಹಾಕಿಸಿಕೊಂಡಿದ್ದಾರೆ. ಹೀಗೆ ಮಧ್ಯಕಾಲೀನ ಕಾಲಘಟ್ಟದಲ್ಲಿ ಮಹಾಮಂಡಳೇಶ್ವರರು ತಮ್ಮ ಅಧಿಕಾರಿಗಳ ಹಾಗೂ ತಮ್ಮ ಅಧೀನತೆಯಲ್ಲಿದ್ದ ದೇವಾಲಯಗಳ ಮೂಲಕ ಗೇಣಿಪದ್ದತಿಯನ್ನು ವಿಶೇಷವಾಗಿ ಬೆಳೆಸಿದರು. ಇದರಿಂದ ಸ್ಥಳೀಯ ಆರ್ಥಿಕ ಪ್ರಕ್ರಿಯೆಯೊಂದು ಸುಲಭವಾಗಿ ಅನಾವರಣಗೊಂಡಿತು.

**5.1.2 ನೀರಾವರಿ ಚಟುವಟಿಕೆಗಳಿಂದ ಸ್ಥಳೀಯ ಅಭಿವೃದ್ಧಿ;** ರಾಜ್ಯದ ಆರ್ಥಿಕತೆಯಲ್ಲಿ ಕೃಷಿಗೆ ಪ್ರಾಧಾನ್ಯತೆಯಿದ್ದುದರಿಂದ ನೀರಾವರಿಗೆ ಹೆಚ್ಚಿನ ಗಮನವನ್ನು ನೀಡುವುದು ಅತ್ಯಂತ ಅವಶ್ಯಕವಾಗಿತ್ತು. ಈ ಕಾರಣದಿಂದಾಗಿ ಕೃಷಿಯೋಗ್ಯ ಭೂಮಿಯನ್ನು ಮಳೆಯನ್ನೇ ಅವಲಂಬಿಸಿದ ಕೃಷಿ ಭೂಮಿ ಮತ್ತು ನದಿ, ಕೆರೆ, ಬಾವಿಗಳನ್ನು ಅವಲಂಬಿಸಿದ ಕೃಷಿಭೂಮಿ ಎಂಬುದಾಗಿ ವಿಂಗಡಿಸಲಾಗಿತ್ತು. ಮಳೆಯನ್ನು ಅವಲಂಬಿಸಿ ನಡೆಯುತ್ತಿದ್ದ ಕೃಷಿಯು ಎಂದೆಂದಿಗೂ ಹಲವಾರು ಸವಾಲುಗಳನ್ನು ಎದುರಿಸಬೇಕಾಗಿತ್ತು. ಯಾಕೆಂದರೆ ಪ್ರಕೃತಿಯು ಎಂದೆಂದಿಗೂ ಒಂದೇ ರೀತಿಯ ಧೋರಣೆಯನ್ನು ಹೊಂದುತ್ತಿರಲಿಲ್ಲ ಎನ್ನುವುದು ತಿಳಿದೇ ಇರುವ ಸಂಗತಿಯಾಗಿದೆ. ಹೊಸಹೊಸ ನಗರಗಳು ಮತ್ತು ಅದರ ಬಡಾವಣೆಗಳು

ವಿಸ್ತಾರವಾಗುತ್ತಲೇ ಸಾಗುತ್ತಿದ್ದುದರಿಂದ ನೂತನ ಕೃಷಿ ಚಟುವಟಿಕೆಗಳಿಗೆ ಆದ್ಯತೆಯನ್ನು ನೀಡಲಾಗುತ್ತಿತ್ತು. ಉತ್ಪಾದನೆಯನ್ನು ಹೆಚ್ಚಿಸಲು ನೀರಾವರಿ ಸಂಪನ್ಮೂಲಗಳು ಅತ್ಯವಶ್ಯವಾಗಿತ್ತು. ಈ ನಿಟ್ಟಿನಲ್ಲಿ ಅರಸರಂತೆಯೇ ಅವರ ಅಧೀನ ಅಧಿಕಾರಿಗಳಾದ ಹೊಯ್ಸಳ ಮಹಾಮಂಡಳೇಶ್ವರರು ಸಹ ನೀರಾವರಿಗೆ ಹೆಚ್ಚಿನ ಮಹತ್ವವನ್ನು ನೀಡಿದ್ದರು. ಇವರ ಆಡಳಿತಾಧಿಕಾರದ ಪ್ರದೇಶಗಳಲ್ಲಿ ಇದುವರಗೂ ನಡೆದುಬಂದಂತೆ ನೀರಾವರಿ ವ್ಯವಸ್ಥೆಯನ್ನು ಧಾರ್ಮಿಕ ಹಿನ್ನೆಲೆಯಿಂದ ನೋಡಲಾಗಿತ್ತು. ಕೆರೆ ಕಾಲುವೆ, ಬಾವಿಗಳ ನಿರ್ಮಾಣವನ್ನು ಶ್ರೇಷ್ಠವಾದ ಧರ್ಮಕಾರ್ಯವೆಂದು ತಿಳಿಯಲಾಗಿತ್ತು. ಇದು ಪುರೋಹಿತಶಾಹಿಯ ಪ್ರಭಾವವು ಕೃಷಿಯ ಮೇಲೆ ಎಷ್ಟರಮಟ್ಟಿಗೆ ಆಗಿತ್ತು ಎನ್ನುವುದನ್ನು ಸೂಕ್ಷ್ಮವಾಗಿ ತಿಳಿಸುತ್ತದೆ. ಇಂತಹ ವ್ಯವಸ್ಥೆಯಲ್ಲಿ ಜನೋಪಕಾರಿ ಸೇವಾಕಾರ್ಯಗಳಲ್ಲಿ ತೊಡುಗಿದ್ದು ಮಾತ್ರ ಹೊಯ್ಸಳ ಮಹಾಮಂಡಳೇಶ್ವರರ ಹಿರಿಮೆಯಾಗಿದೆ.

ಹೊಯ್ಸಳ ಮಹಾಮಂಡಳೇಶ್ವರರ ಆಳ್ವಿಕೆಯ ಪ್ರದೇಶಗಳಲ್ಲಿ ಕೃಷಿಗೆ ನೀರುಣಿಸಿದ ಪ್ರಮುಖ ನದಿಗಳೆಂದರೆ ಕಾವೇರಿ, ಕಪಿಲಾ, ನೇತ್ರಾವತಿ, ತುಂಗಭದ್ರಾ, ವರದ, ಭೀಮ ಗೋದಾವರಿ, ಕೃಷ್ಣ, ಯಗಚಿ ಮುಂತಾದವು. ಈ ನದಿ ಕಣಿವೆಗಳಲ್ಲಿ ಮತ್ತು ಮುಖಜ ಭೂಮಿಗಳಲ್ಲಿ ಕೃಷಿ ಭೂಮಿಗೆ ಆ ನದಿಗಳಿಂದ ತೋಡಿದ ಕಾಲುವೆ ಅಥವಾ ನಾಲೆಗಳ ಮೂಲಕ ನೀರು ಒದಗುತ್ತಿತ್ತು.[27] ನಾಲೆ ಬೇಸಾಯದ ನಿದರ್ಶನಗಳು ಅನೇಕ ಶಾಸನಗಳಲ್ಲಿ ದೊರೆಯುತ್ತದೆ. ಬೆಟ್ಟದಿಂದ ಹರಿಯುವ ಒಂದು ತೊರೆಯ ನೀರಿನಿಂದ ಬೇಸಾಯ ಮಾಡಿ ಭತ್ತ ಮತ್ತು ಇನ್ನಿತರ ಬೆಳೆಗಳನ್ನು ಬೆಳೆಯಲಾಗುತ್ತಿತ್ತು ಎನ್ನುವ ವಿವರಣೆ ಶಾಸನವೊಂದರಲ್ಲಿ ಸಿಗುತ್ತದೆ.[28] ಯಗಚಿ ನದಿಯ ನೀರನ್ನು ಕಾಲುವೆಗಳ ಮೂಲಕ ದೋರಸಮುದ್ರಕ್ಕೆ ತರಲಾಗುತ್ತಿತ್ತು ಎನ್ನುವ ದಾಖಲೆಯೂ ಲಭ್ಯವಿದೆ.[29] ಆದಿತ್ಯ ಭಟ್ಟ ಎನ್ನುವವನು ತುಂಗಭದ್ರ ನದಿಗೆ ಕಾಲುವೆಯನ್ನು ನಿರ್ಮಿಸಿದ ವಿಚಾರವೂ ಉಲ್ಲೇಖಿತವಾಗಿದೆ.[30]

ನದಿಯ ನೀರಿನ ಕೊರತೆಯಿದ್ದಾಗ ನೀರಾವರಿಗಾಗಿ ಕೆರೆ ಮತ್ತು ಬಾವಿಗಳನ್ನು ಅವಲಂಬಿಸಬೇಕಾಗಿತ್ತು. ಕೆರೆಗಳಲ್ಲಿ ಮಳೆಯ ನೀರನ್ನು ಸಂಗ್ರಹಿಸಲಾಗುತ್ತಿತ್ತು. ಕೆರೆಗಳನ್ನು ಅರಸರು ಹಾಗೂ ಇತರ ಖಾಸಗಿ ವ್ಯಕ್ತಿಗಳು ಕಟ್ಟಿಸುತ್ತಿದ್ದರು. ಪ್ರತಿಯೊಂದು ಹಳ್ಳಿಯಲ್ಲಿಯೂ ಅಲ್ಲಿನ ಬೇಸಾಯದ ಭೂಮಿಯ ವಿಸ್ತಾರ ಹಾಗೂ ಬೆಳೆಯುವ ಬೆಳೆ ಇವುಗಳನ್ನು ಅವಲಂಬಿಸಿಕೊಂಡು ಕೆರೆಗಳಿರುತ್ತಿದ್ದವು. ಈ ಕೆರೆಗಳಿಗೆ ಹೆಸರುಗಳೂ ಇರುತ್ತಿದ್ದವು. ಕೆರೆಗಳನ್ನು ಕಟ್ಟಿಸಿದವರ ಹೆಸರು ಅಥವಾ ಯಾರ ಗೌರವಾರ್ಥವಾಗಿ ಕಟ್ಟಿಸಲಾಗಿದೆಯೋ ಅವರ ಹೆಸರನ್ನು ಆಯಾ ಕೆರೆಗಳಿಗೆ ಇಡುವುದು ರೂಢಿಯಲ್ಲಿತ್ತು. ಇಂದಿಗೂ ಉಳಿದುಕೊಂಡು ಬಂದಿರುವ ಇಂತಹ ಹೆಸರುಗಳಲ್ಲಿ ಹೊಯ್ಸಳ ಮಹಾಮಂಡಳೇಶ್ವರರು ಹಾಗು ಅವರ ಕೈಕೆಳಗಿನ ಅಧಿಕಾರಿಗಳ ಹೆಸರೇ ಇಂದಿಗೂ ಮುಂದುವರೆದುಕೊಂಡು ಬಂದಿರುವುದು ಏನನ್ನು ಸೂಚಿಸುತ್ತದೆಯೆಂದು ಯೋಚಿಸಿದರೆ ಸ್ಥಳೀಯತೆಗೆ ಬೆಂಬಲವನ್ನು ನೀಡಿದ ಇಂತಹ ಸಾಮಾಜಿಕ

ಕಾರ್ಯಗಳನ್ನು ಮಾಡಿದವರು ಮಾತ್ರ ಅಜರಾಮರರಾಗುತ್ತಾರೆ. ಇಂತಹ ಹೆಸರುಗಳ ಮೂಲಕವೂ ಹೊಯ್ಸಳ ಮಹಾಮಂಡಳೇಶ್ವರರ ಕೊಡುಗೆಗಳನ್ನು ತಿಳಿದುಕೊಳ್ಳಬಹುದು. ಇದಕ್ಕೆ ಉತ್ತಮ ಉದಾಹರಣೆಯೆಂದರೆ,

- ಮಹಾಪ್ರಧಾನ ವೀರದಂಡನಾಯಕನು ಕಟ್ಟಿಸಿದ ನಾಲ್ಕು ಕೆರೆಗಳು, ವೀರದಂಡನಾಯಕನು ತನ್ನ ತಂದೆ, ತಾಯಿ ಸಹೋದರ ಹಾಗೂ ತನ್ನದೇ ಹೆಸರಿನಲ್ಲಿ ರುದ್ರಸಮುದ್ರ, ಗಂಗಸಮುದ್ರ, ಅಚ್ಯುತ ಸಮುದ್ರ, ವೀರಸಮುದ್ರ ಇನ್ನುವ ಕೆರೆಗಳನ್ನು ನಿರ್ಮಿಸಿದನು.[31]
- ಮಹಾಸಾಮಂತಾಧಿಪತಿ ಮಯಿಲೆಯನಾಯಕನ ತಮ್ಮನಾದ ಚೆಂನೆಯನಾಯಕನು ಜೀವರಾಶಿಗಳಿಗೆಲ್ಲ ನೀರಿನ ಆಸರೆಯನ್ನು ಒದಗಿಸುವ ಔದಾರ್ಯದಿಂದ ರಾಮಸಮುದ್ರವೆಂಬ ಕೆರೆಯನ್ನು 3000 ಗದ್ಯಾಣ ಹೊನ್ನು ವ್ಯಯಿಸಿ ಕಟ್ಟಿಸಿದನು.[32]
- ಪೆರುಮಾಳೆದೇವ ದಂಡನಾಯಕನು ಹಾನುಗಲ್ಲು ಗ್ರಾಮದ ಮುಂದೆ 'ಪೆರುಮಾಳೆ ಸಮುದ್ರ'ವೆಂಬ ಕೆರೆಯನ್ನು ಕಟ್ಟಿಸಿದನು. ಕಾಲದ ಉಲ್ಲೇಖವಿರದ ಆದರೆ 13ನೆಯ ಶತಮಾನದ್ದೆಂದು ಹೇಳಲಾಗಿರುವ ಕುಂದೂರಿನ ಶಾಸನದನ್ವಯ[32] ತಾನು ಕಟ್ಟಿಸಿದ (ಕುಂದೂರಿನಲ್ಲಿ) ಪೆರುಮಾಳೆಸಮುದ್ರವನ್ನು ಪಂಚಿಕೇಶ್ವರ ಧರ್ಮಕ್ಕೆಂದು ನಿರ್ಮಿಸಿದನು.[33]
- ಪೆರುಮಾಳೆದೇವ ದಂಡನಾಯಕನು ಬೆನಕಗೌಡನಿಂದ ಕೊಂಡ ಬೆಮ್ಮತ್ತೂರಿನ ನಗರೇರಸೀಮೆಯೊಳಗಿನ ಕುರುಬರ ಕಾಳೆಯರ ಕೆರೆಯನ್ನು ಕೊಂಡು ಹೊಸದಾಗಿ ಕಟ್ಟಿಸಿ ಅದಕ್ಕೆ ಪೆರುಮಾಳೆ ಸಮುದ್ರವೆಂದು ನಾಮಕರಣ ಮಾಡಿ ಆ ಕೆರೆಯ ಕೆಳಗಿನ ಕೆಲ ಭೂಭಾಗಗಳನ್ನು ಪೆರುಮಾಳೆಪುರದ ಪಂಚಿಕೇಶ್ವರದೇವರ ಐಂದ್ರಪರ್ವಕ್ಕೆಂದು ದತ್ತಿಬಿಟ್ಟನು.[34]
- ಮಹಾಪ್ರಧಾನ ಮಾಯಿದೇವ ದಂಡನಾಯಕನು ತನ್ನ ಹೆಂಡತಿ ಮಾಯಿದೇವದಂಡನಾಯಕಿತಿಯ ಹೆಸರಿನಲ್ಲಿ ಮಹಾಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದ್ದನು.[35]
- ನಯಕೀರ್ತಿಯತಿಯು ಹೇಳಿದಂತೆ ಈ ಮುನಿಯ ಶಿಷ್ಯರಾದ ಭಾನುಕೀರ್ತಿ ಸಿದ್ಧಾಂತದೇವರು ಪ್ರಭಾಚಂದ್ರ ದೇವರು, ಮಾಘಣಂದಿ ಭಟ್ಟಾರಕರು, ಪದುಮನಂದಿದೇವರು, ನೇಮಿಚಂದ್ರಪಂಡಿತರು ಅವರ ಶಿಷ್ಯರಾದ ಮಹಾಮಂಡಳಾಚಾರ್ಯ ನಯಕೀರ್ತಿದೇವರು, ಬೆಕ್ಕದ ನಾಗರಸರ ಮಗ ಚಾಮರಸರು, ಹುಳ್ಳರಸರು, ಮುದ್ದರಸನ ಮಗ ಸೋವರಸನು ಈ ಎಲ್ಲರೂ ಕೂಡಿ ಸಿಂಗಸಮುದ್ರವೆಂಬ ಕೆರೆಯನ್ನು ಕಟ್ಟಿ ಕಲ್ಲಿನ ತೂಬನ್ನು ಇಡಿಸಿದರು.[36] ಇಷ್ಟೊಂದು ಜನರ ಸಮಕ್ಷಮದಲ್ಲಿ ಈ ಕೆರೆಯು ನಿರ್ಮಾಣವಾಗಿರುವುದನ್ನು ಗಮನಿಸಿದರೆ ಬಹುಶಃ ಇದೊಂದು ಬಹಳ ದೊಡ್ಡ ಪ್ರಮಾಣದ ಕೆರೆಯಿದ್ದಿರಬಹುದಾದ ಅಥವಾ ಈ ಕೆರೆಯು ನಿರ್ಮಾಣಗೊಳ್ಳುವ ಸ್ಥಳದಲ್ಲಿ ಕೆಲವು ಭೂವಿವಾದಗಳು ಇದ್ದು ಅದರಿಂದ ಈ ಸಾರ್ವಜನಿಕ ಅಭಿವೃದ್ಧಿ ಕಾರ್ಯಕ್ಕೆ ತೊಂದರೆಯಾಗದಿರಲೆಂದು ಈ ದೊಡ್ಡ ದೊಡ್ಡ ವ್ಯಕ್ತಿಗಳೆಲ್ಲ ಸೇರಿರಬಹುದಾದ ಸಾಧ್ಯತೆಗಳಿವೆ.

ಈ ಶಾಸನಾಧಾರಗಳು ಆರ್ಥಿಕ ಸುಭಿಕ್ಷತೆಗಾಗಿ ಹೊಯ್ಸಳ ಅರಸರು ಕೆರೆಕಟ್ಟೆ ನಿರ್ಮಾಣ ಮಾಡುವುದು ಮತ್ತು ಆ ಮೂಲಕ ನೀರಾವರಿಗೆ ಪ್ರೋತ್ಸಾಹ ನೀಡುವಂತೆ ಈ ದಂಡನಾಯಕರು ಸಹ ಪ್ರಜಾಹಿತದ ಬದ್ಧತೆಯನ್ನು ಹೊಂದಿದ್ದರೆಂಬುದು ದೃಢವಾಗುತ್ತದೆ. ಒಡೆದುಹೋದ ಮತ್ತು ಬಿರುಕುಬಿಟ್ಟ ಕೆರೆಗಳನ್ನು ಹಾಗೂ ತೂಬುಗಳನ್ನು ದುರಸ್ತಿಗೊಳಿಸುತ್ತಿದ್ದುದರ ಉಲ್ಲೇಖಗಳು ಕೂಡ ನಮಗೆ ಕಂಡುಬರುತ್ತವೆ. ಈಗಾಗಲೇ ಇದ್ದ ಕೆರೆಗಳನ್ನು ಜೀರ್ಣೋದ್ಧಾರಗೊಳಿಸುವ ಪ್ರಕ್ರಿಯೆಯಲ್ಲಿಯೂ ಮಹಾಮಂಡಳೇಶ್ವರರು ತೊಡಗಿಸಿಕೊಳ್ಳುತ್ತಿದ್ದರು ಎಂಬುದನ್ನು ನಾವು ಇಲ್ಲಿಂದ ತಿಳಿಯಬಹುದಾಗಿದೆ. ಹೊಸದಾಗಿ ಕೆರೆಗಳನ್ನು ನಿರ್ಮಿಸುವುದಕ್ಕೆ ಹೋಲಿಸಿದರೆ ಇರುವ ಕೆರೆಗಳನ್ನು ಜೀರ್ಣೋದ್ದಾರಗೊಳಿಸುವುದು ಆರ್ಥಿಕವಾಗಿ ಉಳಿತಾಯವಾಗಬಹುದಾದ ಬಹುದೊಡ್ಡ ವಿಚಾರವೆನ್ನವುದನ್ನು ನಾವು ಮರೆಯಬಾರದು. ಅಂತಹ ಕೆಲವು ಉದಾಹರಣೆಗಳನ್ನು ಗಮನಿಸುವುದಾದರೆ,

- ಬೆಟ್ಟರಸ ದಂಡನಾಯಕನು ಯಲಹಂಕ ನಾಡನ್ನು ಆಳುತ್ತಿದ್ದಾಗ, ಹಿರಿಯಕೆರೆಯು ಒಡೆದುಹೋದಾಗ ದಂಡನಾಯಕನ ಆಣತಿಯಂತೆ ಕಯಾಮಾಡೆಯನು ನಾಲ್ಕು ವರುಷ ಅದನ್ನು ಪುನರ್ನಿರ್ಮಿಸಿದರು. ಅದಕ್ಕಾಗಿ ಈ ದಂಡನಾಯಕನು ಮತ್ತು ಯಲಹಂಕ ನಾಡಿನ ಸಮಸ್ತ ಪ್ರಜೆಗೌಡರ ಸೇರಿ ಅವನಿಗೆ ಕೆಲವು ಭೂದಾನಗಳನ್ನು ನೀಡಿದರು.[37]
- ಚಕ್ರವರ್ತಿ ದಂಡನಾಯಕನು ಅಧಿಕಾರದಲ್ಲಿದ್ದಾಗ, ಅತಿವೃಷ್ಟಿಯಾಗಿ ಕಲಕೆಱೆ ಕೆರಳಬೆನಹಳ್ಳಿ ಮಾಚಗವನೆಲಬಕೆಱೆ ಎರದೊಡವಾಗಿ ಒಡೆದುಹೋಯಿತು. ಆಗ ಚಕ್ರವರ್ತಿ ದಂಡನಾಯಕನು ಆ ನಾಡಿನ ಸಮಸ್ತ ಪ್ರಜೆಗೌಡುಗಳು ಸೇರಿ ಆ ಎರಡು ಒಡ್ಡನ್ನು ಕಟ್ಟುವ ಕೆಲಸಕ್ಕೆ ಒಪ್ಪಿದರು. ಆಗ ಆ ಕಲುಕೆಱೆಯ ದಾಮೋದರ ಸೆಟ್ಟಿ ಕೋಡಿಯಪ್ಪನೂ ತಮ್ಮ ಭಾಗದ ಒಡ್ಡನ್ನೂ ಕಟ್ಟಿದರು. ಆದರೆ ಆ ಕೆರಳಬೆನಹಳ್ಳಿಯವರು ತಮ್ಮ ಭಾಗದ ಒಡ್ಡನ್ನು ಕಟ್ಟಲಾರೆವು ಎಂದರು. ಆಗ ಆ ಒಡ್ಡನ್ನು ಸಹ ದಾಮೋದರ ಸೆಟ್ಟಿ ಮತ್ತು ಕೋಡಿಯಪ್ಪನು ಕಟ್ಟಿದರು. ಆ ಎರಡು ಒಡ್ಡನ್ನು ಕಟ್ಟಿದ್ದಕ್ಕಾಗಿ ಕಟ್ಟುಕೊಡುಗೆಯಾಗಿ ಕಲುಕೆರೆಯ ಭಾಗದಲ್ಲಿ 6ಸಲಗೆ ಗದ್ದೆ, ಆ ಕೆರಳಬೆನಹಳ್ಳಿಯ ಭಾಗದ ನಡುಬಯಲಿನಲ್ಲಿ 6ಸಲಗೆ ಗದ್ದೆ ಒಟ್ಟು 12 ಸಲಗೆ ಗದ್ದೆಗಳನ್ನು ದಾಮೋದರ ಸೆಟ್ಟಿಯು ಕೋಡಿಯಪ್ಪನಿಗೆ ಕೆರೆಕೊಡುಗೆಯಾಗಿ ದಾನವಿತ್ತನು.[38]
- ಚಿಕ್ಕಬೊಮ್ಮೆಯನಾಯಕನು ಕುಂದುರುಪೆಯ ಏರಿ ಒಡೆದು ಹೋದಾಗ ಹೊಸದಾಗಿ ಹಂಪೆಯ ದೊಣೆಯನ್ನು ತೋಡಿಸಿದ್ದನು.[39]
- ಅರಸಿಕೆರೆಯ ತೂಬನ್ನು ಮಹಾಪ್ರಧಾನ ದಂಡನಾಯಕನು ದುರಸ್ತಿ ಮಾಡಿಸಿದ್ದನು. [40].

ಇಂತಹ ನೂರಾರು ಉದಾಹರಣೆಗಳು ಹೊಯ್ಸಳ ಮಹಾಂಡಳೇಶ್ವರರ ಅವಧಿಯಲ್ಲಿ ನಮಗೆ ದೊರಕುತ್ತವೆ. ಕೆರೆಗಳಲ್ಲಿ ಹೂಳು ತುಂಬಿಕೊಂಡು ನೀರು ನಿಲ್ಲುವ ಪ್ರಮಾಣ ಕಡಿಮೆಯಾದಾಗ ಕೆಸರನ್ನು ಕೆರೆಗಳಿಂದ ಹೊರತೆಗೆಯುವ ಕಾರ್ಯವೂ ನಡೆಯುತ್ತಿತ್ತು. ಕೆರೆಯಿಂದ ಹೂಳನ್ನು ತೆಗೆಯುವ ಕೆಲಸಕ್ಕಾಗಿ

ಬಂಡಿಯನ್ನು ದಾನ ನೀಡಿರುವ ಹಾಗೂ ಬಂಡಿಗಳ ಚಾಲಕರ ನಿರ್ವಹಣೆಗಾಗಿ ಭೂಮಿಯನ್ನು ದಾನ ನೀಡಿರುವ ಉಲ್ಲೇಖಗಳು ಶಾಸನಗಳಲ್ಲಿ ದೊರೆತಿವೆ.[41]

ದೇವಾಲಯಗಳು ಮತ್ತು ಮಠಗಳು, ವರ್ತಕಸಂಘಗಳು ಗ್ರಾಮಸಭೆಗಳು ಕೆರೆ, ಕಾಲುವೆ, ತೂಬು, ಬಾವಿ ನಿರ್ಮಾಣ ಕ್ರಿಯೆಯಲ್ಲಿ ಸತತವಾಗಿ ಸಕ್ರಿಯವಾಗಿದ್ದವು. ಇವುಗಳ ನಿರ್ಮಾಣದ ತರುವಾಯ ಇವುಗಳನ್ನು ಸರಿಯಾಗಿ ನಿರ್ವಹಣೆ ಮಾಡಬೇಕು ಮತ್ತು ಕಾಪಾಡಿಕೊಂಡು ಬರಬೇಕು ಎಂಬುದಾಗಿ ಕೆಲವು ಸೂಚನೆಗಳನ್ನು ಎಚ್ಚರಿಕೆಯನ್ನು ನೀಡಲಾಗುತ್ತಿತ್ತು

- ಕ್ರಿ.ಶ. 1269ರ ಬೆಳ್ಳೂರಿನ ಶಾಸನದ ಪ್ರಕಾರ,[42] ತಂಬಿಯಣ್ಣ ಮತ್ತು ತಿರುವರಂಗಪೆರುಮಾಳ್‌ನಂಬಿ ಈ ಇಬ್ಬರಿಗೂ ಮತ್ತು ಮಹಾಜನರಿಗೂ ತಿರುನಾರಾಯಣಪುರ, ತೊಂಡನೂರು, ನಾಗಮಂಗಲ, ದಡಿಗವೇ ಮೊದಲಾದ 18 ನಾಡುಗಳ ಶ್ರೀವೈಷ್ಣವರ ಮುಂದೆ ಆದ ಒಪ್ಪಂದದ ವಿವರವನ್ನು ಈ ಶಾಸನ ತಿಳಿಸುತ್ತದೆ. ಈ ಒಪ್ಪಂದದ ಪ್ರಕಾರ, ತಂಬಿಯಣ್ಣ ಮತ್ತು ತಿರುವರಂಗ ಪೆರುಮಾಳ್‌ನಂಬಿ ಬಿತ್ತುವಟ್ಟಕ್ಕಾಗಿ ವರ್ಷ ನಿಬಂಧಿಯಾಗಿ ಖಂಡುಗಕ್ಕೆ 4 ಪಣದಂತೆ ಕೊಡುವುದಲ್ಲದೆ ಅಧಿಕಾರಿಗಳಿಗೆ ಮತ್ತು ಗೌಡರಿಗೆ ನೀಡಬೇಕಾದ ನಗದನ್ನೂ ನಮೂದಿಸಿದೆ. ಊರಿನ ಇತರೆ ಅಭಿವೃದ್ಧಿ ಕಾರ್ಯಗಳಿಗಾಗಿ ಮಹಾಜನರೇ ವೆಚ್ಚ ಮಾಡಬೇಕೆಂತಲೂ ಸೂಚಿಸಿದೆ. ಈ ಅಂಶಗಳು ಈ ದಂಡನಾಯಕನ ಸಾರ್ವಜನಿಕ ಹಿತದ ದೃಷ್ಟಿಕೋನವನ್ನು ಅರಿವಿಗೆ ತರುತ್ತವೆ.
- ಕ್ರಿ.ಶ. 1269ರ ಬೆಳ್ಳೂರಿನ ಇನ್ನೊಂದು ಶಾಸನದನ್ವಯ ಬೆಳ್ಳೂರಿನ ಮಹಾಜನರು ಮತ್ತು ಶ್ರೀರಂಗಪುರದ ಮಹಾಜನರು ಒಂದು ಒಡಂಬಡಿಕೆ ಮಾಡಿಕೊಂಡರು. ಅದೇನೆಂದರೆ, ಅಲ್ಲಾಳಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದ್ದರಿಂದ ಶ್ರೀರಂಗಪುರದ ಬೆದ್ದಲು ಭೂಮಿಯು ಮುಳುಗಡೆಯಾಗಿ ಹೋಯಿತು. ಇದಕ್ಕೆ ಪ್ರತಿಯಾಗಿ ಶ್ರೀರಂಗಪುರದವರು ಅಲ್ಲಾಳಸಮುದ್ರದ ಕೆಳಗೆ 12 ಸಲಗೆ ಭೂಮಿಯನ್ನು ಪಡೆದು ಬೆಳ್ಳೂರು ಮಹಾಜನರಿಗೆ ಕಟ್ಟುಗುತ್ತಗೆ ಪಿಂಡಾದಾನವಾಗಿ ವರ್ಷಂಪ್ರತಿ 12 ಗದ್ಯಾಣಗಳನ್ನು ಕೊಡಲೊಪ್ಪಿದರು.[43] ಇಂತಹ ಶಾಂತಿ ಒಪ್ಪಂದಗಳು ಒಟ್ಟಾರೆ ಸಮಾಜದ ಸಹಬಾಳ್ವೆಯುತ ಬದುಕಿಗೆ ನೆರವಾಗಿದ್ದುದನ್ನು, ಇಂತಹವುಗಳಿಗೆ ದಂಡನಾಯಕನ ಮನ್ನಣೆ ಇದ್ದುದನ್ನು ಅರಿಯಬಹುದಾಗಿದೆ.

ಬಾವಿ ನೀರಾವರಿಯು ಮಧ್ಯಕಾಲೀನ ಸಂದರ್ಭಗಳಲ್ಲಿ ಅಸ್ತಿತ್ವದಲ್ಲಿತ್ತು ಎಂಬುದಕ್ಕೆ ಸಾಕಷ್ಟು ಆಧಾರಗಳಿವೆ. ತೋಟ ಮತ್ತು ಗದ್ದೆಗಳಲ್ಲಿ ಬಾವಿಗಳಿರುತ್ತಿದ್ದವು. ಇವುಗಳಿಂದ ನೀರೆತ್ತುವ ಮೂಲಕ ಏತ ನೀರಾವರಿಯು ಸಹ ಅಸ್ತಿತ್ವದಲ್ಲಿತ್ತು. ಹಾಗಾಗಿ ಹೊಯ್ಸಳ ಮಹಾಮಂಡಳೇಶ್ವರರ ಆಳ್ವಿಕೆಯ ಪ್ರದೇಶಗಳಲ್ಲಿ ಈ ಬಗೆ ನೀರಾವರಿ ವ್ಯವಸ್ಥೆಯು ಪ್ರಚಲಿತದಲ್ಲಿತ್ತು.[44]

**5.1.3 ಕುಶಲಕರ್ಮಿಗಳಾದ ಒಡ್ಡರಿಗೆ ಪ್ರೋತ್ಸಾಹ:** ಹೊಯ್ಸಳ ಮಹಾಮಂಡಳೇಶ್ವರರು ವಿಶೇಷವಾಗಿ ನೀರಾವರಿ ಕಾರ್ಯಗಳಿಗಾಗಿ ಹಣ ಒದಗಿಸುವವರಿಗೆ ಮತ್ತು ದುಡಿಯುವ ಜನರಿಗೆ ಆಕರ್ಷಕವಾಗುವಂಥ ಯೋಜನೆಗಳನ್ನು ಘೋಷಿಸಿ ಹಲವಾರು ರೀತಿಯ ಸಾರ್ವಜನಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದರು. ಕೆರೆಗಳನ್ನು ಹೊಸದಾಗಿ ತೋಡುವುದಕ್ಕೆ ವಿಶೇಷವಾದ ಪರಿಣತಿಯನ್ನು ಹೊಂದಿದ್ದ ಕೆರೆ ನಿರ್ಮಾಣ ವೃತ್ತಿಯಲ್ಲಿ ಪರಿಣತರಾಗಿದ್ದ ಕುಶಲಕರ್ಮಿಗಳ ಅವಶ್ಯಕತೆ ಇದ್ದೇ ಇತ್ತು. ಇವರು ದೇವಾಲಯಗಳನ್ನು ನಿರ್ಮಿಸುತ್ತಿದ್ದ ಕುಶಲಕರ್ಮಿಗಳಷ್ಟೇ ಮುಖ್ಯರಾಗಿರುತ್ತಿದ್ದರು. ಮೊದಲಿಗೆ ನೀರು ಸುಲಭವಾಗಿ ಇಂಗಿ ಹೋಗದೇ ಮೇಲ್ಮೈಯಲ್ಲಿ ನಿಲ್ಲಲೇ ಬೇಕಾಗಿರುವ ತಾಣವನ್ನು ಹುಡುಕಬೇಕಾಗಿತ್ತು. ಈ ನೀರು ಬೇರೆಡೆಯಿಂದ ಇಲ್ಲಿ ಬಂದು ಸಂಚಯನಗೊಳ್ಳುವಂತೆಯೂ ಮತ್ತು ಇಲ್ಲಿ ಸಂಗ್ರಹಗೊಂಡಿರುವ ನೀರು ಮುಂದುವರೆಯಲು ಸರಾಗವಾಗಿ ಸಹಾಯಕವಾಗುವಂತಹ ವ್ಯವಸ್ಥೆಯೊಂದು ಕೂಡ ಅವಶ್ಯಕವಿತ್ತು. ನೀರು ನಾನಾಮೂಲಗಳಿಂದ ಬಂದು ಸಂಗ್ರಹಗೊಂಡು ನಿಲ್ಲುವುದಕ್ಕೆ ಬೇಕಾಗಿದ್ದ ಒಡ್ಡನ್ನು, ಅಣೆಯನ್ನು ನಿರ್ಮಿಸಬೇಕಾಗಿತ್ತು. ಕೆರೆಯ ಮೇಲ್ಮಯಲ್ಲಿ ನಿಲ್ಲುತ್ತಿದ್ದ ನೀರು ಖಾನೆಗಳಿಗೆ ಕೆರೆಯ ತೂಬಿನ ಮೂಲಕ ಹರಿದು ನಾಲೆಗಳಿಂದ ಸುತ್ತಮುತ್ತಲ ಕೃಷಿ ಭೂಮಿಗಳಿಗೆ ನೀರು ಪೂರೈಸುವಂತಹ ವ್ಯವಸ್ಥೆಯನ್ನು ಕೂಡ ಮಾಡಬೇಕಾಗಿತ್ತು. ಇಲ್ಲಿ ನೀರನ್ನು ನಿಯಮಿತವಾಗಿ ಬಿಡಲು ನೀರುಗಂಟಿಗಳನ್ನು ನೇಮಿಸಬೇಕಾಗಿತ್ತು. ಅವನು ನಿಯಮಾನುಸಾರವಾಗಿ ಈ ಕೆರೆಯ ನೀರಿನ ಫಲಾನುಭವಿಗಳಿಗೆ ಆದ್ಯತಾನುಸಾರವಾಗಿ ನೀರನ್ನು ಬಿಟ್ಟು ನಿಯಮಿತವಾಗಿ ಅದಕ್ಕೆ ಸಂಬಂಧಿಸಿದ ತೆರಿಗೆಯ ಮೊತ್ತವನ್ನು ಸಂಗ್ರಹಿಸುವ ಜವಾಬ್ದಾರಿಯೂ ಆತನದ್ದೇ ಆಗಿತ್ತು.

ಇದನ್ನು ಹೊರತುಪಡಿಸಿದರೆ ಕೆರೆಗಳನ್ನು ನಿರ್ಮಿಸುವವರನ್ನು ಪ್ರೋತ್ಸಾಹಿಸುವುದು ಕೂಡ ಬಹಳ ಮುಖ್ಯವಾಗಿತ್ತು. ಈ ಯೋಜನೆಯ ಸ್ವರೂಪವೆಂದರೆ, ಭೂಮಿಯನ್ನು ದಾನ ನೀಡುವುದು. ಈ ಆಕರ್ಷಣೆಯಿಂದ ಹೆಚ್ಚು ಹೆಚ್ಚು ಜನರು ನೀರಾವರಿ ಕೆಲಸ ಕಾರ್ಯಗಳನ್ನು ಅತ್ಯಂತ ಪುಣ್ಯಕಾರ್ಯವೆಂಬಂತೆ ಭಾವಿಸುತ್ತಲೂ, ಸಾಮಾಜಿಕ ಪ್ರತಿಷ್ಠಾ ಸ್ಥಾಪನೆಗಾಗಿಯೋ ಏನೋ ಉತ್ಸಾಹದಿಂದ ಭಾಗಿಯಾಗುತ್ತಿದ್ದರು. ಉದಾಹರಣೆಗೆ: ಕ್ರಿ.ಶ. 1302ರ ಆನೇಕಲ್‌ನ ತ್ರುಟಿತ ಶಾಸನವು ಸಿಂಗಯದಂಡನಾಯಕನು ಬೈಚಯನಾಯಕನೊಡಗೂಡಿ ಜಿಗುಣಿ ಪ್ರದೇಶವನ್ನು ಆಳುತ್ತಿರುವ ಸಂದರ್ಭದಲ್ಲಿ, ಮಾರಪ್ಪ ಎಂಬಾತನಿಗೆ ಈ ಇರ್ವರು ಕಟ್ಟುಕೊಡುಗೆಯಾಗಿ ಕೆಲವು ಭೂದಾನಗಳನ್ನು ನೀಡಿದುದನ್ನು ತಿಳಿಸುತ್ತದೆ.[45] ಈ ರೀತಿಯ ನೀರಾವರಿ ಚಟುವಟಿಕೆಗಳಲ್ಲಿ ಮಹಿಳೆಯರು ಕೂಡ ಮುಂಚೂಣಿಯಲ್ಲಿ ನಿಂತು ಅನೇಕ ಕಾರ್ಯಗಳನ್ನು ಆಗುಮಾಡಿದ್ದಾರೆ. ಪುರುಷ ಪ್ರಪಂಚದ ಕೆರೆ ನಿರ್ಮಾಣವು 10ನೆಯ ಶತಮಾನದ ನಂತರ ಮಹಿಳೆಯರ ಮೂಲಕ ಇನ್ನೂ ವಿಸ್ತಾರಗೊಂಡವು.

ಒಂದು ವಿಶೇಷವಾದ ಸಂಗತಿಯೆಂದರೆ ಬಹುತೇಕ ಕೆರೆಯ ಹೆಸರುಗಳು ಸ್ತ್ರೀಯರ ಹೆಸರುಗಳಿಂದಲೇ ಜನಪ್ರಿಯಗೊಂಡಿವೆ. ರಾಜರು, ದಂಡನಾಯಕರು, ಸಾಮಂತರು, ಮಹಾಮಂಡಲೇಶ್ವರರು, ಅಧಿಕಾರಿಗಳು

ಕೆರೆಗಳನ್ನು ಕಟ್ಟಿಸುವಾಗ ತಮ್ಮ ತಾಯಿಯರ, ಹೆಂಡತಿಯರ ಹೆಸರುಗಳನ್ನು ಈ ಕೆರೆಗಳಿಗೆ ಇಡುತ್ತಿದ್ದರು. ಉದಾಹರಣೆಗೆ ಹೊಯ್ಸಳ ರಾಮನಾಥನ ಮಹಾಪ್ರಧಾನ ಕಂಚಿಯ ಕಾಲದಲ್ಲಿ ಹೊನ್ನಮಾರಗೌಡನು ತಮ್ಮ ತಾಯಿಯ ಹೆಸರಿನಲ್ಲಿ ಕಾಚಿ ಸಮುದ್ರವನ್ನು,[46]ಮಾಚಿಯ ದಣ್ಣಾಯಕನು ತಮ್ಮ ತಾಯಿಯ ಹೆಸರಲ್ಲಿ ಮಾಯಕ್ಕ ಸಮುದ್ರವನ್ನು ಮಾಡಿಸಿರುವುದನ್ನು ನೋಡಬಹುದು·[47]

ಇಂತಹ ಕಾರ್ಯಗಳನ್ನು ಬಹುಶಃ ನೋಡಿದ ಮಹಿಳೆ ತಾನೇ ತನ್ನ ಹೆಸರಿನಲ್ಲಿಯೋ, ತನ್ನ ತಂದೆ, ಪುತ್ರಿ, ಪುತ್ರರ ಹೆಸರಿನಲ್ಲಿಯೇ ಕೆರೆಗಳನ್ನು ನಿರ್ಮಾಣ ಮಾಡುವ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಳು. ಒಟ್ಟಿನಲ್ಲಿ ಕೆರೆ ನಿರ್ಮಾಣವು ಹೇರಳವಾದ ಹಣವನ್ನು ಬಯಸುತ್ತದೆ. ಹೆಣ್ಣಿನಲ್ಲಿ ಅಷ್ಟು ಸಂಪತ್ತು ಇಲ್ಲದೇ ಹೋಗಿದ್ದರೆ ಇಂತಹ ಗುರುತರವಾದ ಕಾರ್ಯವನ್ನು ಮಾಡಲು ಆಗುತ್ತಿರಲಿಲ್ಲ. ಆಕೆಯು ಆರ್ಥಿಕವಾಗಿ ಸಬಲಳಾಗಿದ್ದುದೇ ಇಂತಹ ದೊಡ್ಡ ಕಾರ್ಯಗಳನ್ನು ಮಾಡಿಸಲು ಸಾಧ್ಯವಾಯಿತು ಎಂಬುದನ್ನು ಗುರುತಿಸಬೇಕು.

ಶುಭಚಂದ್ರಸಿದ್ಧಾಂತದೇವರ ಶಿಷ್ಯೆಯಾಗಿದ್ದ ಗಂಗರಾಜನ ಅತ್ತಿಗೆಯಾದ ಜಕ್ಕಿಮಬ್ಬೆಯು ತನ್ನ ಹೆಸರಿನಲ್ಲಿ ನಿರ್ಮಿಸಿದ ಜಕ್ಕಿಕಟ್ಟೆ[48] ಸಾಮಂತ ಗೊಳಬಾಚಿದೇವನು ತನ್ನ ಪತ್ನಿ ಭೀಮಲೆ ನಾಯಕಿತಿಯ ಪರೋಕ್ಷ ವಿನಯವಾಗಿ ಕಟ್ಟಿಸಿದ ಭೀಮಸಮುದ್ರ[49] ಇವೆಲ್ಲ ಮುಖ್ಯವಾದ ಕೆರೆಗಳಾಗಿವೆ.

ಇವೆಲ್ಲ ಕೇವಲ ಉದಾಹರಣೆಗಳಷ್ಟೆ. ಇಂತಹ ಕೆರೆ ನಿರ್ಮಾಣಗಳ ಉಲ್ಲೇಖಗಳು ಬೇಕಾದಷ್ಟಿವೆ. ಇದರಿಂದ ನಮಗೆ ತಿಳಿದು ಬರುವ ಮುಖ್ಯ ಸಂಗತಿಯೆಂದರೆ ಎಲ್ಲಿ ಜೀವನದಿಗಳು ಹರಿಯುವುದಿಲ್ಲವೋ ಅಲ್ಲೆಲ್ಲ ಮಳೆನೀರಿನ ಸಮರ್ಥ ಸಂಗ್ರಹಣೆಗಾಗಿ ಕೆರೆಗಳನ್ನು ನಿರ್ಮಿಸಿಕೊಡಲಾಗುತ್ತಿತ್ತು. ಇವುಗಳಿಂದ ಸಮೃದ್ಧವಾದ ಕೃಷಿ ಬೆಳೆಗಳನ್ನು ಬೆಳೆಸಲಾಗುತ್ತಿತ್ತು. ಆದರೆ ಈ ಕೆರೆಗಳನ್ನು ಉಪಯೋಗಿಸಿಕೊಂಡು ಬೆಳೆಯಲಾಗುತ್ತಿದ್ದ ಬೆಳೆಗಳ ಬಗೆಗೆ ಶಾಸನಗಳು ಮೌನ ತಾಳಿವೆ.

ಮಹಿಳೆಯರು ಕೆರೆಗಳನ್ನು ಹೊಸದಾಗಿ ನಿರ್ಮಿಸಿದಂತೆಯೇ, ಕೆರೆಗಳು ಒಡೆದು ಹೋದ ಸಂದರ್ಭದಲ್ಲಿ ಅನೇಕ ಮಹಿಳೆಯರು ರಿಪೇರಿ ಮಾಡಿಸಿದಂತೆ ದಾಖಲೆಗಳೂ ಇವೆ ಹಾಗೂ ಕೆರೆಗಳಿಗೆ ತೂಬುಗಳ ಮೂಲಕ ನೀರಾವರಿ ಕಾಲುವೆಗಳನ್ನು ಮಾಡಿ ವ್ಯವಸಾಯ ಭೂಮಿಗೆ ನೀರನ್ನು ಹರಿಸುವ ವ್ಯವಸ್ಥೆಯನ್ನು ಮಾಡಲಾಗುತ್ತಿತ್ತು. ಇಂತಹ ಒಂದು ಉದಾಹರಣೆಯೆಂದರೆ ಪೆರ್ಬಾಳನ್ನು ಆಳುತ್ತಿದ್ದ ರಾಣಿ ಭೂಜಬ್ಬರಸಿಯು ಹೆಬ್ಬಾಳದ ಕೆರೆಗೆ ತೂಬನ್ನು ತೊಡಿಸಿದಳು. ಇದನ್ನು ಶಾಸನವು ಬಿಲವನ್ನು ಮಾಡಿದಳು ಎಂದಿದೆ. ಮೇಲೆ ಕೆರೆಯ ಒಡತಿಯಾದ ದುಗ್ಗಬ್ಬೆಯು ಆ ನದಿಯ ಕೆರೆಗೆ (ಬಹುಶಃ) ತೂಬನ್ನು ನಿರ್ಮಿಸಿದಳು.

ಸಾಮಾನ್ಯ ಜನರು ಇಂತಹ ಬೃಹತ್ ಕೆರೆ ನಿರ್ಮಾಣದಲ್ಲಿ ಭಾಗವಹಿಸಿರುವುದು ಕಷ್ಟವಾಗಿದ್ದರೂ ಅಸಾಧ್ಯ ವಾಗಿರಲಿಲ್ಲ. ಏಕೆಂದರೆ ಕೆರೆಯೊಂದನ್ನು ನಿರ್ಮಿಸುವುದು ವಿಪರೀತ ವೆಚ್ಚದಾಯಕ ಕೆಲಸ. ಆದರೂ ಕೆಲವು ಸ್ತ್ರೀಯರು ಇದನ್ನು ಸವಾಲಾಗಿ ಸ್ವೀಕರಿಸುತ್ತಿದ್ದರು. ಕೆಲವರು ತಮ್ಮ ಗಂಡ, ಮಕ್ಕಳನ್ನು ಬೇಡಿ ಇಂತಹ ಕಾರ್ಯ ಗಳನ್ನು ನೆರವೇರಿಸಿದ್ದಾರೆ. ಅಂತಹ ಅಪರೂಪದ ವಿಷಯವೊಂದು ಸಾಗುಳದ ರಾಜ ಗಾವುಂಡನ ಹೆಂಡತಿ ಸೋರಿಗಾವುಂಡಿ ತನ್ನ ಮಕ್ಕಳಾದ ಸಾತಿಗೌಡ, ದಶಮಿ ಗೌಡ, ದಾಸಿ ಗೌಡರನ್ನು ಕರೆಸಿಕೊಂಡು ಅವರಲ್ಲಿ ಕೈ ಮುಗಿದು ನನಗೊಂದು ಪುಣ್ಯವಾಗುವಂತಹ ಕೆಲಸವನ್ನು ಮಾಡಿಕೊಡಿ ಎಂದು ಬೇಡಿಕೊಂಡಳು. ಅವರು ಏನು ಮಾಡಬೇಕೆಂದು ವಿನಂತಿಸಿಕೊಂಡಾಗ ಆಕೆ ಕೇಳಿದ್ದು (ಆ ಊರಿನ) ಒಡೆದ ಕೆರೆಯೊಂದನ್ನು ಸರಿ ಮಾಡಿ ಎಂದು, ಆ ಮಕ್ಕಳು ತನ್ನ ತಾಯಿಯ ಆಶೆಯನ್ನು ಈಡೇರಿಸಲು ತಮ್ಮ ಭೂಮಿಯಲ್ಲಿ 1 ಮತ್ತರು ಗದ್ದೆಯನ್ನು ಈ ಕೆಲಸಕ್ಕೆ ದಾನವಾಗಿ ನೀಡಿದರು.

ಹೀಗೆ ಹೊಯ್ಸಳ ಮಹಾಮಂಡಳೇಶ್ವರರು ತಮ್ಮ ಆಳ್ವಿಕೆಯ ಪ್ರದೇಶಗಳಲ್ಲಿ ಕೃಷಿ ಸಂಪನ್ಮೂಲಗಳ ಅಭಿವೃದ್ಧಿಯ ಮೂಲಕ ರಾಜಾಯವನ್ನು ಹೆಚ್ಚಿಸಿಕೊಳ್ಳುವ ಒಂದು ರೂಪವಾಗಿ ನೀರಾವರಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದರು ಮತ್ತು ಪ್ರೋತ್ಸಾಹಿಸುತ್ತಿದ್ದರು. ಇನ್ನೊಂದು ಸೂಕ್ಷ್ಮ ಸಂಗತಿಯೆಂದರೆ ಈ ಪ್ರಗತಿಪರ ಅಭಿವೃದ್ಧಿ ಕಾರ್ಯಗಳು ಎಲ್ಲ ಪ್ರದೇಶಗಳಲ್ಲೂ ಸ್ಥಳೀಯವಾದ ಪರಿಸರವನ್ನು ಅವಲಂಬಿಸಿದ್ದವೇ ವಿನಃ ಏಕರೂಪವಾಗಿರಲಿಲ್ಲ. ಇದರಲ್ಲಿ ಧಾರ್ಮಿಕ ನಂಬಿಕೆಯು ಮೇಳೈಸಿದ್ದರೂ ಸಹ ಈ ಅಧಿಕಾರಿಗಳ ಮೂಲ ಧ್ಯೇಯೋದ್ದೇಶ ರಾಜ್ಯದ ಸಪ್ತಾಂಗಗಳಲ್ಲಿ ಒಂದಾದ ಬೊಕ್ಕಸವನ್ನು ಬಲಪಡಿಸುವುದೇ ಆಗಿತ್ತು. ಇಷ್ಟಾದರೂ ಇನ್ನು ಒಂದು ಮಾತನ್ನು ಹೇಳಲೇಬೇಕು, ರಾಜಾಯವನ್ನು ಹೆಚ್ಚಿಸಲು ಕೈಗೊಂಡ ಪ್ರೋತ್ಸಾಹಕ ನೀತಿಗಳಿಂದ ಕೃಷಿ–ವ್ಯಾಪಾರ ವಲಯಗಳಲ್ಲಿ ಅಭಿವೃದ್ಧಿ ಉಂಟಾಗಿ ಆಳುವವರಿಗೂ ಆಳಲ್ಪಡುವವರಿಗೂ ಲಾಭಕರವಾಗುತ್ತಿತ್ತು.

### 5.2 ತೆರಿಗೆಯ ಮೂಲಕ ಆರ್ಥಿಕ ಸಂವರ್ಧನೆ

ತೆರಿಗೆಯು ರಾಜ್ಯದ ಆದಾಯದ ಮೂಲಗಳಲ್ಲಿ ಪ್ರಧಾನವಾದದ್ದು. ತೆರಿಗೆಯನ್ನು ಅನೇಕ ಮೂಲಗಳಿಂದ ಸಂಗ್ರಹಿಸಲಾಗುತ್ತಿತ್ತು. ಅವುಗಳೆಂದರೆ ಭೂಮಿಯ ಮೇಲಿನ ತೆರಿಗೆ, ಮನೆ ಮತ್ತು ಇತರ ವಸ್ತುಗಳ ಮೇಲಿನ ಉದ್ಯೋಗ ತೆರಿಗೆ, ವಾಣಿಜ್ಯ ತೆರಿಗೆ, ಮದುವೆ ಮುಂತಾದ ಆಚರಣೆಗಳ ಮೇಲಿನ ತೆರಿಗೆ, ವ್ಯಾಪಾರಿಗಳ ಮೇಲಿನ ತೆರಿಗೆ, ಕಾರ್ಮಿಕರ ತೆರಿಗೆ ಮುಂತಾದವು. ಇದಲ್ಲದೆ ರಾಜ್ಯಕ್ಕೆ ಹಣ ಪ್ರವಹಿಸುತ್ತಿದ್ದ ಮೂಲವೆಂದರೆ ಅದು ಕಾಣಿಕೆಗಳು, ದಂಡಗಳು. ತೆರಿಗೆಯನ್ನು ವಿಧಿಸುವ ಮೊದಲು ಭೂಮಿಯನ್ನು ಅಳತೆ ಮಾಡುವ, ಉತ್ಪಾದನೆಗನುಗುಣವಾಗಿ ಭೂಮಿಯನ್ನು ವಿಂಗಡಿಸುವ ಹಾಗೂ ನಿರ್ದಿಷ್ಟ ಬೆಳೆಗಳನ್ನು ಬೆಳೆಯಲು ಭೂಮಿಯನ್ನು ಆಯ್ಕೆಮಾಡುವ ಪ್ರಕ್ರಿಯೆಗಳು ನಡೆಯುತ್ತಿದ್ದವು. ಭೂಮಿಯ ಫಲವತ್ತತೆ ಮತ್ತು ಬೆಳೆಗಳ ಆಧಾರದ ಮೇಲೆ ಭೂಮಿ ತೆರಿಗೆಯನ್ನು ವಿಧಿಸಲಾಗುತ್ತಿತ್ತು.

ಬರಡು ಅಥವಾ ಬಂಜರು ಭೂಮಿಗಳನ್ನು ಹಾಗೂ ಗುಡ್ಡಗಾಡು ಅರಣ್ಯ ಪ್ರದೇಶಗಳನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿ ಕೃಷಿಕರಿಗೆ ಕೆಲವು ವರ್ಷಗಳವರೆಗೆ ತೆರಿಗೆ ವಿನಾಯಿತಿಯೊಂದಿಗೆ ನೀಡಲಾಗುತ್ತಿತ್ತು. ಈ ಭೂಮಿಗಳು ಹೆಚ್ಚಾಗಿ ಮಾನವ ಶ್ರಮವನ್ನು ಅವಲಂಬಿಸಿರುತ್ತಿದ್ದವು. ಕೃಷಿಕರಿಗೆ ಇಂಥ ಭೂಮಿಗಳಲ್ಲಿ ಲಾಭಕ್ಕಿಂತ ನಷ್ಟವೇ ಹೆಚ್ಚಾಗುತ್ತಿತ್ತು. ಆದರೆ ರಾಜ್ಯದ ಬೊಕ್ಕಸಕ್ಕೆ ಇದು ಲಾಭದಾಯಕವಾಗುತ್ತಿತ್ತು. ಉದಾಹರಣೆಗೆ

- ಕ್ರಿ.ಶ. 1307ರ ವಿಭೂತಿಪುರದ ಶಾಸನದಲ್ಲಿ[50] ಮಹಾಪಸಾಯಿತನಾದ ನಿನ್ರಾನ್ (ಮಾಸಂದಿನಾಡಿನ ಪಶ್ಚಿಮಭಾಗದ ಅಧಿಕಾರಿ), ಸೆಂಬಿದೇವ, ವಿಲ್ಲಗಾಮುಂಡ ಮೊದಲಾದವರು ಪೆರುಎರಮೂರಿಗೆ ಹೊಂದಿಕೊಂಡಂತಿರುವ ಕಾಡನ್ನು ಕಡಿದು ಊರನ್ನು ಕಟ್ಟಿ, ಆ ಊರಿಗೆ 'ವಾಚ್ಚಿದೇವಪುರ' ಎಂದು ಹೆಸರಿಟ್ಟರು. ಆ ಊರಿಗೆ ಹೊಲಗದ್ದೆಗಳನ್ನು ವಾಚ್ಚಿದೇವರು ಎಂಬ ಮಠಪತಿಗೆ ಮಡಪುರದತ್ತಿಯಾಗಿ ನೀಡಿದರು. (ವಾಚ್ಚಿದೇವಪುರವೇ ಈಗಿನ ವಿಭೂತಿಪುರ).

ಈ ದತ್ತಿಯು ಮಠವೊಂದಕ್ಕೆ ನೀಡಿದ್ದಾದರೂ ಇದರಲ್ಲಿ ದುಡಿಯಬೇಕಾಗಿದ್ದವರು ಕೃಷಿಕರೇ ಆಗಿದ್ದುದನ್ನು ಊಹಿಸಬಹುದು. ಇಂತಹ ಕಡೆಯಲ್ಲಿ ದುಡಿಯುವ ಕೃಷಿಕರಿಗೆ ಲಾಭದ ಗರಿಷ್ಠತೆ ಇರುವ ಸಾಧ್ಯತೆ ಕಡಿಮೆ. ಕುಶಲ ಕರ್ಮಿಗಳ ಮೇಲಿನ ತೆರಿಗೆಯೂ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಆದಾಯವನ್ನು ತರುತ್ತಿತ್ತು. ಬಡಗಿ, ಕಮ್ಮಾರ, ಅಕ್ಕಸಾಲಿ, ಕಂಚುಕಾರ ಮತ್ತು ಶಿಲ್ಪಿ ಎಂಬ ಐದು ವಿಧವಾದ ಕೆಲಸಗಾರರನ್ನು ಒಟ್ಟಿಗೆ ಸೇರಿಸಿ ಪಂಚಾಳರು, ಪಂಚಾಕಾರರ, ವಿಶ್ವಕರ್ಮ, ಓಜರು ಮುಂತಾಗಿ ಹೆಸರಿಸಲಾಗಿದೆ ಇವರೆಲ್ಲರಿಗೂ ಸಮಾನವಾಗಿ ಸೇರಿಸಿ ವಿಧಿಸುತ್ತಿದ್ದ ವೃತ್ತಿ ತೆರಿಗೆಯನ್ನು ಪಂಚಾಳ ತೆರಿಗೆ ಪಂಚಕಾರುಕದೆರೆ, ವೋಜದೆರೆ, ಪಂಚಕಾರುಕ ವೆಡಿಕೆ ಮುಂತಾದ ಹೆಸರಿನಿಂದಲೂ ಕರೆಯಲಾಗಿದೆ.[51] ಇದಕ್ಕೆ ಉದಾಹರಣೆಯೆಂದರೆ,

- ಸೋಮಯದಂಡನಾಯಕನು ತಿರುಮಕೂಡಲು ನರಸೀಪುರ ತಾಲೂಕಿನಲ್ಲಿ ಸೋಮನಾಥಪುರವನ್ನು ನಿರ್ಮಿಸಿದ್ದನು. ಅಲ್ಲಿ ಕೇಶವ ದೇವಾಲಯವನ್ನು ನಿರ್ಮಿಸಿದನು. ಕ್ರಿ. ಶ 1269ರಲ್ಲಿ ಅರಸನಾದ 3ನೆಯ ನರಸಿಂಹನು ಈ ದೇಗುಲ್ಕಕೆ ದತ್ತಿ ನೀಡಿದನು. ಆನಂತರ ಏಳು ವರ್ಷಗಳಾದ ಮೇಲೆ ಸೋಮಯನ ಇಬ್ಬರು ಅಧಿಕಾರಿಗಳು ಸೇರಿ ವಿವರವಾಗಿ ದೇವಾಲಯಕ್ಕೆ ರಾಜ್ಯದ ಬೊಕ್ಕಸದಿಂದ ಸಲ್ಲುವ ವರಮಾನವನ್ನು ನಿಗದಿಗೊಳಿಸಿದರು. ಅದು 3389 ಗದ್ಯಾಣ, 3 ಹಣ ವರ್ಷಕ್ಕೆ 2258/2 ಹೆಚ್ಚಾಯಿತೋ ಆಗ ದೇಗುಲಗಳ ಪಾಲನೆಗಾಗಿ ನಿಗದಿಯಾಗಿತ್ತು. [52]
- ಯಾವಾಗ ವರಮಾನ ದೇಗುಲಕ್ಕೆ ಹೆಚ್ಚಾಯಿತೋ ಆಗ ದೇವಾಲಯದ ಸ್ಥಾನಿಕರು, ನಂಬಿಗಳು, ವೈಷ್ಣವರು, ಉಪಾಧ್ಯಾಯರು, ಸೇವಕರು, ಉಗ್ರಾಣ ಪಾಲಕರು, ಹೂಮಾಲೆ ಕಟ್ಟುವವರು, ರಕ್ಷಕರು, ನರ್ತಕಿಯರು ಗಾಯಕರು, ಕುಂಭಾರರು, ಅಕ್ಕಸಾಲಿಗರು ಹೀಗೆ ಹಲವು ವೃತ್ತಿಪಂಗಡಗಳು ಸೋಮನಾಥಪುರದಲ್ಲಿ ನೆಲೆಸುವಂತಾಗಿತ್ತು. ಇದು ಕ್ರಮೇಣ ನಗರದ ಸ್ವರೂಪವನ್ನು

ಪಡೆಯುವಂಥಾಯಿತು. ದೇವಾಲಯದ ಈ ಸಿಬ್ಬಂದಿಗಳಿಗೆಲ್ಲ ನಿರ್ದಿಷ್ಟ ವೇತನ ನಿಗದಿಯಾಯಿತು. ಜೊತೆಗೆ ದೇವಾಲಯಕ್ಕೆ ಕಾಲಕಾಲಕ್ಕೆ ಬರುತ್ತಿದ್ದ ದಾನ ಸ್ವರೂಪ ಆದಾಯದಿಂದ ದೇಗುಲದ ವಿವಿಧ ರೀತಿಯ ಆಹಾರ ಮತ್ತು ಆಹಾರೇತರ ವಸ್ತುಗಳಿಗೆ ಒಳ್ಳೆಯ ಮಾರುಕಟ್ಟೆ ನಿರ್ಮಾಣಕ್ಕೆ ಕಾರಣವಾಯಿತು. ಕಾಲಕ್ರಮೇಣ ವರ್ತಕರು ಅಲ್ಲಿ ನೆಲೆಸಿದರು. ಇದರಿಂದ ವಾಣಿಜ್ಯ ಚಟುವಟಿಕೆಗಳು ಸಕ್ರಿಯಗೊಂಡು ಅಲ್ಲಿನ ನಿವಾಸಿಗಳ ದೈನಂದಿನ ಅಗತ್ಯತೆಗಳ ಪೂರೈಕೆಯು ಸುಲಭವಾದಂತಾಯಿತು. ಎಲ್ಲಕ್ಕಿಂತ ಮಿಗಿಲಾಗಿ ರಾಜ್ಯದ ಆದಾಯದ ಕೆಲವು ಭಾಗವನ್ನು ಇಂತಹ ದೇಗುಲಗಳಿಗೆ ದಾನದ ರೀತಿಯಲ್ಲಿ ಕೊಟ್ಟಿದುದು ಒಂದು ದೃಷ್ಟಿಯಲ್ಲಿ ಬಂಡವಾಳ ಹೂಡಿಕೆಯೇ ಆಯಿತು; ಆ ಮೂಲಕ ಆರ್ಥಿಕ ಚಟುವಟಿಕೆಗಳು ಹೆಚ್ಚಿದವು; ವಿವಿಧ ತೆರಿಗೆಗಳ ರೂಪದಲ್ಲಿ ಮತ್ತೆ ವರಮಾನವು ರಾಜ್ಯದ ಬೊಕ್ಕಸಕ್ಕೆ ಬರುವಂತಾಯಿತು.

- 25–6–1284ರ ಬೆಳ್ಳೂರಿನ ಶಾಸನದ[53] ಪ್ರಕಾರ, ಪೆರುಮಾಳೆದೇವ ದಂಡನಾಯಕನು 3ನೆಯ ನರಸಿಂಹನಿಂದ ಬೆಟ್ಟದಕೋಟೆ, ಬಿಲ್ಲಬೆಳಗುಂದ, ತಿಪ್ಪೂರು ಎಂಬ 3 ಹಳ್ಳಿಗಳನ್ನು ದಾನವಾಗಿ ಪಡೆದನು. ಆ ಗ್ರಾಮಗಳಿಗೆ ವಿವಿಧ ಸುಂಕಗಳನ್ನು ಮಾನ್ಯ ಮಾಡಿದ್ದು, ಅವುಗಳಲ್ಲಿ ಆನೆಯಸೇಸೆ, ಕಟಕಸೇಸೆ ಮತ್ತು ದಂಡಿನಭಾಗ್ಯತೆ ಮುಂತಾದ ತೆರಿಗೆಗಳು ಗಮನಾರ್ಹವಾಗಿವೆ. "ದಂಡಿನ ಭಾಗ್ಯತೆ ಎಂಬುದು ಸಂಚರಿಸುತ್ತಿರುವ ಸೈನ್ಯಬಲ ಒಂದು ಕಡೆ ನೆಲೆ ನಿಂತಾಗ ಅದರ ಊಟೋಪಚಾರಗಳ ವೆಚ್ಚಕ್ಕಾಗಿ ಪ್ರಜೆಗಳಿಂದ ವಸೂಲು ಮಾಡಲಾಗುತ್ತಿದ್ದ ಕರ. ಹಾಗಾಗಿ ಬೆಳ್ಳೂರು ಸಹ ಒಂದು ಸೈನಿಕ ವಿಭಾಗವಾಗಿದ್ದು, ಅದರ ನಿರ್ವಹಣೆಗಾಗಿ ತೆರಿಗೆಗಳನ್ನು ವಿಧಿಸುತ್ತಿದ್ದರು."[54]
- ಅರಸಿಯಕೆರೆಯ ಮಹಾದೇವರಸನು ಕೊಡಕಣಿಯ ಶ್ರೀರಾಮನಾಥ ದೇವರ ನಿತ್ಯಪೂಜೆಗೆ ಮತ್ತು ನಂದಾದೀವಿಗೆಗೆ ವೀಳೆಯಕ್ಕೆ ಎಂದು ಆ ಸ್ಥಳದ ಎಲ್ಲಾ ತೋಟದ ಸುಂಕವನ್ನು ದಾನವಿತ್ತರು.[55] ಮೆಂಚಿದೇವರಸರು ಮಾರಚನಹಳ್ಳಿಯ ಪಟ್ಟಣಸ್ವಾಮಿಗೆ ಬೀರಣಿಗನ ಮನೆ ಮಾನ್ಯದ ಹೊರತಾಗಿ ಮರುಹಣವನ್ನು ಕೊಡುವಂತೆ ನಿಯಮಿಸಿದುದರ ವಿಚಾರವಿದೆ.[56] ಹುಳ್ಳಮಯ್ಯನು ಮತ್ತು ಹೆಗ್ಗಡೆ ಲಕ್ಕಯ್ಯನೂ ಸೇರಿ ಗೊಮ್ಮಟಪುರದ ತಿಪ್ಪೇಸುಂಕದಲ್ಲಿ ಅಡಕೆಯ ಹೇರಿಗೆ 200 ಅಡಕೆ, ಹಸುಂಬೆ ಫಲ 5, ಮೆಣಸು ಹೇರಿಗೆ 1 ಬಳ್ಳ, ಗಾಣದೆರೆ ಇವೆಲ್ಲವನ್ನು ಚತುರ್ವಿಂಶತಿ ತೀರ್ಥಂಕರರ ಪೂಜೆಗಾಗಿ ದಾನವಿತ್ತನು. 24 ಮನೆಗಳ ಮನೆದೆರೆ ಈ ಎಲ್ಲ ತೆರಿಗೆಗಳನ್ನು ನರಸಿಂಹದೇವನ ಕೈಯಲ್ಲಿ ಬೇಡಿಕೊಂಡು ದಾನವಿತ್ತನು.[57]
- ದೇವಸ್ಥಾನಗಳಲ್ಲಿ ಕೆಲಸ ಮಾಡುತ್ತಿದ್ದ ದೇವಸೇವಕಿಯರು (ಸೂಳೆ ಸಮುದಾಯ) ಸೂಳೆದೆರೆ ಎನ್ನುವ ತೆರಿಗೆಯನ್ನು ಕೊಡಬೇಕಾಗಿತ್ತು. ಈ ತೆರಿಗೆಯನ್ನು ದೇವಾಲಯಗಳಿಗೆ ಬಿಟ್ಟುಕೊಡಲಾಗುತ್ತಿತ್ತು. ಇದರಿಂದಾಗಿ ಇದೊಂದು ಆದಾಯವನ್ನು ತರುವ ವೃತ್ತಿಯಾಗಿತ್ತು. ದೇವಸೇವಕಿಯರಿಗೆ ಮನೆ, ಭೂಮಿ, ದ್ರವ್ಯಗಳನ್ನು ದಾನವಾಗಿ ನೀಡಲಾಗುತ್ತಿತ್ತು. ಅವುಗಳ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು.[58] ಹೊಯ್ಸಳ ಮಹಾಮಂಡಳೇಶ್ವರರ ಆಡಳಿತಾವಧಿಯಲ್ಲಿ ವಿವಿಧ ತೆರಿಗೆಗಳ

ಉಲ್ಲೇಖಗಳು ಶಾಸನಗಳಲ್ಲಿ, ಮತ್ತು ಸಾಹಿತ್ಯಕೃತಿಗಳಲ್ಲಿ ಸಿಗುತ್ತವೆ. ಈ ತೆರಿಗೆಗಳು ಸಮಾಜದ ಎಲ್ಲ ವರ್ಗಗಳ ಮೇಲೂ ಹೇರಲ್ಪಟ್ಟಿದ್ದವು. ಆದರೆ ತೆರಿಗಗಳ ಸ್ವರೂಪ ಮತ್ತು ಪ್ರಮಾಣಗಳಲ್ಲಿ ವ್ಯತ್ಯಾಸಗಳಿರುತ್ತಿದ್ದವು. ಹೀಗಾಗಿ ಈ ಕೆಳಕಂಡ ತೆರಿಗೆಗಳನ್ನು ಲಕ್ಷಿಸಬಹುದು:

- ಫಲವತ್ತಾದ ಭುಮಿಯ ಮೇಲೆ ಹಾಕುತ್ತಿದ್ದ ತೆರಿಗೆ – ಸಿದ್ದಾಯ
- ಮನೆಯ ಮೇಲೆ ಹಾಕುತ್ತಿದ್ದ ತೆರಿಗೆ – ಮನೆದೆರೆ
- ವ್ಯಾಪಾರ ಸಾಮಾಗ್ರಿಗಳ ಮೇಲಿನ ತೆರಿಗೆ– ವಡ್ಡರಾವುಳ
- ಆಮದು ವಸ್ತುಗಳ ಮೇಲಿನ ಸುಂಕ – ಒಳಸುಂಕ
- ರಫ್ತು ಮೆಲಿನ ಸುಂಕ – ಹೊರಸುಂಕ
- ವ್ಯಾಪಾರಿಗಳು ತಳವಾರನಿಗೆ ಕೊಡಬೇಕಾದ ಸುಂಕ –ತಳಾರಸುಂಕ
- ಎತ್ತಿನ ಬಂಡಿ, ಕುದುರೆ ಬಂಡಿ ಮುಂತಾದ ಬಂಡಿಗಳ ಮೇಲಿನ ತೆರಿಗೆ – ಬಂಡಿದೆರೆ
- ಕುಶಲಕರ್ಮಿಗಳ ಮೇಲಿನ ವೃತ್ತಿ ತೆರಿಗೆ – ಪಂಚಾಳ ತೆರಿಗೆ, ಪಂಚಕಾರುಕದೆರೆ
- ಬಡಗಿಗಳ ಮೇಲೆ ವಿಧಿಸುತ್ತಿದ್ದ ತೆರಿಗೆ – ಬಡಗಿದೆರೆ
- ಕಮ್ಮಾರರ ಮೆಲೆ ವಿಧಿಸುತ್ತಿದ್ದ ತೆರೆಗಿ – ಕಮ್ಮಾರ ಸುಂಕ, ಕುಲುಮೆದೆರೆ
- ಅಕ್ಕಸಾಲಿಗರ ಮೇಲೆ ವಿಧಿಸುತ್ತಿದ್ದ ತೆರಿಗೆ– ಅಕ್ಕಸಾಲಿಯಾಯಾ, ಸುವರ್ಣಾಯ
- ಗಾಣದ ಮೇಲಿನ ತೆರಿಗೆ –ಗಾಣದೆರೆ
- ನೇಕಾರರ ಮೇಲಿನ ತೆರಿಗೆ – ಮಗ್ಗದೆರೆ
- ಬೆಲ್ಲದ ತಯಾರಿಕೆಯ ಮೇಲಿನ ತೆರಿಗೆ – ಆಲೆದೆರೆ
- ಉಪ್ಪುತಯಾರಿಕೆಯ ಮೇಲಿನ ತೆರಿಗೆ – ಲವಣಾಯ
- ಕಬ್ಬಿಣದ ಮೇಲಿನ ತೆರಿಗೆ – ಕರ್ಬುನ ಸುಂಕ
- ಕಳ್ಳರ ಮೇಲೆ ಹಾಕುತ್ತಿದ್ದ ದಂಡ– ಕಳ್ಳವಳಿಗೆ
- ವೇಶ್ಯೆಯರ ಮೇಲೆಇನ ತೆರಿಗೆ – ಸೂಳೆದೆರೆ
- ಕುರುಬರ ಮೇಲೆ ಹಾಕುತ್ತಿದ್ದ ತೆರಿಗೆ – ಕುರುಂಬದೆರೆ
- ಚಿಪ್ಪಿಗರ ಮೆಲಿನ ತೆರಿಗೆ – ಕತ್ತರಿವಣ
- ಸೈನಿಕರ ವಸತಿಗಳ ಮೇಲಿನ ತೆರಿಗೆ – ಆಳಿವಸತಾಯ
- ಸಾರ್ವಜನಿಕ ಕೆಲಸಗಳ ತೆರಿಗೆ– ಊರುಟ್ಟಿಗೆ
- ಹಬ್ಬಕ್ಕೆಂದು ಹಾಕುತ್ತಿದ್ದ ತೆರಿಗೆ– ಒಸಗೆ
- ಅಟ್ಟವನ್ನು ಹೊಂದಿದ್ದಕ್ಕೆ ಹಾಕಲ್ಪಟ್ಟ ತೆರಿಗೆ–ಅಟ್ಟದೆರೆ

- ಮಾನ್ಯಮಾಡಿದ ಭೂಮಿಗಳ ಮೇಲಿನ ತೆರಿಗೆ– ಅರುವಣ
- ತುಪ್ಪದ ಮೇಲಿನ ತೆರಿಗೆ –ತುಪ್ಪದೆರೆ
- ತಿಪ್ಪೆಗಳ ಮೇಲಿನ ತೆರಿಗೆ– ತಿಪ್ಪೆಸುಂಕ
- ಮದುವೆಗಳ ಮೇಲಿನ ತೆರಿಗೆ– ಮದುವೆಸುಂಕ
- ಯುವರಾಜನು ಊರಿಗೆ ಬಂದಾಗ ಕೊಡುವ ತೆರಿಗೆ– ಕುಮಾರಗದ್ಯಾಣ
- ಭತ್ತದ ಮೇಲಿನ ತೆರಿಗೆ– ಭತ್ತಾಯ
- ವೀಳ್ಯದೆಲೆ ಬಳ್ಳಿಗಳ ಮೇಲಿನ ತೆರಿಗೆ– ಪನ್ನಾಯ
- ರಾಜರ ಆನೆಗಳ ಮೇಲಿನ ತೆರಿಗೆ= ಆನೆಸೇಸೆ
- ಆಡುಗಳ ಮೇಲಿನ ತೆರಿಗೆ– ಆಡುದೆರೆ
- ಕುರಿಗಳ ಮೇಲಿನ ತೆರಿಗೆ– ಕುರಿದೆರೆ
- ಹೇರುಗಳ ಮೇಲೆ ಹಾಕುತ್ತಿದ್ದ ತೆರಿಗೆ– ಪೆರ್ಜುಂಕ
- ಅಧೀನರಾಜನಿಗೆ ಪೋಷಕನಾದ ತೆರಿಗೆ– ಮನ್ನೆಯ
- ಖಾಯಂ ಅಂಗಡಿಯ ಮೇಲಿನ ತೆರಿಗೆ – ಅಂಗಡಿ ಆಯ
- ಸಂತೆಗೆ ಬರುವ ವಸ್ತುಗಳ ಮೇಲಿನ ತೆರಿಗೆ– ಸಂತೆ ಸುಂಕ
- ಸಾರಿಗೆ ತೆರಿಗೆ– ಕೀಳ್ವಟ್ಟೆ ಸುಂಕ, ಮೇಲ್ವಟ್ಟೆ ಸುಂಕ
- ಸೆಟ್ಟಿಗಳ ಮೇಲಿನ ತೆರಿಗೆ– ಸೆಟ್ಟಿವಣ
- ಕುದುರೆ ಅಥವಾ ಬೇರೆ ಪ್ರಾಣಿಗಳನ್ನು ಕಟ್ಟುವ ಸ್ತಳದ ಮೇಲೆವಿಧಿಸುತ್ತಿದ್ದ ತೆರಿಗೆ –ನೆಲಮೆಟ್ಟು

ರಾಷ್ಟ್ರಕೂಟರ ಕಾಲದಲ್ಲಿ ಸ್ಥಳೀಯ ಹಂತದಲ್ಲಿ ನಾಡಗಾವುಂಡರು ಮತ್ತು ಪೆರ್ಗಡೆಗಳು, ಅವರಿಗಿಂತ ಸ್ವಲ್ಪ ಕೆಳಗಿನ ಗಣ್ಯರಿಗೆ ತೆರಿಗೆ ವಸೂಲು ಮಾಡುವ ಅಧಿಕಾರವನ್ನು ನೀಡಿದ್ದರು. ಇವರೆಲ್ಲರೂ ಜಮೀನುದಾರ ಕುಟುಂಬಕ್ಕೆ ಸೇರಿದವರಾಗಿದ್ದರು. ಹೊಯ್ಸಳರ ಆಳ್ವಿಕೆಯ ಸಂದರ್ಭದಲ್ಲಿ ಮಹಾಮಂಡಳೇಸ್ವರರಿಗೆ ಬಹು ಮುಖ್ಯವಾದ ಕಂದಾಯಾಧಿಕಾರವಿತ್ತು. ಏಕೆಂದರೆ ಅವರಲ್ಲಿ ಎಲ್ಲರೂ ಸಹ ಯಾವುದಾದರು ನಾಡುಗಳ ಮತ್ತು ಆ ನಾಡುಗಳ ಸಮೂಹವಾದ ಮಹಾನಾಡುಗಳ ಅಧಿಪತಿಗಳಾಗಿರುತ್ತಿದ್ದರು. ಮಹಾಮಂಡಲೇಶ್ವರರು ನಡೆಸುತ್ತಿದ್ದ ಎಲ್ಲ ಬಗೆಯ ಅಂದರೆ ಕೆರೆನಿರ್ಮಾಣ, ಭೂದಾನ, ತೆರಿಗೆ ವಿಧಿಸುವಿಕೆ, ದೇಗುಲ ನಿರ್ಮಾಣ, ದತ್ತಿ ಮುಂತಾದ ಕೊಡುಗೆಗಳ ಸಂದರ್ಭಗಳಲ್ಲಿ ಪ್ರಭುಗಾವುಂಡರ ಉಪಸ್ಥಿತಿ ಕಡ್ಡಾಯವಾಗಿರುವುದನ್ನು ಬಹುತೇಕ ಶಾಸನಗಳಲ್ಲಿ ಕಾಣಬಹುದು. ಈ ಸಂಭಂಧಿತವಾದ ಎಲ್ಲ ವ್ಯವಹಾರಗಳಲ್ಲಿ ಇವರು ಸಭೆ ಸೇರುತ್ತಿದ್ದರು ಎಂಬುದು ಇದರಿಂದ ವೇದ್ಯವಾಗುತ್ತದೆ. ಹಾಗಾಗಿ ಮಹಾಮಂಡಳೇಶ್ವರರು ಮತ್ತು ಪ್ರಭುಗಾವುಂಡರು ಸೇರಿದ್ದೇ ನಾಡಸಭೆ

ಆಗಿರುತ್ತಿತ್ತು. ಆದ್ದರಿಂದ ಅವರು ಪ್ರಭುಗಾವುಂಡರೆಂದು ಕರೆಸಿಕೊಂಡ ಗ್ರಾಮೀಣ ಮುಖಂಡರ ಮೂಲಕ ತೆರಿಗೆಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸುವ ಅಧಿಕಾರವನ್ನು ಹೊಂದಿದ್ದರೆಂಬುದು ಶಾಸನಾಧಾರಗಳಿಂದ ದೃಢಪಡುತ್ತದೆ. ಈ ಪ್ರಭು ಗಾವುಂಡರು ಕೆಲವೊಮ್ಮೆ ಸಮಸ್ತ ಪ್ರಬುಗಾವುಂಡರೆಂತಲೂ ಕರೆಸಿಕೊಂಡಿದ್ದರು. ಈ ಹಂತದವರು ಗ್ರಾಮಗಳ ಮಟ್ಟದ ಕೃಷಿಕ ವರ್ಗದ ವಕ್ತಾರರಾಗಿದ್ದರು. ಆದ್ದರಿಂದ ಈ ಪ್ರಭುಗಾವುಂಡರು ಪ್ರತಿಯೊಬ್ಬ ಉದಾಹರಣೆಗೆ ಒಂದು ನಾಡಿನ 30 ಗ್ರಾಮಗಳ ಪ್ರಭುಗೌಡರು ಕುತ್ತಾಂಡಿ ದಂಡನಾಯಕನಿಗೆ ನೆರವು ನೀಡುತ್ತಿದ್ದರು.[59] ಪ್ರಭುಗಾವುಂಡರ ಅಧಿಕಾರ ಮತ್ತು ಪ್ರಭಾವಗಳಿಗೆ ಬಹುಶಃ ಅವರಿಗಿದ್ದ ಅಪಾರವಾದ ಭೂಮಿ ಮತ್ತು ಕಾಣಿ ಮತ್ತು ಜನಗಳ ಮೇಲೆ ಅವರು ಹೊಂದಿದ್ದ ಹಿಡಿತವೇ ಕಾರಣವಾಗಿರಬೇಕು. ಆದ್ದರಿಂದಲೇ ಹೊಯ್ಸಳ ಮಹಾಮಂಡಲೇಶ್ವರರು ತಮ್ಮ ವ್ಯವಹಾರಗಳ ನಿರ್ವಹಣೆಯಲ್ಲಿ ಈ ಗ್ರಾಮ ಗಣ್ಯರ ಸಹವರ್ತಿಯಾಗಿದ್ದರು. ಕೆಲವೊಮ್ಮೆ ಈ ಮಹಾ ಮಂಡಳೇಶ್ವರರಿಗೆ ಮಹಾಜನರು ತೆರಿಗೆಗಳನ್ನು ಸಂಗ್ರಹಿಸಿ ಕೊಡುತ್ತಿದ್ದರು.

ಮಧ್ಯಕಾಲೀನ ಕರುನಾಡಿನಲ್ಲಿ ಬಹುಶಃ ಮಿತಿಮೀರುತ್ತಿದ್ದ ಜನಸಂಖ್ಯೆಯನ್ನು ನಿಯಂತ್ರಿಸಲೋ ಏನೋ ಪ್ರತೀ ಮದುವೆಯ ಸಂದರ್ಭದಲ್ಲಿಯೂ ಮದುವಣಿಗ ಹಾಗೂ ಮದುವಣಗಿತ್ತಿಯರ ಪರವಾಗಿ ಅವರ ತಂದೆ–ತಾಯಿಗಳು ಸರ್ಕಾರಕ್ಕೆ ಎಂದರೆ ಅರಮನೆಗೆ ಅಥವಾ ಅವರು ಯಾವ ಕುಲಕ್ಕೆ ಸೇರುತ್ತಾರೋ ಅಥವಾ ಯಾವ ಭೌಗೋಳಿಕ ಪರಿಸರಕ್ಕೆ ಸೇರುತ್ತಾರೋ ಅಲ್ಲಿನ ದೇಗುಲಕ್ಕೆ ನಿಗದಿತವಾದ ತೆರಿಗೆಯನ್ನು ಕಟ್ಟಬೇಕಾಗಿತ್ತು. ಇದನ್ನು ಮದುವೆದೆರೆ, ಮದುವೆವಣ ಎಂದು ಕರೆಯಲಾಗುತ್ತಿತ್ತು. ಮದುವೆಯನ್ನು ಮಾಡುವ ಮೊದಲೇ ಚಪ್ಪರವನ್ನು ಹಾಕುತ್ತಿದ್ದ ಸಮಯದಲ್ಲಿಯೇ ಕೆಲವು ವೇಳೆ ತೆರಿಗೆಯನ್ನು ಕಟ್ಟಬೇಕಾಗಿತ್ತು. ಅಥವಾ ಚಪ್ಪರ ಹಾಕಿದ ನಂತರ ಮದುವೆಯವರೆಗಿನ ಕಾಲಘಟ್ಟದಲ್ಲಿ ಅವರು ತೆರಿಗೆ ಕಟ್ಟಬೇಕಾಗಿತ್ತು. ಆದುದರಿಂದಲೇ ಇದನ್ನು ಹಂದರವಣ ಎಂದು ಕೂಡ ಕರೆಯಲಾಗಿದೆ. ಸೇಸೆದೆರೆ ಮತ್ತು ಹಸೆಯಹಣ ಎಂಬ ಹೆಸರುಗಳೂ ಇದಕ್ಕೆ ಪರ್ಯಾಯವಾಗಿ ಬಳಕೆಯಲ್ಲಿದ್ದವು. ಒಟ್ಟಿನಲ್ಲಿ ಪ್ರತಿಯೊಂದು ಮದುವೆಯೂ ಸರ್ಕಾರಕ್ಕೆ ಸುಂಕವನ್ನು ಕಟ್ಟಿಯೇ ಮಾಡಬೇಕಾಗಿತ್ತು. ಕೆಲವು ಸಂದರ್ಭದಲ್ಲಿ ಊರಿನಲ್ಲಿ ಯಾವುದಾದರೂ ಸಾರ್ವಜನಿಕ ಕಾರ್ಯಕ್ರಮಗಳು ಆಗಬೇಕಾಗಿದ್ದ ಪಕ್ಷದಲ್ಲಿ ಎಲ್ಲರೂ ಸೇರಿ ಆ ಮದುವೆಯ ತೆರಿಗೆಯನ್ನು ಆ ಸಾರ್ವಜನಿಕ ಕಾರ್ಯಗಳಿಗೆ ಹಸ್ತಾಂತರಿಸಿದ ಸಂಗತಿಯೂ ನಮಗೆ ಕಂಡುಬರುತ್ತದೆ. ಕೆಲವೆಡೆ ಕೆಲವು ದೇವಾಲಯಗಳ ನಿರ್ವಹಣೆಗೂ ಈ ಮದುವೆದೆರೆಯನ್ನು ಹಸ್ತಾಂತರಿಸುತ್ತಿದ್ದುದನ್ನು ನಾವು ಗಮನಿಸಬಹುದು.

ಈ ರೀತಿಯ ಮದುವೆದೆರೆಯನ್ನು ಎಲ್ಲ ಜಾತಿಯವರೂ ಕಟ್ಟಲೇಬೇಕಿತ್ತು. ಇದರಿಂದ ಯಾರಿಗಾದರೂ ವಿನಾಯಿತಿ ಬೇಕಾದರೆ ಪ್ರಭುತ್ವದೊಂದಿಗೆ ಚರ್ಚಿಸಿ ಅಲ್ಲಿಂದಲೇ ವಿನಾಯಿತಿ ಪಡೆಯಬೇಕಾಗಿತ್ತು. ಈ ಸಂದರ್ಭದಲ್ಲಿ ಮುಂದೆ ವಿಜಯನಗರದ ಅರಸ ಕೃಷ್ಣದೇವರಾಯನ ಕಾಲದ ಹಲವಾರು ಶಾಸನಗಳಲ್ಲಿ ಮದುವೆಯ ತೆರೆಯನ್ನೇ ಬಿಟ್ಟ ಸಂಗತಿಯನ್ನು ಮುಂದುಮಾಡಿ ಹಲವರು

ಶಾಸನಗಳನ್ನು ಹಾಕಿಸಿರುವುದನ್ನು ಗಮನಿಸಿದರೆ ಇದರ ಪ್ರಾಮುಖ್ಯತೆ ಎಷ್ಟೆಂದು ತಿಳಿಯುತ್ತದೆ. ಹೀಗೆ ಕಟ್ಟುತ್ತಿದ್ದ ತೆರಿಗೆಯಲ್ಲಿ ವರ ಹಾಗೂ ವಧುವಿನ ಕಡೆಯ ಮೊತ್ತ ಕೆಲವೆಡೆ ಸಮಾನವಾಗಿದ್ದರೆ ಇನ್ನೂ ಕೆಲವೆಡೆ ಗಂಡಿನ ಕಡೆಗಿಂತ ಹೆಣ್ಣಿನ ಕಡೆಯವರು ಹೆಚ್ಚಾಗಿ ನೀಡಬೇಕಾಗಿತ್ತು ಎಂಬುದು ವಿಶೇಷವಾದ ಸಂಗತಿಯಾಗಿದೆ. ಉದಾಹರಣೆಗೆ

ಕಣಿಕಟ್ಟೆಯ ಸಮಸ್ತ ಜಗತಿಗಳು, ಸೋಮೆಯನಾಯಕ ಹಾಗೂ ಸಮಸ್ತ ಪ್ರಜೆಗೌಡಗಳು ಸೇರಿ ನಿರ್ಧರಿಸಿದ ಸಂಗತಿಯೆಂದರೆ ಇಲ್ಲಿ ಮದುವೆಯ ಮಾಡಿದಲ್ಲಿ ಮದವಳಿಗೆಯವರಲ್ಲಿ ಒಂದು ಹಣ, ಮದುವಣಿಗನಲ್ಲಿ ಒಂದು ಹಣವನ್ನು ಜಗತೇಶ್ವರ ದೇವರ ನಂದಾದೀವಿಗೆಗೆ ಬಿಡುವುದು ಎಂದು ತೀರ್ಮಾನಿಸಿದರು.[60]

ತನ್ನ ಮಾವ ತನ್ನ ಮದುವೆಯ ಸಂದರ್ಭದಲ್ಲಿ ನೀಡಿದ ದಾನವನ್ನು ಅವನು ತನ್ನ ಮಗಳ ಮದುವೆಯನ್ನು ಮಾಡಿದಾಗ ತನ್ನ ಅಳಿಯನಿಗೆ ನೀಡಿರುವ ಅಪರೂಪದ ವಿಷಯವೊಂದು ಹಿರೇಗುಂಡಕಲ್ ಶಾಸನದಲ್ಲಿ ವ್ಯಕ್ತವಾಗಿದೆ.[61] ಮಹಾನಾಡಪ್ರಭು ಕೆಯೂರ ಮಗ ರಾಮಗೌಡನು ಶ್ರೀಮನ್ ಮಹಾಸಾಮಂತಾಧಿಪತಿ ಹೊಳಕಲ್ಲ ಬೊಮ್ಮಯನಾಯಕನ ಮಗ ಮಾಚಣ್ಣನಿಗೆ ತನ್ನ ಮಗಳನ್ನು ಕೊಟ್ಟು ಮದುವೆಯನ್ನು ಮಾಡಿದಾಗ ತನ್ನ ಮಾವ ತನಗೆ ಕೊಡುಗೆಯಾಗಿ ಶಾಸನವನ್ನು ಹಾಕಿಸಿದ್ದ ಹಿರಿಯ ಗುಂಡಕಲ್ಲನ್ನು ತನ್ನ ಅಳಿಯನಾದ ರಾಮಗೌಡನಿಗೆ ಕೊಡುಗೆಯಾಗಿ ನೀಡಿದನು.

ಹೀಗೆ ಮದುವೆಗಾಗಿ ತೆರಿಗೆಯನ್ನು ಕಟ್ಟಿಸಿಕೊಳ್ಳುವುದರ ಮೂಲಕ ಹೊಯ್ಸಳ ಮಹಾಮಂಡಳೇಶ್ವರರ ಕಾಲದಲ್ಲಿ ಒಂದು ರೀತಿಯ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಲಾಯಿತು. ಇದನ್ನು ಆರ್ಥಿಕ ವ್ಯವಸ್ಥೆಯಾಗಿಯೂ ನೋಡಬಹುದು. ಪ್ರತಿಯೊಂದು ಕುಲದವರೂ ಕೂಡ ಈ ತೆರಿಗೆಯನ್ನು ನೀಡಬೇಕಾಗಿರುವದುನ್ನು ನೋಡಿದರೆ ಇದೊಂದು ಸಾಮಾನ್ಯವಾಗಿ ಆರ್ಥಿಕ ಸಂಗತಿಯೊಂದರ ಪ್ರಾತಿನಿಧಿಕವಾದ ತೆರಿಗೆಯೆಂದು ಕಾಣುತ್ತದೆ.

**5.3 ಉತ್ಪಾದನಾ ಸಂವರ್ಧನೆ :**

ನಮ್ಮ ದೇಶದಲ್ಲಿ ಉತ್ಪಾದನಾ ವಿಧಾನ, ಉತ್ಪಾದನಾ ಸಂಬಂಧಗಳು, ಉತ್ಪಾದನಾ ಉಪಕರಣಗಳು ಮುಂತಾದ ಪರಿಕಲ್ಪನೆಗಳು ಮಾರ್ಕ್ಸವಾದಿ ಅಧ್ಯಯನ ವಿಧಾನದಿಂದಾಗಿ ಹುಟ್ಟಿಕೊಂಡವು. ಈ ಬಗೆಯ ವಿಧಾನದಿಂದ ಯಾವ ರೀತಿಯ ಉತ್ಪಾದನಾ ವ್ಯವಸ್ಥೆ ಅಸ್ತಿತ್ವದಲ್ಲಿತ್ತು ಹಾಗೂ ಆ ವ್ಯವಸ್ಥೆಯೊಳಗೆ ಯಾವ ರೀತಿಯ ಪರಿವರ್ತನೆಗಳು ಆಗುತ್ತಿದ್ದವು ಎನ್ನುವುದರ ಅಧ್ಯಯನ ಸಾಧ್ಯ. ಈ ನೆಲೆಗಟ್ಟಿನಿಂದ ಹೊಯ್ಸಳ ಮಹಾಮಂಡಳೇಶ್ವರರು ಉತ್ಪಾದನಾ ವ್ಯವಸ್ಥೆಯಲ್ಲಿ ವಹಿಸಿದ ಪ್ರಮುಖ ಪಾತ್ರವನ್ನು ಚರ್ಚಿಸುವುದು ಪ್ರಸ್ತುತ ಅಧ್ಯಾಯದ ತುರ್ತಾಗಿದೆ. ಹೀಗಾಗಿ ಊಳಿಗಮಾನ್ಯತೆ, ಭೂಮಾಲೀಕತ್ವ, ಹಾಗೂ ದಾನ ಎಂಬ ಅಂಶಗಳನ್ನು ಇಟ್ಟಿಕೊಂಡು ಯಾವ ರೀತಿಯ ಉತ್ಪದನಾ ವ್ಯವಸ್ಥೆಯು ಅಸ್ತಿತ್ವದಲ್ಲಿತ್ತು ಮತ್ತು ಅದನ್ನು ಈ

ಮಹಾಮಂಡಳೇಶ್ವರರ ಹೇಗೆ ವರ್ಧಿಸಿದರು ಅಥವಾ ಅದನ್ನು ಹಾಗೆಯೇ ಮುಂದುವರೆಸಿಕೊಂಡು ಹೋದರು ಅಥವಾ ಮಾಡಿದ ಬದಲಾವಣೆಗಳು ಏನು ಎಂಬುದನ್ನು ವಿಶ್ಲೇಷಿಸಿದ್ದೇನೆ.

ಉತ್ಪಾದಕ ಮತ್ತು ಅನುತ್ಪಾದಕ ವರ್ಗಗಳ ನಡುವಿನ ಸಂಬಂಧಗಳು ರಾಜ್ಯವ್ಯವಸ್ಥೆಯ ಮೇಲೆ ಬೀರುತ್ತಿದ್ದ ಪರಿಣಾಮಗಳಿಗೆ ಈ ಮಹಾಮಂಡಳೇಶ್ವರರು ಯಾವ ರೀತಿ ಕಾರಣಕರ್ತರಾಗಿದ್ದರು ಎಂಬುದನ್ನು ಮುನ್ನೆಲೆಗೆ ತರಲು ಯತ್ನಿಸುವ ಪ್ರಯತ್ನ ಈ ಅಧ್ಯಾಯದ್ದು. ಇದರಿಂದ ಕೇವಲ ಆರ್ಥಿಕ ಚಟುವಟಿಕೆಗಳಿಗಷ್ಟೇ ಸೀಮಿತವಾಗಿ ಈ ಪರಿಕಲ್ಪನೆಗಳನ್ನು ಟಂಕಿಸದೆ ಅಂದಿನ ಸಾಮಾಜಿಕ ಸ್ಥಿತ್ಯಂತರಗಳ ಸ್ವರೂಪವನ್ನು ತಿಳಿಯಲು ಸಹಾಯಕ ವಾಗುತ್ತದೆ ಎಂಬುದು ನನ್ನ ಭಾವನೆ. ಇದೇ ದಾರಿಯಲ್ಲಿ ಮುಂದೆ ಹೋಗಿ ಭೂಮಾಲೀಕತ್ವ, ಸಾಮಂತ ಅರಸರ ಪ್ರಾಬಲ್ಯ, ರಾಜಕೀಯ ಪ್ರೇರಿತ ನೂನತ ಸಂಬಂಧಗಳು, ಭೂದಾನ ಮಾಧ್ಯಮಗಳ ಮೂಲಕ ಬಹಳ ಸ್ಪಷ್ಟವಾಗಿ ಗುರುತಿಸಲು ಪ್ರಯತ್ನಿಸಿದ್ದೇನೆ. ಈ ವಿವರಗಳನ್ನು ಈ ಮುಂದಿನಂತೆ ಗ್ರಹಿಸಬಹುದು.

**5.3.1 ಊಳಿಗಮಾನ್ಯತೆ:** ಹೊಯ್ಸಳ ಮಹಾಮಂಡಳೇಶ್ವರರ ಆಳ್ವಿಕೆಯ ಪ್ರದೇಶದಲ್ಲಿ ಊಳಿಗಮಾನ್ಯ ವ್ಯವಸ್ಥೆಯ ಸ್ವರೂಪವನ್ನು ಗ್ರಹಿಸುವುದು ಒಳಿತು. ಇದು ಆಸಕ್ತಿಯ ಮತ್ತು ಚರ್ಚೆಯ ವಸ್ತುವಾದ ಪರಿಕಲ್ಪನೆಯೇ ಸರಿ. ಭಾರತದಲ್ಲಿ ಈಗಾಗಲೇ ಊಳಿಗಮಾನ್ಯ ವ್ಯವಸ್ಥೆಯ ಕುರಿತು ಡಿ.ಡಿ ಕೊಸಾಂಬಿ, ರಾಮ್ ಶರಣ್ ಶರ್ಮ, ಇರ್ಫಾನ್ ಹಬೀಬ್, ಬರ್ಟನ್ ಸ್ಟೈನ್, ಆರ್.ಎನ್.ನಂದಿ, ಕೇಶವನ್ ವೆಳುತ್ತಾಟ್ ಮೊದಲಾದವರು ವಿಶೇಷವಾದ ಅಧ್ಯಯನವನ್ನು ಕೈಗೊಂಡಿದ್ದಾರೆ. ಇವರು ನಡೆಸಿದ ಚರ್ಚೆಯು ಊಳಿಗಮಾನ್ಯ ವ್ಯವಸ್ಥೆಯ ಅಸ್ತಿತ್ವ, ಸ್ವರೂಪ ಮತ್ತು ಸಮಾಜದ ಚಲನೆಯನ್ನು ಅರ್ಥೈಸಿಕೊಳ್ಳುವುದಕ್ಕೆ ಸಹಕಾರಿಯಾಗುತ್ತದೆ. ಇವರೆಲ್ಲರ ಚರ್ಚೆಯ ವಿಚಾರಗಳಲ್ಲಿ ಪ್ರಧಾನವಾಗಿ ಕಾಣುವ ಅಂಶವೆಂದರೆ, ಅರಸ ಮತ್ತು ಪ್ರಜೆಗಳೊಂದಿಗಿನ ನೇರ ವ್ಯವಹಾರ, ತೆರಿಗೆ ಸಂಗ್ರಹ, ಭೂಮಾಲೀಕ ಮಧ್ಯವರ್ತಿಗಳ ಹುಟ್ಟು, ಧಾರ್ಮಿಕ ಸಂಘ ಸಂಸ್ಥೆಗಳು ಭೂದಾನಗಳು, ಸಾಮಾಜಿಕ ಬಿಕ್ಕಟ್ಟು, ನಗರಗಳ ಅವನತಿ, ಮುಂತಾದವು ಕಾಣಿಸಿಕೊಳ್ಳುತ್ತವೆ. ಹೊಯ್ಸಳರ ಶಾಸನಗಳು ಮತ್ತು ಆ ಕಾಲಘಟ್ಟದಲ್ಲಿ ರಚನೆಯಾದ ಸಾಹಿತ್ಯ ಕೃತಿಗಳನ್ನು ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿದಾಗ ಅಂದು ಭೂ ಆಧಾರಿತ ಅರ್ಥವ್ಯವಸ್ಥೆಯು ಅಸ್ತಿತ್ವದಲ್ಲಿತ್ತು ಎಂಬುದು ಸ್ಪಷ್ಟಗೊಳ್ಳುತ್ತದೆ. ಇದು ಭೂಮಿ, ಕಂದಾಯ, ದಾನ, ಹೆಚ್ಚುವರಿ ಉತ್ಪಾದನೆ, ಭೂಮಾಲೀಕರ ಅಧ್ಯಯನಗಳನ್ನು ಕೈಗೊಂಡಾಗ ಮಾತ್ರ ಸ್ಪಷ್ಟವಾಗುತ್ತದೆ. ನೀಡಲಾಗುತ್ತಿದ್ದ ದಾನಗಳೂ ಕೂಡ ಸ್ಥಳೀಯ ಸಮಗ್ರತೆಗೆ ಇಂಬು ಕೊಡುತ್ತಿದ್ದಂತಹ ಆರ್ಥಿಕ ವ್ಯವಸ್ಥೆಯನ್ನೇ ಬಲಗೊಳಿಸುತ್ತಿತ್ತು. ಬ್ರಾಹ್ಮಣರಿಗೆ ಸಂದಾಯವಾಗುವಂತಹ ದಾನಗಳ ಮೂಲಕ ದೇವಾಲಯಗಳು ಹಾಗೂ ಬ್ರಾಹ್ಮಣರು ಕೃಷಿ ಮತ್ತು ಮಾರುಕಟ್ಟೆ ವ್ಯವಸ್ಥೆಗೆ ವಿಶೇಷವಾದ ಬಲವನ್ನು ತುಂಬಿದರು. ಭೂಹಿಡುವಳಿಗಳ ಮೂಲಕ ನಾವು ಇದನ್ನು ಅರ್ಥ ಮಾಡಿಕೊಳ್ಳಬಹುದು.

**5.3.2 ಭೂಮಾಲೀಕತ್ವ : ಭೂಮಾಲೀಕರು ಮತ್ತು ಕೃಷಿ ಕಾರ್ಮಿಕರು;** ಮಹಾಜನರು, ಪೆರ್ಗಡೆಗಳು, ಗಾವುಂಡರು, ಪ್ರಭುಗಾವುಂಡರು ಮುಂತಾದ ಭೂಮಾಲೀಕ ವರ್ಗಗಳು ಅರಸರು ಮತ್ತು ರೈತರ ನಡುವೆ ಮಧ್ಯವರ್ತಿಗಳಾಗಿ ಕೆಲಸ ಮಾಡಲು ಪ್ರಾರಂಬಿಸಿದರು ಇಡೀ ಅರ್ಥವ್ಯವಸ್ಥೆಯು ಭೂ ಆಧಾರಿತವಾಗಿದ್ದರಿಂದ ಅರಸರು ಭೂಮಾಲಿಕರೊಂದಿಗೆ ನಿಕಟವಾದ ಸಂಬಂಧವನ್ನು ಹೊಂದುವುದು ಅನಿವಾರ್ಯವಾಗಿತ್ತು. ಇದು ಭೂಮಾಲಿಕ ವ್ಯವಸ್ಥೆಯನ್ನು ಇನ್ನಷ್ಟು ಗಟ್ಟಿಗೊಳಿಸಿತು. ದಾನದ ರೂಪದಲ್ಲಿ ಭುಮಿಯನ್ನು ಪಡೆಯುವಾಗಲೇ ರಾಜನಿಗೆ ಕೊಡಬೇಕಾದ ಪಾಲು, ತೆರಿಗೆ ಸಂಗ್ರಹಣೆ, ನೀರಾವರಿ ವಿಚಾರಗಳು, ಕಾನೂನು ಮುಂತಾದವುಗಳ ಮೇಲಿನ ನಿರ್ಣಯಗಳ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದುಕೊಳ್ಳಲಾಗುತ್ತಿತ್ತು. ಇದರಿಂದ ಕೃಷಿಕರು ಭೂಮಾಲೀಕರನ್ನು ಪ್ರಶ್ನಿಸುವಂತಿರಲಿಲ್ಲ. ಕೃಷಿ ಮತ್ತು ಕೃಷಿ ಭೂಮಿಗೆ ಸಿಕ್ಕಷ್ಟು ಪ್ರಾಮುಖ್ಯತೆ ಕೃಷಿಕನಿಗೆ ಸಿಗದೇಹೋದದ್ದು ವಿಪರ್ಯಾಸ. ಕೃಷಿ ಉತ್ಪಾದನೆಯಲ್ಲಿ ತೊಡಗುತ್ತಿದ್ದ ಕೃಷಿಕರನ್ನು ಭೂಮಿಕಾರ, ಒಕ್ಕಲು, ಬೆಸವೊಕ್ಕಲು ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು.[62] ಇವರು ಗ್ರಾಮೀಣ ಗಣ್ಯರ ಅಧೀನದಲ್ಲಿರುತ್ತಿದ್ದರು. ಹೊಲೆಯ ಮತ್ತು ತೊತ್ತು ಎನ್ನುವ ಕೃಷಿ ಜೀತದಾಳುಗಳು ಇದ್ದರು.[63] ಇವರು ಭೂಮಿಯನ್ನು ಉಳುಮೆ ಮಾಡಿ ಅಲ್ಲಿಯೇ ವಾಸವಾಗಿದ್ದ ಆದರೆ ಯಾವ ಸ್ವಾತಂತ್ರ್ಯವನ್ನು ಪಡೆಯದ ಕೆಳವರ್ಗದ ಜನರು. ಆಳುವ ಮಹಾಮಂಡಲೇಶ್ವರ ಅಥವಾ ಇನ್ನಾವ ಅಧಿಕಾರಿಯಾದರೂ ಕೃಷಿಕಾರ್ಮಿಕರ ಮತ್ತು ಭೂಮಾಲೀಕರ ನಡುವೆ ಸ್ಥಳೀಯ ಮಟ್ಟದಲ್ಲಿ ಇದ್ದ ವ್ಯಾವಹಾರಿಕ ಸಂಪರ್ಕ ಮತ್ತು ಸಂಬಂಧಗಳನ್ನು ಮಾತ್ರ ಲಯ ದಾಟದಂತೆ ಗಟ್ಟಿಗೊಳಿಸುವ ಪ್ರಕ್ರಿಯೆಯಲ್ಲಿ ಅನಿವಾರ್ಯವಾಗಿ ಪಾಲುದಾರರಾಗಲೇ ಬೇಕಿತ್ತು.

ಭೂ ಆಧಾರಿತ ಅರ್ಥವ್ಯವಸ್ಥೆಯ ಮಹತ್ತರ ಪರಿಣಾಮಗಳಲ್ಲಿ ಸ್ವಂತ ಭೂಮಿಯನ್ನು ವ್ಯಕ್ತಿಯು ಹೊಂದಲು ಹಪಿಹಪಿಸುತ್ತಿದ್ದುದು ಮುಖ್ಯವಾದುದು. ಇದು ಗೌರವದ ಪ್ರಶ್ನೆಯೂ ಆಗಿ ಪರಿಣಮಿಸತೊಡಗಿತ್ತು. ಈ ಭೂಮಾಲೀಕತ್ವವು ರಾಜನಿಗೆ ಸೇರಿದ ಭೂಮಿ, ಖಾಸಗಿ ಭೂಮಿ, ಸಾಮುದಾಯಿಕ ಭೂಮಿ, ದಾನದ ರೂಪದಲ್ಲಿ ಪಡೆದ ಭೂಮಿ ಎಂಬೀ ಮಾದರಿಗಳನ್ನು ಇಟ್ಟುಕೊಂಡು ಅಧ್ಯಯನ ಕೈಗೊಂಡಾಗ ಭೂಮಿಯ ಒಡೆತನ ಯಾರ ಕೈಯಲ್ಲಿದ್ದಿತು ಎಂಬುದು ಮತ್ತು ಅದರ ಸ್ವರೂಪವೇನು ಎಂಬುದು ತಿಳಿದುಬರುತ್ತದೆ. ಇಡೀ ರಾಜ್ಯವೇ ರಾಜನದ್ದಾದರೂ ರಾಜ್ಯದ ಭೂಮಿಗಳೆಲ್ಲವೂ ರಾಜನದ್ದಾಗಿರಲಿಲ್ಲ. ಆದರೆ ಅವನದು ಎಂದು ಕೆಲವು ಆಸ್ತಿಪಾಸ್ತಿಗಳು ಇದ್ದವು. ರಾಜನ ಭೂಮಿಯನ್ನು ಅವರ ಅಧಿಕಾರಿಗಳೇ ನೋಡಿಕೊಳ್ಳುತ್ತಿದ್ದುದು. ಈ ಭೂಮಿಯ ಎಲ್ಲ ಕೆಲಸಗಳನ್ನು ಕೂಲಿಯಾಳುಗಳು (ರೈತರು), ಗೇಣೀ ರೈತರು ಮಾಡುತ್ತಿದ್ದರು.

ರಾಜಪ್ರಭುತ್ವವು ಕೆಲವು ಭೂಮಿಯನ್ನು ಖಾಸಗಿ ಭೂಮಾಲೀಕರ ಒಡೆತನಕ್ಕೆ ಒಪ್ಪಿಸಿಬಿಟ್ಟಿತ್ತು. ಅವರ ಮೇಲೆ ತೆರಿಗೆ ವಿಧಿಸುವ ಮತ್ತು ಅವರ ಹಕ್ಕುಗಳನ್ನು ಮಿತಿಗೊಳಿಸಿವ ಅಧಿಕಾರವೂ ಇತ್ತು. ಭೂಮಿಯನ್ನು ಮಾರಾಟ ಮಾಡುವ, ದಾನ ನೀಡುವ ಕಾಣಿಕೆ ರೂಪದಲ್ಲಿ ಕೊಡುವ ಹಕ್ಕುಗಳು

ಪ್ರಾಪ್ತವಾಗುವುದು ಅದರ ಮೇಲೆ ಒಡೆತನ ಸಾಧಿಸಿದಾಗ ಮಾತ್ರ. ಹೀಗಾಗಿ ಅನೇಕ ಮಹಾಮಂಡಳೇಶ್ವರರು ತಮ್ಮ ಒಡೆತನದ ಹಲವು ಭೂಮಿಗಳನ್ನು ದಾನ ನೀಡುತ್ತಿದ್ದುದನ್ನು ಗಮನಿಸಿದಾಗ ಅವರು ಒಂದು ಬಗೆಯಲ್ಲಿ ಖಾಸಗಿ ಭೂಮಾಲೀಕರೇ ಆಗಿರುತ್ತಿದ್ದರು ಎಂಬುದು ತಿಳಿಯುತ್ತದೆ. ಉದಾಹರಣೆಗೆ,

- 1321ರ ಸತ್ಯಾಗಾಲದ ಶಾಸನದಿಂದ[64] ಮಾದಜೀಯ ಎಂಬಾತನು ಮಾಧವದಂಡನಾಯಕನಿಂದ ಕುರುನೂರು ಮತ್ತು ಅದರ ಉಪಗ್ರಾಮಗಳನ್ನು ಕೊಂಡುಕೊಂಡು ಅವುಗಳನ್ನು ಪ್ರಸನ್ನಮಾಧವಪುರ'ವೆನಿಸಿದ ಕುರುನೂರಿನ ಮಹಾಜನಗಳಿಗೆ ದಾನ ಮಾಡಿದುದು ತಿಳಿಯುತ್ತದೆ.
- 03–07–1316ರ ಬಸವಾಪುರದ ಶಾಸನದನ್ವಯ[65] ಮಾಧವದಂಡನಾಯಕನು 'ವಿದ್ಯಾನಿಧಿ ಪ್ರಸನ್ನ ಕೇಶವಪುರ' ವೆಂಬ ಅಗ್ರಹಾರವನ್ನು ಸ್ಥಾಪಿಸಿದ್ದನು. ಇದಕ್ಕೆ ಆಲೂರಿನ ಮಹಾಜನರು ಅನೇಕ ದಾನದತ್ತಿಗಳನ್ನು ಒದಗಿಸಿದರು.
- 23–07–1316 ಹರದನಹಳ್ಳಿಯ ಶಾಸನದ[66] ಪ್ರಕಾರ, ಮಾಧವದಂಡನಾಯಕನ ಅಧೀನ ಅಧಿಕಾರಿ ಪುರುಸಗೌಡನ ಮಗ ಮಾರಗೌಡನು ದಿವ್ಯಲಿಂಗೇಶ್ವರವೆಂಬ ಅಣಿಲೇಶ್ವರ ದೇವಾಲಯವನ್ನು ಕಟ್ಟಿಸಿ, ಆ ದೇವರ ಪೂಜಾದಿ ಸೇವೆಗಳಿಗೆಂದು ಅನೇಕ ದತ್ತಿಗಳನ್ನು ಬಿಟ್ಟನು.
- 17–11–1276ರ ಹೊಳೆನರಸೀಪುರದ ಶಾಸನವು[67]ಪೆರುಮಾಳೆದೇವದಂಡನಾಯಕನು ಪಂಚಿಕೇಶ್ವರ, ಆರಣಪೂಜೆ ಹಾಗೂ ಐಂದ್ರಪರ್ವ ಸೇವೆಗಳಿಗೆಂದು ಉದ್ಧೂರ ಮಹಾಜನಗಳಿಂದ ಭೂಮಿಯನ್ನು ಕೊಂಡು ದಾನ ನೀಡಿದ ಸಂಗತಿಯನ್ನು ಒಳಗೊಂಡಿದೆ.
- 18–8–1280ರ ಬೇಲೂರು ಶಾಸನದಲ್ಲಿ[68] ಈ ದಂಡನಾಯಕ ತನ್ನ ತಾಯಿ ಮಂಚಿಯಕ್ಕ (<ಮಂಚಾಂಬಿಕೆ)ಯ ಸ್ಮರಣಾರ್ಥ ಆಕೆಯ ವೃಂದಾವನವನ್ನು ನರಸೀಪುರದಲ್ಲಿ ನಿರ್ಮಿಸಿ ಭೂದಾನ ನೀಡಿದುದು ಉಕ್ತವಾಗಿದೆ. 11–11–1285ರ ನಂಜನಗೂಡಿನ ಶಾಸನವು (ತ್ರುಟಿತ)[69] ಪೆರುಮಾಳೆದೇವ ದಂಡನಾಯಕನು ನೀಡಿದ ದಾನವೆಂಬಂತೆ ತೋರುತ್ತದೆ.
- ಕ್ರಿ.ಶ. 1286ರ ಹುಲಿಗುಂದ ಗ್ರಾಮದ ಶಾಸನದ ಪ್ರಕಾರ[70] ಈ ದಂಡನಾಯಕನು ಎಸಗೂರಿನ ಗೌಡಪ್ರಜೆಗಳಿಂದ ಕೊಂಡ ಪ್ರದೇಶಗಳನ್ನು ಪಂಚಿಕೇಶ್ವರ ದೇವರುಗಳಿಗೆಂದು ಭೂದಾನ ನೀಡಿದನು.
- ಮಹಾಪ್ರಧಾನ ಮಾದಿಗಿದೇವ ದಂಡನಾಯಕನು 2300 ಗದ್ಯಾಣ, 3ಪಣವನ್ನೂ ಹೊದಕೆ ಮಾಡಿ ಪದುಮಲೇಶ್ವರ ದೇವರಿಗೆಂದು ದೇವದಾನವಾಗಿ ಬಂದಿದ್ದಂತಹ ನಿರಹಳ್ಳಿ, ಕಾಲೆಯನಹಳ್ಳಿ, ಕಾಲುವೆಯಹಳ್ಳಿ, ಚೋಳ–ಚೋಳನಹಳ್ಳಿ ಎಂಬ ನಾಲ್ಕು ಹಳ್ಳಿಗಳನ್ನು ನರಸಿಂಹಪುರದ ಅಗ್ರಹಾರದ ಮಹಾಜನರಿಂದ ಕೊಂಡುಕೊಂಡನು. ಇವನು ತನ್ನ ಹೆಂಡತಿ ಮಾಯಿದೇವದಂಡನಾಯಕಿತಿ ಯ ಹೆಸರಿನಲ್ಲಿ ಮಹಾಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದ್ದನು.[71]

ಈ ಮಹಾಮಂಡಳೇಶ್ವರರು ಸಮುದಾಯದ ಒಡೆತನಕ್ಕೆ ಸೇರಿದ ಭೂಮಿಯನ್ನು ಒಂದು ಸಮುದಾಯದ ಜನರು ಪರಸ್ಪರ ಹಂಚಿಕೊಳ್ಳುವುದಕ್ಕೆ ಮತ್ತು ಅವರ ಹಕ್ಕುಗಳನ್ನು ರಕ್ಷಿಸುವುದಕ್ಕೆ ಸಹಾಯ ಮಾಡುತ್ತಿದ್ದರು. ಈ ಬಗೆಯ ಸಮುದಾಯಕ ಸದಸ್ಯರು ಒಟ್ಟಿಗೆ ಸೇರಿ ರಾಜನಿಗೆ ತೆರಿಗೆ ನೀಡುವುದರ ಮೂಲಕ ತಮ್ಮ ಸಹಭಾಗಿತ್ವವನ್ನು ನಿರೂಪಿಸುತ್ತಿದ್ದು ಇಲ್ಲಿಯೂ ಸಹ ಶ್ರೇಣಿಕೃತ ವ್ಯವಸ್ಥೆಯಿದ್ದುದನ್ನು ಅರಿಯಬಹುದು. ಎಷ್ಟೋ ಬಾರಿ ಎಲ್ಲ ಸದಸ್ಯರು ಸೇರಿ ಎಲ್ಲರಿಗೂ ಸಮಾನವಾಗಿ ಭೂಮಿ ಸಿಗುವಂತೆ ನೋಡಿಕೊಳ್ಳುವುದಕ್ಕಾಗಿ ತಮ್ಮ ಒಡೆತನದ ಭೂಮಿಗೆ ಶಾಶ್ವತವಾದ ಗಡಿಗಳನ್ನು ನಿರ್ಧರಿಸುತ್ತಿದ್ದರು. ಉದಾಹರಣೆಗೆ,

- 25–6–1284ರ ಬೆಳ್ಳೂರಿನ ಶಾಸನದ[72] ಪ್ರಕಾರ, ಪೆರುಮಾಳೆದೇವ ದಂಡನಾಯಕನು 3ನೆಯ ನರಸಿಂಹನಿಂದ ಬೆಟ್ಟದಕೋಟೆ, ಬಿಲ್ಲಬೆಳಗುಂದ, ತಿಪ್ಪೂರು ಎಂಬ 3 ಹಳ್ಳಿಗಳನ್ನು ದಾನವಾಗಿ ಪಡೆದನು. ಇದನ್ನು ಬೆಳ್ಳೂರಿನ ಮಹಾಜನರಿಗೆ ಪ್ರಸನ್ನಮಾಧವ, ರಾಮಕೃಷ್ಣ, ವರದಅಲ್ಲಾಳನಾಥದೇವರ ಅಂಗಭೋಗ, ರಂಗಭೋಗಾದಿ ಸೇವೆಗಳಿಗಾಗಿ ದಾನ ಮಾಡಿದನು. ನಂತರ ಈತನೇ ಆ ದತ್ತಿಯನ್ನು 96 ಮಹಾಜನರಿಗೆ ಹಂಚಲು, ಅವರು ಆ ಹಳ್ಳಿಗಳ ಉತ್ಪನ್ನವನ್ನು 7 ವ್ರಿತ್ತಿಗಳಾಗಿ ವಿಂಗಡಿಸಿ ಒಂದು ಭಾಗವನ್ನು ಪೆರುಮಾಳೆ ದೇವದಂಡನಾಯಕನಿಗೆ ಪ್ರೀತಿಗೊಡುಗೆಯಾಗಿ ನೀಡಿದರು.
- 8–8–1280ರ ಹಾನುಗಲ್ಲು ಶಾಸನದ[73] ಪ್ರಕಾರ, ಪೆರುಮಾಳೆದೇವ ದಂಡನಾಯಕನು ಬಿಜ್ಜಲಾಪುರವೆನಿಸಿದ ಹಾನುಗಲ್ಲಿನ ಮಹಾಜನರಿಂದ ಭೂಮಿಯನ್ನು ಕೊಂಡು ಆಕಣಪೂಜಯ್ಯನೆಂಬಾತನ ಮಕ್ಕಳಿಗೆ ದಾನವಾಗಿ ನೀಡಿದನು.

ಕ್ರಿ.ಶ.1266ರ ಕೆಲವತ್ತಿಯ ಶಾಸನವು[74] ಪೆರುಮಾಳೆ ದೇವದಂಡನಾಯಕನು ಅಲ್ಲಾಳಪೆರುಮಾಳದೇವರನ್ನು ಪ್ರತಿಷ್ಠಾಪಿಸಿ ದೈವದ ಪೂಜಾದಿಸೇವೆಗಳಿಗೆಂದು ಭೂದಾನ ನೀಡಿದುದನ್ನು ತಿಳಿಸುತ್ತವೆ. ದಾವಣಗೆರೆಯ ಕ್ರಿ.ಶ.1267ರ ಶಾಸನದ[75] ಪ್ರಕಾರ ಪೆರುಮಾಳೆದೇವದಂಡನಾಯಕನ ಇಚ್ಛೆಯ ಮೇರೆಗೆ ಚೌಡವೆಗ್ಗಡೆಯು ಹರಿಹರದೇವರ ನಂದಾದೀವಿಗೆಗೆ 3 ಗದ್ಯಾಣ, ವನಮಾಲೆಗೆ 1 ಗದ್ಯಾಣವನ್ನು ಅಲ್ಲಿನ ಮಹಾಜನಗಳಿಗೆ ದಾನ ನೀಡಿದನು. ಕ್ರಿ.ಶ. 1272 ಮತ್ತು 1277ರ 2 ಶಾಸನಗಳು[76] ಈ ದಂಡನಾಯಕನ ಆಣತಿಯಂತೆ ಹರಿಹರದೇವರಿಗೆಂದು 4 ಗದ್ಯಾಣಗಳನ್ನು ಮಹಾಜನರಿಗೆ ಬೀರಯ್ಯನು ನೀಡಿದುದನ್ನು ತಿಳಿಯಪಡಿಸುತ್ತದೆ. ಬ್ರಾಹ್ಮಣರಿಗೆ ನೀಡಿದ ದಾನದ ಭೂಮಿಗಳಿಂದ ಅವರು ಆ ಬ್ರಹ್ಮದೇಯಗಳನ್ನು ಅನುಭವಿಸುತ್ತ ಒಂದೊಂದು ಸಂದರ್ಭದಲ್ಲಿ ಭೂಮಾಲೀಕರಾಗಿ ವರ್ತಿಸಲಾರಂಭಿಸಿದ್ದರು. ದೇವಾಲಯಗಳಿಗೆ ನೀಡಿದ ದೇವದಾನದ ಭೂಮಿಗಳಿಂದ ಅವು ಸಹ ಭೂಮಾಲೀಕರಂತೆ ಆಗಿಬಿಟ್ಟಿದ್ದವು.

ಬ್ರಾಹ್ಮಣರು ಮಾತ್ರವಲ್ಲದೆ ಹಲವು ಶೈವಸ್ಥಾನಗಳಲ್ಲಿದ್ದ ಸ್ಥಾನಿಕರು ಸಹ ಖಾಸಗಿ ಭೂಮಾಲೀಕರಾಗಿದ್ದರು. ಇದಕ್ಕೆ ಅರಕಲಗೂಡಿನ ಒಂದು ಶಾಸನ ಒಳ್ಳೆಯ ಉದಾಹರಣೆಯಾಗಿದೆ.[77] ಇದು ಹಲವು ಕುತೂಹಲದಿಂದ ಕೂಡಿದೆ. ರಾಮೇಶ್ವರ ದೇವಾಲಯದೊಳಗೆ ದಕ್ಷಿಣಮೂರ್ತಿ ಗುಡಿಯ ಹಿಂದೆ ಒಂದರ ಪಕ್ಕ ಇನ್ನೊಂದರಂತೆ ನಿಲ್ಲಿಸಿದ ನಾಲ್ಕು ಬೇರೆ ಬೇರೆ ಕಲ್ಲುಗಳ ಮೇಲೆ ಶಾಸನವನ್ನು ಕಂಡರಿಸಿರುವುದು ಒಂದು ಅಪರೂಪದ ನಿದರ್ಶನ. ಶಾಸನದಲ್ಲಿ ಎರಡು ತೇದಿಗಳಿವೆ ಕ್ರಿ.ಶ. 27–10–1250, 21–6–1251. ಮೊದಲ ತೇದಿಯಂದು ನಡೆದ ಘಟನೆಯ ಎಂಟು ತಿಂಗಳ ನಂತರ ಎರಡನೆಯ ತೇದಿಯನ್ನು ಸೂಚಿಸಿದೆ. ಈ ತೇದಿಯಂದು ಶಾಸನವನ್ನು ಕಂಡರಿಸಲಾಯಿತೆಂಬುದು ಸ್ಪಷ್ಟ. ಹಿರಿಯ ಸಂಧಿವಿಗ್ರಹಿಯಾದ ಹಾಗೂ ಕೊಂಗಮಂಡಲದ ಮಹಾಮಂಡಳೇಶ್ವರನಾದ ಬೊಮ್ಮಣ್ಣದಂಡನಾಯಕರ ಕೈಕೆಳಗಿದ್ದ ವಾಮರಸನ ಮಗ ಕಲ್ಲಯ್ಯನೆಂಬಾತ ರಾಮನಾಥದೇವರ ಪೂಜೆಗಾಗಿ ಹೂದೋಟವೊಂದನ್ನು ಮಾಡಿಸಲು ದೇವಾಲಯದ ಸ್ಥಾನಿಕರಿಂದ 95ಕಂಬ ಭೂಮಿಯನ್ನು ಕ್ರಯಕ್ಕೆ ಪಡೆದು ದಾನ ನೀಡಿದ. ಇದರಲ್ಲಿ 30 ಕೊಳಗ ತೋಟಿಗನ ಜೀವಿತಕ್ಕೆ  ಸಂದಿತು. ತೋಟಕ್ಕೆ ಮತ್ತು ತೋಟಿಗನ ಮನೆ ತೆರಿಗೆಯನ್ನು ಮಾನ್ಯಮಾಡಲಾಯಿತು. ಕೆಲವು ತಿಂಗಳುಗಳ ಅನಂತರ ಈ ದತ್ತಿಯನ್ನು ಸ್ವಲ್ಪ ಮಾರ್ಪಡಿಸಲಾಯಿತು. ತೋಟಿಗನಿಗೆ ಕೊಟ್ಟಿದ್ದ 30ಕೊಳಗ ಭೂಮಿಯನ್ನು ಈಗ ದೇವರಿಗೆ ಬಿಡಲಾಯಿತು. ಇದಕ್ಕೆ ಪ್ರತಿಯಾಗಿ, ಹೊಸದಾಗಿ 80ಕಂಬ ಭೂಮಿಯನ್ನು ಸ್ಥಾನಿಕರಿಂದ ತತ್ಕಾಲೋಚಿತ ಕ್ರಯಕ್ಕೆ ಪಡೆದು ತೋಟಿಗನ ಜೀವಿತಕ್ಕಾಗಿ ನೀಡಲಾಯಿತು. ಅಲ್ಲದೆ ಹೂದೋಟಕ್ಕೆ ನೀರುಣಿಸಲು ಬಳಸುವ ರಾಟಣಕ್ಕೆ ಹೂಡಿದ ಎತ್ತುಗಳ ಮೇವಿಗಾಗಿ ವರಗುಳಿಯ ವಾರ್ಷಿಕ ಸಿದ್ದಾಯದಿಂದ 3ಗದ್ಯಾಣಗಳ್ನು ಮತ್ತು ನೆಲುವಾಗಿಲಿನ ವಾರ್ಷಿಕ ಆದಾಯದಿಂದ ಒಂದು ಗದ್ಯಾಣ ಮತ್ತು ಒಂದು ಹಣವನ್ನು ಕ್ರಮವಾಗಿ ಶ್ರೀಕರಣದ ನಾಗಣ್ಣ ವಿಜಯಣ್ಣನ ಅಳಿಯ ಸೋವಣ್ಣ ಹಾಗೂ ಶ್ರೀಕರಣದ ಕಾವಣ್ಣನ ಮಗ ಮದುಕಯ್ಯ ಇವರು ದಾನಕೊಟ್ಟರು. ಈ ಶಾಸನವು ಹದಿನಾರು ಮೆಟ್ಟಿನ ಹಾಸಗಳೆಯ ಉದ್ದಳತೆಯ ಉಪಕರಣವನ್ನು ಉಲ್ಲೇಖಿಸುತ್ತದೆ. ಈ ಅಳತೆ ಕೋಲಿನಿಂದ ದಾನಭೂಮಿಯನ್ನು ಅಳೆಯಲಾಯಿತು. ಭೂಮಿಯ ಸೀಮಾವಿವರವನ್ನು ತಿಳಿಸುವಾಗ ಅದು ಸಿದ್ಧನಾಥನ ದೇವಾಲಯವನ್ನು ಉಲ್ಲೇಖಿಸುತ್ತದೆ. ಈ ವ್ಯವಹಾರದ ಸಂಬಂಧದಲ್ಲಿ ದಾನಿಯು ಸ್ಥಾನಿಕರಿಂದ ಭೂಮಿಯನ್ನು ಯಥೋಚಿತ ಬೆಲೆಗೆ ಕೊಂಡುಕೊಳ್ಳಬೇಕಾಯಿತೆಂಬುದನ್ನು ಗಮನಿಸಿದರೆ, ಆ ಭೂಮಿಭಾಗಗಳು ಸ್ಥಾನಿಕರ ಖಾಸಗಿ ಆಸ್ತಿಯಾಗಿತ್ತೆಂದು ಸ್ಪಷ್ಟವಾಗಿ ವಿದಿತವಾಗುತ್ತದೆ.

ಅರಸರಿಗಾಗಿ, ದೇವಾಲಯಗಳಿಗಾಗಿ, ಕೆರೆಕಾಲುವೆಗಳ ನಿರ್ಮಾಣಕ್ಕಾಗಿ ಹಳ್ಳಿಯ ಮುಖಂಡರಿಗಾಗಿ ದುಡಿದ ಜನರಿಗೆ ಅವರ ಸೇವೆಗೆಂದು ಭೂಮಿಯನ್ನು ದಾನ ನೀಡಲಾಗುತ್ತಿತ್ತು. ಹೀಗಾಗಿ ಇವರು ಸಹ ಖಾಸಗಿ ಭೂಮಾಲಿಕರಾಗಿರುತ್ತಿದ್ದರು. ಕುಂಬಾರರು, ಬಡಗಿಗಳು, ಅಗಸರು, ನೇಕಾರರು, ಅಕ್ಕಸಾಲಿಗರು, ಕಮ್ಮಾರರು, ನಾಯಿಂದರು ಸಹ ತೆರಿಗೆಗಳನ್ನು ಕೊಟ್ಟು ಭೂಮಿಯನ್ನು ಹೊಂದಿರುತ್ತಿದ್ದರು.[78]

ನರ್ತಕಿಯರು, ಮೃದಂಗದವರು, ಗೊಲ್ಲರು, ನಟರು, ದೇವಾಲಯಗಳಲ್ಲಿನ ನೌಕರರು ಕೂಡ ಭೂಮಾಲೀಕರಾಗಿದ್ದು ತೆರಿಗೆಗಳನ್ನು ನೀಡುತ್ತಿದ್ದರು[79]

ಈ ಎಲ್ಲ ಪ್ರಕ್ರಿಯೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಅರಸರು ರಾಜ್ಯದ ಮೇಲೆ ಹತೋಟಿಯನ್ನು ಸಾಧಿಸಲು ಹೆಚ್ಚೆಚ್ಚು ಭೂಮಿಯನ್ನು ದಾನ ನೀಡುವುದರ ಮೂಲಕ ಒಟ್ಟಾರೆಯಾಗಿ ಸಾಧಿಸುತ್ತಿದ್ದರು. ಈ ಕಾರಣಕ್ಕಾಗಿ ದೇವರು, ಧರ್ಮ, ದೇಗುಲ ಎಂಬ ಹೆಸರುಗಳಿಂದ ಭೂದಾನ ಪ್ರಕ್ರಿಯೆಗಳು ನಡೆಯಲಾರಂಬಿಸಿದವು. ಇದು ಭೂಮಾಲೀಕ ಮಧ್ಯವರ್ತಿಗಳ ಹುಟ್ಟಿಗೆ ಕಾರಣವಾಯಿತು.

ಹೊಯ್ಸಳ ಮಹಾಮಂಡಳೇಶ್ವರರು ಹೆಚ್ಚೆಚ್ಚು ದಾನಗಳನ್ನು ಯಾಕಾಗಿ ಕೊಡುತ್ತಿದ್ದರು ಎನ್ನುವ ಪ್ರಶ್ನೆ ಕೌತುಕಪೂರ್ಣವಾಗಿದೆ. ದಾನದ ಕಲ್ಪನೆಯು ಅಂದಿನ ಸಂದರ್ಭಗಳಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಶಕ್ತಿಯೂ ಆಗಿತ್ತು. ಅಂದಂದು ಪ್ರಚಾರದಲ್ಲಿದ್ದ ಧರ್ಮಗಳಿಗೆ ಸಂಬಂಧಿಸಿ ದೇವಾಲಯ ಹಾಗೂ ಬಸದಿಗಳನ್ನು ನಿರ್ಮಿಸಿ ಅವುಗಳಿಗೆ ದಾನದತ್ತಿಗಳನ್ನು ನೀಡಿ ರಾಜಾಶ್ರಯ ನೀಡಿ ಅವು ಪ್ರಚಾರದಲ್ಲಿರುವಂತೆ ನೋಡಿಕೊಳ್ಳುವ ಕೆಲಸವನ್ನು ದಾನ ನೀಡುವ ವ್ಯವಸ್ಥೆ ಮಾಡುತ್ತಿತ್ತು. ಉತ್ಪಾದಕ ಕೃಷಿ, ಭೂಮಿ, ಹಣ, ಚಿನ್ನ, ಬೆಳ್ಳಿ, ಅಂದಿನ ದೈನಂದಿನ ವಸ್ತುಗಳನ್ನು ದಾನದ ರೂಪದಲ್ಲಿ ನೀಡಲಾಗುತ್ತಿತ್ತು ಎಂಬುದಕ್ಕೆ ಸಾಕಷ್ಟು ಉದಾಹರಣೆ ಸಿಗುತ್ತವೆ. ಮೇಲ್ನೋಟಕ್ಕೆ ಇದು ಧಾರ್ಮಿಕ ಭಾವನೆಯಂತೆಯೇ ಗೋಚರವಾದರೂ ಸಹ ಇದು ಒಂದು ರೀತಿಯಲ್ಲಿ ರಾಜಪ್ರಭುತ್ವಕ್ಕೆ ಧಾರ್ಮಿಕ ಛಾಯೆಯ ಒಳಗಡೆ ನೀಡಿದ ಭದ್ರತೆಯೇ ಆಗಿರುತ್ತಿದದ್ದು ಗಮನಾರ್ಹ.

ಹೊಯ್ಸಳ ಮಹಾಮಂಡಳೇಶ್ವರರು ಅನೇಕರು ಈ ಬಗೆಯಲ್ಲಿ ನೂರಾರು ದಾನಗಳನ್ನು ಇತ್ತಿರುವುದು ಶಾಸನಗಳಿಂದ ತಿಳಿದುಬರುತ್ತದೆ. ವೈದಿಕ ಧರ್ಮವು ದಾನದ ಕಲ್ಪನೆಯನ್ನು ಸಂಪೂರ್ಣವಾಗಿ ಅಂಗೀಕರಿಸಿತ್ತು. ಸಮಾಜದಲ್ಲಿ ದಾನ ನೀಡುವ ವ್ಯವಸ್ಥೆ ರಾಜಮಾಧ್ಯಮವಾಗಿ ಕಾಣಿಸಿಕೊಂಡಿತು. ಇದಕ್ಕೆ ಪ್ರಭುತ್ವ ಬೆಂಬಲವೂ ಇತ್ತು. ತಾವುಗಳು ಅಧಿಕಾರದಲ್ಲಿ ಮುಂದುವರೆಯಲು, ಸ್ಥಳೀಯ ಪ್ರಜೆಗಳೊಂದಿಗಿನ ಸಂಬಂಧಗಳನ್ನು ಬೆಸೆಯಲು, ಸಮಾಜದಲ್ಲಿ ಈಗಾಗಲೇ ಬೇರೂರಿದ್ದ ಶ್ರೇಣೀಕೃತ ಸಮಾಜ ವ್ಯವಸೆಯನ್ನು ಕಾಪಾಡಿಕೊಂಡು ಬರಲು ದಾನ ನೀಡುವ ಕ್ರಿಯಗಳು ಸಾಧನಗಳಾದವು. ಸ್ಥಳೀಯ ಸ್ವಯಮಾಧಿಕಾರವನ್ನು ಹೊಂದಿದ್ದರಿಂದ ಈ ಮಹಾಮಂಡಳೇಶ್ವರರು ಸಮಾಜದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುವಂತಾಯಿತು. ಆದರೆ ಉತ್ತರದಲ್ಲಿ ದಾಸೋಹ ತತ್ವವು ಹುಟ್ಟಿಕೊಂಡಿರುವುದು ಅಂದು ಪ್ರಚಲಿತದಲ್ಲಿದ್ದ ದಾನ ಕ್ರಿಯೆಗೆ ಎದುರಾಗಿ. ದಾಸೋಹ ತತ್ವವು ದಾನದ ಕುರಿತು ಭಿನ್ನವಾಗಿ ಆಲೋಚಿವಂತೆ ಮಾಡಲು ಪ್ರೇರೇಪಿಸಿತು.

**5.3.2.1 ಮಹಿಳೆಯರಲ್ಲಿ ಭೂ ಒಡೆತನ:** ಮಹಿಳೆಯರಲ್ಲಿ ಭೂ ಒಡೆತನವಿತ್ತೇ ಎಂಬ ಪ್ರಶ್ನೆಗೆ ಹೌದು ಖಂಡಿತವಾಗಿಯೂ ಇತ್ತು ಎಂದು ಉತ್ತರಿಸಬಹುದು. ಆದರೆ ಎಷ್ಟರಮಟ್ಟಿಗೆ ಎಂದು ಕೇಳಿದರೆ

ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಆಕೆ ತನ್ನ ಗಂಡನ ಸಮಸ್ತ ಆಸ್ತಿಗೆ ಒಡತಿಯೇ ಆದರೂ ಅದನ್ನು ತನ್ನ ಮನಬಂದಂತೆ ವಿನಿಯೋಗಿಸಲು ಆಕೆಗೆ ನಿಯಂತ್ರಣವಿದ್ದಂತೆ ತೋರುತ್ತದೆ. ದಾನಗಳನ್ನು ನೀಡುವಾಗ ಅನೇಕ ಸಂದರ್ಭಗಳಲ್ಲಿ ಸತಿ–ಪತಿಯರಿಬ್ಬರೂ ಇರುವುದರಿಂದ ಇದು ಯಾರಿಗೆ ಸೇರಿದ ವಸ್ತು ಎಂದು ಖಚಿತವಾಗಿ ಗುರುತಿಸಲು ಆಗುತ್ತಿಲ್ಲ. ಆದರೆ ಶಾಸನಗಳನ್ನು ಗಂಭೀರವಾಗಿ ಓದುವುದರ ಮೂಲಕ ಆಕೆಯ ಆಸ್ತಿಯ ಸ್ವರೂಪವನ್ನು ತಿಳಿಯಬಹುದಾಗಿದೆ. ಎಷ್ಟೋ ವೇಳೆ ಪುರುಷರು ದಾನ ನೀಡುವಾಗ ತಾವು ಭೂಮಿಯನ್ನು ಕೊಳ್ಳಬೇಕಾಗಿತ್ತು. ಕೆಲವೊಮ್ಮೆ ಇನ್ನಾರಿಗೋ ಹಸ್ತಾಂತರಿಸಬೇಕಾಗಿತ್ತು. ಅಂತಹ ಸಂದರ್ಭದಲ್ಲಿ ಆ ಆಸ್ತಿಯ ನಿಜವಾದ ವಾರಸುದಾರರ ಹೆಸರನ್ನು ಖಚಿತವಾಗಿ ದಾಖಲಿಸಲೇ ಬೇಕಾಗಿತ್ತು. ಇಂತಹ ಸಂದರ್ಭದಲ್ಲಿಯೂ ನಮಗೆ ಹೆಂಗಸರ ಹೆಸರಲ್ಲಿ ಭೂದಾಖಲೆಗಳು ಇದ್ದುದು ಗೊತ್ತಾಗಿದೆ. ಇನ್ನು ಆಕೆಯ ನಿರ್ಮಾಣ ಪ್ರಕ್ರಿಯೆಗಳಿಗೆ ಮೂಲ ಕಾರಣ ಆಕೆಗೇ ಸೇರಿದ ಸ್ವಂತ ಆಸ್ತಿಯೆಂಬುದು ನಿರ್ವಿವಾದ. ಆಕೆಗೆ ಆಸ್ತಿಯಲ್ಲಿ ಯಾವುದೇ ಪಾಲಿರಲಿಲ್ಲ ಎಂದರೆ ಆಕೆ ಖಟ್ಲೆ ಹೂಡುವ ಅವಕಾಶವೂ ಇರುತ್ತಿರಲಿಲ್ಲ ಅಲ್ಲವೇ? ನಿಜವಾಗಿಯೂ ಆಕೆಗೆ ಆಸ್ತಿಯಲ್ಲಿ ಪಾಲಿತ್ತು.

ಕುಕನೂರಿನ ಶಾಸನದಲ್ಲಿ ಹೇಳಿರುವಂತೆ[80] ಕುಕ್ಕನೂರಿನ ಉತ್ತರಕ್ಕೆ ನೆಲೆಸಿದ್ದ ಶ್ರೀ ಮಲ್ಲಿಕಾರ್ಜುನ ದೇವರಿಗೆ ಹಲವಾರು ರೀತಿಯ ದಾನಗಳನ್ನು ನೀಡಿದ ಸಂದರ್ಭದಲ್ಲಿ ಗಮನ ಸೆಳೆಯುವ ಸಂಗತಿಯೊಂದಿದೆ. ಬಡವರ ಬೇಲಿಯ ಸೊಸೆ ಗಂಗಿಯಕ್ಕನು ತನಗೆ ಸೇರಿದ ಒಂದು ಮನೆಯನ್ನೇ ದಾನವಾಗಿ ನೀಡಿದಳು. ಈ ಮನೆಯಿಂದ ಬಾಡಿಗೆರೂಪದಲ್ಲಿ ಬರುವ ಹಣವನ್ನು ದೇವರಿಗೆ ಸಲ್ಲುವಂತೆ ಈಕೆ ವ್ಯವಸ್ಥೆ ಮಾಡಿದ್ದಾಳೆ.

ಹೊಯ್ಸಳ ದೊರೆ ವೀರಬಲ್ಲಾಳನ ಕಾಲದಲ್ಲಿ ಅವನ ಪಾದಪದ್ಮೋಪಜೀವಿಯಾಗಿದ್ದ ಬೆನಕನ ಮಾರವ್ವೆಯನ್ನು ಮುನ್ನೆಲೆಗೆ ತಂದ ಶಾಸನವೊಂದಿದೆ [81] ಇದರಲ್ಲಿ ಈಕೆಯನ್ನು ಹೊಗಳುವ ಅನೇಕ ಪದ್ಯಗಳಿವೆ. ಈಕೆಯ ಸಾಮಾಜಿಕ ಕಾರ್ಯಕ್ರಮಗಳ ಪಟ್ಟಿಯೇ ಇದೆ. ಪ್ರತೀವರ್ಷವೂ ಕಟ್ಟುಂಬಣ 8 ಹೊನ್ನನ್ನು (ಸಿದ್ದಾಯವನ್ನು) ಮಹಾಜನಗಳಿಗೆ ನೀಡಿ ಕೆರೆ, ದೇಗುಲ, ಹೊಲದ ನಿರ್ವಹಣೆಗೆ 562 ಗದ್ಯಾಣ ಹಾಗೂ 3 ಪಣವನ್ನು ದಾನವಾಗಿ ನೀಡಿದ್ದಾಳೆ. ಇವುಗಳ ಜೊತೆಗೆ ತನಗೆ ಭೋಗವಾಗಿ ಬಂದಿದ್ದ ಭೂಮಿಯ ಸೀಮೆಯಲ್ಲಿ 1 ಪಣ ಭೂಮಿ, 1 ಮತ್ತರು ಬೆದ್ದಲೆ ಭೂಮಿ ಹಾಗೂ 4 ಖಂಡುಗ ಗದ್ದೆಯನ್ನು ದಾನವಾಗಿ ನೀಡಿದ್ದಾಳೆ. ಇದರ ಜೊತೆಗೆ ಪ್ರತೀವರ್ಷವೂ ಕಟ್ಟುಂಬಣ ಗದ್ಯಾಣವಾಗಿ 6 ಪಣ 5 ಸಿದ್ಧಾಯವನ್ನು ಕೊಡುವ ಭರವಸೆಯನ್ನೂ ನೀಡಿದ್ದಾಳೆ. ಇಷ್ಟೆಲ್ಲ ಈಕೆ ಸಾಧಿಸಿದ್ದು ತನಗೆ ಭೋಗವಾಗಿ ಬಂದಿದ್ದ ಭೂಮಿಯಿಂದ ಎಂಬುದನ್ನು ಗಮನಿಸಬೇಕು. ಅಂದರೆ ತನ್ನ ಪಾಲಿಗೆ ಬಂದಿದ್ದು. ಈ ಎಲ್ಲವನ್ನು ಆಕೆ ಕೊಂಡಲಿಯ ಅಶೇಷ ಮಹಾಜನಗಳಿಗೆ ಪಾದಪೂಜೆ ಮಾಡಿ ದಾನವಾಗಿ ನೀಡಿದ್ದಾಳೆ. ಇದು ಆಕೆಯ ಸ್ಥಾನಮಾನವನ್ನು ಖಚಿತವಾಗಿ ದಾಖಲಿಸುತ್ತದೆ ಹಾಗೂ ಈಕೆಯ ಭೂ ಹಿಡುವಳಿಯನ್ನು ಎತ್ತಿ ತೋರುತ್ತದೆ.

ಹಳೇಬೀಡಿನ ಶಾಸನವೊಂದು[82] ಬಹುಮುಖ್ಯವಾದ ಸಂಗತಿಯತ್ತ ನಮ್ಮ ಗಮನ ಸೆಳೆಯುತ್ತದೆ. ಬೋಚೇಶ್ವರದ ಸೋಮಜೀಯನು ಶಿವಲೋಕ ಪ್ರಾಪ್ತನಾದಾಗ ಬಹುಶ: ಸಂಪದ್ಭರಿತವಾದ ಈ ಬೋಜೇಶ್ವರ ದೇವಾಲಯದ ಒಡೆತನದ ಬಗ್ಗೆ ತುಂಬಾ ಸಮಸ್ಯೆಯಾಯಿತು. ಆಗ ಆಸ್ತಿಯ ಪಾಲನ್ನು ಪಡೆಯಲು ಅಳಿಯನು ತಕರಾರು ತೆಗೆದಿರಬೇಕು. ಈ ಹಿನ್ನೆಲೆಯಲ್ಲಿ ನಡೆದ ವ್ಯಾಜ್ಯದಿಂದ ನಮಗೆ ತಿಳಿದು ಬರುವ ಸಂಗತಿಯೆಂದರೆ ಸೋಮಜೀಯನ ಹೆಂಡತಿ ಹಾಗೂ ಮಗಳೂ ಸಹ ತಮ್ಮ ಹಕ್ಕಿಗೆ ಬಾಧ್ಯಸ್ತರಾಗಿದ್ದರು ಎಂಬ ಅಪರೂಪದ ವಿಷಯ ಇಲ್ಲಿ ತಿಳಿಯುತ್ತದೆ. ಸೋಮಜೀಯನ ಹೆಂಡತಿ ಬೈಚವ್ವೆ. ಇವರ ಇಬ್ಬರು ಗಂಡುಮಕ್ಕಳು ಅನಂತಜೀಯ, ಬೋಬಜೀಯ. ಈಕೆಯ ಮಗಳು ಸಂಗವ್ವೆ ಅಳಿಯ ಮಾರಜೀಯ. ಬೋಜೇಶ್ವರ ದೇಗುಲದ ಆಸ್ತಿಯನ್ನು ಮೂರು ಭಾಗಗಳಾಗಿ ವಿಂಗಡಿಸಿ ಒಂದು ಭಾಗವನ್ನು ಬೈಚವ್ವೆಗೂ, ಇನ್ನೊಂದು ಭಾಗವನ್ನು ಅನಂತಜೀಯ, ಬೋಬಜೀಯ ಸೋದರರಿಗೆ ನೀಡಿ, ಮತ್ತೊಂದು ಭಾಗವನ್ನು ಮಗಳಾದ ಸಂಗವ್ವೆಗೂ ಅಳಿಯನಾದ ಮಾರಜೀಯನಿಗೂ ಹಂಚಿರುವುದು ಅತ್ಯಂತ ವಿಶೇಷವಾಗಿದೆ. ಇಲ್ಲಿ ನಾವು ಗಮನಿಸಬೇಕಾದ ಮುಖ್ಯವಾದ ವಿಷಯ ಇಬ್ಬರು ಗಂಡು ಮಕ್ಕಳಿಗೆ ಸೇರಿ ಒಂದು ಪಾಲು, ತಾಯಿ, ಮಗಳಿಗೆ ಮಾತ್ರ ಒಂದೊಂದು ಪಾಲು. ಈ ತೀರ್ಪು ಹೆಚ್ಚು ಅಧಿಕೃತವೆಂದು ಬಗೆಯಲು ರಾಜಗುರುವಾದ ಚಂದ್ರಭೂಷಣದೇವರು ಹಾಗೂ ರಾಜಧಾನಿ ದೋರಸಮುದ್ರದ 120 ಸ್ಥಾನೀಕರು ನೆರೆದು ಇದನ್ನು ಬಗೆಹರಿಸಿದ ವಿಷಯವೇ ರೋಚಕವಾದದ್ದು.

ಇನ್ನು ಮೂರನೆಯ ನರಸಿಂಹನ ಕಾಲದ ಕ್ರಿ.ಶ.29.8.1258ರ ಹಿರಿಯೂರಿನ ಶಾಸನವು[83] ಸ್ತ್ರೀಯರ ಬಳಿ ಭೂಶಕ್ತಿಯಿದ್ದುದು ಹಾಗೂ ತಂದೆಯಿಂದ ಬಳುವಳಿಯಾಗಿ ಬಂದ ಸಂಗತಿಗಳನ್ನು ಹೆಚ್ಚು ವಿಷದವಾಗಿ ತಿಳಿಸುತ್ತದೆ. ಮಹಾವಡ್ಡವ್ಯವಹಾರಿಯಾದ ಕಂಡನಂಬಿಸೆಟ್ಟಿಯು ಮುತ್ತನ ಹೊಸಊರನ್ನು ಅಗ್ರಹಾರವನ್ನಾಗಿ ಮಾಡಿ ಕುಂಜೇಶ್ವರ ದೇವರ ಅಮೃತಪಡಿಗಾಗಿ ಸರ್ವಮಾನ್ಯವಾಗಿ ಕಲ್ಲೆಯ ನಾಯಕನ ಹಳ್ಳಿಯನ್ನು ಧಾರೆಯೆರೆದುಬಿಟ್ಟನು. ದಾನ ನೀಡುವ ಸಂದರ್ಭದಲ್ಲಿ ಚಕ್ಕಬಂದಿಯನ್ನು ಹೇಳುವಾಗ ರನ್ನಾದೇವಿಯರಿದ್ದ ವಠಾರ, ಚಂದಲದೇವಿಯರಿದ್ದ ವಠಾರದವರೆಗೆ ಭೂದಾನಗಳನ್ನು ನೀಡಲಾಗಿದೆ.

ಕಂಡನಂಬಿಸೆಟ್ಟಿಯರು ತಮ್ಮ ಹಿರಿಯ ಮಗಳು ಸೋವಕ್ಕನಿಗೆ ಸರ್ವಮಾನ್ಯವಾಗಿ ಅನುಭವಿಸುವಂತೆ 100 ಕಮ್ಮ ಭೂಮಿಯನ್ನು ನೀಡಿದನು. ತಂದೆ ಮಗಳಿಗೆ ನೀಡಿದ ಆಸ್ತಿಯಿದು. ಈ ಜಾಗದ ಸರಹದ್ದಿನಲ್ಲಿಯೇ ಚಂದಲದೇವಿಯರಿದ್ದ ವಠಾರವೂ ಇದ್ದುದು. ಈ ಭೂಮಿಗೆ ಶ್ರೀಕಾರ್ಯ ಮೊದಲಾಗಿ ಸರ್ವವೂ ಏನಾದರೂ ಚಂದವ್ವೆಯೇ ನಡೆಸುವಳು ಎಂದು ತಿಳಿಸಲಾಗಿದೆ. ಸೋವಕ್ಕನ ಮಾನ್ಯದ ಭೂಮಿಯ ನಿಯಂತ್ರಣವು ಚಂದವ್ವೆಗೆ ಏಕೆ ಎಂಬ ಪ್ರಶ್ನೆ ಮೂಡುತ್ತದೆ.

ಇದಕ್ಕೆ ಉತ್ತರವಾಗಿ ಇನ್ನೊಂದು ಶಾಸನವು [84] ಇನ್ನೂ ವಿಸ್ತಾರವಾದ ವಿಷಯವನ್ನು ನಮ್ಮ ಕಣ್ಣಮುಂದೆ ತೆರೆದಿಡುತ್ತದೆ. ಈ ಚಂದವ್ವೆಯೂ ಸಹ ಇದೇ ಕಂಡ ನಂಬಿಸೆಟ್ಟಿಯರ ಮಗಳೇ ಆಗಿದ್ದಾಳೆ.

ಈಕೆಯನ್ನು ಗಣಕುಮಾರಿಯಾಗಿ ನೇಮಿಸಲಾಗಿದೆ. ಚಂದವ್ವೆಗೆ ಆ ಕುಂಜೇಶ್ವರ ದೇವರ ಶ್ರೀ ಕಾರ್ಯವ ನಡೆಸಿ ಆ ಸ್ಥಾನಕ್ಕೆ ತಾನೊಡೆಯಳಾಗಿ ಆಕೆಗೆ ಹೊಂಬಳಿಯ ಭೂಮಿಯಾಗಿ ಸಲುವಂತಾಗಿ ಶ್ರೀ ಕುಂಜೇಶ್ವರ ದೇವರ ಸನ್ನಿಧಾನದಲ್ಲಿ ಶ್ರೀಮತ್ ತ್ರಿಭುವನದ ರಾಜಧಾನಿ ದೋರಸಮುದ್ರದ ರಾಜಗುರುವಾದ ರುದ್ರಶಕ್ತಿದೇವರು 120 ಸ್ತಾನಿಕರು ಕಂಪಣಾಚಾರ್‍ಯರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ಸನ್ನಿಧಿಯಲ್ಲಿ ಯೆರಡು ಮುತ್ತನ ಹೊಸಊರ ಸಮಸ್ತ ಪ್ರಜೆಗಾವುಂಡಗಳ ಸ್ಥಾನಿಕರ ಸನ್ನಿಧಾನದಲ್ಲಿ ಧಾರೆಯನೆರೆದು ನಾಲ್ಕು ವರ್ಷದ ಮುಂಚೆಯೇ ಅಂದರೆ ಕ್ರಿ.ಶ.21.12.1254ರಂದೇ ನೀಡಲಾಗಿತ್ತು. ಈ ಸಂದರ್ಭದಲ್ಲಿ "ಆ ರಾಜಗುರು ರುದ್ರಶಕ್ತಿದೇವರು, 120 ಸ್ತಾನಿಕರು, ಕಂಪಣಾಚಾರಿಯರು, ರಾಜಧಾನಿ ಅರಸಿಯಕೆರೆಯ ಮಾದಜೀಯ, ಭೂತಜೀಯ, ಮಚ್ಚಲು ಅನಂತಜೀಯ, ಒಳಗಾದ ಅಸಂಖ್ಯಾತ ಮಹಾಗಣಂಗಳು ನೆರೆದು ಈ ಚಂದವ್ವೆಗೆ ವಿಭೂತಿಪಟ್ಟವನ್ನು ಕಟ್ಟಿ ಗಣಕುಮಾರಿತನವನ್ನು ಕೊಟ್ಟು ಈ ಕುಂಜೇಶ್ವರ ದೇವರ ಸ್ಥಾನಕ್ಕೆ ಮಠದೆರೆ ಮುಂತಾದ ಸಮಸ್ತ ತೆರಿಗೆಗಳನ್ನು ಮನ್ನಾ ಮಾಡಿ ಧಾರೆಯೆರೆದು ಕೊಡಲಾಗಿತ್ತು." ಈ ಶಾಸನದಿಂದ ತಿಳಿಯುವ ಸಂಗತಿಯೆಂದರೆ ಈ ಚಂದವ್ವೆಯು ಸೋವಕ್ಕನ ಸೋದರಿಯೇ ಆಗಿದ್ದು ಆಕೆಯು ಸ್ತಾನೀಕಳಾಗಿರುವ ಶ್ರೀಮಠಕ್ಕೆ ಸೇರಿದ ಭೂಮಿಯನ್ನು ಆಕೆ ನಿಯಂತ್ರಿಸುವಂತೆಯೇ ಸೋವಕ್ಕನ ಭೂಮಿಯನ್ನೂ ಆಕೆ ಮೇಲ್ವಿಚಾರಣೆ ಮಾಡುವ ಸೂಚನೆಯಿದೆ. ಇದರ ಹಿನ್ನೆಲೆಯಲ್ಲಿ ಗಮನಿಸುವುದಾದರೆ ಈ ಮೇಲಿನ ಶಾಸನದಲ್ಲಿ ಕಂಡುಬರುವ ರನ್ನಾದೇವಿ ಕೂಡ ಇದೇ ಕಂಡನಂಬಿಸೆಟ್ಟಿಯ ಮಗಳೇ ಇರಬಹುದು ಎಂದು ತೋರುತ್ತದೆ.

ಭೂ ಪಾಲಿನಂತೆಯೇ ಭೂಮಿಯಲ್ಲಿ ಬೆಳೆದ ಬೆಳೆಯಲ್ಲೂ ಮಹಿಳೆಗೆ ತನ್ನ ಪಾಲು ಸಿಗುತ್ತಿತ್ತು ಎಂದು ಕೂಡ ಶಾಸನಗಳಲ್ಲಿ ಉಲ್ಲೇಖಗಳಿವೆ. ಸೋಮೇಶ್ವರ ಭಟ್ಟರ ಮಗಳು ಲಕ್ಷುಮಕ್ಕ ಸರ್ವನಮಸ್ಯದ ಅಗ್ರಹಾರವಾದ ಹಿರಿಯ ಗೊಬ್ಬೂರಿನ ಭಾಗದಲ್ಲಿ ರಾಯಿಕೊಡವರ ಭಾಗದಲ್ಲಿ ತನ್ನ ತಂದೆಯ ಕಡೆಯಿಂದ ತನ್ನ ಭಾಗವಾಗಿ ಬಂದ ಬೆಳೆಯ ಭಾಗವನ್ನು ಆಕೆ ತನ್ನ ತಂದೆ ಗೊಬ್ಬೂರಿನಲ್ಲಿ ಪ್ರತಿಷ್ಠೆ ಮಾಡಿದ ಹರಿಹರದೇವರಿಗೆ ಮತ್ತು ಸಿದ್ಧನಾಥದೇವರಿಗೆ ದಾನವಾಗಿ ನೀಡಿದ್ದಾಳೆ. ದಾನವಾಗಿ ನೀಡಿದ್ದು ಆಕೆಯ ನೀತಿಯಾದರೂ ಪಾಲು ಸಿಗುತ್ತಿತ್ತು ಎನ್ನುವುದು ವಾಸ್ತವದ ಸಂಗತಿಯಾಗಿದೆ.[85]

**5.3.3 ಸಾಮಂತ ಅರಸರ ಪ್ರಾಬಲ್ಯ;** ಅಧೀನ ಅರಸರು ರಾಜನಿಗೆ ಕೇವಲ ನಿರ್ದಿಷ್ಟ ಕಾಲದಲ್ಲಿ ಕಪ್ಪ ಕಾಣಿಕೆಗಳನ್ನು ಸಲ್ಲಿಸುವ, ಸೈನಿಕ ಸಹಾಯವನ್ನು ನೀಡುವ, ಆಡಳಿತದಲ್ಲಿ ನೆರವಾಗುವ ಕೆಲಸವನ್ನು ಮಾಡುತ್ತಿದ್ದರು. ಸಾಮ್ರಾಟನು ಪ್ರಾದೇಶಿಕ ಆಡಳಿತವನ್ನು ಸಾಮಂತರಿಗೆ ಒಪ್ಪಿಸುತ್ತಿದ್ದನು. ಇದು ಹೆಚ್ಚು ಕಡಿಮೆ ಸಂದರ್ಭಾನುಸಾರವಾಗಿ ವಂಶಪಾರಂಪರ್ಯವಾಗಿತ್ತು. ಇದರಿಂದಾಗಿ ರಾಜ್ಯದಲ್ಲಿ ಎರಡು ರೀತಿಯ ಆಡಳಿತ ಪ್ರದೇಶಗಳು ನಿರ್ಮಾಣಗೊಂಡವು ಇದು ಕೇಂದ್ರಿಕೃತ ಊಳಿಗಮಾನ್ಯ ವ್ಯವಸ್ಥೆಯನ್ನು ಸೂಚಿಸುತ್ತದೆ. ಉದಾಹರಣೆಗೆ ಮಹಾಮಂಡಳೇಶ್ವರನೂ ಆಗಿದ್ದ ಗೋವಿದೇವ ಮತ್ತು ಅವನ ವಂಶೀಯ

ಒಂದು ಸಾಮಂತ ಮನೆತನಕ್ಕೆ ಸೇರಿದವರಾಗಿದ್ದರು. ಅವರ ಪ್ರಾಬಲ್ಯವನ್ನು ಈ ಮುಂದಿನಂತೆ ಅರಿಯಬಹುದು.

ಹೊಯ್ಸಳ ರಾಜ್ಯಾಡಳಿತದ ಕ್ರಿ.ಶ. 11ನೆಯ ಶತಮಾನದಿಂದ 13ನೆಯ ಶತಮಾನದ ಆರಂಭದವರೆಗೆ ಸಾಮ್ರಾಜ್ಯದ ದಕ್ಷಿಣ ಮತ್ತು ಪೂರ್ವಭಾಗಗಳಲ್ಲಿ ಸುಸ್ಥಿರವೂ ಸಂಪದ್ಭರಿತವೂ ಆದಂತಹ ಸ್ಥಳೀಯ ಆಡಳಿತ ನಡೆಸಿದ ಸಾಮಂತ ಮನೆತನ ಗೋವಿದೇವನದು. ಮಲೆನಾಡಿನಿಂದ ಬಯಲುನಾಡಿಗೆ ಹೊಯ್ಸಳ ಸಾಮ್ರಾಜ್ಯದ ಮಹಾರಥವು ಸಂಚರಿಸುವ ಘಟ್ಟದಲ್ಲಿ ಅನೇಕ ವೈರಿಪಡೆಗಳನ್ನು ಹೊಯ್ಸಳರು ಎದುರಿಸಬೇಕಾಯಿತು. ಚೆಂಗಾಳ್ವರು, ಕೊಂಗಾಳ್ವರು, ಚೋಳರು, ಪಾಂಡ್ಯರು ಮುಂತಾದವರ ಉಪಟಗಳ ನಡುವೆ ತಮ್ಮ ಅಸ್ಮಿತೆಯನ್ನು ರಾಜಕೀಯ ಮಹತ್ವಾಕಾಂಕ್ಷೆಯನ್ನು ಪೋಷಿಸಿಡುವ ಅಗತ್ಯತೆ ಇದ್ದುದರಿಂದ ಸಾಮಂತ ಮನೆತನಗಳನ್ನು ಕೆಲವೆಡೆ ಭದ್ರವಾಗಿ ನೆಲೆಯೂರುವಂತೆ ಮಾಡಿ ಈ ಮೂಲಕ ಸ್ಥಳೀಯವಾಗಿ ಅರಾಜಕತೆಯು ಉಂಟಾಗದಂತೆ ನೋಡಿಕೊಳ್ಳುವುದು ಹೊಯ್ಸಳರ ಮುಖ್ಯ ರಾಜನೀತಿಗಳಲ್ಲಿ ಒಂದಾಗಿದ್ದಿತು.

ಅಂತೆಯೆ (ಇಂದಿನ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹುಳಿಯಾರು) ಹುಳಿಯೇರು, (ಇಂದಿನ ಅರಸೀಕೆರೆ ತಾಲ್ಲೂಕಿನ ಕಣಕಟ್ಟೆ) ಕಳಿಕಟ್ಟೆ, (ಕಡೂರು ತಾಲೂಕಿನ ನೀರಗುಂದ) ನೀರ್ಗುಂದ ಮತ್ತು ಇವುಗಳ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಸಾಮಂತ ಗೋವಿದೇವ ಮತ್ತು ಅವನ ವಂಶೀಯರನ್ನು ನೆಲೆಗೊಳಿಸಿದ್ದರು. ಈ ವಂಶೀಯರು ತಮ್ಮ ಅಧಿರಾಜರ ರಾಜನೀತಿ ಸಂಪೂರ್ಣ ಬದ್ಧರಾಗಿದ್ದುಕೊಂಡು ಆಗಾಗ ಎದುರಾಗುವ ಎದುರಾಳಿಗಳನ್ನು ಸದೆಬಡಿದು ತಮ್ಮ ರಾಜನಿಷ್ಠೆಯನ್ನು ತೋರುತ್ತಲೇ ಸ್ಥಳೀಯ ಸಾಂಸ್ಕೃತಿಕ ಚರಿತ್ರೆಗೆ ಮಿಗಿಲಾದ ಕೊಡುಗೆಗಳನ್ನು ಸಲ್ಲಿಸಿದ್ದಾರೆ.

ಹುಳಿಯಾರು, ನೀರ್ಗುಂದ, ಕಣಿಕಟ್ಟೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳೇ ಏಕೆ ಈ ಸಾಮಂತರ ಮುಖ್ಯ ಆಡಳಿತಕ್ಕೆ ಒಳಪಟ್ಟಿತ್ತು? ಎಂಬ ಪ್ರಶ್ನೆಗೆ ಉತ್ತರ ಹುಡುಕ ಹೊರಟರೆ, ಈ ಪ್ರದೇಶಗಳ ಶಾಸನಗಳಲ್ಲಿನ ಭೂದಾನಗಳನ್ನು ಎಚ್ಚರಿಕೆಯಿಂದ ಗಮನಿಸಬೇಕಾಗುತ್ತದೆ. ಈ ಭೂದಾನಗಳು ಪದೇ ಪದೇ ಅನೇಕ ಅನೇಕ ಊರುಗಳ ಕೆರೆ, ಹಿರಿಯಕೆರೆ, ದಕ್ಷಿಣದ ಕೆರೆ, ಕೆರೆಯ ಮೊದಲೇರಿ, ಉತ್ತರದ ಕೆರೆ, ದೊಡ್ಡ ಆಲದ ಮರದ ದಕ್ಷಿಣದ ಕೆರೆ ಇತ್ಯಾದಿಯಾಗಿ ಫಲವತ್ತಾದ ಮಣ್ಣಿನ ಸೀಮೆಗಳೆಂಬುದನ್ನು ಸೂಕ್ಷ್ಮವಾಗಿ ಧ್ವನಿಸುತ್ತವೆ. ಸಹಜವಾಗಿಯೇ ಕೆರೆಯಿದ್ದ ಎಡೆಗಳಲ್ಲಿ ಕೃಷಿ, ಕೃಷಿಯಿಂದ ವ್ಯಾಪಾರ, ವ್ಯಾಪಾರದಿಂದ ಹಣದ ಸಂಚಯನ, ಆ ಮೂಲಕ ಪುಟ್ಟ ಪಟ್ಟಣಗಳ ನಿರ್ಮಿತಿ, ಪಟ್ಟಣಗಳ ನಡುವೆ ನಡೆಯುವ ಒಳನಾಡಿನ ದೇಶಿಯ ವ್ಯವಹಾರಗಳು ಸುಭಗವಾಗಿರುತ್ತವೆ. ಹೀಗಾಗಿ ಈ ಪ್ರದೇಶಗಳು ಸಂಪದ್ಭರಿತವಾಗಿದ್ದವು ಮಾತ್ರವಲ್ಲದೆ ಹೊಯ್ಸಳ ಸಾಮ್ರಾಜ್ಯದ ಒಟ್ಟು ಆರ್ಥಿಕತೆಯಲ್ಲಿ ವಿಶಿಷ್ಟವಾದ ಸ್ಥಾನ ಗಳಿಸಿದ್ದ ವ್ಯಾಪಾರಿ ಮಾರ್ಗಗಳಾಗಿದ್ದವು. ಆದ್ದರಿಂದ ಇಲ್ಲಿ ಇಂತಹ ಬಲಿಷ್ಠ ಸಾಮಂತರು ಹೊಯ್ಸಳರ ಅವಧಿ

ಮುಗಿಯುವವರೆಗೂ ನೆಲೆಗೊಂಡಿದ್ದರು. ಗೋವಿದೇವನ ವಂಶೀಯರು ಎಂತಹ ಬಲಿಷ್ಠರೆಂದರೆ ಇವರ ಶಾಸನ ಪದ್ಯಗಳೇ ಇವರೆಂತಹ ಅಸಹಾಯ ಶೂರರೆಂಬುದನ್ನು ಶ್ರುತಪಡಿಸುತ್ತವೆ.[86]

**5.3.4 ರಾಜಕೀಯ ಪ್ರೇರಿತ ನೂತನ ಸಂಬಂಧಗಳು;** ರಾಜ ಮನೆತನವು ಹಲವು ಸಂದರ್ಭಗಳಲ್ಲಿ ತಮ್ಮ ಪರಮಾಧಿಕಾರವನ್ನು ಕಾಪಾಡಿಕೊಳ್ಳುವುದಕ್ಕಾಗಿ ಸ್ಥಳೀಯ ನಾಯಕರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿರುತ್ತಿದ್ದರು. ಈ ಸಂಬಂಧಗಳು ರಾಜಕೀಯ ಪ್ರೇರಿತವಾಗಿದ್ದವು. ಮುಖ್ಯವಾಗಿ ಈ ಸಂಬಂಧಗಳು ಸಾಮಾಜಿಕ ಮತ್ತು ಆರ್ಥಿಕ ಸಂದರ್ಭಗಳಲ್ಲಿ ಅನಿವಾರ್ಯವಾಗಿರುತ್ತಿತ್ತು. ಇದು ಊಳಿಗಮಾನ್ಯ ಹಂತಕ್ಕೆ ಚಲಿಸುತ್ತಿದ್ದ ಸಾಮಾಜಿಕ ರಚನೆಯ ಲಕ್ಷಣವೂ ಹೌದು. ಏಕೀಕೃತ ನಿಯಂತ್ರಣ ಸಾಧ್ಯವಿರದ ಕಾರಣ ಸಾಮಂತ ವ್ಯವಸ್ಥೆ ಇನ್ನಷ್ಟು ಗಟ್ಟಿಗೊಳ್ಳುವಂತಾಯಿತು. ಈ ಸಾಮಂತ ಅಥವಾ ಮಹಾಮಂಡಳೇಶ್ವರರು ರಾಜಾಡಳಿತದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿದ್ದರು. ಅವರಿಗೆ ಎಲ್ಲ ರೀತಿಯ ಸ್ವಾತಂತ್ರ್ಯವನ್ನು ನೀಡಲಾಗಿತ್ತು. ಅರಸರಿಗೆ ನೆರವಾದ ಅಧಿಕಾರಿಗಳು ನಿರ್ದಿಷ್ಟ ಪ್ರದೇಶದ ಸಾಮಂತ ಅಥವಾ ಮಾಂಡಲಿಕ ಸ್ಥಾನಮಾನವನ್ನು ಪಡೆಯುತ್ತಿದ್ದರು. ಇಲ್ಲಿ ಸಾರ್ವಭೌಮ ಮತ್ತು ಸಾಮಂತ ಸಂಬಂಧಗಳು ಪರಸ್ಪರ ಪೂರಕವಾಗಿದ್ದಂತೆ ಕಂಡುಬರುತ್ತದೆ. ಇದು ಸಹ ಊಳಿಗಮಾನ್ಯ ರಚನೆಯನ್ನು ಸೂಚಿಸುತ್ತದೆ. ಈ ರಚನೆಯು ರಾಜಕೀಯ ಹತೋಟಿಯ ತಂತ್ರವಾಗಿದ್ದು, ಹೊಸ ಬಗೆಯ ಸಂಬಂಧಗಳನ್ನು ಹುಟ್ಟುಹಾಕಿತ್ತು. ಉದಾಹರಣೆಗೆ, ಕ್ರಿ.ಶ. 1303[87] ಹಾಗೂ ಕ್ರಿ.ಶ.1322ರ ಬಾಗಿವಾಳಿನ ಶಾಸನಗಳು[88] ಸೋಮೆಯದಂಡನಾಯಕನನ್ನು 3ನೆಯ ಬಲ್ಲಾಳನ ಮೈದುನನೆಂದು ಸ್ಪಷ್ಟವಾಗಿ ತಿಳಿಸುತ್ತವೆ. ಮೂರನೆಯ ಬಲ್ಲಾಳನ ಸೋದರಿಯನ್ನು ವರಿಸಿದ ಸೋಮೆಯ ದಂಡನಾಯಕನು ಮೂರನೆಯ ನರಸಿಂಹನ ಅಧೀನದಲ್ಲಿದ್ದ ಸೋಮೆಯ ದಂಡನಾಯಕ ಒಬ್ಬನೇ.

ಮೂರನೆಯ ಬಲ್ಲಾಳನ ಸೋದರಳಿಯನಾದ(ಈತ ಈಗಾಗಲೇ ಉಲ್ಲೇಖಿಸಿದ ಸೋಮೆಯದಂಡನಾಯಕನ ಮಗ) ಬಲ್ಲಪ್ಪದಂಡನಾಯಕನು ಒಂದನೆಯ ಹರಿಹರನ ಮಗಳನ್ನು ವರಿಸಿದ್ದನು. ಹೀಗಾಗಿ 3ನೆಯ ಬಲ್ಲಾಳನಿಗೆ ಬಂಧುಗಳೇ ಆದ ಬಲ್ಲಪ್ಪದಂಡನಾಯಕ ಮತ್ತು ಒಂದನೆಯ ಹರಿಹರರು ಮಹಮ್ಮದೀಯರಿಂದ ರಾಜ್ಯರಕ್ಷಿಸಬೇಕೆಂಬ 3ನೆಯ ಬಲ್ಲಾಳನ ಸಂಕಲ್ಪಕ್ಕೆ ಬದ್ಧರಾಗಿ ಹೊಯ್ಸಳ ಸಾಮ್ರಾಜ್ಯದಲ್ಲಿ ಶಾಂತಿಸ್ಥಾಪನೆಯ ಹೊಣೆಗಾರಿಕೆಯನ್ನು ಸುಕ್ಷೇಮವಾಗಿ ನಿರ್ವಹಿಸಿದ್ದರೆಂದು ತೋರುತ್ತದೆ. ಕ್ರಿ.ಶ. 1346ರಲ್ಲಿ ನಾಲ್ಕನೆಯ ಬಲ್ಲಾಳನ ಮರಣದ ತರುವಾಯ ಒಂದನೆಯ ಹರಿಹರನು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸುವ ಮೂಲಕ 3ನೆಯ ಬಲ್ಲಾಳನ ಸಂಕಲ್ಪವನ್ನು ನೆರವೇರಿಸುತ್ತಾನೆ. ಈ ರೀತಿಯಲ್ಲಿ 1ನೆಯ ಹರಿಹರನು ಅಧಿಕಾರವನ್ನು ಕ್ರೋಢೀಕರಿಸಿಕೊಳ್ಳಲು ಬಲ್ಲಪ್ಪದಂಡನಾಯಕನ ನೆರವು ಅವಶ್ಯವಾಗಿ ಇದ್ದೇ ಇದ್ದಿತು. ಈ ವಿಜಯೋತ್ಸವವನ್ನು ಆಚರಿಸಲು 1ನೆಯ ಹರಿಹರನು ತನ್ನ ಸಹೋದರರೊಡನೆ, ತನ್ನ ಅಳಿಯ ಬಲ್ಲಪ್ಪದಂಡನಾಯಕ, ಕುಮಾರ ಸೋಮಣ್ಣೊಡೆಯರೊಡನೆ ಶೃಂಗೇರಿಯ ವಿದ್ಯಾಪೀಠಕ್ಕೆ ಬಂದಿದ್ದನನ್ನು ತಿಳಿಸುವ ಶಾಸನವೇ ಸಾಕ್ಷಿ.

ಹೀಗಾಗಿ ಅನೇಕ ನೂತನ ರಾಜಕೀಯ ಸಂಬಂಧಗಳಿಂದ ಹೊಯ್ಸಳ ಮಹಾಮಂಡಳೇಶ್ವರರ ಕಾಲದಲ್ಲಿ ಹೊಸಹೊಸ ಆರ್ಥಿಕ ನೀತಿಗಳು ಮೂಡಲು ಸಹಕಾರಿಯಾಯಿತು. ಇದರಿಂದ ಈವರೆಗೂ ಇದ್ದ ವ್ಯಾಪಾರಿ ನೀತಿಗಳು ವಿಸ್ತೃತಗೊಂಡು ಆರ್ಥಿಕ ಮನ್ವಂತರಕ್ಕೆ ನಾಂದಿಯಾಯಿತು.

**5.4 ಭೂದಾನ ಮಾಧ್ಯಮಗಳು :**

ಭೂಮಿಯನ್ನು ದಾನ ನೀಡುವ ಪದ್ಧತಿಯು ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಮಹತ್ವದ ಬದಲಾವಣೆಗಳನ್ನು ತಂದಿತು. ಭೂಮಿಯನ್ನು ದಾನವಾಗಿ ಪಡೆದವರು ಕೇಂದ್ರಾಡಳಿತಕ್ಕೆ ನಿರ್ದಿಷ್ಟ ಸೇವೆಯನ್ನು ಸಲ್ಲಿಸಬೇಕಾಗಿತ್ತು. ಈ ಬಗೆಯ ಸ್ಥಿತಿಗಳು ನೂತನ ಭೂಮಾಲೀಕ ವರ್ಗಗಳ ಹುಟ್ಟಿಗೂ ಕಾರಣವಾಯಿತು. ಬ್ರಹ್ಮದೇಯ ಭೂಮಿಯನ್ನು ಪಡೆದವರು ಹಳ್ಳಿಗಳ ಮಹಾಜನರಾಗಿ ಆಡಳಿತ ನಡೆಸಿದರು. ದೇವಾಲಯಗಳು ಸಹ ಅಪಾರ ದಾನದತ್ತಿಗಳಿಂದಾಗಿ ಭೂಮಾಲೀಕರಂತೆಯೇ ಕಾಣಸಿಕೊಂಡವು. ಇವು ಕೂಡ ಉತ್ಪಾದಕ ವರ್ಗದ ಪೋಷಣೆ ಮತ್ತು ಬಲವಂತದ ದುಡಿಮೆಯನ್ನು ಹೆಚ್ಚಿಸಿತು. ಅರಸರಂತೆಯೇ ಮಹಾಮಂಡಳೇಶ್ವರರು ಸಹ ತಮ್ಮಾಡಳಿತ ಪ್ರದೇಶಗಳಲ್ಲಿ ಅಗ್ರಹಾರಗಳು, ಮಠಗಳು, ಘಟಿಕಾಸ್ಥಾನಗಳು ದೇಗುಲಗಳಿಗೆ ಅಪಾರವಾಗಿ ನೀಡುತ್ತಿದ್ದ ಭೂದಾನಗಳು ಮತ್ತು ದತ್ತಿಗಳು ಊಳಿಗಮಾನ್ಯ ವ್ಯವಸ್ಥೆಯ ಹುಟ್ಟಿಗೆ ಕಾರಣವಾಯಿತು. ಇದಕ್ಕೆ ಅನೇಕ ಉದಾ.ಗಳನ್ನು ಶಾಸನಗಳು ನೀಡುತ್ತವೆ.ಉದಾಹರಣೆಗೆ,

- ಕ್ರಿ.ಶ. 1336ರ ವಾಗಟದ ಎರಡು ಶಾಸನಗಳು[89] ಬಲ್ಲಪ್ಪದಂಡನಾಯಕನು ಪುಲ್ಲಿಯೂರುನಾಡಿನ ವರದರಾಜ ಚತುರ್ವೇದಿಮಂಗಲದ ಮಹಾಜನರಿಗೆ ಕೆಲವು ಹಳ್ಳಿಗಳನ್ನು ದತ್ತಿಬಿಟ್ಟನೆಂಬುದನ್ನು ತಿಳಿಸುತ್ತವೆ. ಕ್ರಿ.ಶ. 1340ರ ತಿರುನಲ್ವೇಲಿಯ 2 ಶಾಸನಗಳು[90] ಈತನು ನೀಡಿದ ದಾನವನ್ನು ತಿಳಿಸುತ್ತವೆಯಾದರೂ ದಾನದ ವಿವರ ಸ್ಪಷ್ಟವಿಲ್ಲ.
- ಚಟ್ಟಯ್ಯನಾಳುತ್ತಿದ್ದ ನೀರ್ಗುಂದದ ವ್ಯಾಪ್ತಿಗೆ ಬರುವ 'ಪ್ರತ್ಯಕ್ಷಲಕ್ಷ್ಮಿಗೃಹ'ವೆನಿಸಿದ್ದ ಹಿರಿಯೂರಿನ ನಾಡಪ್ರಭು ಸಂಕಗೌಡನ[91] ಚಟ್ಟಯ್ಯನ ಒಪ್ಪಿಗೆಯನುಸಾರ ಸೋಮನಾಥದೇವರಿಗೆಂದು ಕೆಲವು ಭೂದಾನಗಳನ್ನು ಹಂಪರಾಶಿಜೀಯರಿಗೆ ನೀಡಿದರೆ, ಅವನ ಮಗ ಬೊಪ್ಪಗೌಡನು ಇದೇ ಹಿರಿಯೂರಿನ ಸೋಮನಾಥನ ಆಲಯವನ್ನು ಪುನರುದ್ಧರಿಸಿ 2ನೆಯ ಬಲ್ಲಾಳನಿಂದ ತಾನು ಕೊಡುಗೆಯಾಗಿ ಪಡೆದಿದ್ದ ಆಲದಹಳ್ಳಿಯನ್ನು ಸೋಮನಾಥದೇವರಿಗೆ ದತ್ತಿಯಾಗಿ ಸಮರ್ಪಿಸಿದನು.
- ಚಟ್ಟಯ್ಯನ ಅಧೀನವರ್ತಿ ಸಂಕಗೌಡ ಮತ್ತು ಅವನ ಮಕ್ಕಳಾದ ಮಲ್ಲಗೌಡ, ಮಾದಿಗೌಡ, ಬೊಪ್ಪಗೌಡ, ಅಜಗೌಡ, ಚಟ್ಟಗೌಡ, ಮಾಕಗೌಡರು ಹಿರಿಯೂರಿನ ಮೂಲಸ್ಥಾನದ ಕಲಿದೇವರ ಆಲಯವನ್ನು ಪುನರುದ್ಧರಿಸಿ ದಾನ ದತ್ತಿಗಳನ್ನು ನೀಡಿದ್ದರು. ಮತ್ತೊಬ್ಬ ಅಧಿಕಾರಿಯಾದ ಕಡವೂರಿನ

ಬಸವಗೌಡನ ಮಗ ಚೆಂದಗೌಡನ[92] ಚಂದೇಶ್ವರ ದೇವಸ್ಥಾನವನ್ನು ನಿರ್ಮಿಸಿ ಅದಕ್ಕೆ 1 ಮತ್ತರು ಗದ್ದೆ, 2 ಮತ್ತರು ಹೊಲ, 1 ಗಾಣವನ್ನು ದಾನವಾಗಿ ಅರ್ಪಿಸಿದನು.

ಕ್ವಚಿತ್ತಾಗಿಯಾದರೂ ಉಕ್ತವಾಗಿರುವಂತಹ ದಾನದತ್ತಿ ವಿಷಯಗಳು ಮೇಲ್ನೋಟಕ್ಕೆ ಧಾರ್ಮಿಕವಾಗಿ ಕಂಡರೂ ಪರೋಕ್ಷವಾಗಿ ಆರ್ಥಿಕ ಕ್ಷೇತ್ರದ ಸಕ್ರಿಯ ಪ್ರಕ್ರಿಯೆಯನ್ನು ಸ್ಥಿರೀಕರಿಸುತ್ತವೆ ಎನ್ನುವುದನ್ನು ಈಗಾಗಲೇ ವಿಷದವಾಗಿ ಅಭ್ಯಸಿಸಲಾಗಿದೆ.

**5.5 ನಗರೀಕರಣದ ಮುನ್ನುಡಿ :**

ಸಮಾಜದ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ನಗರೀಕರಣವು ಒಂದು ಪ್ರಮುಖ ಹಂತ. ದುಡಿಯುವ ತಾಣಗಳು ಮತ್ತು ಅದರೊಂದಿಗೆ ಮಿಳಿತವಾಗಿರುವ ಮಾನವನ ಬದುಕಿನ ರೀತಿನೀತಿಗಳು ಒಂದು ಬಗೆಯಲ್ಲಿ ನಿರಂತರತೆಯನ್ನೊಳಗೊಂಡು ಸಂಘಟಿತವಾಗಿರುತ್ತವೆ. ನಗರೀಕರಣವು ಮತ್ತು ಅದರ ವೈವಿಧ್ಯಮಯ ಸ್ವರೂಪಗಳು ಚರಿತ್ರೆಯನ್ನು ಬದಲಾಯಿಸುವ ಮತ್ತು ಅದರ ಗತಿಯನ್ನು ನಿರ್ಧರಿಸುವ ಸಾಮರ್ಥ್ಯವನ್ನು ಪಡೆದಿರುತ್ತವೆ. ನಗರೀಕರಣ ಪ್ರಕ್ರಿಯೆಯಲ್ಲಿ ಹೆಚ್ಚುವರಿ ಉತ್ಪಾದನೆ, ಜನಸಂಖ್ಯೆಯ ಹೆಚ್ಚಳ, ಕುಶಲಕರ್ಮಿಗಳೂ, ವ್ಯಾಪಾರ–ವಾಣಿಜ್ಯ–ವರ್ತಕ ಸಂಘಗಳು, ಧರ್ಮ , ಶಿಕ್ಷಣ, ಆಡಳಿತ, ಜಮೀನ್ದಾರರು, ಭೌಗೋಳಿಕ ಸನ್ನಿವೇಶ ಮುಂತಾದವು ಪ್ರಧಾನ ಪಾತ್ರ ವಹಿಸುತ್ತವೆ.

ಕ್ರಿ.ಶ. 10ನೆಯ ಶತಮಾನದಿಂದಲೇ ಅನೇಕ ನಗರಗಳು ಹೊಯ್ಸಳ ರಾಜ್ಯದಲ್ಲಿ ಉದಿಸಿದ್ದವು. ಇನ್ನುಕೆಲವು ಅನಂತರದಲ್ಲಿ ಅಸ್ತಿತ್ವಕ್ಕೆ ಬಂದವು. ಶಾಸನಗಳು ಮತ್ತು ಸಾಹಿತ್ಯಿಕ ಕೃತಿಗಳ ಆಧಾರಗಳಿಂದ ಪುರ, ನಗರ, ಮಹಾನಗರ, ಪಟ್ಟಣ ಎಂಬ ಉಲ್ಲೇಖಗಳು ಕಂಡುಬರುತ್ತವೆ. ಈ ಬಗೆಯ ನಗರಗಳು ಕೆಲವೊಮ್ಮೆ ಧಾರ್ಮಿಕ, ಆಡಳಿತಾತ್ಮಕ, ಶೈಕ್ಷಣಿಕವಾದ ವಿವಿಧ ಸ್ವರೂಪಗಳನ್ನು ಪಡೆದಿದ್ದವು. ಪ್ರಮುಖವಾಗಿ ಹೊಯ್ಸಳ ಮಹಾಮಂಡಳೇ ಶ್ವರರ ಆಳ್ವಿಕೆಯ ಪ್ರದೇಶಗಳಲ್ಲಿ ಅವರೇ ರೂಪಿಸಿದ ಪಟ್ಟಣಗಳೆಂದರೆ ತಲಕಾಡು, ಶ್ರವಣಬೆಳಗೊಳ, ಪೊಂಬುಚ್ಚ, ಮಂಗಳೂರು, ಗುತ್ತಿ, ದೋರಸಮುದ್ರ, ಸೊಸೆವೂರು, ಕೋಲಾರ, ಅರಸಿಕೆರೆ, ಬಾಣಾವಾರ, ಬೇಲೂರು, ಸೋಮನಾಥಪುರ, ತೊಣ್ಣೂರು, ಮೂಗೂರು ಮುಂತಾದವು. ಇವುಗಳಲ್ಲಿ ಅನೇಕವು ವಿಜಯನಗರ ಕಾಲ ಘಟ್ಟದಲ್ಲಿಯೂ ಮುಂದುವರಿದವು.

ಈ ನಗರಗಳು ವಾಣಿಜ್ಯ ಕೇಂದ್ರಗಳೇ ಆಗಿರುವುದು ಲಕ್ಷಿಸಬೇಕಾದ ಸಂಗತಿ. ಮೊದಲು ಆಡಳಿತ ಮತ್ತು ಧಾರ್ಮಿಕ ಕೇಂದ್ರಗಳಾಗಿದ್ದಂತಹವು ಕ್ರಮೇಣ ವಾಣಿಜ್ಯ ಕೇಂದ್ರಗಳಾಗಿ ಮಾರ್ಪಾಟಾದವು. ಬೇಲೂರು, ದೋರಸಮುದ್ರದಂತಹ ರಾಜಧಾನಿ ಪಟ್ಟಣಗಳು ಮತ್ತು ತಲಕಾಡು, ಸೋಮನಾಥಪುರದಂತಹ ಧಾರ್ಮಿಕ ಪಟ್ಟಣಗಳಲ್ಲಿ ಆಡಳಿತೇತರ ಮತ್ತು ಧಾರ್ಮಿಕೇತರ ಚಟುವಟಿಕೆಗಳು ಘಟಿಸುತ್ತಿದ್ದುದು ವಾಣಿಜ್ಯ ರೂಪದ ಪಟ್ಟಣಗಳು ರೂಪಾಂತರವಾಗಲು ಕಾರಣವಾದವು. ಪಟ್ಟಣಗಳ ಮೇಲ್ವಿಚಾರಣೆಯನ್ನು ಪಟ್ಟಣಸ್ವಾಮಿಯೆಂಬ ಅಧಿಕಾರಿಯು ನೋಡಿಕೊಳ್ಳುತ್ತಿದ್ದು ಈತನು ಸ್ವತಃ ಒಬ್ಬ ವ್ಯಾಪಾರಿಯಾಗಿರುತ್ತಿದ್ದನು. ಅನೇಕ ಹಳ್ಳಿಗಳು ನಗರವಾಗಿ ಪರಿವರ್ತನೆಗೊಳ್ಳುತ್ತಿದ್ದುದಕ್ಕೆ ಯಮದುರಹಳ್ಳಿ,

ಉಪೇಂದ್ರಪುರ, ಮೂಗೂರು, ಚಂದಿಮಾದಿಹಳ್ಳಿ, ಮುಗುಲುನಹಳ್ಳಿ ಮುಂತಾದವು ಉತ್ತಮ ಉದಾಹರಣೆಗಳಾಗಿದ್ದವು.

ಪ್ರಭುತ್ವವನ್ನು ಪ್ರತಿನಿಧಿಸುವ ನಾಡಿನ ಪ್ರಮುಖ ಅಧಿಕಾರಿಗಳಾಗಿದ್ದ ಮಹಾಮಂಡಳೇಶ್ವರರು ಕೃಷಿಕರ ಹಿತಾಸಕ್ತಿಗಳನ್ನು, ವ್ಯಾಪಾರಿಗಳ ಹಿತಾಸಕ್ತಿಗಳನ್ನು ರಾಜ್ಯದ ಪ್ರಗತಿಯನ್ನು ಗುರಿಯನ್ನಾಗಿರಿಸಿಕೊಂಡು ಹಳ್ಳಿಗಳನ್ನು ಪಟ್ಟಣಗಳನ್ನಾಗಿ ಪರಿವರ್ತಿಸುತ್ತಿದ್ದರು. ಇವು ವ್ಯವಸ್ಥಿತವಾಗಿ ಬೆಳೆಯಬೇಕೆನ್ನುವ ಉದ್ದೇಶವನ್ನು ಹೊಂದಿದ್ದರು. ಹಾಗಾಗಿ ಹಲವು ಗ್ರಾಮಗಳನ್ನು ನಗರಗಳಾಗಿಸುತ್ತಾ ಸ್ಥಳೀಯ ಆರ್ಥಿಕ ಸಂವರ್ಧನೆಯನ್ನು ಸಾಧಿಸಿದರು. ಈ ಉದ್ದೇಶದಿಂದ ಅಧಿಕಾರಿಗಳನ್ನು ನೇಮಿಸಲಾಗುತ್ತಿತ್ತು. ಮಹಾಮಂಡಳೇಶ್ವರರು ಹೆಚ್ಚುವರಿ ಉತ್ಪಾದನೆಯ ಮತ್ತು ಅದರ ಮಾರಾಟದ ವಿಷಯದಲ್ಲಿ ಸ್ವಯಂ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿದ್ದರು. ಸಕ್ರಿಯವಾಗಿ ವ್ಯಾಪಾರದಲ್ಲಿ ನಿರತರಾಗಿರುವ ಸೆಟ್ಟಿಗಳಿಗೆ ತೆರಿಗೆ ವಿನಾಯಿತಿಯನ್ನು ನೀಡುತ್ತಿದ್ದರು. ಈ ವ್ಯಾಪಾರಸ್ಥರು ಮತ್ತು ಕುಶಲಕರ್ಮಿಗಳು ತಮ್ಮ ಹಿತಾಸಕ್ತಿಗಳನ್ನು ಕಾಪಾಡುವುದಕ್ಕೋಸ್ಕರ ವರ್ತಕ ಸಂಘಗಳನ್ನು ಹುಟ್ಟುಹಾಕಿದರು. ಈ ವರ್ತಕ ಸಂಘಗಳೂ ನಗರ ಪ್ರದೇಶಗಳ ಹಲವಾರು ಕೆಲಸಕಾರ್ಯಗಳನ್ನು ಮಾಡುತ್ತಿದ್ದವು.

- ಶ್ರವಣಬೆಳಗೊಳವನ್ನು ಕ್ರಿ.ಶ 7ರಿಂದ 10ನೆಯ ಶತಮಾನದವರೆಗಿನ ಶಾಸನಗಳಲ್ಲಿ ತೀರ್ಥ ಎಂಬುದಾಗಿಯೂ ತೀರ್ಥಯಾತ್ರೆಯ ಕ್ಷೇತ್ರ ಎಂತಲೂ ಕರೆದರೆ, ಕ್ರಿ. ಶ 12ನೆಯ ಶತಮಾನ ಶಾಸನಗಳು ನಗರ ಎಂಬುದಾಗಿ ಕರೆದಿವೆ. ಶಾಸನಗಳಲ್ಲಿ ಉಲ್ಲೇಖಿಸಲಾದ ಈ ನಗರಗಳ ಹೆಸರಿನ ಜೊತೆಗೆ ಪುರ, ದುರ್ಗ ಪಟ್ಟಣ ನಗರ, ಮಹಾನಗರ, ಮಹಾಪಟ್ಟಣ, ರಾಜಧಾನಿಪಟ್ಟಣ, ಬಣಜುಪಟ್ಟಣ ಮುಂತಾದ ಪದಗಳು ಸೇರಿರುವುದುನ್ನು ಗಮನಿಸಿದಾಗ ನಗರೀಕರಣ ಪ್ರಕ್ರಿಯೆಯನ್ನು ಕಾಣಬಹುದು.

ಹೀಗೆ ಬೆಳಗೊಳವು ಪ್ರಮುಖ ನಗರವಾಗಿ ಮೂಡಿಬಂದಿದ್ದೇ ಹೊಯ್ಸಳ ಮಹಾಮಂಡಳೇಶ್ವರನಾದ ಗಂಗರಾಜನ ದೆಸೆಯಿಂದ. ಬೆಳಗೊಳವನ್ನು ಪ್ರಮುಖ ನಗರವಾಗಿ ರೂಪಿಸಿದ ಗಂಗರಾಜನು ಇಡೀ ಬೆಳಗೊಳ ಪರಿಸರದಲ್ಲಿ ಯಾವುದೇ ಜನವಸತಿಯುಳ್ಳ ನಗರ ಕೇಂದ್ರಗಳು ಅಸ್ತಿತ್ವದಲ್ಲಿ ಇರದೇ ಇದ್ದುದನ್ನು ಗಮನಿಸಿ ಮುಂದೆ ಆ ಕಡೆ ಗಮನ ಹರಿಸಿದನು. ಇದರ ಪರಿಣಾಮವಾಗಿ ಅದುವರೆಗೂ ಅಜ್ಞಾತವಾಗಿದ್ದ ಬಸ್ತಿಹಳ್ಳಿ, ರಾಚೇನಹಳ್ಳಿ, ಜಿನ್ನೇನಹಳ್ಳಿ, ಸವಣೇರು, ಬರಾಳು, ಬೆಕ್ಕ, ಪರಮ, ಹಳೇಬೆಳಗೊಳ, ಕಂಠೀರಾಯಪುರ, ಸಾಣೇನಹಳ್ಳಿ, ಕಗ್ಗೆರೆ, ಕಾಂತರಾಜಪುರ, ಮೊಟ್ಟನವಿಲೆ ಮುಂತಾದ ಗ್ರಾಮಗಳು ಮುನ್ನೆಲೆಗೆ ಬರಲು ಸಹಕಾರಿಯಾಯಿತು. ಬೆಳಗೊಳದಲ್ಲಿ ಜೈನಮುನಿಗಳನ್ನು ನೆಲೆಗೊಳಿಸಿ ಅವರಿಗೆ ಮಠವನ್ನು ನಿರ್ಮಿಸಿಕೊಟ್ಟು ಅವರೆಲ್ಲರಿಗೂ ವಸತಿಗಾಗಿ ಮತ್ತು ನಿರ್ವಹಣೆಗಾಗಿ ಕೆಲವು ಗ್ರಾಮಗಳನ್ನು ರಚಿಸಿದನು. ಇಂತಹ ಸನ್ನಿವೇಶದಲ್ಲಿ ಶ್ರವಣಬೆಳಗೊಳ ಗ್ರಾಮವನ್ನು ವಿಶೇಷವಾಗಿ ಅಸ್ತಿತ್ವಕ್ಕೆ ತರುವಲ್ಲಿ ಗಂಗರಾಜನ ಪಾತ್ರ ಹಿರಿದಾದುದಾಗಿದೆ. [93]

ಅತ್ಯಂತ ಮಹತ್ವದ ಸಂಗತಿಗಳನ್ನು ನಾವು ಈ ಸಂದರ್ಭದಲ್ಲಿ ಅರಿಯಬಹುದಾಗಿದೆ. ಅದೆಂದರೆ ಬೆಳಗೊಳಕ್ಕೆ ಗೊಮ್ಮಟಪುರ ಎಂಬ ಹೆಸರು ಬಂದಿತ್ತು. ಇಲ್ಲಿ ಪಟ್ಟಣಸ್ವಾಮಿಯರು ಸೆಟ್ಟಿ ವರ್ತಕರೆಲ್ಲರೂ ಇದ್ದರು. ಪಟ್ಟಣಸ್ವಾಮಿಯೂ ಕೂಡ ಶೆಟ್ಟಿವರ್ತಕನೇ ಇರಬೇಕು. ಇವರನ್ನೆಲ್ಲಾ ಇಲ್ಲಿ ನೆಲೆಗೊಳಿಸಿದವನೇ ಗಂಗರಾಜ. ಇದರಿಂದ ಬೆಳಗೊಳ ಗ್ರಾಮವು ಅತ್ಯಂತ ಶೀಘ್ರಗತಿಯಲ್ಲಿ ಬೆಳವಣಿಗೆಯಾಗುವುದರ ಹಿಂದೆ ಅಲ್ಲೊಂದು ಸುಸಜ್ಜಿತವಾದ ನಗರವಾಗಿ ರೂಪುಗೊಳ್ಳುವ ಹಿಂದೆ ಗಂಗರಾಜನ ಪರಿಶ್ರಮವು ಎದ್ದುಕಾಣುತ್ತದೆ. ಗಂಗರಾಜನ ಇನ್ನೊಂದು ಸಾಧನೆಯೆಂದರೆ ಬೆಳಗೊಳದ ಪಕ್ಕದಲ್ಲಿ ಒಂದು ನೂತನ ಗ್ರಾಮವನ್ನು ನಿರ್ಮಿಸಿದನು. ಗಂಗರಾಜನು ಬೆಳಗುಳ ತೀರ್ಥದಲ್ಲಿ ನಿರ್ಮಿಸಿದ ಗ್ರಾಮಕ್ಕೆ ಜಿನನಾಥಪುರವೆಂದು ಹೆಸರಿಟ್ಟನು. ಇದೊಂದು ಜೈನ ಮತೀಯರಿಗಾಗಿಯೇ ನಿರ್ಮಿಸಿದ ಅಗ್ರಹಾರವಾಗಿತ್ತು. ಇಲ್ಲಿ ಇಂದಿಗೆ ಎರಡು ಪ್ರಮುಖವಾದ ಜೈನ ಕೇಂದ್ರಗಳಿವೆ. ಇದರಲ್ಲಿ ಮೊದಲನೆಯದು ಅರೆಗಲ್ಲು ಬಸದಿ. ಬಂಡೆಯ ಮೇಲಿರುವ ಬಸದಿ ಎಂಬ ಅರ್ಥದಲ್ಲಿ ಇದನ್ನು ಅರೆಗಲ್ಲು ಬಸದಿ ಎಂದು ಕರೆಯಲಾಗಿದೆ. ಈ ಬಸದಿಯನ್ನು ಬೊಪ್ಪದೇವನು ತನ್ನ ಸೋದರನಾದ ಏಚಿಮಯ್ಯನ ಪರೋಕ್ಷ ವಿನಯಕ್ಕಾಗಿ ರೂಪಿಸಿದನು. ಎಂದರೆ ಗಂಗರಾಜನಿಂದ ನಿರ್ಮಿತವಾದ ಈ ಗ್ರಾಮದ ನಿರ್ವಹಣೆಯನ್ನು ಗಂಗರಾಜನು ತನ್ನ ಮಗನಾದ ಬೊಪ್ಪದೇವನಿಗೆ ನೀಡಿದ್ದನು ಎಂದು ತಿಳಿಯಬಹುದು. ಇಲ್ಲಿ ನಾವು ಒಂದು ಮಾತನ್ನು ಗಮನಿಸಬೇಕು. ಗಂಗರಾಜನಿಗೆ ಬೊಪ್ಪನೆಂಬ ಮಗನೊಬ್ಬನೇ ಇರುವುದು ಸರಿಯಷ್ಟೇ. ಪ್ರಸ್ತುತ ಶಾಸನದಲ್ಲೂ ಗಂಗರಾಜನ ಅಗ್ರತನಯ ಎಂಬ ಮಾತೇ ಇದೆ. ಆದರೆ ತನ್ನಣ್ಣನಾದ ಏಚಿರಾಜನಿಗಾಗಿ ಬಸದಿಯೊಂದನ್ನು ನಿರ್ಮಿಸಿದನು ಎಂದು ಶಾಸನವೂ ತಿಳಿಸುತ್ತದೆ. ಈ ಮಾತಿನ ಅರ್ಥವನ್ನು ನಾವು ಸರಿಯಾಗಿ ಮಾಡಿಕೊಳ್ಳಬೇಕು. ಇಲ್ಲಿ ಬಸದಿಯನ್ನು ನಿರ್ಮಿಸಿದವನು ಗಂಗರಾಜನ ಮಗನಾದ ಬೊಪ್ಪ. ಇವನಿಗೂ ಏಚ ಅಥವಾ ಏಚಿರಾಜನೆಂಬ ಹೆಸರೇ ಇರುವುದು. ಬಸದಿಯನ್ನು ನಿರ್ಮಿಸಿದ್ದು ತನ್ನ ಅಣ್ಣನಾದ ಏಚಿರಾಜನ ಪರೋಕ್ಷವಿನಯಕ್ಕಾಗಿ ಅಂದರೆ ತನ್ನ ದೊಡ್ಡಪ್ಪನಾದ ಬೊಮ್ಮಚಮೂಪನ ಮಗನಾದ ಏಚಿರಾಜನಿಗಾಗಿ. ಇಲ್ಲಿ ನಾವು ಇದನ್ನು ಯಾವ ರೀತಿಯಲ್ಲೂ ಗೊಂದಲವನ್ನು ಮಾಡಿಕೊಳ್ಳದೇ ನೋಡಬೇಕಾಗಿದೆ.

ಇನ್ನೊಂದು ಜಿನನಾಥಪುರದಲ್ಲೇ ಏಕೆ ಇಡೀ ಕನ್ನಡ ನಾಡಿನಲ್ಲಿಯೇ ಅಪರೂಪದ ಬಸದಿಯಾಗಿರುವ ಶಾಂತೀಶ್ವರ ಬಸದಿ. ಏಕೆಂದರೆ ಹೊಯ್ಸಳ ಶೈಲಿಯ ಅನೇಕ ಬಸದಿಗಳು ಇರುವುದಾದರೂ ಭಿತ್ತಿಯ ಮೇಲೆ ಜೈನಶಿಲ್ಪಗಳನ್ನು ಉಳ್ಳ ಬಸದಿಯು ಅನನ್ಯವಾಗಿದೆ. ಇದನ್ನು ಗಂಗರಾಜನ ತರುವಾಯ 1200ರಲ್ಲಿ ರೇಚಿಮಯ್ಯ ದಂಡನಾಯಕನು ನಿರ್ಮಿಸಿದನು. ಗಂಗರಾಜನು ಜನಾನುರಾಗಿಯಾಗಿದ್ದನು. ಅವನು ಬೆಳಗೊಳವನ್ನು ಅಭಿವೃದ್ಧಿಗೊಳಿಸಿದ ರೀತಿ ಅನ್ಯಾದೃಶವಾದುದು. ಸ್ವತಃ ತಾನೇ ಹಲವಾರು ದಾನಗಳನ್ನು ನೀಡಿ ಬೆಳಗೊಳವನ್ನು ಬೆಳಗಿಸುವುದರ ಜೊತೆಗೆ ತನ್ನ ಸಮಕಾಲೀನರಾದ ಹಲವರನ್ನು ಬೆಳಗೊಳಕ್ಕೆ ಕರೆಸಿ ಅವರಿಂದಲೂ ಅನೇಕ ದಾನಗಳನ್ನು ಪಡೆಯುವುದರಲ್ಲಿಯೂ ಇವನು ಸಫಲನಾದನು. ತನ್ನ ಪ್ರೀತಿಪಾತ್ರನಾದ ಹೊಯ್ಸಳ ವಿಷ್ಣುವರ್ಧನನು ಅನೇಕ ಬಾರಿ ಬೆಳಗೊಳ ಪರಿಸರದ

ಅನೇಕ ಗ್ರಾಮಗಳನ್ನು ಗಂಗರಾಜನ ಕೋರಿಕೆಯಿಂದ ದಾನಮಾಡಿದನು. ಪಟ್ಟದರಸಿ ಶಾಂತಲೆಯು ಕೂಡ ಗಂಗರಾಜನ ಪ್ರಭಾವಕ್ಕೆ ಒಳಗಾಗಿ ಬೆಳಗೊಳದಲ್ಲಿ ಹಲವು ದಾನಗಳನ್ನು ಮಾಡುವುದರ ಜೊತೆಗೆ ತನ್ನ ಹೆಸರಿನಲ್ಲಿ ಸವತಿಗಂಧವಾರಣ ಬಸದಿಯನ್ನೂ ಬೆಳಗೊಳದ ಚಿಕ್ಕಬೆಟ್ಟದಲ್ಲಿ ಕ್ರಿ.ಶ.1123ರಲ್ಲಿ ನಿರ್ಮಿಸಿದಳು.[94] ಹೇಗೂ ಶಾಂತಲೆಯು ಜೈನಳಾಗಿದ್ದ ತಾಯಿ ಮಾಚಿಕಬ್ಬೆಗೂ ಶೈವನಾಗಿದ್ದ ಮಾರಸಿಂಗನಿಗೂ ಹುಟ್ಟಿದವಳಲ್ಲವೇ. ಬೇಲೂರಿನಲ್ಲಿದ್ದ ಅವಳಿಗೂ ಬೆಳಗೊಳ ಕ್ಷೇತ್ರದಲ್ಲಿ ಜಿನಸೇವೆಯನ್ನು ಮಾಡುವ ಭಾಗ್ಯವು ದೊರೆತಿದ್ದೇ ಗಂಗರಾಜನಿಂದ.

- ಸೋಮಯದಂಡನಾಯಕನು ಸಾಮಾನ್ಯವಾಗಿ ಗ್ರಾಮದಸ್ವರೂಪದಲ್ಲಿದ್ದ ತುರುವೇಕೆರೆಯನ್ನು ಅಗ್ರಹಾರ ವನ್ನಾಗಿಸಿ, ಇದನ್ನು ನಗರವನ್ನಾಗಿ ರೂಪುಗೊಳಿಸಲು ಮುಂದಡಿಯಿಟ್ಟನು. ಇದಕ್ಕೆ ವಿಜಯನರಸಿಂಹಪುರ ಎಂದು ನಾಮಕರಣಮಾಡಿದನು. ಕೇಶವ ಮತ್ತು ಶಂಕರೇಶ್ವರ ದೇಗುಲಗಳ ನಿರ್ವಹಣೆಗಾಗಿ ಅಲ್ಲಿನ ಮಹಾಜನರಿಗೆ ಈ ಅಗ್ರಹಾರವನ್ನು ಧಾರಾಪೂರ್ವಕವಾಗಿ ನೀಡಿದನು.[95] ಅಂತೆಯೇ ಬಾಣೂರನ್ನು ಅಗ್ರವನ್ನಾಗಿಸಿ ಉದ್ಭವಸರ್ವಜ್ಞ ಲಕ್ಷ್ಮೀಪುರ ಎಂದು ಹೆಸರನ್ನು ಇಟ್ಟು ಅದನ್ನು ಬ್ರಹ್ಮೇಶ್ವರ ದೇವರಿಗೆ ದೇವದಾನ ವೃತ್ತಿಯಾಗಿ ನೀಡಿದ್ದನು. ಈ ಎರಡು ಪುರಗಳ ನಿರ್ಮಾಣದ ಬಳಿಕ ಸೋಮಯ ದಂಡನಾಯಕನು ಕೆಲವು ಪ್ರದೇಶಗಳನ್ನು ಈಗಾಗಲೇ ಹೆಸರಿಸಿದ ದೇಗುಲಗಳಿಗೆ ದಾನವಾಗಿ ನೀಡಿದ್ದನು. ಇದನ್ನು ಸೂಕ್ಷ್ಮವಾಗಿ ಗಮನಿಸಿದರೆ, ತುರುವೇಕೆರೆಯನ್ನು ನಗರಸ್ವರೂಪದ ಪುರವನ್ನಾಗಿ ಪರಿವರ್ತಿಸಿ ಈ ನಗರ ವ್ಯವಸ್ಥೆಗೆ ಅವಶ್ಯಕವಿರುವ ಆರ್ಥಿಕತೆಯ ಅಂಶಗಳಾದ ಬ್ಯಾಂಕಿಂಗ್, ತೆರಿಗೆ, ಸಾಲಸೌಲಭ್ಯ, ಉತ್ಪಾದನೆ, ವಿನಿಮಯ ಮೊದಲಾದವುಗಳ ನಿರ್ವಹಣೆಗೆಂದು ಅಲ್ಲಿನ ಮಹಾಜನರಿಗೆ ಅದರ ಉಸ್ತುವಾರಿಯನ್ನು ಹಲವು ಸೌಲಭ್ಯಗಳನ್ನು ಸ್ಥಳೀಯವಾಗಿ ಕೊಡಮಾಡಿದ್ದನು ಎಂದು ತೋರುತ್ತದೆ.
- ಬಲ್ಲಪದಂಡನಾಯಕನು ಸೇಲಂನಲ್ಲಿರುವ ಸಂಕಗಿರಿಯ ಸಮೀಪದಲ್ಲಿ ಈಗಾಗಲೇ ಇದ್ದ ಊರೊಂದನ್ನು ಅಗ್ರಹಾರವನ್ನಾಗಿ ಪರಿವರ್ತಿಸಿದನು.[96] ಅಲ್ಲಿನ ಮಹಾಜನರಿಗೆ ಕೆಲವು ಭೂದಾನಗಳನ್ನು ನೀಡಿದ್ದನು. ಸೇಲಂ ಸಹ ಆ ಕಾಲಕ್ಕೆ ಕನ್ನಡ ಪ್ರದೇಶವೇ ಆಗಿತ್ತು ಎಂಬುದಕ್ಕೆ ಹಲವು ಶಾಸನಗಳೇ ಸಾಕ್ಷಿಯಾಗಿವೆ. ಆದರೂ ತಮಿಳುನಾಡು ಮತ್ತು ಕನ್ನಡ ಪ್ರದೇಶಗಳ ನಡುವೆ ಇರುವ ಈ ಸೇಲಂ ಪ್ರದೇಶದಲ್ಲಿ ಬಲ್ಲಪದಂಡನಾಯಕನು ಮಾಡಿದ ಈ ಸ್ಥಳವು ನಗರೀಕರಣ ಪ್ರಕ್ರಿಯೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ, ರಾಜಕೀವಾಗಿದ್ದ ಈ ಆಯಕಟ್ಟಿನ ಜಾಗದಲ್ಲಿ ನಗರ ನಿರ್ಮಾಣಗಳ ಮೂಲಕ ಸ್ಥಳೀಯವಾಗಿ ಕನ್ನಡ ಪ್ರಾದೇಶಿಕತೆಯನ್ನು ಹುಟ್ಟುಹಾಕುವ ಅಥವಾ ಉಳಿಸುವ, ಬಲಪಡಿಸುವ ಪ್ರಯತ್ನದಂತೆ ಕಂಡುಬರುತ್ತದೆ. ಏಕೆಂದರೆ ಗಡಿಭಾಗಗಳಲ್ಲಿಯೇ ಪ್ರಾದೇಶಿಕತೆಯ ಉಳಿವು ತುಂಬ ತುರ್ತಿನ ಸಂಗತಿಯಾಗಿರುತ್ತದೆ. ಹಾಗಾಗಿ ಈ ಜಾಣ

ದಂಡನಾಯಕನು ಇದನ್ನು ಅತ್ಯಂತ ಸಮರ್ಥವಾಗಿ ಮತ್ತು ಸುವ್ಯವಸ್ಥಿತವಾಗಿ ನಿರ್ವಹಿಸುತ್ತಿದ್ದುದಕ್ಕೆ ಈ ಶಾಸನವು ಬಹುಮುಖ್ಯ ಆಧಾರವಾಗುತ್ತದೆ.

- ಹೆಗ್ಗಡೆದೇವನು ಬಪ್ಪನಹಳ್ಳಿಯನ್ನು ತನ್ನ ತಂದೆ ಪೆರುಮಾಳೆದಂಡನಾಯಕನ ಹೆಸರಿನಲ್ಲಿ ಪೆರುಮಾಳೆಪುರವನ್ನಾಗಿಸಿ ಅದನ್ನು ಗೋಪಿನಾಥದೇವರಿಗೆ ದಾನವಾಗಿ ನೀಡಿದ್ದನು.[97]
- ರಾಘವಪುರದ ಈ ಶಾಸನದ ಪ್ರಕಾರ, ಕೇತೆಯದಂಡನಾಯಕನು ಶ್ರೀಕರಣದ ರಾಘವದೇವರ ಮಕ್ಕಳಾದ ನಾರಣದೇವರಿಗೆ ಅವರ ತಂದೆ ರಾಘವದೇವರ ಹೆಸರಿನಲ್ಲಿ ರಾಘವಪುರವೆಂಬ ಅಗ್ರಹಾರವನ್ನು ನಿರ್ಮಿಸಲು ಕುಡುಗುನಾಡಿನೊಳಗಣ, ಗೊಮಂಟಹಳ್ಳಿಯನು ಮತ್ತು ಮಾದೆಯಹಳ್ಳಿಯನ್ನು ಸರ್ವಬಾಧಾ ಪರಿಹಾರಾರ್ಥವಾಗಿ ದಾನ ಮಾಡಿದನು[98]

ಹೀಗೆ ಮಹಾಮಂಡಳೇಶ್ವರರು ರೂಪಿಸಿದ ನಗರಗಳು ಮುಂದೆ ಪ್ರಾದೇಶಿಕವಾದ ವ್ಯಾಪಾರ ವ್ಯವಹಾರಗಳಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸಿದವು.

**5.6 ವರ್ತಕರು ಮತ್ತು ವರ್ತಕ ಸಂಘಗಳು :**

**ವರ್ತಕರು :** ವರ್ತಕರು ವ್ಯಾಪಾರ ಮಾಡುವುದನ್ನೇ ವೃತ್ತಿಯಾಗಿ ಮಾಡಿಕೊಂಡಿದ್ದವರು. ಇವರನ್ನು ಉತ್ಪಾದಕ–ವಿನಿಮಯ ವರ್ತಕರು, ವಿನಿಮಯ ವರ್ತಕರು ಎಂದು ಪ್ರಧಾನವಾಗಿ ಎರಡು ಬಗೆಯಲ್ಲಿ ವಿಂಗಡಿಸುತ್ತಾರೆ. ಸೆಟ್ಟಿಬಣಂಜಿಗ, ಸೆಟ್ಟಿಗುತ್ತ, ನಕರ, ಮುಂಮುರಿದಂಡ, ವಡ್ಡವ್ಯವಹಾರಿ, ಗಾತ್ರಿಗ, ಸೆಟ್ಟಿಕಾರ, ಹಲರು, ಎಳಮೆ, ಸಾಲಿಕೆ, ಬಲ್ಲಾಳುಗಳು, ನಾನಾದೇಶಿ, ಉಭಯಾನಾನಾದೇಶಿ, ಮುಂತಾದವರು ವ್ಯಾಪಾರವನ್ನೇ ವೃತಿಯನ್ನಾಗಿಸಿ ಕೊಂಡ ವಿನಿಮಯ ವರ್ತಕರು. ಕುಂಬಾರ, ಅಕ್ಕಸಾಲಿ, ಮಾದಿಗ, ಸಮಗಾರ, ಮೇದರ ಮೊದಲಾದವರು ಉತ್ಪಾದಕ ವಿನಿಮಯ ವರ್ತಕರು. ಸೆಟ್ಟಿ ಎಂದರೆ ವ್ಯಾಪಾರಿ ಎಂದರ್ಥವಾಗಿದ್ದು ಎಲ್ಲ ಜಾತಿ ಸಮುದಾಯಗಳಲ್ಲಿರುವ ವ್ಯಾಪಾರಿಗಳನ್ನು ಸೆಟ್ಟಿಗಳೆಂದೇ ಕರೆಯಲಾಗುತ್ತಿತ್ತು. ಶಾಸನಗಳಲ್ಲಿ ಸೆಟ್ಟಿಕುಲ ಎಂಬುದಾಗಿ ವ್ಯಾಪಾರಸ್ಥರನ್ನು ಕರೆಯಲಾಗಿದೆ; ಇವರೆಲ್ಲರೂ ಮಧ್ಯಕಾಲೀನ ಕರ್ನಾಟಕದಲ್ಲಿ ನಗರ ವ್ಯವಸ್ಥೆಯೊಂದು ಕಾಣಿಸಿಕೊಳ್ಳುವುದಕ್ಕೆ ಕಾರಣರಾದವರು.

ವ್ಯಾಪಾರಸ್ಥರು ಆಂತರಿಕ ವ್ಯಾಪಾರ ಮಾತ್ರವಲ್ಲದೆ ವಿದೇಶಿ ವ್ಯಾಪಾರವನ್ನು ಮಾಡುತ್ತಿದ್ದರು. 1054ರ ಶಾಸನವೊಂದು ವ್ಯಾಪಾರಸ್ಥರು ಭೂ ಮತ್ತು ಜಲಮಾರ್ಗದ ಮೂಲಕ ಹೊರರಾಜ್ಯಗಳೊಡನೆ ವ್ಯಾಪಾರ ನಡೆಸುತ್ತ ಇದ್ದರು. ದೋರಸಮುದ್ರ, ಬೇಲೂರು, ವಿಷ್ಣುಸಮುದ್ರ, ಶ್ರವಣಬೆಳಗೊಳ ಮುಂತಾದ ಸ್ಥಳದ ವ್ಯಾಪಾರಸ್ಥರು ಸಮುದ್ರ ವ್ಯಾಪಾರದಲ್ಲಿ ಹೆಚ್ಚು ಭಾಗವಹಿಸುತ್ತಿದ್ದರು ಎನ್ನುವುದು ಶಾಸನಗಳಿಂದ ತಿಳಿದುಬರುತ್ತದೆ. ಚೀನಾ, ಮಲಯಾ, ಜಾವ, ಸಿಲೋನ, ಮುಂತಾದ ದೇಶಗಳೊಂದಿಗೆ ವ್ಯಾಪಾರ ಸಂಪರ್ಕಗಳನ್ನು ಇಟ್ಟುಕೊಳ್ಳುತ್ತಿದ್ದರು. ವಿದೇಶಿ ವ್ಯಾಪಾರಿ ಹಡಗುಗಳು ಹೊನ್ನಾವರ, ಬಟ್ಕಳ, ಮಂಗಳೂರು ಮುಂತಾದ ಬಂದರುಗಳಿಗೆ ಬರುತ್ತಿದ್ದವು.

ಇರುಗಪ್ಪ ದಂಡನಾಯಕನು ಬಾರಕೂರು ಮುಂತಾದ ತುಳುರಾಜ್ಯವನ್ನು ಧರ್ಮದಿಂದ ಪ್ರತಿಪಾಲಿಸು ತ್ತಿದ್ದುದನ್ನು ಆ ಕಾಲದಲ್ಲಿ ಅಜ್ಜಸಾಹು ಎಂಬಾತ ಜಲಯಾತ್ರಿಯಾಗಿ (ಸಮುದ್ರಮಾರ್ಗವಾಗಿ) ಬಂದು ತುಳುರಾಜ್ಯದಲ್ಲಿ ಜಮೀನನ್ನು ಖರೀದಿಸಿ ಹುಂಚದ ಪಾರ್ಶ್ವನಾಥ ದೇವರಿಗೆ ದತ್ತಿ ನೀಡಿದ್ದಾನೆ.[99]ಕುದುರೆಗಳ ವ್ಯಾಪಾರವು ಮಧ್ಯಕಾಲೀನ ಕರ್ನಾಟಕದಲ್ಲಿ ವಿದೇಶೀ ವ್ಯಾಪಾರದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿತ್ತು. ಅರಬ್ ಮತ್ತು ಪರ್ಷಿಯನ್ ವ್ಯಾಪಾರಸ್ಥರು ಕುದುರೆ ವ್ಯಾಪಾರದಲ್ಲಿ ಅಪಾರವಾದ ಲಾಭವನ್ನು ಪಡೆಯುತ್ತಿದ್ದರು. ಅರೇಬಿಯಾ ಮತ್ತು ಟರ್ಕಿ ಪರ್ಷಿಯ ದೇಶಗಳೊಂದಿಗೆ ಕುದುರೆ ವ್ಯಾಪಾರ ಹೆಚ್ಚಿನ ನಡೆಯುತ್ತಿತ್ತು. ಆನೆಗಳನ್ನು ಸಿಲೋನ್ ಮತ್ತು ಪೆಗು ದೇಶಗಳಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. ಮುತ್ತುಗಳ ವ್ಯಾಪಾರವು ತಕ್ಕಮಟ್ಟಿಗೆ ನಡೆಯುತ್ತಿತ್ತು. ಉದಾ: ಕಮ್ಮಟ ಚೆಟ್ಟಿಸೆಟ್ಟಿಯು ಹಡಗುಗಳಲ್ಲಿ ಕುದುರೆಗಳು, ಆನೆಗಳು ಮತ್ತು ಮುತ್ತುಗಳನ್ನು ಆಮದು ಮಾಡಿಕೊಂಡು ರಾಜರಿಗೆ ಮಾರುತ್ತಿದ್ದನು.[100]

ರಾಜ್ಯದ ಆರ್ಥಿಕತೆಯಲ್ಲಿ ಆಂತರಿಕ ವ್ಯಾಪಾರದ ಪಾತ್ರ ಮಹತ್ವದ್ದಾಗಿತ್ತು. ಆಂತರಿಕ ವ್ಯಾಪಾರದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳೆರೆಡೂ ಪರಸ್ಪರ ಒಂದುಗೂಡಿ ಕೆಲಸ ನಿರ್ವಹಿಸುತ್ತಿದ್ದವು. ಆಂತರಿಕ ವ್ಯಾಪಾರದ ಕಾರಣದಿಂದಾಗಿಯೇ ಅನೇಕ ಗ್ರಾಮೀಣ ಪ್ರದೇಶಗಳು ಪಟ್ಟಣಗಳಾಗಿ ಪರಿವರ್ತನೆಗೊಂಡವು. ಈ ಕಾರಣದಿಂದಾಗಿ ಆಂತರಿಕ ವ್ಯಾಪಾರವು ಆರ್ಥಿಕ ಚಟುವಟಿಕೆಗಳನ್ನು ಚುರುಕುಗೊಳಿಸಿದ್ದೇ ಅಲ್ಲದೆ ಸಾಮಾಜಿಕ ಪರಿವರ್ತನೆಗೂ ಕಾರಣವಾಯಿತು. ಆಂತರಿಕ ವ್ಯಾಪಾರವು ಅನೇಕ ಪ್ರದೇಶಗಳಲ್ಲಿ ನಡೆಯುತ್ತಿತ್ತು. ಅಂಥ ವ್ಯಾಪಾರದ ಪ್ರದೇಶಗಳನ್ನು ಸಂತೆ,ಅಂಗಡಿ, ಪೇಟೆ, ಪಟ್ಟಣ ಎಂಬ ಹೆಸರುಗಳಿಂದ ಕರೆಯಲಾಗುತ್ತಿತ್ತು. ಹೊಯ್ಸಳರ ಕಾಲದಲ್ಲಿ ಸಂತೆಯು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಸಂತೆಯೆಂದರೆ ವಾರಕ್ಕೊಮ್ಮೆ ಒಂದು ಕಡೆ ಸೇರಿ ವ್ಯಾಪಾರ ನಡೆಸುವ ವ್ಯವಸ್ಥೆ. ಹೊಸದಾಗಿ ಆರಂಭಿಸಿದ ಸಂತೆಗೆ ವರ್ತಕರನ್ನು ಆಕರ್ಷಿಸಲು ಸರಕುಗಳಿಗೆ ಸುಂಕವಿನಾಯಿತಿ ಅಥವಾ ರಿಯಾಯಿತಿಗಳನ್ನು ನೀಡಲಾಗುತ್ತಿತ್ತು. ಸಂತೆಯು ಒಂದು ದಿನದ ಮಟ್ಟಿಗೆ ಮಾತ್ರ ನಡೆಯುತ್ತಿತ್ತು. ಇದರಲ್ಲಿ ಸ್ಥಳೀಯ ವ್ಯಾಪಾರಿಗಳೇ ಹೆಚ್ಚಾಗಿದ್ದರು. ಸಂತೆಯ ವಿಸ್ತೃತ ವ್ಯಾಪಾರ ಹೆಚ್ಚಿದಂತೆಲ್ಲ ಅದೇ ಪ್ರದೇಶದಲ್ಲೆ ಪಟ್ಟಣದ ಲಕ್ಷಣಗಳು ಕ್ರಮೇಣ ಕಾಣಲಾರಂಭಿಸಿದ್ದವು. ಇದು ಸಹ ನಗರೀಕರಣದ ಪ್ರಕ್ರಿಯೆ. ಅಂತೆಯೇ ಮುಗುಳನಹಳ್ಳಿಯು ನಾನಾ ದೇಶಿ ಪಟ್ಟಣವಾಗಿ ಪರಿವರ್ತನೆಗೊಂಡಿತ್ತು. ಇವುಗಳಿಗೆ ಮಹಾಮಂಡಳೇಶ್ವರರು ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದರು. ಸಂತೆಯನ್ನು ಕಟ್ಟಿಸುವುದರಿಂದ ಪುಣ್ಯಪ್ರಾಪ್ತಿಯಾಗುತ್ತದೆ ಎಂಬ ಧಾರ್ಮಿಕ ನಂಬಿಕೆಯನ್ನು ಜನರಲ್ಲಿ ಜಾಗೃತಗೊಳಿಸಲಾಯಿತು. ಇದರಿಂದ ಸಂತೆನಿರ್ಮಾಣ, ಸಂತೆಗಳ ರಕ್ಷಣೆಗೆ ಧಾರ್ಮಿಕತೆಯ ಮೆರುಗು ಸೇರಿಕೊಂಡಿತ್ತು. ಸಂತೆಗಳಿಂದ ರಾಜ್ಯದ ಬೊಕ್ಕಸಕ್ಕೆ ಅನೇಕ ರೀತಿಯಲ್ಲಿ ಲಾಭದೊರೆಯುತ್ತಿತ್ತು. ಸ್ಥಳೀಯ ವ್ಯಾಪಾರದ ವೃದ್ಧಿಗೂ ಇದು ಕಾರಣವಾಯಿತು. ಉದಾಹರಣೆಗೆ : ಕ್ರಿ.ಶ. 1316ರ ಗಾಣಾಳುಕೊಪ್ಪ ಶಾಸನವು[101]ಸಿಂಗಯ ದಂಡನಾಯಕನ ಅಧೀನಧಿಕಾರಿಯಾದ ಮಾಚೆಯನಾಯಕನು ಹೊಮ್ಮಳಿಗೆ ನಾಡಿನ ರಾಮದೇವ, ಮಳಿಯನಾಯಕ

ಮೊದಲಾದವರೊಡಗೂಡಿ ಗಾಳಿಹಾಳು (>ಗಾಣಾಳು) ಎಂಬಲ್ಲಿ ಸಂತೆಯನ್ನು ನಿರ್ಮಿಸಿ, ಅಲ್ಲಿಯ ಪಟ್ಟಣಸ್ವಾಮಿಯ ಮಗ ಚೊಕ್ಕಸೆಟ್ಟಿಗೆ ಭೂದಾನಗಳನ್ನಿತ್ತಿದುದನ್ನು ತಿಳಿಸುತ್ತದೆ. ಒಟ್ಟಿನಲ್ಲಿ ಗ್ರಾಮಗಳಲ್ಲಿ ಸಂತೆಗಳನ್ನು ಸ್ಥಾಪಿಸಿ ಸಾಮ್ರಾಜ್ಯದಲ್ಲಿ ಆರ್ಥಿಕ ಪರಿಸ್ಥಿತಿಯು ಉತ್ತಮವಾಗಿರಲು ಪ್ರಯತ್ನಿಸುತ್ತಿದ್ದುದು ಇದರಿಂದ ನಿಚ್ಚಳವಾಗುತ್ತದೆ.

ಅಂಗಡಿಯು ಸಹ ವ್ಯಾಪಾರದ ಕೇಂದ್ರವಾಗಿತ್ತು. ವಿವಿಧ ಮಳಿಗೆಗಳ ಅಂಗಡಿಗಳ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತದೆ. ಬಯಲು ಅಂಗಡಿ, ಕಟ್ಟಿದ ಅಂಗಡಿ, ಮಾನ್ಯದ ಅಂಗಡಿ, ದೇವರ ಅಂಗಡಿ, ಬಟ್ಟೆ ಅಂಗಡಿ, ಆಭರಣದ ಅಂಗಡಿ, ಸುಗಂಧದ ಅಂಗಡಿ, ಹತ್ತಿಯ ಅಂಗಡಿ, ಅಕ್ಕಸಾಲಿಗರ ಅಂಗಡಿ ಮೊದಲಾದವು ಅಸ್ತಿತ್ವದಲ್ಲಿದ್ದವು. ಶಾಸನಗಳಲ್ಲಿ ಅಂಗಡಿಯವರು ತೆರಿಗೆಯನ್ನು ನೀಡಬೇಕಾಗಿದ್ದು ಇದನ್ನು 'ಅಂಗಡಿದೆರೆ' ಎಂದೂ ಕರೆಯಲಾಗಿದೆ. ದಾನ ನೀಡಿದ ವ್ಯಕ್ತಿಗಳ ಹೆಸರುಗಳನ್ನು ಅಂಗಡಿಗಳಿಗೆ ನೀಡಲಾಗಿತ್ತು. ಬೊಮ್ಮಲದೇವಿಯರ ಅಂಗಡಿ, ಕೇತಲದೇವಿಯರ ಅಂಗಡಿ, ಬೊಪ್ಪದೇವನಬಸದಿಯಂಗಡಿ, ಬೆಲಹೂರ ಅಂಗಡಿ ಮುಂತಾದವು.

ವಿವಿಧ ಬಗೆಯ ವರ್ತಕರನ್ನು ಒಂದು ಕಡೆ ನೆಲೆಗೊಳಿಸುವುದೇ ಪಟ್ಟಣಗಳ ನಿರ್ಮಾಣದ ಮೂಲ ಉದ್ದೇಶವಾಗಿತ್ತು. ಹಾಗಾಗಿ ಅಲ್ಲಿನ ವರ್ತಕರಿಗೆ ವಿಶೇಷ ಸೌಲಭ್ಯಗಳನ್ನು ನೀಡಲಾಗಿತ್ತು. ಇದರಿಂದ ಒಂದು ಕಡೆ ಸ್ಥಳೀಯವಾದ ಸಂಸ್ಕೃತಿಯೊಂದು ನಿಧಾನವಾಗಿ ರೂಪುಗೊಳ್ಳಲು ಕಾರಣವಾಗತೊಡಗಿತು. ಪಟ್ಟಣಸ್ವಾಮಿ ಮತ್ತು ಮಂಡಲಸ್ವಾಮಿ, ನಾಡಸ್ವಾಮಿಗಳೆಂಬ ಅಧಿಕಾರಿಗಳಿಗೆ ಈ ಹುದ್ದೆಗಳನ್ನು ಮಹಾಮಂಡಳೇಶ್ವರರು ನೀಡಿ ಅವರನ್ನು ನೆಲೆಗೊಳಿಸಲು ಎಲ್ಲ ತರಹದ ವ್ಯವಸ್ಥೆಗಳನ್ನು ಮಾಡುತ್ತಿದ್ದರು. ಪಟ್ಟಣಸ್ವಾಮಿಯು ಪಟ್ಟಣಗಳ ಮಟ್ಟಕ್ಕೆ ಸೀಮಿತ ಅಧಿಕಾರವನ್ನು ಹೊಂದಿರುತ್ತಿದ್ದರೆ, ಮಂಡಲಸ್ವಾಮಿಯು ಮಂಡಲ(ನಾಡಿನ ಒಂದುಭಾಗ)ಗಳ ಅಧಿಪತಿ ಯಾಗಿರುತ್ತಿದ್ದನು. ಅಂತೆಯೇ ನಾಡಸ್ವಾಮಿಯು ನಾಡುಗಳಲ್ಲಿ ಪಟ್ಟಣ ಕಟ್ಟಿಸುವ ಮತ್ತು ಸಂತೆ ಕೂಡಿಸುವ ಜವಾಬ್ದಾರಿಯನ್ನು ಹೊತ್ತಿರುತ್ತಿದ್ದನು: ಉದಾಹರಣೆಗೆ

- ವೀರಬಲ್ಲಾಳನ ಕೈಕೆಳಗೆ ಅಧಿಕಾರಿಯಾಗಿದ್ದ ಮಹಾಮಂಡಳೇಶ್ವರ ಮೆಂಚಿದೇವರಸನು "ಮಿಂಡರ ಗಂಡರಿಂಡಲಿ ಹನುಮಂತ" ಎಂದು ಬಿರುದಾಂಕಿತನಾಗಿದ್ದಾನೆ. ಇವನು ಮಾರಚನಹಳ್ಳಿಯಲ್ಲಿ ಪಟ್ಟಣಸ್ವಾಮಿಯೋರ್ವನನ್ನು ನೆಲೆಗೊಳಿಸಿ ಅಲ್ಲಿನ ಬೀರಣಿಗನ ಮನೆ ಮಾನ್ಯದ ಹೊರತಾಗಿ ಮರುಹಣವನ್ನು ಕೊಡುವಂತೆ ನೇಮಿಸಿದ್ದನು.[102]

**ವರ್ತಕ ಸಂಘಗಳು :** ವರ್ತಕ ಸಂಘಗಳು ಆರ್ಥಿಕತೆಯಲ್ಲಿ ಮುಖ್ಯಪಾತ್ರವನ್ನು ವಹಿಸುತ್ತವೆ. ಇವುಗಳನ್ನು ಶ್ರೇಣಿಗಳು ಅಥವಾ ವ್ಯಾಪಾರಸ್ಥರ ಸಂಘಗಳು ಎಂದು ಕರೆಯಲಾಗಿದೆ. ಈ ಶ್ರೇಣಿಗಳಲ್ಲಿ ವರ್ತಕರು ಮಾತ್ರವಲ್ಲದೆ ವಸ್ತುಗಳನ್ನು ಉತ್ಪಾದಿಸುವ ಮತ್ತು ಮಾರಾಟಮಾಡುವ ವಿವಿಧ ವೃತ್ತಿಯವರು ಸೇರಿಕೊಂಡಿರುತ್ತಿದ್ದರು. ಶ್ರೇಣಿಗಳನ್ನು ವರ್ತಕ ಸಂಘ, ವೃತ್ತಿಸಂಘ ,ವಾಣಿಜ್ಯ ಸಂಘ, ಉತ್ಪಾದಕ ಸಂಘ,

ವಿನಿಮಯ ಸಂಘ, ಉತ್ಪಾದಕ–ವಿನಿಮಯ ಸಂಘ ಮುಂತಾದ ಹೆಸರುಗಳಿಂದಲೂ ಕರೆಯಲಾಗಿದೆ. ವ್ಯಾಪಾರವನ್ನೇ ವೃತ್ತಿಯಾಗಿಸಿಕೊಂಡಿರುವ ವರ್ತಕರು ರಚಿಸಿಕೊಂಡ ಸಂಘಗಳನ್ನು ವರ್ತಕ ಸಂಘ, ವೃತ್ತಿಸಂಘ, ವಿನಿಮಯ ಸಂಘ ಎಂಬ ಹೆಸರಿನಿಂದಲೂ ; ಉತ್ಪಾದನೆ–ಮಾರಾಟ ಈ ಎರಡೂ ಕೆಲಸಗಳನ್ನು ಮಾಡುತ್ತಿದ್ದ ಜನವರ್ಗ ರಚಿಸಿಕೊಂಡ ಸಂಘಗಳನ್ನು ವೃತ್ತಿಸಂಘ, ಉತ್ಪಾದಕ ಸಂಘ, ಉತ್ಪಾದಕ–ವಿನಿಮಯ ಸಂಘ ಎಂಬ ಸಹ ಹೆಸರಿನಿಂದಲೂ ಕರೆಯಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ವ್ಯಾಪಾರವನ್ನು ನಡೆಸುತ್ತಿದ್ದ ವರ್ತಕರು ಮತ್ತು ಕುಶಲಕರ್ಮಿಗಳು ರಚಿಸಿಕೊಂಡಿದ್ದ ಶ್ರೇಣಿಗಳ ಕುರಿತು ಮಾತ್ರ ಗಮನಹರಿಸಲಾಗಿದೆ. ಸಮಾನ ವೃತ್ತಿಯವರು ತಮ್ಮ ಸಮಾಜದ ಮತ್ತು ಸಮುದಾಯದ ಜನರ ಜೊತೆ ಸೇರಿಕೊಂಡು ಕಟ್ಟಿಕೊಂಡ ಶ್ರೇಣಿಗಳೇ ಸಂಘಗಳು. ಈ ಸಂಘಗಳ ರಚನೆ, ಸ್ವರೂಪ, ಕಾರ್ಯನಿರ್ವಹಣೆ, ವಾಣಿಜ್ಯದ ಲಾಭ, ಸಾಮಾಜಿಕ ಗೌರವ, ಪ್ರಭಾವಗಳು ನಗರಗಳ ಮೇಲೆ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತಿದ್ದವು. ಕುಂಬಾರರು, ಬಡಗಿಗಳು, ಕಮ್ಮಾರರು, ಶಿಲ್ಪಿಗಳು, ಗವರೆಗಳು, ಸೆಟ್ಟಿಗಳು, ವೀರಬಣಜಿಗರು, ಮಣಿಗಾರರು, ನಾನಾದೇಶಿಗಳು ಸಹ ನಾನಾ ಶ್ರೇಣಿಗಳಾಗಿ ವಿಂಗಡಣೆ ಹೊಂದಿದ್ದರು. ಹೊಯ್ಸಳರ ಆಳ್ವಿಕೆಯ ಉತ್ತರಾರ್ಧದಲ್ಲಿ ಅಯ್ಯಾವೊಳೆ ಐನೂರ್ವರ ವರ್ತಕ ಸಂಘದಲಿದ್ದ ವ್ಯಾಪಾರಸ್ಥರು ಅನೇಕ ಬಾರಿ ತಮ್ಮನ್ನು ತಮ್ಮ ಹೆಸರಿನಿಂದಲೇ ಗುರುತಿಸಿಕೊಂಡರು. ಅವರಲ್ಲಿ ಸೆಟ್ಟಿ, ಸೆಟ್ಟಿಗುತ್ತರು, ಬಣಜಿಗರು, ನಕರರು, ಮುಂಮುರಿದಂಡ, ವಡ್ಡವ್ಯವಹಾರಿ, ಗವರೆ, ಗಾತ್ರಿಗ, ನಾನಾದೇಶಿ ಮೊದಲಾದವರು. ಈ ವರ್ತಕರು ಗ್ರಾಮ ಮತ್ತು ನಗರ ಭಾಗಗಳಲ್ಲಿ ಒಂದು ರೀತಿಯ ವ್ಯಾಪಾರ ಸಮನ್ವಯವನ್ನು ತರುವಲ್ಲಿ ಯಶಸ್ವಿಯಾಗಿ ತಾವು ಸಹ ಸಂಸ್ಕೃತಿಯ ಮುಖ್ಯವಾಹಿನಿಯಲ್ಲಿ ಪ್ರಸ್ತುತವಾಗುತ್ತಿದ್ದುದು ಅವರ ಪ್ರಭಾವವನ್ನು ತಿಳಿಸುತ್ತದೆ. ಉದಾಹರಣೆ ಗೆಂದು ಹೊಯ್ಸಳ ಮಹಾಮಂಡಲೇಶ್ವರರ ಮನೆತನಕ್ಕೆ ಸೇರಿದ ವ್ಯಕ್ತಿಗಳೇ ಆದ ಇರುಗಿಸೆಟ್ಟಿ, ಪೆಮ್ಮಿಸೆಟ್ಟಿ, ಸಿಂಗಿಸೆಟ್ಟಿ, ಪೆರಿಯಪೆರುಮಾಳ ಸೆಟ್ಟಿ ಮೊದಲಾದವರ ಪಾತ್ರವನ್ನು ಈ ಹಿನ್ನೆಲೆಯಿಂದ ಗುರುತಿಸಬಹುದು. ಈ ಗುರುತಿಸುವಿಕೆ ಯಲ್ಲಿಯೇ ಈ ವರ್ತಕರ ಧಾರ್ಮಿಕವಾದ ಕೊಡುಗೆಗಳನ್ನು ನೀಡಿರುವುದನ್ನು ಗಮನಿಸಬೇಕಾಗುತ್ತದೆ. ಇದರಿಂದ ಅವರು ಸ್ಥಳೀಯವಾಗಿ ಆರ್ಜಿಸಿಕೊಂಡಿದ್ದ ಧಾರ್ಮಿಕವೂ ಮತ್ತು ಸಾಮಾಜಿಕವೂ ಆದ ಘನವಾದ ಸ್ಥಾನಮಾನಗಳನ್ನು ಅರಿಯಬಹುದು.

**ಇರುಗಿಸೆಟ್ಟಿ :** ಈತ ಸಿಂಗಯದಂಡನಾಯಕನ ಹಿರಿಯ ಮಗ. ಕ್ರಿ.ಶ. 1319ರ ಕೋಲಾರದ ಶಾಸನವು[103] ಇರುಗಿಸೆಟ್ಟಿಯನ್ನು ವಡ್ಡವ್ಯವಹಾರಿ, ಉಭಯ ನಾನಾದೇಸಿಯರ ಮುಖ್ಯಸ್ಥ, ಕೊಲ್ಲಿಯ ಅಧಿಪತಿ, ಕೋಳಾಲನಾಡಿನ ನಾಡಪ್ರಭು ಎಂಬಿತ್ಯಾದಿಯಾಗಿ ಕೀರ್ತಿಸಿದೆ. ಕ್ರಿ.ಶ. 1346ರ ಕೋಲಾರದ ಶಾಸನದ ಪ್ರಕಾರ[104] ಮಹಾಮಂಡಲೇಶ್ವರನಾದ ವೀರಬಲ್ಲಾಳರಾಯನ ಮಂತ್ರಿ ಮಲ್ಲರಸನು ಕೋಳಾಲ ನಾಡಪ್ರಭುವಾದ ಈ ಇರುಗಿಸೆಟ್ಟಿಗೆ ನುಕ್ಕನಹಳ್ಳಿಯನ್ನು ಧಾರಾಪೂರ್ವಕವಾಗಿ ಕೊಡುಗೆಯಿತ್ತನು. ಕ್ರಿ.ಶ. 1404ರ ಕೊತ್ತನೂರಿನ ಶಾಸನವು[105]ಈತನು ವೀರಭದ್ರದೇಗುಲವನ್ನು ಕೊತ್ತನೂರಿನಲ್ಲಿ ನಿರ್ಮಿಸಿ

ವೀರಭದ್ರದೇವರ ಅಮೃತಪಡಿ ನೈವೇದ್ಯ ಇತರೆ ಪೂಜಾಕೈಂಕರ್ಯಗಳಿಗೆಂದು ಭೂದಾನಗಳನ್ನು ನೀಡಿದುದನ್ನು ತಿಳಿಸುತ್ತದೆ. ಕೋಲಾರದಲ್ಲಿಯೇ ದೊರೆತ ಕ್ರಿ.ಶ. 1379, 1384, 1390 ಈ ಕಾಲದ ಮೂರು ಶಾಸನಗಳಲ್ಲಿ[106] ಇರುಗಿಸೆಟ್ಟಿಯ ಕೋಳಾಲ ನಾಡಿನ ಪ್ರಾಬಲ್ಯವನ್ನು ಗಳಿಸಿರುವುದನ್ನು ಸೂಕ್ಷ್ಮವಾಗಿ ಅರಿಯಬಹುದು.

**ಪೆಮ್ಮಿಸೆಟ್ಟಿ:** ಈತ ಸಿಂಗಯದಂಡನಾಯಕನ ಕಿರಿಯ ಮಗ. ಕ್ರಿ.ಶ. 1330ರ ಕೋಲಾರದ ಶಾಸನದಲ್ಲಿ[107] ಪೆಮ್ಮಿಸೆಟ್ಟಿಯು ಕೆಲವು ಶೈವಬ್ರಾಹ್ಮಣರಿಗೆ ಭೂದಾನಗಳನ್ನು ನೀಡಿದುದು ಉಲ್ಲೇಖಗೊಂಡಿದೆ. ಕ್ರಿ.ಶ. 1330ರ ಕೋಲಾರದ ಮತ್ತೊಂದು ಶಾಸನವು[108] ಪೆಮ್ಮಿಸೆಟ್ಟಿಯನ್ನು ಮಹಾವಡ್ಡವ್ಯವಹಾರಿ, ಉಭಯನಾನಾದೇಸಿಗಣದ ಮುಖ್ಯಸ್ಥ ಎಂಬುದಾಗಿ ಕರೆದಿದೆ. ಅಲ್ಲದೆ ಈತ ತನ್ನ ಅಣ್ಣ ಇರುಗಿಸೆಟ್ಟಿಯು ಶಿವೈಕ್ಯನಾಗಲು ಅವನ ಹೆಸರಿನಲ್ಲಿ ಇರುಗಸಮುದ್ರ ಎಂಬ ಕೆರೆಯನ್ನು ಮತ್ತು ಇರುಗೇಶ್ವರ ಎಂಬ ಶಿವದೇಗುಲವನ್ನು ನಿರ್ಮಿಸಿ, ಇರುಗೇಶ್ವರ ದೇವರ ಆರಾಧನೆಗಾಗಿ ಕೆಲವು ಭೂದಾನಗಳನ್ನು ನೀಡಿದುದನ್ನು ತಿಳಿಸುತ್ತದೆ.[109]

**ಪೆರಿಯ ಪೆರುಮಾಳ ಸೆಟ್ಟಿ:** ಪೆಮ್ಮಿಸೆಟ್ಟಿಗೆ ಪೆರಿಯ ಪೆರಮಾಳ ಸೆಟ್ಟಿ ಎಂಬ ಮಗನಿದ್ದನು. ಕ್ರಿ.ಶ. 1379ರ ನೆಲವಾಗಲಹಳ್ಳಿ ಶಾಸನದ ಪ್ರಕಾರ[110] ಪೆರಿಯಪೆರುಮಾಳಸೆಟ್ಟಿಯು ವೈಶ್ಯ-ನಗರ್ತನಾಗಿದ್ದು ನೆಗವಾಗಲ ಹಳ್ಳಿಯಲ್ಲಿಯೇ ದೊಡ್ಡಕೆರೆಯನ್ನು ನಿರ್ಮಿಸಿದ್ದನು. ಈಕೆರೆಯ ಸಮೀಪದ ಭೂಮಿಯನ್ನು ಅಕರವಾಗಿ ಅಂಕಯನಾಯಕರೇ ಮೊದಲಾದವರು ನಂದಗುಡಿಯ ನಾರಾಯಣ ದೇಗುಲಕ್ಕೆ ನೀಡಿದರು. ಕ್ರಿ.ಶ. 1394ರ ಕೋಲಾರದ ಶಾಸನವು[111] ಪೆರಿಯಪೆರುಮಾಳ ಸೆಟ್ಟಿಯು ಕೈವಾರನಾಡಿನ ಅಧಿಪ ನಾಗಣ್ಣ ಒಡೆಯರ ಮನೆಮಗನಾದ ಬ್ರಹ್ಮರಸರ ಜೊತೆ ಸೀತಿ ಭೈರವದೇವರಿಗೆ ನೀಡಿದ ದಾನವನ್ನು ತಿಳಿಸುತ್ತದೆ. ಕ್ರಿ.ಶ. 1397ರ ಮುಳಬಾಗಿಲಿನ ಶಾಸನವು[112] ಪೆರಿಯಪೆರುಮಾಳ ಸೆಟ್ಟಿಯು ವೈಶ್ಯ-ನಗರ್ತ ನಾಗಿದ್ದುದನ್ನು ತಿಳಿಸುತ್ತದೆ.

ಮೇಲ್ಕಂಡ ಅಂಶಗಳ ಅವಲೋಕನದಿಂದ ಸಿಂಗಯದಂಡನಾಯಕನ ಮಕ್ಕಳಾದ ಇರುಗಿಸೆಟ್ಟಿ ಮತ್ತು ಪೆಮ್ಮಿಸೆಟ್ಟಿಯರು ಕೊಳಾಲನಾಡಿನಲ್ಲಿ ನಾಡಪ್ರಭುಗಳಾಗಿ ಪ್ರಾಬಲ್ಯ ಗಳಿಸಿದ್ದರು. ಅವರ ನಂತರದಲ್ಲಿ ಅವರ ಮಕ್ಕಳೇ ಈ ಭಾಗದಲ್ಲಿ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕಾಲದಲ್ಲಿಯೂ ನಾಡಪ್ರಭುಗಳಾಗಿ ಪ್ರವರ್ಧಮಾನಕ್ಕೆ ಬಂದಿರಬಹುದೆಂದು ತೋರುತ್ತದೆ.

**ಸಿಂಗಿಸೆಟ್ಟಿ:** ಕಾಮೆಯದಂಡನಾಯಕನು ಪ್ರಧಾನಿಯಾಗಿದ್ದ ಕಾಲವದು. ಮಹಾವಡ್ಡವ್ಯವಹಾರಿ, ಉಭಯನಾನಾದೇಶಿವರ್ಗಮುಖ್ಯ, ಹೊಯ್ಸಳವೀರಬಲ್ಲಾಳನ ತ್ರೈಲೋಕ್ಯಪಟ್ಟಣಸ್ವಾಮಿ ಕಲಿಸೆಟ್ಟಿಯ ಮಗ ಸಿಂಗೆಸೆಟ್ಟಿಯು ವೀರಬಲ್ಲಾಳನನ್ನು ಸಂದರ್ಶಿಸಿದಾಗ ವೀರಬಲ್ಲಾಳನು ಅವನ ಮೇಲೆ ತುಂಬು ಪ್ರೀತಿಯಿಟ್ಟಿದ್ದರ ಕಾರಣವಾಗಿ ಸಂಪಿಗೆಯ ಸ್ಥಳವನ್ನು ಕೊಡುಗೆಯಾಗಿ ನೀಡಿದನು. ಈ ಸಂಪಿಗೆಯ ಸ್ಥಳದ ಅಧಿಕಾರವು ಕಾಮೆಯ ದಂಡನಾಯಕನದ್ದಾಗಿತ್ತು. ಸಂಪಿಗೆಯ ಸ್ಥಳ ಚತುಸ್ಸೀಮೆಯೊಳಗೆ ಸೇರುವ ಎಲ್ಲ

ಹಳ್ಳಿಗಳನ್ನು ಮತ್ತು ಅದರಲ್ಲಿನ ಕಟ್ಟೆ ಕಿರುಕಟ್ಟೆಗಳನ್ನು ತಪ್ಪೆ ತೌಡಿ ಕಿರುಕುಳ ಸ್ಥಾನಮಾನ್ಯ ಮೊದಲಾದವುಗಳನ್ನು ಅರಸನ ಕೈಯಿಂದ ಕಾಮೆಯದಂಡನಾಯಕನ ಮುಖಾಂತರವಾಗಿ ಸಿಂಗೆಸೆಟ್ಟಿಗೆ ಅರಸನು ಆಚಂದ್ರಾರ್ಕವಾಗಿ ಸರ್ವ್ವಮಾನ್ಯವಾಗಿ ಕೊಡುಗೆಯಿತ್ತನು. ಈ ಮಾಹಿತಿಗಳನ್ನು ಎಚ್ಚರಿಕೆಯಿಂದ ಗಮನಿಸಿದಾಗ ಬಹಳ ಪ್ರಮುಖವಾದ ಆರ್ಥಿಕ ಪ್ರಕ್ರಿಯೆಗಳು ಈ ದಂಡನಾಯಕನ ಮುಖಾಂತರವಾಗಿ ನಡೆಯುತ್ತಿತ್ತು ಎಂಬುದು ತಿಳಿಯುತ್ತದೆ.[113]

**ಮಹಾಮಂಡಳೇಶ್ವರ ದೇಚಿದೇವರಸ:** ಮಹಾಮಂಡಳೇಶ್ವರ ದೇಚಿದೇವರಸನು ಸಮಸ್ತ ಉಭಯನಾನಾದೇಶಿಗಳು, ಮುಂಮುರಿದಂಡಗಳು, ಉಭಯ ನಾನಾದೇಶಿ ಹಲರು, ನಖರರು ಮುಂತಾದ 18 ಸಮಯದವರು ಎಲ್ಲರೊಡಗೂಡಿ ಶ್ರೀ ಗವರೇಶ್ವರ ದೇವರ ಶ್ರೀ ಕಾರ್ಯಕ್ಕೆ, ಅಂಗರಂಗಭೋಗಗಳಿಗೆ, ಪಂಚಾಮೃತ ಅಮೃತಪಡಿ ನೈವೇದ್ಯಗಳಿಗೆ, ಶೋಡಷೋಪಚಾರಕ್ಕೆ, ಖಂಡಸ್ಫುಟಿತ ಜೀರ್ಣೋದ್ಧಾರಗಳಿಗೆ ಎಂದು ಹಲವು ಬಗೆಯ ಪದಾರ್ಥಗಳ ಹೇಜೆನಲ್ಲಿ ಕೆಲವು ಪಣಗಳನ್ನು ದಾನವಿತ್ತರು.[114] ಮಹಾಮಂಡಳೇಶ್ವರ ತಿಪ್ಪರ್ಸರು ಮತ್ತು ಭೈರವದೇವರಸರು ಮಹಾವಡ್ಡವ್ಯವಹಾರಿ ಉಭಯ ನಾನಾದೇಸಿಗಳ ಮುಖ್ಯರಾದ ಕರಿಯ ಮಜೆಯ ಮಸಣಸೆಟ್ಟಿ ಎಂಬುವವನಿಗೆ ಕೊಡುಗೆಯಾಗಿ ಹಾಲುವಿಡಿಯ ಭೂಮಿಯನ್ನು ದತ್ತಿಯಾಗಿ ನೀಡಿದನು[115]

**ನೊಳಂಬ ಸೆಟ್ಟಿ:** ವಿಷ್ಣುವರ್ಧನನು ಗಂಗವಾಡಿ 96000ವನ್ನು ಆಳುತ್ತಿದ್ದ ಸಂದರ್ಭದಲ್ಲಿ ಅವನ ಅಧೀನವರ್ತಿಯಾದ ಹೊಯ್ಸಳಸೆಟ್ಟಿ ಎನಿಸಿದ ನೊಳಂಬಸೆಟ್ಟಿಯು ದೋರಸಮುದ್ರದ ಪಟ್ಟಣಸ್ವಾಮಿಯಾಗಿದ್ದನು. ನೊಳಂಬಸೆಟ್ಟಿಗೆ ಚವುಂಡಾಡಿ ಎಂಬ ಇನ್ನೊಂದು ಹೆಸರಿತ್ತು. ನೊಳಂಬಸೆಟ್ಟಿಯ ಪತ್ನಿ ದೇಮಿಕಬ್ಬೆಯು ಕತ್ತರಿಘಟ್ಟದಲ್ಲಿ ತ್ರಿಕೂಟಜಿನಾಲಯವನ್ನು ಕಟ್ಟಿಸಿ ಅಲ್ಲಿನ ಪೂಜಾದಿಗಳಿಗೆ ಅರ್ಹನಹಳ್ಳಿ ಎಂಬ ಗ್ರಾಮವನ್ನು ಮತ್ತು ಕೆಲವು ಭೂಮಿ, ಮನೆ ಇತ್ಯಾದಿಗಳನ್ನು ಕುಕ್ಕುಟಾಸನ ಮಲಧಾರಿದೇವರ ಶಿಷ್ಯರಾದ ಶುಭಚಂದ್ರಸಿದ್ಧಾಂತ ದೇವರಿಗೆ ದಾನವಾಗಿ ನೀಡಿದನು.

**ಹೊಯ್ಸಳಸೆಟ್ಟಿ:** ಹೊಯ್ಸಳಸೆಟ್ಟಿಯು ಗಣ್ಡನಾರಾಯಣಸೆಟ್ಟಿ ಮತ್ತು ಮಾರವ್ವೆ ದಂಪತಿಗಳ ಮಗ. ಇದುವರೆಗೂ ದೊರೆತಿರುವ ಶಾಸನಗಳಲ್ಲಿ ಈತನು ಹೊಯ್ಸಳಸೆಟ್ಟಿ ಎಂದೇ ಉಲ್ಲೇಖಿತನಾಗಿದ್ದಾನೆ. ಬಹುಶಃ ಈತನ ನಿಜನಾಮಧೇಯ ಬೇರೆಯಾಗಿದ್ದಿರಬೇಕು. ಕಾಲಾನಂತರದಲ್ಲಿ ಈತನು ಪಡೆದಿದ್ದ ಹೊಯ್ಸಳಸೆಟ್ಟಿ ಎಂಬ ಪದವಿಯೇ ರೂಢಿಗೆ ಬಂದು ಅವನ ನಿಜನಾಮದಂತೆ ಬಳಕೆಗೊಂಡಿದೆ ಎನಿಸುತ್ತದೆ. ಹೊಯ್ಸಳಸೆಟ್ಟಿ ವಟ್ಟವನ್ನು ತನಗೆ ಶೋಭಾಯಮಾನವೆಂಬಂತೆ ಪಡೆದಿದ್ದನು. ಹೊಯ್ಸಳಸೆಟ್ಟಿಯನ್ನು ಮಹಾಪ್ರಭು "ಅನಂತಬಣಂಜಧರ್ಮ ಪ್ರತಿಪಾಳ", "ದೇಸಿಮುಖ", "ದೇಸಿಯಾಭರಣ", "ಉಭಯದೇಸಿ ಸಮುದ್ಧರಣ"[116] ಎಂದು ತಿಳಿಸಿರುವುದನ್ನು ಅವಲೋಕಿಸಿದರೆ ಈತನು ಅಗ್ರಹಾರ ಬಾಚಹಳ್ಳಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅರ್ಥವ್ಯವಹಾರದಲ್ಲಿ ವರ್ತಕಸಮುದಾಯದಲ್ಲಿ ನೈಪುಣ್ಯಶಾಲಿ ಮುಖ್ಯವ್ಯಕ್ತಿಯಾಗಿ ಇದ್ದಿರಬಹುದೆಂದು ಗ್ರಹಿಸಬಹುದು. ಇದೇ

ಸಂದರ್ಭದಲ್ಲಿ ಮತ್ತೊಂದು ಶಾಸನೋಕ್ತ ಸಾಲನ್ನು ಲಕ್ಷಿಸಬಹುದು "ಹೊಯ್ಸಳ ಸೆಟ್ಟಿಯ ಔದಾರ್ಯವೆಂಬ ಸಿಂಹವು ಎಲ್ಲ  ಕಡೆಯಿಂದಲೂ ಪ್ರಚೋದಿಸುತ್ತಾ ಸತ್ಕವಿಗಳ ಬಡತನವೆಂಬ ಆನೆಯ ಹಿಂಡಿನ ಮೇಲೆ ಮಹಾಕ್ರೋಧದಿಂದ ದಾಳಿ ಮಾಡಿತು"[117] ಅವನು ಹೊಯ್ಸಳ ಸಾಮ್ರಾಜ್ಯದ ಒಂದುಭಾಗವಾದ ಕಬ್ಬಹುನಾಡಿನಲ್ಲಿ ತನ್ನ ಸಾಮಂತಿಕೆಯಲ್ಲಿ ಕವಿಗಳಿಗೂ ವಿದ್ವಾಂಸರಿಗೂ ಆಶ್ರಯನೀಡಿದುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಈ ಮೂಲಕ ಹೊಯ್ಸಳ ಸೆಟ್ಟಿಯ ಬಹುಮುಖ ವ್ಯಕ್ತಿತ್ವವು ಪರಿಚಯವಾಗುತ್ತದೆ.

ಈ ಉದಾಹರಣೆಗಳನ್ನು ಅವಲೋಕಿಸಿದರೆ, ಒಂದು ಕಡೆ ಈ ಮಹಾಮಂಡಳೇಶ್ವರರು ವರ್ತಕರಿಗೆ ನೀಡಿದ್ದ ಆರ್ಥಿಕ ಸ್ವಾತಂತ್ರ್ಯವನ್ನು ಗಮನಿಸಬಹುದು; ಮತ್ತೊಂದು ಕಡೆ ವರ್ತಕ ವರ್ಗವು ಸ್ಥಳೀಯವಾಗಿ ಹೊಂದಿದ್ದ ಆರ್ಥಿಕ ಪ್ರಾಬಲ್ಯವನ್ನು ಗುರುತಿಸಬಹುದು; ಇನ್ನೊಂದು ಕಡೆ ಈ ವರ್ತಕರು ನೀಡಿದ ದಾನಸಂಬಂಧಿ ಚಟುವಟಿಕೆಗಳಿಂದ ಅವರ ಶ್ರೀಮಂತಿಕೆಯನ್ನು ಮತ್ತು ಅವರ ಬುದ್ಧಿಬಲವನ್ನು ತಿಳಿಯಬಹುದು. ಮಹಾಮಂಡಳೇಶ್ವರರು ಸಾಮಾನ್ಯವಾಗಿದ್ದ ವ್ಯಾಪಾರಿಗಳನ್ನು ರಾಜಮಾನ್ಯ ವ್ಯಾಪಾರಿಗಳನ್ನಾಗಿ ಮಾಡಿ ಅವರಿಗೆ ಗುರುತರವಾದ ಜವಾಬ್ದಾರಿಗಳನ್ನು ನೀಡಿದ್ದರು. ಇವರ ಬೆಂಬಲದಿಂದ ವ್ಯಾಪಾರಿಗಳೆಲ್ಲಾ ಒಳ್ಳೆಯ ಸಂಪತ್ತನ್ನು ಸಂಪಾದಿಸಿದಾಗಲೂ ಮಹಾಮಂಡಳೇಶ್ವರರ ಪ್ರಚೋದನೆಯಿಂದ ಅನೇಕ ದಾನ-ಧರ್ಮ ಕಾರ್ಯಗಳನ್ನು ಮಾಡಿ ಅವರು ಹೆಸರುವಾಸಿಯಾದರು.

**ವ್ಯವಹಾರಗಳು ಮತ್ತು ಮಹಿಳೆ :** ಭೂ ವ್ಯವಹಾರವಿರಲಿ, ಬಡ್ಡಿ ವ್ಯವಹಾರವಿರಲಿ ಅದನ್ನು ಹೆಣ್ಣು ಸ್ವತಂತ್ರವಾಗಿ ನಡೆಸಿರುವುದು ಅನೇಕ ಶಾಸನಗಳಲ್ಲಿ ವ್ಯಕ್ತವಾಗಿದೆ.  ಇಲ್ಲೆಲ್ಲ ಆಕೆಯ ವ್ಯವಹಾರಜ್ಞಾನ ಎದ್ದು ಕಾಣುತ್ತದೆ.  ಉದಾಹರಣೆಗೆ, ಮಹಾವಡ್ಡ ವ್ಯವಹಾರಿಯಾದ ಕಂಡನಂಬಿಸೆಟ್ಟಿಯು ಕುಂಜೇಶ್ವರ ದೇವಾಲಯವನ್ನು ನಿರ್ಮಿಸುತ್ತಾನೆ.  ಮುತ್ತನ ಹೊಸವೂರಿ ನಲ್ಲಿ ಈ ದೇವಾಲಯ ನಿರ್ಮಾಣಕ್ಕೆ ಬೇಕಾಗಿದ್ದ ಜಾಗವನ್ನು ಇಬ್ಬರು ಮನೆಯವರು ಸೇರಿ ಕಂಡನಂಬಿಸೆಟ್ಟಿಗೆ ನೀಡಿದರು.  ಈ ಇಬ್ಬರು ಯಾರೆಂದರೆ ಮುತ್ತನ ಹೊಸವೂರ ಗುಬ್ಬಿಯ ಕಲ್ಲಯ್ಯನ ಮಗ ಪೋತಗೌಡ,ಇನ್ನೊಬ್ಬ ಮಗ ಸಿಂಗಯ್ಯ ಹಾಗೂ ಸಿಂಗಯ್ಯನ ಮದವಳಿಗೆ ಚವುಡಾದೇವಿ.  ಇವರೀರ್ವರ ಮಗ ಬಲ್ಲಯ್ಯ.  ಇವರು ಕಂಡನಂಬಿ ಸೆಟ್ಟಿಯಿಂದ ಪತ್ರ ಸಾಲವಾಗಿ ಪಡೆದ ಮೊತ್ತ 400 ಹೊಂಗೆ. ಇನ್ನೊಬ್ಬರು ಚಿಕ್ಕ ಮುತ್ತನ ಹೊಸವೂರ ಗೋಪಗೌಡ, ಅವನ ಮದವಳಿಗೆ ನಾಚಿಯಕ್ಕ.  ಇವರು ಪಡೆದ ಪತ್ರ ಸಾಲದ ಮೊತ್ತ 1352 ಗದ್ಯಾಣ, 2 ಹಣ.  ಅಂದರೆ ಭೂವ್ಯವಹಾರಗಳಲ್ಲಿ ಮಹಿಳೆಯರೂ ಇರುತ್ತಿದ್ದರು ಎಂದಾಯಿತು. ಇವರು ಸಾಲ ತೀರಿಸಲು ವಿಫಲರಾದಾಗ ಈ ಇಬ್ಬರೂ ಕಂಡನಂಬಿಸೆಟ್ಟಿಯನ್ನು ಒಡಂಬಡಿಸಿ ಸಾಲದ ಬದಲಿಗೆ ತಮ್ಮ ಭೂಮಿಯನ್ನು ಕೊಟ್ಟು ತಮ್ಮ ಋಣವನ್ನು ತೀರಿಸಿಕೊಂಡರು.[118]

ಬಲ್ಲಹೆರಳ ಗಾವುಂಡನ ಪತ್ನಿಯರಾದ ದೇಕಿಗಾವುಂಡಿ ಮತ್ತು ಸುಗ್ಗಿಗಾವುಂಡಿಯರು ಸೇರಿ 2 ಗದ್ಯಾಣವನ್ನು ಬಡ್ಡಿಗೆ ಬಿಟ್ಟರು.  ಇದರಿಂದ ಬರುವ ಬಡ್ಡಿಯಿಂದ ಮೂಲಸ್ಥಾನದೇವರ ಮಠದಲ್ಲಿ ವರ್ಷಕ್ಕೊಮ್ಮೆ ಅಲ್ಲಿನ ತಪೋಧನರಿಗೆ ಊಟದ ಏರ್ಪಾಡನ್ನು ಮಾಡಿದರು.[119]

ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯವಂತೂ ಆರ್ಥಿಕ ಚಟುವಟಿಕೆಗಳ ಬಹಳ ದೊಡ್ಡ ಕೇಂದ್ರವಾಗಿತ್ತು. ಒಂದು ಮುಖ್ಯವಾದ ವಿಷಯದ ಕಡೆ ಮಾತ್ರ ಇಲ್ಲಿ ಪ್ರಸ್ತಾಪಿಸಲು ಬಯಸುತ್ತೇನೆ. 12ನೆಯ ಶತಮಾನದಲ್ಲಿ ಈ ದೇವಾಲಯದ ಆದಾಯವು ವಿಪರೀತವಿತ್ತು. ಅನೇಕರು ಈ ದೇಗುಲಕ್ಕೆ ವಿಪರೀತ ದಾನ–ದತ್ತಿಗಳನ್ನು ನೀಡಿದ್ದಾರೆ. ಈ ಸಂಸ್ಥೆಯು ಅಲ್ಲಿಂದ ಸಾಲ ನೀಡುವ ಕಾರ್ಯಕ್ರಮವನ್ನು ಹಾಕಿಕೊಂಡಿತು. ಇದೊಂದು ಬ್ಯಾಂಕಿನಂತೆ ಕಾರ್ಯ ನಿರ್ವಹಿಸುತ್ತಿತ್ತು. ಅನೇಕರು ಸೇರಿ ಒಟ್ಟು 35 ಗದ್ಯಾಣವನ್ನು ಸಾಲವಾಗಿ ಪಡೆದರು. ಇದಕ್ಕೆ ಅವರು ಪಾವತಿಸಬೇಕಾಗಿದ್ದ ಬಡ್ಡಿಯ ದರವೆಂದರೆ 1 ಹೊನ್ನಿಗೆ 2 ಹಣದ ಹೊಂಗೆಯ ಲೆಕ್ಕಾಚಾರ. ಕೊಡದಿದ್ದರೆ ಹೊಯ್ಸಳೇಶ್ವರನ ಆಣೆಯೆಂದು ತಿಳಿಸಲಾಗಿದೆ. ಇಲ್ಲಿ ಚಂದಬೋವಿತಿಯು 2 ಗದ್ಯಾಣ ಹಾಗೂ ಕಾಚಬೋವಿತಿ 2 ಗದ್ಯಾಣ ಸಾಲ ಪಡೆದ ಸ್ತ್ರೀಯರು. [120] ಇದು ನಿಜಕ್ಕೂ ದೊಡ್ಡದಾದ ಬೆಲೆಯೇ.

ಹರಿಹರದ ಶಾಸನಗಳೂ ಸಹ ಇಂತಹ ವ್ಯವಹಾರಗಳನ್ನು ಉಲ್ಲೇಖಿಸುತ್ತದೆ. ಅಣ್ಣಮವೆಗ್ಗಡೆಯ ಮಗಳಾದ ಹೊನ್ನಿಯವ್ವೆಯು ನಾಲ್ಕು ಗದ್ಯಾಣಗಳನ್ನು ಹರಿಹರೇಶ್ವರ ದೇವಾಲಯದಲ್ಲಿ ಮೂಲಧನವಾಗಿ ಇಟ್ಟಳು.[121] ಇದರಲ್ಲಿ ಒಂದು ಗದ್ಯಾಣದಿಂದ ಬರುವ ಬಡ್ಡಿಯಿಂದ ವನಮಾಲೆಯನ್ನು ಮೂರು ಗದ್ಯಾಣದಿಂದ ಬರುವ ಬಡ್ಡಿಯಿಂದ ದೇಗುಲದ ನಂದಾದೀಪವು ಉರಿಯುವಂತೆಯೂ ವ್ಯವಸ್ಥೆ ಮಾಡಿದ್ದಾಳೆ. ಇದೇ ಅಣ್ಣಮವೆಗ್ಗಡೆಯ ಇನ್ನೊಬ್ಬಳು ಮಗಳು ಸಿರಿಯವ್ವೆ ಸಹ ಹರಿಹರ ದೇವಾಲಯದಲ್ಲಿ 4 ಗದ್ಯಾಣಗಳನ್ನು ಕೊಟ್ಟು 2 ಗದ್ಯಾಣದಿಂದ ಬರುವ ಬಡ್ಡಿಯಿಂದ ನಂದಾದೀವಿಗೆಯನ್ನು, ಒಂದು ಗದ್ಯಾಣದಿಂದ ಬರುವ ಬಡ್ಡಿಯಿಂದ ಬಡಿಗ ಚೈತ್ರ ಇನ್ನೊಂದು ಗದ್ಯಾಣದಿಂದ ಬರುವ ಬಡ್ಡಿಯಿಂದ ಮಾಲೆಗಾರರಿಗೆ ವನಮಾಲೆಯನ್ನು ಕಟ್ಟಲು ಕೊಡುವ ವ್ಯವಸ್ಥೆಯನ್ನು ಮಾಡಿದಳು.[122]

ಸೌವಿಲ್ಲಕುಲದ ಸಿರಿದೇವಿಯಕ್ಕ ಧರ್ಮಸಂತೆಯನ್ನು ಏರ್ಪಡಿಸಿದಾಗ ಅದರಲ್ಲಿ ಮೂವತ್ತಾರು ಬೀಡಿನ ಗಾವುಂಡರು, ಸೆಟ್ಟಿಗುತ್ತ, ಮುಮ್ಮರಿದಂಡ, ಬೀರವಣಿಗ, ಗವರೆ, ಗಾತ್ರಿಗ, ಸುಂಕಿಗರು ಈ ಧರ್ಮಸಂತೆಯಲ್ಲಿ ಸಹಕರಿಸಬೇಕೆಂದು ಈ ಸಂತೆಯಲ್ಲಿ ಆನೆ, ಕುದುರೆ, ಮಾಣಿಕ ಮುಂತಾದವುಗಳ ವ್ಯಾಪಾರ ನಡೆಸಬೇಕೆಂಬ ಸೂಚನೆಯೂ ಇದೆ. ಇದರ ಜೊತೆಗೆ ಬರೀ ಧಾನ್ಯಗಳನ್ನು ಮಾರಲಾಗುತ್ತಿತ್ತು.[123]

ಇದೇ ರೀತಿ ವೀರಬಲ್ಲಾಳನ ರಾಣಿಯಾದ ಅಭಿನವ ಕೇತಲದೇವಿಯು ಕುಂದವಾಡದಲ್ಲಿ ಸಂತೆಯೊಂದನ್ನು ನೆರವೇರಿಸಿದಳು. ಇವಳು ಮಾಡಿಸಿದ ಸಂತೆ ಬುಧವಾರದ ಸಂತೆಯಾಗಿದ್ದು ಇದನ್ನು ನೆರವೇರಿಸಲು ಈಕೆ ಮುಮ್ಮಡಿ ದಂಡಗಳ ಸಹಾಯವನ್ನು ಪಡೆದುಕೊಂಡಿದ್ದಾಳೆ.[124] ಹಳೇಬೀಡಿನ ಶಾಸನವೊಂದು ಹಲವರು ಸೇರಿ ಛಾತ್ರದ ಭಿಕ್ಷೆಗೆಂದು ಎಂದರೆ ವಿದ್ಯಾರ್ಥಿಗಳಿಗಾಗಿ ನಡೆಸುವ ವಿದ್ಯಾರ್ಥಿನಿಲಯಕ್ಕೆ ಅನೇಕರು ಸೇರಿ ದತ್ತಿಯೊಂದನ್ನು ನೀಡಿದ್ದಾರೆ. ಈ ದತ್ತಿಯಲ್ಲಿ ಸೇರಿರುವ

ಮಹಿಳೆಯರೆಂದರೆ 3 ಗದ್ಯಾಣ ಕೊಟ್ಟ ಆನೆಯ ಮಾಳೌವೆ, 7 ಗದ್ಯಾಣ ಕೊಟ್ಟ ಕನಗೆರಿಗೊಟ್ಟಿಯ ಚಾವಾಲು ಮಾಣಿಕಾದೇವಿ. ಈ ಹಣದಿಂದ ವರ್ಷಕ್ಕೆ 2 ಪಣ ಬಡ್ಡಿ ಬರುತ್ತಿತ್ತು.[125]

ದೇವಳಿಗೆ ನಾಡಿನಲ್ಲಿದ್ದ ವಿಷ್ಣುವರ್ಧನ ಕೇಶವಪುರ ಅಥವಾ ಮೊರಲೆ ಅಗ್ರಹಾರದ ಶ್ರೀಕಲಿದೇವರಿಗೆ ಮುಗಳಿಕೆರೆಯಲ್ಲಿ ದಾನ ನೀಡುವಾಗ ಈ ಹಿಂದೆ ಈ ದೇವಾಲಯಕ್ಕೆ ರಾಯಣ ದಂಡನಾಥನು ಭೂದಾನವಾಗಿ ನೀಡಿದ್ದ ಭೂಮಿ ಪರಭಾರೆಯಾಗಿದ್ದು ಕನಕವ್ವೆಯ ಗಮನಕ್ಕೆ ಬಂದಾಗ ಆಕೆ ಅದನ್ನು ಉಪಾಯವಾಗಿ ನಿರ್ವಹಿಸಿ ಆ ಭೂಮಿಯನ್ನು ತಾನೇ ಹಣತೆತ್ತು ಕೊಂಡುಕೊಂಡು ಮತ್ತೆ ದೇವಾಲಯಕ್ಕೆ ದಾನವಾಗಿ ಬಿಟ್ಟಿದ್ದಾಳೆ.[126] ಹಳೇಬೀಡಿನಲ್ಲಿ 13ನೆಯ ಶತಮಾನದಲ್ಲಿ ಮೂಲಸಂಘ ಬಲಾತ್ಕಾರಗಣದ ತ್ರಿಕೂಟರತ್ನತ್ರಯದ ಶಾಂತಿನಾಥದೇವರ ದೇವಾಲಯವನ್ನು ಸ್ಥಾಪಿಸಲಾಯಿತು. ಈ ದೇವರ ಪ್ರತಿಷ್ಠಾಕಾಲದಲ್ಲಿ ಅನಂತನೋಂಪಿಯ ಉದ್ಯಾನಕ್ಕೆ ಈ ದೇಗುಲದ ಬ್ಯಾಂಕ್ ಒಂದು ಅಕ್ಷಯ ಭಂಡಾರವನ್ನು (ಇದೊಂದು ಬ್ಯಾಂಕ್) ಆರಂಭಿಸಿತು. ಆ ಕಾಲದ ಅನೇಕ ಪ್ರಮುಖರಲ್ಲಿ ಇದಕ್ಕಾಗಿ ಇಡುಗಂಟನ್ನು (ಫಿಕ್ಸ್ಡ್ ಡಿಪಾಸಿಟ್) ಇಟ್ಟರು. ಇದರ ಬಡ್ಡಿ ವ್ಯವಹಾರದಲ್ಲಿ ಈ ದೇಗುಲದ ನಿರ್ವಹಣೆ ಸಾಗಲಿ ಎಂಬುದು ಇದರ ಆಶಯವಾಗಿತ್ತು. ಇದರಲ್ಲಿ ಹಣ ತೊಡಗಿಸಿದ ಹೆಂಗಸರ ಸಂಖ್ಯೆಯೇನೂ ಕಡಿಮೆಯಿಲ್ಲ. ಮುನಿಚಂದ್ರದೇವರ ಸಧರ್ಮಿಯಾದ ಗುಣಮತಿ ಅವ್ವೆಯು ಭಾರೀ ಹಣವಾದ 15 ಗದ್ಯಾಣವನ್ನು ತೊಡಗಿಸಿದರ ಪರಿಣಾಮವಾಗಿ ಉಳಿದ ಹೆಂಗಸರೂ ತಮ್ಮ ಕೈಗೆಟುಕುವ ಮೊತ್ತವನ್ನು ಈ ಅಕ್ಷಯ ಭಂಡಾರಕ್ಕೆ ನೀಡಿದ್ದಾರೆ. ಅವರುಗಳೆಂದರೆ ಶ್ರೀ ಗುರುಗಳ ಗುಡ್ಡನಾದ ದೇಮೆಯ್ಯನ ಮಗಳಾದ ಹಿರಿಯಕ್ಕ 4 ಗದ್ಯಾಣ, ಮಾಣಿಕ ಸಿರಿಯವ್ವೆ 1 ಗದ್ಯಾಣ, ಗುಣಮತಿ ಅವ್ವೆ, ಮರಿದೇವಿ ಅವ್ವೆಯರು ಸೇರಿ 1 ಗದ್ಯಾಣ, ಸೋವಣ್ಣನವರ ಸ್ತ್ರೀ ಕಾಮವ್ವೆ 1 ಗದ್ಯಾಣ, ಕಾಮವ್ವೆ 1 ಗದ್ಯಾಣ, ಸಮತಿಯ ಮಾರವ್ವೆ 1 ಗದ್ಯಾಣ, ಕೇತೆಯ ಸಾಹಣಿಯ ಹೆಂಡತಿ ಮತ್ತು ಸೇನುಬೇನ ಮಾರಯ್ಯನ ಹೆಂಡತಿಯರು ತಲಾ 1 ಗದ್ಯಾಣ ನೀಡಿದ್ದಾರೆ.[127]

ರಾಜಧಾನಿ ಅರಸಿಯಕೆರೆಯ ಚೆನ್ನಕೇಶವದೇವರ ನಿತ್ಯ ಸಂಧ್ಯಾದೀಪಕ್ಕೆಂದು ಪ್ರತಿನಿತ್ಯ 100 ದೀವಿಗೆ ನಡೆಸಲು ಸಕಲಭಕ್ತಜನರು ಸೇರಿ ಒಂದು ಪುದುವಟ್ಟನ್ನು ಸಂಗ್ರಹಿಸಿದರು. ಇದರಲ್ಲಿ ಹಣ ಹೂಡಿದ ಹೆಂಗಸರೆಂದರೆ ಗಂಗೆಯಾಡಿ ಈಕವ್ವೆ 1 ಗದ್ಯಾಣ, ಚವುಡವ್ವೆ 5 ಪಣ, ಕಟ್ಟೆಯನಾಯಕನ ಮದವಳಿಗೆ ಕೇತಯನಾಯಕಿತಿ 1 ಗದ್ಯಾಣ, ಹೊನ್ನವ್ವೆ 5 ಪಣ, ಮೈಲವೆ 5 ಪಣ. [128] ಹೊಯ್ಸಳೇಶ್ವರ ದೇವರ ಶಿವರಾತ್ರಿಯ ಧರ್ಮಕ್ಕೆಂದು ಮದಳೆಯ ಮೈಲಯ್ಯನ ಮಗಳು ಮಲ್ಲವ್ವೆಯು ದೇವರ ಮಾಲೆಗಾರನಾದ ದೇವಣ್ಣನ ಮಗನಾದ ಗುಡಿಗನಿಗೆ 1 ಗದ್ಯಾಣ 5 ಪಣವನ್ನು ಸಾಲವಾಗಿ ನೀಡಿದ್ದಳು. ಇದಕ್ಕೆ ಈತ ಬಹುಶ: (?) ತನ್ನ ನಾಯಕತನದ ವೋಲಗದ ಮೇಲೆ ತೆಗೆದುಕೊಂಡಿದ್ದನು. ಆದರೆ ಆತ ಸಾಲ ತೀರಿಸಿದಂತೆ ತೋರಲಿಲ್ಲ. ಆಗ ಆಕೆ ಅತಿ ಚಾಣಾಕ್ಷತನದಿಂದ ಇನ್ನು 5 ಪಣವನ್ನು ಆತನಿಗೆ ಹೆಚ್ಚುವರಿ ಸಾಲವಾಗಿ

ನೀಡಿ ಒಟ್ಟು 2 ಗದ್ಯಾಣಕ್ಕೆ ವರ್ಷಂಪ್ರತಿ 4 ಹಣದ ತರಹ ಬಡ್ಡಿಯನ್ನು ವಿಧಿಸುವಂತೆ ಆಣತಿಯನ್ನು ನೀಡಿದಳು.[129]

ಬೇಲೂರಿನ ಚೆನ್ನಕೇಶವ ದೇವರಿಗೆ ಹೂ ಸೇವೆಯನ್ನು ಸಲ್ಲಿಸಲೂ ಸಹ ಇಂತಹುದೇ ಒಂದು ದೊಡ್ಡ ಪುದುವಟ್ಟು ಇಡಲಾಯಿತು.[130] ಇದರಲ್ಲಿ ಮಹಾಪಸಾಯಿತ ಗೋಪಾಳದೇವಣ್ಣನವರ ಹೆಂಡತಿ ಮಾಯಿದೇವಿ ಅಕ್ಕ ಮೂರು ಗದ್ಯಾಣವನ್ನು ಬೀಜವೊನ್ನಾಗಿ (ಮೂಲಧನ=ಫಿಕ್ಸ್ಡ್ ಡಿಪಾಸಿಟ್) ಇಟ್ಟು, ಇದರಲ್ಲಿ ಬರುವ ಬಡ್ಡಿಯಿಂದ (ಶಾಸನದಲ್ಲಿ ತೋಡುಬಡ್ಡಿ ಎಂಬ ಪದವನ್ನು ಬಳಸಲಾಗಿದೆ) ಪ್ರತಿನಿತ್ಯ ಕೇಶವನಾಥ ದೇವರಿಗೆ 3 ವನಮಾಲೆಯನ್ನು ಆಚಂದ್ರಾರ್ಕವಾಗಿ ನಡೆಸಬೇಕೆಂದು ವೈಷ್ಣವ ಮಹಾಜನಂಗಳ ಕೈಯಲ್ಲಿ ಪುದವಟ್ಟನ್ನು ಇಟ್ಟಳು ಗೊರಲೂರ ಅಕ್ಕಲಯ್ಯನ ಮಗಳಾದ ತಂಗೆಪೆಣ್ಣಕ್ಕನು ಶ್ರೀವಾಸುದೇವರ ದೇವಾಲಯಕ್ಕೆ ಒಬ್ಬಳಕ್ಕಿಯ ಪ್ರಸಾದವನ್ನು ನಡೆಸಲು ಬಂದಳು. ಆಗ ಆಕೆಗೆ ಈ ದೇವಾಲಯಕ್ಕೆ ಸೇರಿದ ಭೂಮಿಯು ಇನ್ನೊಬ್ಬರಲ್ಲಿ ಒತ್ತೆಯಾಗಿದೆಯೆಂದು ತಿಳಿದುಬಂತು. ಆಗ ಆಕೆ ಒತ್ತೆಯಾಗಿದ್ದ ಆ ಭೂಮಿಯನ್ನು ಬಿಡಿಸಿಕೊಟ್ಟು ಮತ್ತೆ ದೇವಾಲಯದ ಭೂಮಿಯನ್ನು ಯಾವುದೇ ಕಾರಣಕ್ಕೂ ಅಡವಿಡಬಾರದೆಂದು ತಾಕೀತು ಮಾಡಿ ಮಹಾಜನಗಳಿಗೆ ವರ್ಗಾಯಿಸಿದ್ದಾಳೆ.[131]

### 5.7 ಕೈಗಾರಿಕೆ:

ನಗರೀಕರಣ ಪ್ರಕ್ರಿಯೆಯಲ್ಲಿ ಆಧುನಿಕ ಬಡಾವಣೆಗಳು ಬೆಳೆದಂತೆಲ್ಲಾ ನಗರದೊಳಗಿರುವ ಜನಸಂಖ್ಯೆಗೆ ಅನುಗುಣವಾಗಿ ಕೈಗಾರಿಕೆಗಳ ಅವಶ್ಯಕತೆಯೂ ಒಡಮೂಡಿತು. ಹೊಯ್ಸಳ ಮಹಾಮಂಡಳೇಶ್ವರರು ಇದನ್ನು ಮನಗಂಡು ಇದುವರೆಗೂ ನಡೆದುಕೊಂಡು ಬಂದಿದ್ದ ಸಂತೆ, ಅಂಗಡಿ ಬೀದಿಗಳನ್ನು ವಿಸ್ತರಿಸಿ ಜನಸಮುದಾಯಗಳಿಗೂ ಹಾಗೂ ಕುಶಲಕರ್ಮಿಗಳಿಗೂ ಅನುಕೂಲವಾಗುವಂತಹ ಕೈಗಾರಿಕಾ ಪ್ರದೇಶಗಳನ್ನು ನಗರಗಳಲ್ಲಿ ವ್ಯವಸ್ಥೆಗೊಳಿಸುವ ಏರ್ಪಾಡನ್ನು ಮಾಡಿದರು. ನಗರ ವ್ಯವಸ್ಥೆಯೊಂದು ರೂಪುಗೊಂಡ ನಂತರ ಅದರಲ್ಲಿ ಕೈಗಾರಿಕೆಗಳು ಏರ್ಪಟ್ಟು ಕೃಷಿಗೆ ಸಮಾನಾಂತರವಾದ ಪ್ರಾಮುಖ್ಯತೆಯನ್ನು ಪಡೆದಿದ್ದವು. ಎಣ್ಣೆ ತಯಾರಿಕೆ, ಬೆಲ್ಲ ಮತ್ತು ಸಕ್ಕರೆಉತ್ಪಾದನೆ, ಬಟ್ಟೆಗಳ ತಯಾರಿಕೆ ಮುಂತಾದವು ಕೃಷಿ ಆಧಾರಿತ ಉದ್ದಿಮೆಗಳಾಗಿದ್ದವು. ಮರ, ಮಡಕೆ, ಆಭರಣ ಗಣಿಗಾರಿಕೆ, ಯುದ್ಧೋಪಕರಣಗಳು, ಮನೆ ಬಳಕೆ ಸಾಮಗ್ರಗಳ ತಯಾರಿಕೆ ಮುಂತಾದ ಕೈಗಾರಿಕೆಗಳು ಸಮಾಜದಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಎಣ್ಣೆ ಉತ್ಪಾದನೆ ಅಂದಿನ ಪ್ರಮುಖ ಉದ್ದಿಮೆಯಾಗಿತ್ತು. ಇವುಗಳನ್ನು ರೂಢಿಗೊಳಿಸಲು ನಾನಾ ಭಾಗಗಳಲ್ಲಿದ್ದ ಕುಶಲಕರ್ಮಿಗಳಿಗೆ ವಿಶೇಷವಾದ ಪ್ರಾತಿನಿಧ್ಯವನ್ನು ನೀಡಿ ಇಂತಹ ನಗರಗಳಿಗೆ ಕರೆಸಿಕೊಂಡು ಅವರಿಗೆ ವಿಶೇಷವಾದ ಪ್ರೋತ್ಸಾಹಗಳನ್ನು ನೀಡುತ್ತಾ ಯಾಜಮಾನ್ಯ ದೇವಾಲಯಗಳೊಂದಿಗೆ ಅವರ ನಂಟನ್ನು ಬಲಪಡಿಸಿದ್ದು ಕೂಡ ಮಹಾಮಂಡಳೇಶ್ವರರು ನೀಡಿದ ದೊಡ್ಡ ಕಾಣಿಕೆಯಾಗಿದೆ. ಅಂದರೆ ಸ್ಥಳೀಯ ಅವಶ್ಯಕತೆಗಳಿಗೆ ಅನುಸಾರವಾಗಿ ಇಲ್ಲಿದ್ದ ಕುಶಲಕರ್ಮಿಗಳ

ಕೊರತೆಯುಂಟಾದಾಗ ಸ್ಥಳೀಯ ಅಗತ್ಯಗಳಿಗೆ ಅನುಸಾರವಾಗಿ ತಜ್ಞ ಕುಶಲಕರ್ಮಿಗಳನ್ನು ನಗರಕೇಂದ್ರಗಳಲ್ಲಿ ನೆಲೆಗೊಳಿಸಿದ್ದೇ ಕೈಗಾರಿಕೆಗಳ ಬೆಳವಣಿಗೆಗೆ ಮುಖ್ಯ ಕಾರಣವಾಯಿತು.

ಎಣ್ಣೆಯನ್ನು ಉತ್ಪಾದಿಸುವವರನ್ನು ತೈಲಿಕ, ತೈಲಿಗ, ತೆಲ್ಲಿಗ ಗಾಣಿಗ ಮುಂತಾದ ಹೆಸರುಗಳಿಂದ ಕರೆಯಳಾಗುತ್ತಿತ್ತು.[132] ಎತ್ತುಗಾಣ, ಕೈಗಾಣ, ಮೆಟ್ಟುಗಾಣಗಳಲ್ಲಿ ಎಣ್ಣೆಬೀಜಗಳನ್ನು ಹಾಕಿ ಎಣ್ಣೆ ಉತ್ಪಾದಿಸು ತ್ತಿದ್ದರು. ಗಾಣಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯನ್ನು ಗಾಣದೆರೆ, ಗಾಣಾಯ, ಗಾಣದ ಸುಂಕ ಮುಂತಾದ ಹೆಸರು ಗಳಿಂದ ಶಾಸನಗಳಲ್ಲಿ ಉಲ್ಲೇಖಿಸಲಾಗಿತ್ತು. ಬೆಲ್ಲ ಮತ್ತು ಸಕ್ಕರೆಯ ಉತ್ಪಾದನೆಯು ಹೆಚ್ಚು ಪ್ರಚಲಿತವಿದ್ದ ಉದ್ದಿಮೆಯಾಗಿತ್ತು. ಕಬ್ಬು ವಾಣಿಜ್ಯ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದ ಬೆಳೆಯಾಗಿತ್ತು. ಇದರ ಮೇಲೆ ಆಲೆದೆರೆಯನ್ನು ಹಾಕಲಾಗುತ್ತಿತ್ತು.[133] ಬಟ್ಟೆಗಳನ್ನು ತಯಾರಿಸುವ ಉದ್ದಿಮೆಗಳಲ್ಲಿ ನೇಯುವ ಮತ್ತು ಮಾರಾಟ ಮಾಡುವ ವ್ಯವಸ್ಥೆಯು ಇದ್ದಂತೆ ಕಾಣುತ್ತದೆ. ನೂಲುದೆರೆ, ಮಗ್ಗದೆರೆ ಮುಂತಾದ ಹೆಸರುಗಳಿಂದ ನೇಕಾರರ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಕುಂಬಾರರು ಮಡಕೆ ತಯಾರಿಸಿ ಗ್ರಾಮದ ಆರ್ಥಿಕತೆಯಲ್ಲಿ ಮುಖ್ಯ ಪಾತ್ರವನ್ನು ನಿರ್ವಹಿಸುತ್ತಿದ್ದರು. ಕುಂಬಾರರು ಬಳಸುತ್ತಿದ್ದ ಚಕ್ರ, ಮಣ್ಣು ಮೊದಲಾದ ಸಾಮಗ್ರಗಳ ವಿಚಾರ ಶಾಸನೋಕ್ತವಾಗಿದೆ. ಕುಂಬಾರರ ಮೇಲೆ ಕುಂಬಾರದೆರೆಯನ್ನು ಹಾಕಲಾಗುತ್ತಿತ್ತು.

ಶಾಸನಗಳಲ್ಲಿ ಚಿನ್ನದ ಗಣಿ, ಕಬ್ಬಿಣದ ಗಣಿ, ತಾಮ್ರದ ಗಣಿ ಎಂಬ ಉಲ್ಲೇಖಗಳು ದೊರೆಯುತ್ತವೆ. ಈ ಗಣಿಗಳ ಸಂಪೂರ್ಣ ಹಕ್ಕು ರಾಜ್ಯದ್ದಾಗಿರದೆ ಸ್ವತಂತ್ರ ಉದ್ದಿಮೆದಾರರದ್ದಾಗಿತ್ತು.[134] ಗುಬ್ಬಿ, ಚಿಕ್ಕನಾಯಕನಹಳ್ಳಿ, ಮಾಗಡಿ, ಚನ್ನಪಟ್ಟಣಗಳಲ್ಲಿ ಪ್ರಧಾನವಾಗಿ ಗಣಿಗಾರಿಕೆಗಳು ನಡೆಯುತ್ತಿದ್ದವು. ಕಬ್ಬಿಣದ ಕೈಗಾರಿಕೆಯು ಬಹಳ ಪ್ರಧಾನವಾದ ಸ್ಥಾನವನ್ನು ಪಡೆದಿದ್ದಿತ್ತು. ಕೃಷಿ ಮತ್ತು ಕೃಷಿಯೇತರ ಕೆಲಸಗಳಿಗೆ ಕಬ್ಬಿಣದಿಂದ ತಯಾರಿಸಿದ ಉಪಕರಣಗಳು ಅಗತ್ಯವಾಗಿರುತ್ತಿತ್ತು. ಈ ಉಪಕರಣಗಳನ್ನು ಉತ್ಪಾದಿಸುವವರನ್ನು ಕಮ್ಮಾರರು ಎಂದು ಕರೆಯಲಾಗುತ್ತದೆ. ಹಾರೆ, ಗುದ್ದಲಿ, ಕುಡುಗೋಲು, ಮೊದಲಾದ ಕೃಷಿಗೆ ಅಗತ್ಯವಿರುವ ಉಪಕರಣಗಳಿಗೆ ಹೆಚ್ಚಿನ ಬೇಡಿಕೆಯು ಸಹಜವಾಗಿಯೇ ಇತ್ತು. ಜತೆಗೆ ಯುದ್ಧೋಪಕರಣಗಳು ಅಷ್ಟೇ ಪ್ರಾಮುಖ್ಯತೆಯನ್ನು ಹೊಂದಿದ್ದವು. ಅರಸರಿಗೆ ಯುದ್ಧಗಳು ಹೇಗೆ ಅನಿವಾರ್ಯವೆಂಬಂತೆ ಆಗಿದ್ದವೋ ಅಂತೆಯೇ ಸ್ಥಳೀಯ ಮಟ್ಟದಲ್ಲಿ ನಡೆಯುತ್ತಿದ್ದ ಗ್ರಾಮಗ್ರಾಮಗಳ ನಡುವಿನ ಕಾಳಗಗಳಿಗೂ, ಪ್ರತಿಮನೆಯಲ್ಲಿಯೂ ಇರುತ್ತಿದ್ದ ಆತ್ಮರಕ್ಷಣೆ ಸಾಧನಗಳಾದ ಕತ್ತಿ, ಕವಚ, ಈಟಿ, ಖಡ್ಗ, ಶೂಲ, ಸಬಳ, ಕೊಂತ, ಶಲ್ಯ, ಭಲ್ಲುಕೆ, ಕರ್ಕಡೆ, ಸುರಿಗೆ, ಮುಸಲ, ಬಿಂಢಿವಾಳ, ಮುಸುಂಡಿ ಮೊದಲಾದ ಆಯುಧಗಳು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದನೆಗೊಳ್ಳುತ್ತಿದ್ದವು. ಹೊಯ್ಸಳರ ಕಾಲದ ಕೇದಾರೇಶ್ವರ ದೇವಾಲಯದ ಗುಡಿಯ ಮೇಲಿನ ಶಿಲ್ಪದಲ್ಲಿ ಉಕ್ಕಿನ ಹುರುಪೆಗಳಿಂದ ಕೂಡಿದ ಕಬ್ಬಣದ ಕವಚವು ಯುದ್ಧದ ಕುದುರೆಯ ದೇಹವನ್ನು ಆವರಿಸಿರುವುದನ್ನೂ ಸವಾರನು ಕೂಡ ತನ್ನ ಕಾಲಿನವರೆಗೂ

ಮುಚ್ಚಿರುವ ಲೋಹದ ಕವಚ ತೊಟ್ಟಿರುವುದನ್ನೂ ತಲೆಗೆ ಶಿರಸ್ತ್ರಾಣ ಹಾಕಿರುವುದನ್ನು ಕಾಣಬಹುದಾಗಿದೆ. ಇದು ಕಬ್ಬಿಣದ ವ್ಯಾಪಕ ಬಳಕೆಯನ್ನು ಅರಹುತ್ತದೆ.

ತಾಮ್ರ, ಹಿತ್ತಾಳೆ, ಕಂಚು ಈ ಮೂರು ಲೋಹಗಳನ್ನು ಮತ್ತು ಮರದ ವಸ್ತುಗಳನ್ನು ವ್ಯಾಪಕವಾಗಿ ಬಳಸುತ್ತಿದ್ದದಕ್ಕೆ ಸಾಕಷ್ಟು ಆಧಾರಗಳಿವೆ. ಇವುಗಳಲ್ಲಿ ಬಳಸುವ ವಸ್ತುಗಳನ್ನು ತಯಾರಿಸುವ ಕುಶಲ ಕಾರ್ಮಿಕರು ಇದ್ದಿರಲೂ ಸಾಕು. ಅಂತೆಯೇ ಅನೇಕ ಮಹಾಮಂಡಳೇಶ್ವರರು ಬಸದಿ, ದೇಗುಲ, ಮೂರ್ತಿಗಳ ನಿರ್ಮಾಣ ಮುಂತಾದ ಕಾರ್ಯಗಳನ್ನು ಮಾಡುತ್ತಿದ್ದರಿಂದ ಈ ಕಾರ್ಯ ಚಟುವಟಿಕೆಗಳಲ್ಲಿ ಅನೇಕ ಕುಶಲಕಾರ್ಮಿಕರು ನಿರತರಾಗಿದ್ದರಬಹುದಾದ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಈ ಮೇಲಿನ ಅಂಶಗಳಿಗೆ ಸಂಬಂಧಿಸಿದ ಹಲವು ಉಲ್ಲೇಖಗಳು ಮಹಾಮಂಡಳೇಶ್ವರರ ಹಲವಾರು ಶಾಸನಗಳಲ್ಲಿ ಕಂಡುಬರುತ್ತವೆ.

**5.8 ಬ್ಯಾಂಕಿಂಗ್ ವ್ಯವಸ್ಥೆ**

ಮಧ್ಯಕಾಲೀನ ಕರ್ನಾಟಕದಲ್ಲಿ ಹಲವಾರು ದೇವಾಲಯಗಳು ತಮಗೆ ಬಂದ ದಾನಗಳನ್ನು ಸಮರ್ಪಕವಾಗಿ ನಿರ್ವಹಿಸಲು ಮಹಾಜನರ ಮುಖಾಂತರ ಬಹಳ ಮುಖ್ಯವಾದ ಸಂಘಟನೆಯೊಂದನ್ನು ಕಟ್ಟಿಕೊಂಡಿತು. ದೇಗುಲಗಳಿಗೆ ಬರುತ್ತಿದ್ದ ದಾನ–ದತ್ತಿಗಳನ್ನು ಇದರ ಮೂಲಕ ಹೆಚ್ಚಿಸಿಕೊಳ್ಳಲಾಗುತ್ತಿತ್ತು. ದೇವಾಲಯಗಳಲ್ಲಿ ಇಂದಿನ ಬ್ಯಾಂಕಿಂಗ್ ವ್ಯವಸ್ಥೆಗೆ ಸಮೀಪದಲ್ಲಿದ್ದ ವಿನಿಮಯ ವ್ಯವಸ್ಥೆಯನ್ನು ನಡೆಸಲಾಯಿತು. ಇದನ್ನು ಶ್ರೀ ಭಂಡಾರ, ದೇಗುಲದ ಭಂಡಾರ, ದೇವ ಭಂಡಾರ ಎಂದು ಕರೆಯಲಾಗುತ್ತಿತ್ತು. ಈ ಭಂಡಾರ ಎನ್ನುವ ಬ್ಯಾಂಕಿಂಗ್ ಮಹಾಜನರು ನಿಯಂತ್ರಕರಾಗಿಯೂ ವ್ಯಾಪಾರಿಗಳು ಪೋಷಕರಾಗಿಯೂ ಇರುತ್ತಿದ್ದು, ಇದರಿಂದ ದೇವಾಲಯದ ನಿರ್ವಹಣೆಗಾಗಿ ಅನೇಕರಿಂದ ಪುದುವಟ್ಟುಗಳನ್ನು ಸಂಗ್ರಹಿಸಿ ಅದನ್ನು ಇನ್ನಿತರರಿಗೆ ಬಡ್ಡಿಗೆ ಹಣವನ್ನು ಸಾಲವಾಗಿ ನೀಡುತ್ತಿತ್ತು. ಆ ಬಡ್ಡಿಯನ್ನು ದೇವಾಲಯಗಳ ನಿರ್ವಹಣೆಗೆ ಬಳಸಲಾಗುತ್ತಿತ್ತು.

ಈ ರೀತಿ ದೇಗುಲದ ಶ್ರೀ ಭಂಡಾರದಲ್ಲಿ ಇಡುತ್ತಿದ್ದ ಠೇವಣಿಯನ್ನು ಬೀಜವೊನ್ನು ಎನ್ನುವ ಪರಿಭಾಷೆಯಲ್ಲಿ ಕರೆಯಲಾಗುತ್ತಿತ್ತು. ಈ ಬೀಜವೊನ್ನು ಮೂಲಧನವಾಗಿತ್ತು ಇದಕ್ಕೆ ಬಡ್ಡಿ ಅಥವಾ ಹುಟ್ಟುವಳಿ ಅಥವಾ ತೋಡುಬಡ್ಡಿಗಳು ಬರುತ್ತಿದ್ದವು. ಇದನ್ನು ಬಹುತೇಕ ಬ್ರಾಹ್ಮಣರೇ ಮುಂತಾದ ಉನ್ನತ ವರ್ಗದವರಿಗೆ ಮಾತ್ರ ವಿನಿಯೋಗಿಸುತ್ತಿದ್ದಂತೆ ಕಂಡುಬರುತ್ತದೆ ಮಹಾಜನರು ಆರ್ಥಿಕ ಸಭಗತೆಯ ಮುನ್ನಲೆಗೆ ಬಂದ ಸಂದರ್ಭವೂ ಇದೇ ಆಗಿದೆ.

ಕರ್ನಾಟಕದ ಅನೇಕ ದೇವಾಲಯಗಳಲ್ಲಿ ಈ ಭಂಡಾರಗಳಿದ್ದು ಹೇರಳವಾದ ಲಾಭವನ್ನು ಪಡೆಯುವುದರ ಮೂಲಕ ದೇವಾಲಯದ ವ್ಯವಸ್ಥೆಯೊಂದು ಪ್ರಮುಖ ಆರ್ಥಿಕ ಸಂಘಟನೆಯಾಗಿ ರೂಪುಗೊಂಡು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಸಾಗಿದ್ದು ವಿಶೇಷವಾಗಿದೆ.

ಮಲೆಯಾಳ ಮಹಾವಡ್ಡವ್ಯವಹಾರಿ ಕೊಮರ ಮೂರ್ಕ್ಕನು ಕ್ರಿ.ಶ.1108ರಲ್ಲಿ ಸ್ವಯಂಭೂ ಕಲಿದೇವರ ನಂದಾದೀವಿಗೆಗೆ 5 ಗದ್ಯಾಣವನ್ನು ನೀಡಿ ಅದರ ಬಡ್ಡಿಯಲ್ಲಿ ನಂದಾದೀವಿಗೆ ನಡೆಯುವ ಏರ್ಪಾಡು ಮಾಡಿದ್ದಾನೆ.[135] ಬನ್ನಿಯೂರಿನ (ಇಂದಿನ ಬನ್ನೂರು) ಜನನಾಥ ಚತುರ್ವೇದಿ ಮಂಗಲದಲ್ಲಿ 1700 ಜನ ಮಹಾಜನರು ಸೇರಿದ್ದಾಗ 1135ರಲ್ಲಿ ಈ ಊರಿನ ಜರ್ನಾಧನ ದೇವರಿಗೆ ನೀಡಿರುವ ದಾನವು ವಿಶೇಷವಾದ ಮಾಹಿತಿಯನ್ನು ಒದಗಿಸುತ್ತದೆ.[136]ನಂದಾದೇವಿಗೆಗೆ ಕೊಟ್ಟ ಗದ್ಯಾಣ–3, ಮಹಾಜನರ ಸಂಜೆ ಮಟಿಕ ಅಗ್ಗಿಷ್ಟಿಕೆಗೆ–3 ಗದ್ಯಾಣ, ಮಹಾಜನರಿಗೆ ಉಭಯ ಪರ್ವಂಗಳಿಗೆ ಸೌಪರ್ಣದ ತಂಬಲಕ್ಕೆ–2 ಗದ್ಯಾಣ, ನಂದಾದೀವಿಗೆಗೆ–3 ಗದ್ಯಾಣ ಮತ್ತು ಮಟದ ಅಗ್ಗಷ್ಟಿಕೆಗೆ –1 ಗದ್ಯಾಣ, ಒಟ್ಟಿನಲ್ಲಿ 12 ಹೊಂಗೆಗದ್ಯಾಣಗಳ ಇಡುಗಂಟಿಗೆ ಒಂದು ಗದ್ಯಾಣಕ್ಕೆ 1 ಹಾಗ ಬಡ್ಡಿ ಬರುತ್ತದೆಯಂತೆ. ಒಂದು ಗದ್ಯಾಣವೆಂದರೆ 10 ಹಣ 4 ಹಾಗಕ್ಕೆ 1 ಪಣ. ಅಂದರೆ 40 ಹಾಗಕ್ಕೆ 1 ಗದ್ಯಾಣವಾಯಿತು. ಈ ದೇವಾಲಯದಲ್ಲಿ 1 ಗದ್ಯಾಣಕ್ಕೆ ಕೇವಲ 1 ಹಾಗ ಮಾತ್ರ ಬಡ್ಡಿ ಒದಗಿಸಲಾಗುತ್ತಿತ್ತು. ಅದೂ ತಿಂಗಳಿಗೆ ವರ್ಷಕ್ಕೆ 1 ಗದ್ಯಾಣಕ್ಕೆ 12 ಹಾಗಗಳು ಬಡ್ಡಿ ಬರುತ್ತಿತ್ತು. 12 ಹಾಗ ಎಂದರೆ 3 ಪಣವಾಗುತ್ತಿತ್ತು. 1 ಗದ್ಯಾಣಕ್ಕೆ 10 ಹಣವಾದುದರಿಂದ ಇಲ್ಲಿ ಶೇಕಡಾ 30ರ ದರದಲ್ಲಿ ಬಡ್ಡಿ ದೊರೆಯುತ್ತಿತ್ತು.

ಹಳೇಬಿಡಿನ ಹೊಯ್ಸಳೇಶ್ವರ ದೇವರ ಪಂಚಿಕೇಶ್ವರ ದೇವಾಲಯದ ಬ್ಯಾಂಕ್ ಹೆಚ್ಚಿನ ಬಡ್ಡಿಯನ್ನು ಒದಗಿಸುತ್ತಿತ್ತು.[137] ಕಾರಣ ಇದು ಸಾಮ್ರಾಜ್ಯದ ರಾಜಧಾನಿಯಾಗಿತ್ತು ಈ ದೇವಾಲಯದಲ್ಲಿ 30 ಗದ್ಯಾಣದ ಬೀಜಪೊನ್ನನ್ನು ಅಮ್ಮಣ್ಣ ದಂಡನಾಯಕನು ಇಟ್ಟನು. ಈ 30 ಗದ್ಯಾಣಗಳಿಗೆ 1 ವರ್ಷಕ್ಕೆ ಬಡ್ಡಿ 6 ಗದ್ಯಾಣವಾಗಿತ್ತು. ಇದು ಶೇಖಡಾ 20 ಆಗಿತ್ತು. ಹಳೆಬೀಡಿನಲ್ಲಿ ಇಂತಹ ಅನೇಕ ಬ್ಯಾಂಕುಗಳು ಕಾರ್ಯನಿರ್ವಹಿಸುತ್ತಿದ್ದವು. ಈ ಶಾಸನದ ಕಾಲ; ಕ್ರಿ.ಶ.1231 ಇದೇ ಹೊಯ್ಸಳೇಶ್ವರ ದೇವರಿಗೆ 1237ರಲ್ಲಿ ಮಾಲಗಾರ ಬಿಟ್ಟಯ್ಯನ ಮಗಳು 1 ಗದ್ಯಾಣ ಬೀಜವೊನ್ನನ್ನು ದೇವರ ಸೂಳಾಯಿತ ಮಾದೇವ 1 ಗದ್ಯಾಣವನ್ನು ಧರ್ಮಬಡ್ಡಿಗಾಗಿ ಬಿಟ್ಟನು.[138] ಇದೇ ದೇವಾಲಯದ ಸೇವೆಗಳಿಗಾಗಿ ಕಬ್ಬಾಜಿ ನಾಚರಸರು ಮಹಾಜನಗಳ ಕೈಯಲ್ಲಿ ಕೊಟ್ಟ ಗದ್ಯಾಣ 5, ಇದಕ್ಕೆ ಧರ್ಮವಡಿಯಾಗಿ (ಧರ್ಮದ ಬಡ್ಡಿ) ಹೊಂಗಗೆ ಎರಡು ಪಣ ಬಡ್ಡಿಯೆಂದು ತಿಳಿಸಲಾಗಿದೆ.[139]

ಕ್ರಿ.ಶ.1241ರಲ್ಲಿ ಬೇಲೂರಿನ ಚನ್ನಕೇಶವ ದೇವರಿಗೆ ಪೊಲಾಳ್ವದಂಡನಾಯಕನ ಸೇನಬೋವ ದೇವಣ್ಣನು 2 ಗದ್ಯಾಣದ ಬೀಜವೊನ್ನನ್ನು ಇಟ್ಟು ಇದಕ್ಕೆ ಹೊಂಗೆ ಹಾಗವೊಂದು ವರ್ಷಂಪ್ರತಿ ವೃದ್ಧಿಯಾಗುವಂತೆ ನೋಡಿಕೊಳ್ಳಲಾಗಿದೆ. [140] ಕ್ರಿ.ಶ.1254ರಲ್ಲಿ ಹುಲ್ಲೇಕೆರೆಯ ಚನ್ನಕೇಶವ ದೇವರಿಗೆ ಹೆಗ್ಗಡೆ ಚೆಂದಣ್ಣನು ಎರಡು ಗಡ್ಯಾಣ ಬೀಜವೊನ್ನನ್ನು ಇಟ್ಟರೆ ಅದಕ್ಕೆ ಬರುವ ಬಡ್ಡಿ 6 ಹಣವಾಗಿತ್ತು ಇಲ್ಲಿಯ ಬಡ್ಡಿದರ ಶೇಕಡಾ 30 ಆಗಿತ್ತು.[141]

ಹಳೇಬೀಡಿನ ಪಂಚಿಕೇಶ್ವರ ದೇವರಿಗೆ ಬಿಟ್ಟ ಧರ್ಮದಲ್ಲಿ ದೇವಾಲಯದ ಮಹಾಜನಗಳ ವಶಕ್ಕೆ ನಾಲ್ಕು ಗದ್ಯಾಣವನ್ನು ಒಪ್ಪಿಸಲಾಯಿತು. ಇದಕ್ಕೆ ಬರುವ ಬಡ್ಡಿ ಒಂದು ವರುಷಕ್ಕೆ ಎರಡು ಹಣ ಎರಡು ಹಾಗವಾಗಿತ್ತು.[142] ಆದರೆ ಹೊಯ್ಸಳೇಶ್ವರ ದೇವರಿಗೆ ಸಲ್ಲಿಸಿದ 1 ಗದ್ಯಾಣಕ್ಕೆ ವರುಷಕ್ಕೆ ಎರಡು ಹಣ ಮಾತ್ರ ಬಡ್ಡಿಬರುತ್ತಿತ್ತು.[143] ಇದೇ ರೀತಿಯ ಹಲವು ವ್ಯವಹಾರಗಳು ಹಳೇಬೀಡಿನ ಅನೇಕ ಶಾಸನಗಳಲ್ಲಿ ಕಂಡುಬಂದಿವೆ. ಇಂತಹ ಸಂದರ್ಭದಲ್ಲಿ ಕೆಲವು ನಿಯಮಗಳನ್ನು ಕೂಡ ಹಾಕಲಾಗುತ್ತಿತ್ತು. ಉದಾಹರಣೆಗೆ ಈ ಬೆರಪೆನ ಹಾನುಗಳಿಗೆ 1 ಹೊಂಗೆ ತಿಂಗಳಿಗೆ ಹಾಗವೊಂದರ ಬಡ್ಡಿಯಲ್ಲಿ ಬೆರಲನ ಗದ್ಯಾಣ 3 ಕ್ಕೆ ವರ್ಷವೊಂದಕ್ಕೆ 1 ಬಡ್ಡಿಯಾಗಿ ಎಂದೆಂದಿಗೂ ನಡೆಯುವುದು. ವರುಷಂಪ್ರತಿ ಕೊಡುವ ಹಣ ಒಂಬತ್ತು ಆಗಿತ್ತು.[144]

ಈ ದೇಗುಲಗಳ ಬ್ಯಾಂಕುಗಳಲ್ಲಿ ಹಲವಾರು ಜನ ಸೇರಿ ತಮ್ಮ ಬೀಜವೊನ್ನುಗಳನ್ನು ಪುದುವಟ್ಟುಗಳಾಗಿ ಇಟ್ಟು ಅದರಿಂದ ಬರುವ ಬಡ್ಡಿಯಲ್ಲಿ ದೇವಾಲಯದ ಕಾರ್ಯಗಳು ಸಾಂಗವಾಗಿ ನಡೆಯಲು ಏರ್ಪಾಟು ಮಾಡುತ್ತಿದ್ದರು. ಹಳೆಬೀಡಿನ ಕೆಲವು ಶಾಸನಗಳಲ್ಲಿ ಈ ರೀತಿ ಸಮುದಾಯಕವಾಗಿ ಸೇರಿಕೊಂಡು ನೀಡಿದ ಉಲ್ಲೇಖಗಳಿವೆ. ಬೇಲೂರಿನ ಶಾಸನದಲ್ಲಿ [145] ದೇಗುಲದ ಪಡಿತರ ವ್ಯವಸ್ಥೆಗಾಗಿ ನೀಡಿದ ಉದಾಹರಣೆಯಿದೆ. ಇದಕ್ಕೆ ಬಡ್ಡಿಯಲ್ಲದೇ ತೋಡುಬಡ್ಡಿಯು ಕೂಡ ಬರುತ್ತಿತ್ತು ಎಂದು ತಿಳಿಸಲಾಗಿದೆ.

ದೇವಾಲಯವು ನಡೆಸುತ್ತಿದ್ದ ಬ್ಯಾಂಕಿನಿಂದ ವರ್ಷಕ್ಕೆ ಶೇಕಡಾ 15–30 ಬಡ್ಡಿ ಬರುತ್ತಿತ್ತು ಎಂದರೆ ಆ ಬ್ಯಾಂಕು ನೀಡುವ ಸಾಲದ ಸ್ವರೂಪ ಹಾಗೂ ಸಾಲಕ್ಕೆ ತಾನು ವಿಧಿಸುತ್ತಿದ್ದ ಬಡ್ಡಿಯನ್ನು ನಾವು ಗಮನಿಸಬೇಕು. ಗುಂಡ್ಲುಪೇಟೆಯ ಶಾಸನವೊಂದು ರಾಮೇಶ್ವರ ದೇವಾಲಯಕ್ಕೆ ಸೇರಿದ ಭಂಡಾರದ ಹಣದಲ್ಲಿ ಆಶೇಷ ಮಹಾಜನಗಳು ಎಲ್ಲರಿಂದ ಒಪ್ಪಿತವಾಗಿ 150 ಗದ್ಯಾಣವನ್ನು ಬಡ್ಡಿಯಾಗಿ ನೀಡಿರುವ ಉದಾಹರಣೆಯಿದೆ.[146] ಒಟ್ಟಿನಲ್ಲಿ ಈ ದೇವಾಲಯಗಳು ಬ್ಯಾಂಕ್‌ನಂತೆ ಕಾರ್ಯನಿರ್ವಹಿಸಿ ಜನರಿಂದ ಪುದುವಟ್ಟುಗಳನ್ನು ಸಂಗ್ರಹಿಸಿ ಅದನ್ನು ಬೇರೆಯವರಿಗೆ ಬಡ್ಡಿಗೆ ಕೊಟ್ಟು ಅದರಿಂದ ಶ್ರೀಭಂಡಾರವನ್ನು ತುಂಬುತ್ತಿದ್ದುದು ಆಕಾಲದಲ್ಲಿ ದೇವಾಲಯಗಳು ಆರ್ಥಿಕವಾಗಿ ಸಬಲವಾಗುವಲ್ಲಿ ವಹಿಸಿದ ಪಾತ್ರವನ್ನು ಚಿತ್ರಿಸುತ್ತದೆ.

ಹೀಗೆ ನಾನಾ ರೀತಿಯಲ್ಲಿ ಹೊಯ್ಸಳ ಮಹಾಮಂಡಳೇಶ್ವರರು ಸ್ಥಳೀಯ ಆರ್ಥಿಕತೆಯನ್ನು ಕಟ್ಟುತ್ತಾ ಕಟ್ಟುತ್ತಾ ಸ್ಥಳೀಯ ಚಾರಿತ್ರಿಕೆಯನ್ನು ಕೂಡ ಕಟ್ಟಿ ಬೆಳೆಸಿದರು. ಇದರ ಮೂಲಕ ಹಲವಾರು ರೀತಿಯ ಕುಶಲಕರ್ಮಿಗಳನ್ನು ಬೆಳೆಸಿದ ಕೀರ್ತಿಯೂ ಅವರಿಗೆ ಸಲ್ಲುತ್ತದೆ. ಇದರ ಪರಿಣಾಮವಾಗಿಯೇ ಹೊಯ್ಸಳರ ಯುಗದಲ್ಲಿ ಹೊಯ್ಸಳ ಪ್ರಾಂತ್ಯವು ಅತ್ಯಂತ ಶ್ರೀಮಂತ ತಾಣವೆಂದು ಎಲ್ಲೆಲ್ಲೂ ಹಬ್ಬಿ ಅಲ್ಲಿ

ದಾಳಿ ಮಾಡಿ ಆ ಪ್ರದೇಶವನ್ನು ವಶಪಡಿಸಿಕೊಳ್ಳಬೇಕೆಂದು ಶತೃರಾಜರು ಹಂಬಲಿಸುತ್ತಿದ್ದುದಕ್ಕೆ ಇದೇ ಪ್ರಮುಖವಾದ ಕಾರಣವೆಂದು ತಿಳಿಯಬೇಕಾಗಿದೆ.

## ಕೊನೆಟಿಪ್ಪಣಿಗಳು ಮತ್ತು ಆಕರಸೂಚಿ


01. ದೇವರಾಜ್.ಡಿ.ವಿ : 1994, ಹಿಸ್ಟರಿ ಆಫ್ ಸೋಮನಾಥಪುರ ಟೆಂಪಲ್ ಕಾಂಪ್ಲೆಕ್ಸ್, ಡೈರೆಕ್ಟರೇಟ್ ಆಫ್ ಆರ್ಕಿಯಾಲಜಿ ಆಂಡ್ ಮ್ಯೂಸಿಯಂ ಇನ್ ಕರ್ನಾಟಕ, ಪು 06, ಮೈಸೂರು
02. ಎಕ 8 (ಪ) : ಬೇ 438
03. ಎಕ 9(ರೈ): ಬೆಂ 133
04. ಎಕ 10(ಪ): ಚರಾ 134
05. ಎಕ 10 (ಪ) : ಅರ 153
06. ಎಂ.ಎ.ಆರ್. 1941, ನಂ 26
07. ಎಕ 6(ಪ): ಪಾಪು 88
08. ಅದೇ 79
09. ಅದೇ 80
10. ಅದೇ ಕೃಪೇ 37
11. ಅದೇ ಪಾ ಪು 161
12. ಅದೇ ಮೈ 216
13. ಅದೇ ಪಾಪು 44
14. ಅದೇ ಕೃಪೇ 60
15. ಎಂ.ಎ.ಆರ್. 1923, ನಂ 1, ಪು 33 ; ಎಕ 5(ರೈ) : ಹಾ 53
16. ಎಕ 5(ಪ): ಕೃಪೇ 37
17. ಅದೇ: ಪಾಪು 20
18. ಅದೇ : ಕೃಪೇ 114,
19. ಅದೇ :66,
20. ಅದೇ, 4
21. ಅದೇ : ಪಾಪು 25,
22. ಅದೇ: ಕೃಪೇ 36
23. ಎಕ 3(ಪ): ನಂಗೂ 257,
24. ಪಾಪು 44
25. ಬೊಗುಸ್ಲಾವ್ಸ್ಕಿ ಬಿ.ಎಂ ಮತ್ತು ಇತರರು : 1986, ದ್ವಂದ್ವಮಾನ ಮತ್ತು ಚಾರಿತ್ರಿಕ ಭೌತವಾದದ ಮೂಲಪಾಠಗಳು, ನವಕರ್ನಾಟಕ, ಪು 300–318, ಬೆಂಗಳೂರು
26. ಎಕ 11(ಪ): ಶೃ 1, 9, 32, 69, 44
27. ಗುರುರಾಜಾಚಾರ್. ಎಸ್: 1974, ಸಮ್ ಆಸ್ಪೆಕ್ಟ್ಸ್ ಆಫ್ ಇಕಾನಾಮಿಕ್ ಆಂಡ್ ಸೋಶ್ಯಲ್ ಲೈಫ್ ಇನ್ ಕರ್ನಾಟಕ, ಪು 53, ಮೈಸೂರು
28. ಸೌ.ಇ.ಇ. 9–1, 226
29. ಎಂ.ಎ.ಆರ್. 1911, ಪು 51
30. ಚಿದಾನಂದಮೂರ್ತಿ. ಎಂ: 1979, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು 367, ಮೈಸೂರು.
31. ಎಕ 8(ಪ): ಬೇ 438
32. ಎಕ 09 (ರೈ) :ಬೆಂ 111
33. ಎಕ 10(ಪ): ಚನಾ 53
34. ಎಕ 11(ರೈ): ಚಿದು 12
35. ಎಕ 8(ಪ) :ಹೊನ 42, 83
36. ಎಕ 2(ಪ): ಶ್ರಬೆ.564
37. ಎಕ 9(ರೈ): ದೇವ 92

38. ಎಕ 9(ರೈ): ಬೆಂ 166
39. ಕೆ.ಆರ್.ಗಣೇಶ್ ಮತ್ತು ಆರ್. ಶೇಷಶಾಸ್ತ್ರಿ: ಆಂಧ್ರಪ್ರದೇಶದ ಕನ್ನಡ ಶಾಸನಗಳು ಭಾಗ 1 ಸಂಪುಟ 5 ಕಲ್ಯಾಣದುರ್ಗ 177, ಕನ್ನಡ ವಿಶ್ವವಿದ್ಯಾಲಯ, ಹಂಪಿ
40. ಎಂ.ಎ.ಆರ್. 1911, ಪು47
41. ಎಕ 5(ರೈ) : ಅಕೆ 116, ಎಕ 4 (ರೈ) : 39
42. ಎಕ 7(ಪ): ನಾಮಂ 83
43. ಅದೇ: 84
44. ಚಿದಾನಂದಮೂರ್ತಿ. ಎಂ : ಪೂರ್ವೋಕ್ತ , ಪು 366 ; ಎ ಕ 5(ರೈ) : ಹಾ 130
45. ಎಕ 9(ರೈ) : ಆನೇ 80
46. ಎಕ 24 (ಪ) :ತುಮ 93
47. ಎಕ 8 (ಪ) : ಹಾ 187
48. ಎಕ 2 (ಪ) :ಶ್ರಬೆ 385
49. ಎಕ 12 (ರೈ) : ತುಮ 9
50. ಎಕ 9(ರೈ) : ಬೆಂ 133
51. ಕುಮಾರಸ್ವಾಮಿ.ಎಸ್. : 1996, ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಗಳು, ಪು 127–128, ಬೆಂಗಳೂರು
52. ಎಕ 5 (ಪ) : ತಿ ನ 88, 96
53. ಎಕ 7(ಪ): ನಾಮಂ 73 ಮತ್ತು 76
54. ಅದೇ ಪೀಠಿಕೆ ,ಪು 94
55. ಎಕ 13 (ಪ): ಸೊ. 582
56. ಎಕ 9(ರೈ): ಚಪ168
57. ಎಕ 2 (ರೈ) : ಶ್ರಬೆ 481
58. ಚನ್ನಕ್ಕ ಎಲಿಗಾರ : 1990, ಶಾಸನಗಳಲ್ಲಿ ಸ್ತ್ರೀ ಸಮಾಜ , ಪು 274, ಧಾರವಾಡ.
59. ಎಕ 6(ಪ): ಪಾಪು 88
60. ಎಕ 10 (ಪ) : ಅಕೆ 88
61. ಎಕ 24 (ಪ) : ತುಮ 115
62. ಎಕ 4(ಪ): ಚಾನ 16
63. ಶಿವಣ್ಣ.ಕೆ.ಎಸ್ : 1997 ಹೊಯ್ಸಳ ರಾಜ್ಯಾಡಳಿತ ಮತ್ತು ಆರ್ಥಿಕತೆ , ಕರ್ನಾಟಕ ಚರಿತ್ರೆ ಸಂಪುಟ 2, ಸಂಪಾದಕರು : ಸುರೇಂದ್ರರಾವ್, ಕನ್ನಡ ವಿ ವಿ, ಹಂಪಿ, ಪು 153
64. ಎಕ 4(ಪ): ಕೊಗಾ 30
65. ಎಕ 4(ಪ): ಚಾನ 235
66. ಅದೇ 263
67. ಎಕ 8(ಪ): ಹೊನ 1
68. ಎಕ 9(ಪ): ಬೇ 562
69. ಎಕ 3 (ಪ) : ನಂಗೂ 207
70. ಎಕ 11(ರೈ): ಚಿದು 32
71. ಎಕ 8(ಪ) : ಹೊನ 42, 83
72. ಎಕ 7(ಪ): ನಾಮಂ 73 ಮತ್ತು 76
73. ಎಕ 5 (ಪ): ಅಗೂ 39
74. ಎಕ 8 (ಪ) : ಹಾ 75
75. ಎಕ 11(ರೈ) ದಾವ 52
76. ಅದೇ : 53 ಮತ್ತು 54
77. ಎಕ 8(ಪ): ಅಗೂ 46
78. ಎಕ 5(ಪ) ತಿನ. 244 ಮತ್ತು ಎಕ 12 ರೈ ಚಿನಾ 2 ಇತ್ಯಾದಿ.
79. ಎಂ ಎ ಆರ್ 1915, ಪು 48 : ಕ.ವಿ.ಶಾ.ಸಂ. 2 (ಕೊಪ್ಪಳ) ಯಲಬುರ್ಗಾ 39
80. ಎಕ 9 (ಪ): ಬೇ 244
81. ಎಕ 9 (ಪ): ಬೇ 244

82. ಅದೇ: 313
83. ಎಕ 10 (ಪ): ಅಕೆ 318
84. ಅದೇ: 317
85. ಕ.ವಿ.ಶಾ.ಸಂ 7: ದೇವದುರ್ಗ 5
86. ಗಂಗಾಂಬಿಕೆ ಎಸ್. ಸಾಮಂತ ಗೋವಿದೇವ ಮತ್ತು ಅವನ ವಂಶೀಯರು : ಇತಿಹಾಸ ದರ್ಶನ 31: 2016 : ಸಂ: ಡಾ. ದೇವರಕೊಂಡಾರೆಡ್ಡಿ ಮತ್ತು ಪ್ರೊ. ಜಿ. ಕೆ. ದೇವರಾಜಸ್ವಾಮಿ: ಕರ್ನಾಟಕ ಇತಿಹಾಸ ಅಕಾದೆಮಿ: ಬೆಂಗಳೂರು ಪುಟ 158–168
87. ಎಕ 8 (ಪ): ಹೊನ 103
88. ಅದೇ: 103 ಎ
89. ಎಕ 9(ರೈ): ಹೊಸ 134, 137
90. ಎ.ಆರ್.ಐ.ಈ 1902: 1986: ಆರ್ಕಿಯಾಲಜಿಕಲ್ ಸರ್ವೇ ಆಫ್ ಇಂಡಿಯಾ, ನವದೆಹಲಿ: ಪುಟ 10,11
91. ಎಕ 12 (ಪ): ಕ234
92. ಅದೇ: 35
93. ಗಂಗಾಂಬಿಕೆ: ಹೊಯ್ಸಳ ಪ್ರಮುಖ ದಂಡನಾಯಕ ಗಂಗರಾಜ ಮತ್ತು ಅವನ ವಂಶೀಯರು: ಕರ್ನಾಟಕ ಇತಿಹಾಸದ ಹೊಸ ಆಯಾಮಗಳು: ಇತಿಹಾಸ ದರ್ಪಣ ದಶಮಾನೋತ್ಸವ ವಿಶೇಷ: 40–41: ಪುಟ
181– 210
94. ಎಕ 2 (ಪ): ಶ್ರಬೆ
95. ಎಕ 12(ರೈ), ತಿಪ 2
96. ಎ.ಆರ್ಐ.ಈ 1977–78, 1986: ಆರ್ಕಿಯಾಲಜಿಕಲ್ ಸರ್ವೇ ಆಫ್ ಇಂಡಿಯಾ: ನವದೆಹಲಿ
97. ಎಕ 3 (ಪ): ಹೆಕೋ 47
98. ಅದೇ
99. ಎಕ 15(ಪ): ಹೊನ 114
100. ಎಕ 10(ಪ) ಅಕೆ 22
101. ಎಕ 9(ರೈ): ಆನೇ 80
102. ಎಕ 9 (ರೈ): ಚಪ 168
103. ಎಕ 10 (ರೈ) ಕೋ 82
104. ಅದೇ: 201
105. ಅದೇ: 73
106. ಅದೇ: 67, 80, 105
107. ಅದೇ: 70
108. ಅದೇ: 70
109. ಅದೇ: 71
110. ಎಕ 9(ರೈ): ಹೊಸ 50
111. ಎಕ 10 (ರೈ): ಕೋ 39
112. ಎಕ 10 (ರೈ) ಮುಳ 2
113. ಎ.ಕ 12 (ರೈ) ; ಗು 30
114. ಎಕ 9 (ರೈ): ಬೆಂ 31
115. ಕೆ. ಆರ್. ಗಣೇಶ್ ಮತ್ತು ಆರ್. ಶೇಷಶಾಸ್ತ್ರಿ: ಆಂಧ್ರಪ್ರದೇಶದ ಕನ್ನಡ ಶಾಸನಗಳು ಭಾಗ 1 ಸಂಪುಟ 5 ಅನಂತಪುರ ಮಡಕಶಿರ ತಾ, 66, 1312
116. ಎಕ 6(ಪ): ಎಕ ಕೃಪೇ 77
117. ಅದೇ: ಕೃ. 77
118. ಎಕ 10 (ಪ) ಅಕೆ 317
119. ಕ.ವಿ.ಶಾ.ಸಂ 9: ಬಾಕೋ 44
120. ಎಕ 9 (ಪ): ಬೇ 290
121. ಎಕ 11 (ರೈ): ದಾವ 57
122. ಎಕ 11 (ರೈ); ದಾವ 55

123. ಕ.ವಿ.ಶಾ.ಸಂ 10: ಇಂಡಿ 77
124. ಎಕ 11 (ರೈ): ದಾವ 105
125. ಎಕ 9(ಪ) ಬೇ 291
126. ಎಕ 10 (ಪ): ಚಿಮ 111
127. ಎಕ 9(ಪ) : ಬೇ 322
128. ಎಕ 10(ಪ): ಅಕೆ 26
129. ಎಕ 9 (ಪ): ಬೇ 299
130. ಅದೇ 54
131. ಎಕ 8(ಪ): ಹಾ 195
132. ಹಿರೇಮಠ್ ಬಿ.ಆರ್: 1986: ಶಾಸನಗಳಲ್ಲಿ ಕರ್ನಾಟಕದ ವರ್ತಕರು: ಧಾರವಾಡ ಪುಟ 105
133. ಶಿವಣ್ಣ ಕೆ ಎಸ್: 1997: ಹೊಯ್ಸಳ ಯುಗದಲ್ಲಿ ನಗರ ಕೇಂದ್ರಗಳ ಹುಟ್ಟು ಮತ್ತು ಬೆಳವಣಿಗೆ: ಕರ್ನಾಟಕ ಚರಿತ್ರೆ ಸಂಪುಟ 2: ಸಂ, ಬಿ.ಸುರೇಂದ್ರ ರಾವ್. ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ 152
134. ಚಿದಾನಂದ ಮೂರ್ತಿ ಎಂ. 1986: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ಮೈಸೂರು: ಪುಟ 374
135. ಕ.ವಿ.ಶಾ.ಸಂ 1 ಹರಪನಹಳ್ಳಿ 105
136. ಎಕ 5(ಪ) ತಿನ 69
137. ಎಕ 9(ಪ) ಬೇ 288
138. ಅದೇ 286
139. ಅದೇ: 287
140. ಅದೇ : 15
141. ಎಕ 10 (ಪ): ಅಕೆ 186
142. ಎಕ 9(ಪ): ಬೇ 292
143. ಅದೇ: ಬೇ 265
144. ಅದೇ : 564
145. ಅದೇ: 51
146. ಎಕ 3(ಪ): ಗುಂ 16

# ಅಧ್ಯಾಯ 6

## ಜನಸಮುದಾಯಗಳ ಅಭ್ಯುದಯ ಮತ್ತು ಸ್ಥಳೀಯ ನವಸಮಾಜದ ಮಹಾ ಕನಸುಗಳು

## {ಸಮಾಜಶಾಸ್ತ್ರೀಯ ಪರಿಕಲ್ಪನೆಯ ಹಿನ್ನೆಲೆಯಲ್ಲಿ}

ಬಹಳ ಸಂಕೀರ್ಣವಾದ ಈ ವಿಚಾರವನ್ನು ಜನಸಮುದಾಯ ಎಂದರೆ ಯಾರು? ಇವರ ಅಭ್ಯುದಯ ಆಯಿತು ಎಂದು ಹೇಗೆ ಸಮರ್ಥಿಸುವುದು? ಇದಕ್ಕಿರುವ ಆಧಾರಗಳೇನು ? ಇಂತಹ ಜನಸಮುದಾಯಗಳು ಸಮಾಜದ ಮುಖ್ಯವಾಹಿನಿಯಲ್ಲಿ ಬರಲು ಪ್ರಯತ್ನಿಸುವಂತಹ ಮತ್ತು ಆ ಪ್ರಯತ್ನದಲ್ಲಿ ಯಶಸ್ವಿಯಾದ ಸಮುದಾಯಗಳನ್ನೊಳಗೊಂಡು ಒಂದು ನವಸಮಾಜದ ಕನಸನ್ನು ನನಸು ಮಾಡಿಕೊಳ್ಳುವ ಸಣ್ಣಪುಟ್ಟ ಪ್ರಯತ್ನಗಳನ್ನು ಸಾರ್ಥಕಗೊಳಿಸಿದವರು ಹೊಯ್ಸಳ ಮಹಾಮಂಡಳೇಶ್ವರರು.

ಸಾಮಾನ್ಯ ಜನಸಮುದಾಯದ ಅರ್ಥ ಪರಿಧಿಗೆ ಈ ಹೊಯ್ಸಳ ಮಹಾಮಂಡಳೇಶ್ವರರ ಆಳ್ವಿಕೆಯ ಪ್ರದೇಶಗಳಲ್ಲಿ ಮತ್ತು ಅವರ ಆಳ್ವಿಕೆ ಕಾಲಘಟ್ಟದಲ್ಲಿ ಗಾಣಿಗರು, ಬಿಲ್ಲರು, ತಳಾರರು, ಗವರೆಗಳು ಮೊದಲಾದ ಅಸಲು ವೃತ್ತಿಮೂಲ ಸಮುದಾಯದವರು ತಾವು ನೆಲೆಸಿದ್ದ ಸ್ಥಳೀಯ ಸಮಾಜದಲ್ಲಿ ಬಹುಕಾಲ ಒಂದು ಅಸ್ಮಿತೆಯಿಲ್ಲದೆ ಬದುಕಿದವರು. ಆದರೆ ಹೊಯ್ಸಳ ಮಹಾಮಂಡಳೇಶ್ವರರ ಒತ್ತಾಸೆ,ಭರವಸೆಗಳಿಂದ ಮುನ್ನಲೆಗೆ ಬರುವಂತಾಗುತ್ತಾರೆ. ಇವರು ತಮ್ಮ ಕುಲಮೂಲಗಳನ್ನು ಹೇಳಿಕೊಳ್ಳುತ್ತ ಅವುಗಳ ಹೆಸರಿನಲ್ಲೇ ದೇವಾಲಯವ್ಯವಸ್ಥೆಯೊಂದನ್ನು ರೂಪಿಸಿಕೊಂಡು ಆ ಮೂಲಕ ಸಾಮಾಜಿಕವೂ ಆರ್ಥಿಕವೂ ಆದ ಅಸ್ಮಿತೆಯ ಸ್ಥಾಪನೆಗೆ ತೊಡಗುವುದು ಮುಖ್ಯಸಂಗತಿಯಾಗಿದ್ದು ಇದನ್ನು ಮತ್ತಷ್ಟು ವಿವರವಾಗಿ ಪ್ರಕೃತ ಅಧ್ಯಾಯವು ವಿವರಿಸುತ್ತದೆ.

### 6.1 ಸಮಾಜ ರಚನೆಯನ್ನು ರೂಪಿಸಿದ ಲಕ್ಷಣಗಳು:

ಸಮಾಜ ರಚನಾತ್ಮಕತೆಯ ಲಕ್ಷಣಗಳು ಸಮಾಜದ ರಚನೆಯಲ್ಲಿ ಸಂವರ್ಧನೆಯೆಂಬ ಆಯಾಮವನ್ನು ಇರಿಸಿಕೊಂಡು ನಾನು ಹೊಯ್ಸಳ ಮಹಾ ಮಂಡಳೇಶ್ವರರು ತಮ್ಮ ಆಡಳಿತಾತ್ಮಕ ಪ್ರದೇಶಗಳಲ್ಲಿ ಸ್ಥಳೀಯ ಸಮಾಜವನ್ನು ಯಾವ ರೀತಿಯಲ್ಲಿ ರೂಪು ಗೊಳಿಸುತ್ತಿದ್ದರು ಎಂಬ ಕುತೂಹಲದೊಂದಿಗೆ ಈ ಅಧ್ಯಾಯದ ರೂಪುರೇಶೆಯನ್ನು ತಯಾರಿಸಿದೆ. ಆಗ, ಇವರು ತಾವು ಅಧಿಕಾರಸ್ಥರಾಗಿದ್ದ ವಿಶಾಲ ರಾಜಕೀಯ ವಿಭಾಗಗಳಲ್ಲಿ ಸ್ಥಳೀಯವಾಗಿ ನವಸಮಾಜವನ್ನು ಕಟ್ಟಲು ಹೊರಟ ಮಹಾಕನಸಿಗರು ಎಂಬುದು ಅರಿವಿಗೆ ಬಂದಿತು. ಇದಕ್ಕೆ ಅವರ ಸಾಮಾಜಿಕ ಕೊಡುಗೆಗಳನ್ನು ಅನುಲಕ್ಷಿಸಿದಾಗ ಉದಾಹರಣೆಗಳು ದೊರೆಯುತ್ತವೆ.

ಹೊಯ್ಸಳರ ಕಾಲಾವಧಿಯ ಸಮಾಜ ಅತ್ಯಂತ ಸಂಕೀರ್ಣ ಸ್ವರೂಪದ್ದಾಗಿತ್ತು. ಬಹುತ್ವದ ವಿನ್ಯಾಸಗಳೊಂದಿಗೆ ಸಮಾಜವು ವಿಕಾಸಗೊಳ್ಳುವ ಪ್ರಕ್ರಿಯಯಲ್ಲಿ ಲೀನವಾಗಿ ಹೋಗಿತ್ತು. ಸಮಾಜದ ವಿಭಿನ್ನ

ಸ್ತರಗಳು ಸ್ಪಷ್ಟವಾಗಿ ಕಾಣಿಸಿಕೊಳ್ಳತೊಡಗಿ, ಒಟ್ಟೊಟ್ಟಿಗೆ ಇರುವ, ಬೇರೆಬೇರೆಯಾಗಿ ನಿಲ್ಲುವ ಸೂಚನೆಗಳು ಕಾಣಿಸಿಕೊಳ್ಳತೊಡಗಿದವು. ಇಲ್ಲಿ ಸಮಾಜದ ವಿವಿಧ ಸ್ತರಗಳೆಂದರೆ, ಬೇಟೆ, ಪಶುಸಂಗೋಪನೆ, ಕೃಷಿ, ಉದ್ದಿಮೆ ಮುಂತಾದವುಗಳನ್ನು ಆಧರಿಸಿ ನಿರ್ಮಾಣಗೊಂಡ ವ್ಯವಸ್ಥೆಗಳು. ಇವುಗಳ ಅಧ್ಯಯನ ಕೈಗೊಂಡಾಗ ಅಂದಿನ ಸಮಾಜವು ಏಕರೂಪದ್ದಾಗಿರಲಿಲ್ಲ. ಬಹುರೂಪಿಯಾಗಿತ್ತು ಎಂಬುದು ತಿಳಿದುಬರುತ್ತದೆ. ಇಂತಹ ಪ್ರಕ್ರಿಯೆಗಳು ಘಟಿಸುತ್ತಿರುವ ಸಂದರ್ಭದಲ್ಲಿಯೇ ವರ್ಣ/ಜಾತಿ, ಕುಟುಂಬ, ಶಿಕ್ಷಣ, ಮಹಿಳೆ ಈ ನಾಲ್ಕು ವ್ಯವಸ್ಥೆಗಳು ಸಾಮಾಜಿಕ ರಚನೆಯ ಮುಖ್ಯ ನಿರ್ಧಾರಕ ಅಂಶಗಳಾಗಿ ಸ್ಪಷ್ಟವಾಗಿ ರೂಪುಗೊಂಡು ಸಂಸ್ಕೃತಿಯ ಸಮರ್ಥವಾಹಕಗಳಾಗ ತೊಡಗಿದ್ದವು. ಇವುಗಳೆಲ್ಲದರ ಜೊತೆಜೊತೆಗೆ ನಾನು ಅತ್ಯಂತ ಸೂಕ್ಷ್ಮವಾಗಿ ಸಮಾಜಶಾಸ್ತ್ರೀಯ ಪರಿಕಲ್ಪನೆಯ ಒಳಗಡೆ ಈ ಆಯಾಮಗಳನ್ನು ವಿಷದೀಕರಿಸಿದ್ದೇನೆ. ವಿಶೇಷವಾಗಿ ಸಾಮಾಜಿಕ ಅಧ್ಯಯನವನ್ನು ಸಮಾಜಶಾಸ್ತ್ರೀಯ ಪರಿಕಲ್ಪನೆಗಳೊಂದಿಗೆ ವಿವರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಸಾಮಾಜಿಕರಿಂದಲೇ ಸಮಾಜ. ಸಮಾಜವೆಂಬುದು ಹಲವಾರು ಆಚರಣೆಗಳ ಮತ್ತು ಕ್ರಮವಿಧಾನಗಳ, ಅಧಿಕಾರ ಮತ್ತು ಪರಸ್ಪರ ಸಹಾಯಗಳ, ಹಲವಾರು ಸಮೂಹಗಳ ಮತ್ತು ವಿಂಗಡಣೆಗಳ, ಮಾನವ ವರ್ತನೆಯ ಬಗೆಗಿನ ನಿಯಂತ್ರಣಗಳ ಹಾಗೂ ಸ್ವಾತಂತ್ರ್ಯಗಳನ್ನೊಳಗೊಂಡ ಒಂದು ವ್ಯವಸ್ಥೆಯಾಗಿದೆ. ಸದಾ ಪರಿವರ್ತನೀಯವಾದ ಈ ಸಂಕೀರ್ಣ ವ್ಯವಸ್ಥೆಯನ್ನು ನಾವು ಸಮಾಜ ಎನ್ನುತ್ತೇವೆ. ಆಧುನಿಕ ಸಮಾಜಶಾಸ್ತ್ರಜ್ಞರು ಗುರುತಿಸಿರುವ ಸಮಾಜಶಾಸ್ತ್ರೀಯ ಮೂಲಭೂತ ಪರಿಕಲ್ಪನೆಗಳು ಆಯಾ ಸಮಾಜವನ್ನು ವೈಜ್ಞಾನಿಕವಾಗಿ ಮತ್ತು ರಚನಾತ್ಮಕವಾಗಿ ಅಧ್ಯಯನ ಮಾಡಲು ಮತ್ತು ಅರಿತುಕೊಳ್ಳಲು ಸಹಾಯಕವಾಗುತ್ತವೆ. ಅಂತೆಯೇ ಹೊಯ್ಸಳ ಮಹಾಮಂಡಲೇಶ್ವರರು ಅಧಿಕಾರದಲ್ಲಿದ್ದ ಪ್ರದೇಶಗಳು ವಸ್ತುತಃ ಒಂದೊಂದು ಸಮಾಜಗಳು ಅಥವಾ ಸಾಮಾಜಿಕ ಸಮೂಹಗಳು ಆಗಿದ್ದವು. ಆದ್ದರಿಂದ ನಾನು ಸಮಾಜಶಾಸ್ತ್ರೀಯ ಪರಿಕಲ್ಪನೆಗಳ ದೃಷ್ಟಿಯಿಂದ ಅವರ ಶಾಸನಗಳು ಮತ್ತು ಸಾಹಿತ್ಯಕ ಆಕರಗಳ ಬೆಳಕಿನಲ್ಲಿ ಹೊಯ್ಸಳ ಮಹಾಮಂಡಳೇಶ್ವರರ ಅಧೀನದಲ್ಲಿದ್ದ ಸಮಾಜ ಮತ್ತು ಸಾಮಾಜಿಕ ಸ್ವರೂಪವನ್ನು ಮುಂದಿಡುತ್ತಿದ್ದೇನೆ.

ಸಮಾಜಶಾಸ್ತ್ರಜ್ಞರಾದ ಮಕೈವರ್ ಮತ್ತು ಪೇಜ್ ಅವರ ಪ್ರಕಾರ[1] ಅಂತಃಸಂಬಂಧಗಳು, ಹೋಲಿಕೆ ಅಥವಾ ಸಾಮ್ಯತೆಯ ಮೇಲಿನ ಅವಲಂಬನೆ, ಭಿನ್ನತೆ ಮತ್ತು ವ್ಯತ್ಯಾಸ, ಶ್ರಮವಿಭಜನೆ ಈ ಲಕ್ಷಣಗಳು ಸಮಾಜದ ಆಂತರಿಕ ಮತ್ತು ಬಾಹ್ಯ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಯಪಡಿಸುತ್ತವೆ. ಇವುಗಳು ಆಧುನಿಕ ಸಮಾಜಶಾಸ್ತ್ರದ ಪರಿಕಲ್ಪನೆಗಳಾದರೂ ಜಾಗತಿಕವಾಗಿ ಒಪ್ಪಿತವಾದ ಇಂತಹ ಮಾನದಂಡಗಳು ಸಮಾಜರಚನೆಯ ಹಲವು ಒಳನೋಟಗಳನ್ನು ನಮಗೆ ಒದಗಿಸಬಲ್ಲದು ಎನ್ನುವುದು ಅಧ್ಯಯನದ ದೃಷ್ಟಿಯಿಂದ ಬಹಳ ಮುಖ್ಯವಾಗುತ್ತದೆ ಎನ್ನುವುದನ್ನು ಪ್ರಸ್ತುತ ಅಧ್ಯಯನವು ಮುನ್ನಲೆಗೆ ತರಲು ಪ್ರಯತ್ನಿಸಿದೆ. ಇವುಗಳನ್ನು ಒಂದೊಂದಾಗಿ ಉದಾಹರಣೆ ಸಹಿತವಾಗಿ ಗಮನಿಸುವುದು ಒಳ್ಳೆಯದು.

**6.1.1 ಅಂತಃಸಂಬಂಧಗಳು** ಹಲವು ಜನರು ಒಟ್ಟುಗೂಡಿ ನಿರ್ದಿಷ್ಟ ಗುಂಪುಗಳಲ್ಲಿ ಬದುಕಿದರೆ ತಾನೆ 'ಸಮೂಹ'ವಾಗುವುದು ಸಮಾಜವು ಇಂತಹ ಹಲವು ಸಮೂಹಗಳ ಒಂದು ಮೊತ್ತ. ಈ ಸಮೂಹಗಳ ಸದಸ್ಯರು ಪರಸ್ಪರ ಸಂಬಂಧ ಹೊಂದಿರಬೇಕು. ಇಬ್ಬರು ಅಥವಾ ಅದಕ್ಕಿಂತ ಹೆಚ್ಚು ವ್ಯಕ್ತಿಗಳ ನಡುವಿನ ಪರಸ್ಪರ ಕೊಡುವ ತೆಗೆದುಕೊಳ್ಳುವ ಸಂಬಂಧವನ್ನು ನಾವು ಸಾಮಾಜಿಕ ಸಂಬಂಧ ಎನ್ನಬಹುದಾಗಿದೆ. ಅಧಿಕಾರಿಗಳು–ಪ್ರಜೆಗಳು, ಗುರುಗಳು–ಶಿಷ್ಯರು, ವರ್ತಕರು–ವ್ಯಾಪಾರಿಗಳು ಇತ್ಯಾದಿ. ಇವರನಡುವೆ ಒಂದು ಅಂತಃಸಂಬಂಧ ಇದ್ದೇ ಇರುತ್ತದೆ. ಇಂತಹ ಸಂಬಂಧಗಳ ಗಡಿಗಳೇ ಸಮಾಜ ಗಡಿಗಳು ಎನಿಸಿಕೊಂಡುಬಿಡುತ್ತವೆ. ಉದಾಹರಣೆಗೆ :

➢ ರಾಜಾಧ್ಯಕ್ಷದ ಹೆಗ್ಗಡೆ ರೇವಣನು ಅಧಿಕಾರದಲ್ಲಿದ್ದಾಗ ನಡೆದ ಒಂದು ಘಟನೆಯು ಈ ಅಂತಃಸಂಬಂಧಕ್ಕೆ ಒಳ್ಳೆಯ ಉದಾಹರಣೆಯಾಗಿದೆ. ಸಮಾಜದ ಒಂದು ಅಲಕ್ಷ್ಯ ವರ್ಗವಾದ ಗೊಜ್ಜರ ಹಿತಕಾಯುವಲ್ಲಿ ಅಧಿಕಾರಿಯಾದ ರೇವಣ, ಪ್ರಮುಖ ಗುರುಗಳು ಮತ್ತು ವ್ಯಾಪಾರಿಗಳು ಹೇಗೆ ಸಹಕರಿಸಿದ್ದರು ಎಂಬುದು ಇದರಿಂದ ವಿದಿತವಾಗುತ್ತದೆ. ಅರಸಿಯಕೆರೆಯಲ್ಲಿರುವ ಗೊಜ್ಜೇಶ್ವರ ದೇವರ ಅಂಗಭೋಗ ರಂಗಭೋಗ ನಿವೇದ್ಯ ನಂದಾದೀವಿಗೆ ಖಂಡಸ್ಫುಟಿತ ಜೀರ್ಣೋದ್ದಾರಗಳಿಗೆಂದು ಮತ್ತು ಮಠಪತಿ ತಪೋಧನರ ಆಹಾರದಾನಕ್ಕೆಂದು ಲಾಕುಳಾಗಮ ಸಮಯಸಮುದ್ದರಣ ಎನಿಸಿದ ಕಾಳಾಮುಖ ಪ್ರತಿಬದ್ಧರೂ ಆದ ತ್ರಿಲೋಕ್ಯಶಕ್ತಿ ಪಂಡಿತರ ಶಿಷ್ಯ ಧರ್ಮರಾಶಿ ಪಂಡಿತರ ಮಗ ಅಮ್ರಿತರಾಶಿಪಂಡಿತರಿಗೆ ವೀರಬಲ್ಲಾಳನ ಬೆಸದಿಂದ ರಾಜಾಧ್ಯಕ್ಷರ ಹೆಗ್ಗಡೆ ರೇವಣ್ಣನೂ ಕೇತಮಲ್ಲನೂ ಅರಸಿಯಕೆರೆಯ ಮಹಾಜನಗಳೂ ಸಮಸ್ತ ಪ್ರಜೆಗಾವುಂಡುಗಳು ಅಂಗಡಿಯ ನಖರಗಳೂ ಉಗುರಮೂನೂರ್ವರೂ ಬೂವಗೌಡನೊಳಗಾದ ಸಮಸ್ತಗೊಜ್ಜರೂ ಸೇರಿಕೊಂಡು ಕಣಿಗನಕೆರೆಯ ಕೆಳಗಿನ 4ಸಲಗೆ ಗದ್ದೆ 400 ಕಂಬ ಹೊಲಗಳನ್ನು ಮತ್ತು 1 ಗಾಣವನ್ನು ದಾನವಿತ್ತರು[2]

➢ ಬಿಟ್ಟಿಮಯ್ಯ ದಂಡನಾಯಕನನ್ನು ಅರಸ ವಿಷ್ಣುವರ್ಧನನು ತನ್ನ ಸ್ವಂತ ಮಗನಂತೆಯೇ ಸ್ವೀಕರಿಸಿ ಅವನನ್ನು ಅತ್ಯಂತ ಪ್ರೀತಿಯಿಂದ ಸಾಕಿ ಬೆಳೆಸಿದನು. ಅವನಿಗೆ ತಾನೆ ಮುಂದೆ ನಿಂತು ಉಪನಯನ ಮಹೋತ್ಸವವನ್ನು ನಡೆಸಿದನು. ಜೊತೆಗೆ ಸಕಲ ವಿದ್ಯಾ ಪಾರಂಗತನನ್ನಾಗಿ ಮಾಡಿದನು. ಬಿಟ್ಟಿಮಯ್ಯನಿಗೆ ತನ್ನ ಪ್ರಧಾನ ದಂಡನಾಯಕನೊಬ್ಬನ ಮಗಳನ್ನು ತಂದು ವಿಷ್ಣುವರ್ಧನನು ತಾನೆ ಕನ್ಯಾದಾನವನ್ನು ಮಾಡಿ ವಿವಾಹಮಹೋತ್ಸವವನ್ನು ನೆರವೇರಿಸಿದನು. ಈ ಘಟನೆಯ 10–11ವರ್ಷಗಳ ತರುವಾಯ ಅವನ ಅಪಾರ ಬುದ್ಧಿಶಕ್ತಿಯನ್ನು ರಾಜನಿಷ್ಠೆಯನ್ನು, ಅದ್ವಿತೀಯ ಜಾಣ್ಮೆಯನ್ನು ಕಂಡು ತಾನೆ ಕೈಯಾರೆ ಅವನಿಗೆ ಮಹಾಪ್ರಚಂಡ ದಂಡನಾಥಪಟ್ಟವನ್ನು ಕಟ್ಟಿದನು; ಸಮಸ್ತಾಧಿಕಾರವನ್ನು ಕೊಟ್ಟನು; ಇದರ ಫಲವಾಗಿ ಬಿಟ್ಟಿಮಯ್ಯನು ಸರ್ವಾಧಿಕಾರಿಯಾಗಿ, ಸಕಳಜನೋಪಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದನು.

**6.1.2. ಹೋಲಿಕೆ ಅಥವಾ ಸಾಮ್ಯತೆಯ ಮೇಲಿನ ಅವಲಂಬನೆ :** ವ್ಯಕ್ತಿಗಳ ನಡುವಿನ ಸಂಬಂಧಗಳು ಏರ್ಪಡುವುದು ಪರಸ್ಪರ ಅರಿವಿನಿಂದಾಗಿ (ಮ್ಯೂಚ್ಯಯಲ್ ಅವೇರನೆಸ್). ಈ ಅರಿವಿನ

ಪರಿಣಾಮವಾಗಿ ಅವರಲ್ಲಿ ಏಕತೆಯ ಭಾವನೆಯು ಬೆಳೆಯುವುದು. ಒಂದು ಸಮೂಹದ ಜನರಲ್ಲಿ ದೈಹಿಕವಾಗಿಯಾಗಲೀ ಮತ್ತು ಮಾನಸಿಕವಾಗಿಯಾಗಲೀ ಸಾದೃಶ್ಯತೆಯಿರುತ್ತದೆ ಎಂಬುದರಿಂದಾಗಿಯೇ ಅವರಲ್ಲಿ ಒಡನಾಡಿತನ, ಅನ್ಯೋನ್ಯತೆ, ಸಹಕಾರ, ಸಾಮರಸ್ಯಗಳ ಜೊತೆಗೆ ಏಕರೀತಿಯ ಭಾವನೆ ಮತ್ತು ವರ್ತನೆ ಕಂಡುಬರುತ್ತದೆ. ಇದರ ಪರಿಣಾಮವಾಗಿ ಏಕರೀತಿಯ ಸಾಮಾನ್ಯ ಭಾವನೆಗಳು, ಉದ್ದೇಶಗಳು, ಆಸೆ–ಆಕಾಂಕ್ಷೆಗಳು, ಆದರ್ಶಗಳು, ಮೌಲ್ಯಗಳು ಮೂಡಿಬರುತ್ತವೆ. "ಒಂದೇ ಜಾತಿಯ ಪಕ್ಷಿಗಳು ಒಂದುಗೂಡುತ್ತವೆ" ಎಂಬ ಮಾತು ಈ ಅಂಶವನ್ನು ದೃಢೀಕರಿಸುತ್ತದೆ. ಜನರಲ್ಲಿ ಕಂಡುಬರುವ ಈ ಸಮಾನ ಮನೋಧರ್ಮವನ್ನು ಅಥವಾ ಸಮಾನ ಸ್ವಭಾವದ ಅರಿವನ್ನು ಗಿಡ್ಡಿಂಗ್ಸ್ ಎಂಬ ಸಮಾಜಶಾಸ್ತ್ರಜ್ಞನು "ತದೇಕ ಪ್ರಜ್ಞೆ" ಎಂದು ಕರೆದಿದ್ದಾನೆ. ಒಂದಿಷ್ಟೂ ಹೋಲಿಕೆ ಇಲ್ಲದ ಮಂದಿಯ ನಡುವೆ ಸ್ನೇಹ, ನಿಕಟತೆ, ಹಾಗೂ ಸಾಂಘಿಕತೆ ಏರ್ಪಡುವುದು ಅಸಾಧ್ಯ.

ಈ ದೃಷ್ಟಿಯಿಂದ ಗಮನಿಸುವುದಾದರೆ, ಹೊಯ್ಸಳ ಮಹಾಮಂಡಳೇಶ್ವರರಲ್ಲಿ ಗಂಗರಾಜನು ಶ್ರವಣಬೆಳಗೊಳದ ಸಾಂಸ್ಕೃತಿಕ ಪ್ರವರ್ಧಮಾನಕ್ಕೆ ಕಾರಣನಾದನು. ಅಲ್ಲಿಯೇ ನಿಧಾನವಾಗಿ ಒಂದು ಜೈನರ ಸಮೂಹ ನೆಲೆಗೊಳ್ಳುವಂತೆ ಮಾಡಿದನು. ನಾಡಿನ ಯಾವುದೋ ಮೂಲೆಮೂಲೆಗಳಿಂದ ಬಂದ ಜೈನರು ಅಲ್ಲಿ ಪರಸ್ಪರ ಸ್ನೇಹದಿಂದ, ಸಾಂಘಿಕತೆಯಿಂದ ಮತ್ತು ಸಾಮರಸ್ಯದಿಂದ ಜೀವಿಸತೊಡಗಿದರು. ಜೊತೆಗೆ ಮುಂದಿನ ದಿನಮಾನಗಳಲ್ಲಿ ಜೈನರ ಪ್ರಬಲವಾಗಿ ಸಂಘಟಿತವಾಗಿ ಬಾಳಲು ಇದು ಮುನ್ನುಡಿಯಾಯಿತು. ಇದೇ ಪರಿಸ್ಥಿತಿ ಮೇಲುಕೋಟೆ ಮತ್ತು ಅದರ ಸುತ್ತ ಮುತ್ತಲಿನ ಪರಿಸರದಲ್ಲಿ ರಾಮಾನುಜಾಚಾರ್ಯರ ಪ್ರಭಾವದಿಂದ ಕುತ್ತಾಂಡಿ ದಂಡನಾಯಕ ಮೊದಲಾದವರು ಶ್ರೀವೈಷ್ಣವರು ಹೆಚ್ಚಾಗಿ ನೆಲೆಗೊಂಡು ಬಾಳಲು ಸಹಾಕಾರಿಯಾಯಿತು. ತಾವು ಜೈನರು, ತಾವು ಶ್ರೀವೈಷ್ಣವರು ಎಂಬ ಸಾಮ್ಯತೆಯು ಪರಸ್ಪರರು ಸಮೂಹವಾಗಿ ಒಂದೆಡೆ ನಿಲ್ಲಲು ಸಮೂಹವಾಗಲು ಸಹಾಯಕವಾಯಿತು.

**6.1.3 ಭಿನ್ನತೆ ಮತ್ತು ವ್ಯತ್ಯಾಸ :** ಸಮಾಜದಲ್ಲಿ ಸಾಮ್ಯತೆ ಹೇಗಿರುತ್ತದೆಯೋ ಅಂತೆಯೇ ಭಿನ್ನತೆಯೂ ಸಹ ಇರುತ್ತದೆ. ದೈಹಿಕವಾಗಿ, ಜೈವಿಕವಾಗಿ ಹಲವರು ಜನರು ಭಿನ್ನರಾಗಿದ್ದರೆಂಬುದು ಒಪ್ಪತಕ್ಕ ಮಾತು. ಹಾಗೆಯೇ ಜನರ ಆಸಕ್ತಿ ಮತ್ತು ಅಭಿರುಚಿ, ಬುದ್ಧಿಶಕ್ತಿ ಮತ್ತು ಭಾವನೆಗಳು, ಧ್ಯೇಯ ಮತ್ತು ದೃಷ್ಟಿಕೋನ, ನಂಬಿಕೆ ಮತ್ತು ಶ್ರದ್ಧೆ, ಪ್ರತಿಭೆ ಮತ್ತು ಪಾಂಡಿತ್ಯ ಇವೇ ಮೊದಲಾದ ಮಾನಸಿಕ ಗುಣಗಳು ಎಂದಿಗೂ ಏಕ ರೀತಿಯಲ್ಲಿ ಎರಕ ಹೊಯ್ದಂತಿರುವುದು ಸಾಧ್ಯವಿಲ್ಲ. ಇಂತಹ ಭಿನ್ನತೆಗಳ ಕಾರಣದಿಂದಲೇ ಸಮಾಜದಲ್ಲಿ ಕೃಷಿಕರು, ಕಾರ್ಮಿಕರು, ಸೈನಿಕರು, ಶಿಕ್ಷಕರು, ವ್ಯಾಪಾರಿಗಳು, ವೈದ್ಯರು. ಕಲಾಕಾರರು ಇಂತಹ ಹಲವಾರು ಮಂದಿ ವೈವಿಧ್ಯಮಯ ವೃತ್ತಿ ಮತ್ತು ಉದ್ಯೋಗಗಳಲ್ಲಿ ಸಮಾಜದ ಅನ್ಯಾನ್ಯ ಕಾರ್ಯಗಳನ್ನು ನಿರ್ವಹಿಸುವುದು ಸಾಧ್ಯವಾಗಿದೆ. ಅಂತೆಯೇ ಹೊಯ್ಸಳ ಮಹಾಮಂಡಲೇಶ್ವರರ ನೂರಾರು ಶಾಸನಗಳಲ್ಲಿ ಆ ಕಾಲದ ಸಮಾಜದಲ್ಲಿ ಕೃಷಿಕರು, ಕುಶಲಕರ್ಮಿಗಳು, ಸೈನಿಕರು, ಉಪಾಧ್ಯಾಯರು, ವರ್ತಕರು, ವೈದ್ಯರು, ಕಲೆ–ವಾಸ್ತು–ಶಿಲ್ಪ ತಜ್ಞರು ಅಸ್ತಿತ್ವವನ್ನು ಪಡೆದಿದ್ದರು ಎಂಬುದು ಉಲ್ಲೇಖವಾಗಿದೆ.

**6.1.4 ಶ್ರಮವಿಭಜನೆ :** ಸಾಮಾನ್ಯ ಕಾರ್ಯವೊಂದನ್ನು ಜನರು ತಮ್ಮ ಆಸಕ್ತಿ ಮತ್ತು ಅಭಿರುಚಿ, ಕ್ಷಮತೆ–ಸಾಮರ್ಥ್ಯ, ವಯೋಮಾನ ಹಾಗೂ ಲಿಂಗ–ಭೇದ ಇವುಗಳ ಆಧಾರದ ಮೇಲೆ ತಮ್ಮೊಳಗೆ ಹಂಚಿಕೊಂಡು ದುಡಿಯುವುದು ಸಮಾಜದಲ್ಲಿನ ಶ್ರಮವಿಭಜನೆಯ ಪರಿಯಾಗಿದೆ. ಉದಾಹರಣೆಗೆ: ಎಲ್ಲರೂ ತೊಡುವ ಬಟ್ಟೆಯನ್ನು ಸಿದ್ದಪಡಿಸಲು ಕೃಷಿಕರು, ನೇಕಾರರು, ಬಣ್ಣಹಾಕುವವರು, ವರ್ತಕರು, ದರ್ಜಿಗಳು ಎಲ್ಲರೂ ಒಟ್ಟಿಗೆ ಆದರೆ ಬೇರೆ ಬೇರೆ ನೆಲೆಗಳಲ್ಲಿ ದುಡಿಯುವರು. ಈ ಬಗೆಯ ಶ್ರಮವಿಜನೆಯು ವಿಶೇಷ ಪರಿಣತಿಗೆ ಕಾರಣವಾಗುವುದು. ಈ ಪರಿಯ ಶ್ರಮವಿಭಜನೆಯು ಅಂದಿನ ಸಮಾಜದಲ್ಲಿ ಅನುಷ್ಠಾನದಲ್ಲಿತ್ತು.

**6.2 ಸಮುದಾಯ–ಸಾಮುದಾಯಿಕ ಮೂಲಾಂಶಗಳು:**

**6.2.1 ಮುಖ್ಯ ಮೂಲಾಂಶವಾಗಿ ಸ್ಥಾನೀಯತೆ :** ಸ್ಥಾನೀಯತೆಯು ಸಮಾಜದ ಆಂತರಿಕ ವ್ಯವಸ್ಥೆಯಾದ ಸಮುದಾಯದ ಬಹುಮುಖ್ಯ ಭೌತಿಕ ಲಕ್ಷಣವಾಗಿದೆ. ಈ ಸಮುದಾಯವು ಜನಾಂಗೀಯ ಸಮುದಾಯವಾಗಿರಬಹುದು; ಧಾರ್ಮಿಕ ಸಮುದಾಯ ವಾಗಿರಬಹುದು; ಬುಡಕಟ್ಟು ಸಮುದಾಯವಾಗಿರಬಹುದು; ವೃತ್ತಿನಿರತ ಸಮುದಾಯವಾಗಿರಬಹುದು. ಒಟ್ಟಿನಲ್ಲಿ ಸಮುದಾಯವು ಒಂದು ಪ್ರಾದೇಶಿಕ ಸಮೂಹವಾಗಿದ್ದು ನಿರ್ದಿಷ್ಟ ಭೌತಿಕ ಸ್ಥಳವೊಂದರಲ್ಲಿ ಅದರ ಸದಸ್ಯರು ಶಾಶ್ವತವಾಗಿ ನೆಲೆಯೂರಿದ್ದಾರೆ ಎಂಬಂಶವನ್ನು ಸ್ಥಾನೀಯತೆಯು ಸೂಚಿಸುವುದು. ಈ ಭೌತಿಕ ಸ್ಥಳವು ಭೌಗೋಳಿಕ ಗ್ರಾಮ, ನಗರ, ಪಟ್ಟಣ, ಅಥವಾ ವಾಸಯೋಗ್ಯವಾದ ಪ್ರದೇಶ ಹೀಗೆ ಯಾವುದೂ ಆಗಿರಬಹುದು. ಗಾತ್ರದಲ್ಲಿ ಇದು ಚಿಕ್ಕದಿರಬಹುದು ಅಥವಾ ದೊಡ್ಡದಿರಬಹುದು. ಒಂದೆಡೆ ನೆಲೆಸಿರುವ ಕಾರಣದಿಂದ ಜನರೊಳಗೆ ನಿರಂತರವಾದ ಸಂಪರ್ಕ ಸಂಬಂಧಗಳು ಬೆಳೆದು ಬರಲು ಸಾಧ್ಯವಾಗುವುದು. ಈ ಶಾಶ್ವತ ನೆಲೆಯು ಅವರಿಗೆ ರಕ್ಷಣೆ ಮತ್ತು ಭದ್ರತೆಯನ್ನು ಒದಗಿಸುವುದು. ಈ ಭೌತಿಕ ನೆಲೆಯು ಸಾಮಾಜಿಕವಾಗಿ ಜನರ ಆಚಾರ ವಿಚಾರ, ಮತ ಧರ್ಮ, ನಂಬಿಕ ಶ್ರದ್ದೆ, ವೃತ್ತಿ ವ್ಯಾಪಾರ ಹೀಗೆ ಮುಂತಾದವುಗಳನ್ನೊಳಗೊಂಡ ಒಟ್ಟು ಜನಜೀವನದ ಒಂದು ಮೊತ್ತವಾದ ಸಂಸ್ಕೃತಿಯ ಮೇಲೆ ಗಣನೀಯವಾದ ಪ್ರಭಾವವನ್ನು ಬೀರುವುದು.

ಕೃಷಿಯ ಕಲೆಯನ್ನು ಕರಗತ ಮಾಡಿಕೊಂಡ ಕೃಷಿಕರು, ಬಡಗಿಗಳು, ಕಮ್ಮಾರರು ಮೊದಲಾದವರು ಹೆಚ್ಚು ಸುಭದ್ರವಾದ ಗ್ರಾಮ ಸಮುದಾಯಗಳಲ್ಲಿ ವಾಸಿಸುವುದು ಸಹಜವಾಗಿದೆ, ಈ ಸಮುದಾಯಿಕತೆಯಲ್ಲಿ ಪ್ರತಿಯೊಬ್ಬ ಸದಸ್ಯನು ನಾವು ನಮ್ಮವರು ಎಂಬ ಭಾವನೆಯನ್ನು ಉಳ್ಳವರಾಗಿರುತ್ತಾರೆ. ರೈತ, ಬಡಗಿ, ಚಮ್ಮಾರ, ಕುಂಬಾರ, ಮೊದಲಾದವರು ತಮಗಾಗಿ ಮಾತ್ರವಲ್ಲದೆ ಸಮುದಾಯದ ಇತರರಿಗಾಗಿಯೂ ತನ್ನ 'ಪಾತ್ರ'(ರೋಲ್ –ಫೀಲಿಂಗ್)ದಲ್ಲಿ ತೊಡಗಿರುತ್ತಾರೆ. ಈ ಸನ್ನಿವೇಶಗಳಲ್ಲಿ ಸ್ಥಾನೀಯತೆ ಪ್ರಬಲ ಅಂಶವಾಗಿ ಕಾರ್ಯ ನಿರ್ವಹಿಸಿರುವುದನ್ನು ಕಾಣಬಹುದು. ಹೊಯ್ಸಳ ಮಹಾಮಂಡಳೇಶ್ವರರು ತಮ್ಮ ಆಡಳಿತದ ಪರಿಧಿಯಲ್ಲಿ ಕೊಟ್ಟಂತಹ ದಾನಗಳಲ್ಲಿ ಅನೇಕವು ಸಮುದಾಯದಲ್ಲಿ ಜೀವನ ನಿರ್ವಹಿಸುವ ಇಂತಹ ಸದಸ್ಯರಿಗೆ ಸಂದಿರುವುದು ಮುಖ್ಯವಾಗಿ ಗಮನಿಸಬೇಕು.

ಪದೇ ಪದೇ ಅವರ ಶಾಸನಗಳಲ್ಲಿ "ವೀರಪಾಂಚಾಳರು", "ಪೂಜಾಪರಿಚಾರಕರು", "ದೇಗುಲದ ನಿಯೋಗಿಗಳು" ಎಂದು ಮುಂತಾಗಿ ಉಲ್ಲೇಖಗೊಳ್ಳುವ ಪದಗಳು ಈ ಅಂಶವನ್ನು ದೃಢಪಡಿಸುತ್ತದೆ. ಆದರೆ ಬೇಟೆಗಾರರು ಅಲೆಮಾರಿಗಳು ಅಭದ್ರವಾದ ಸಮುದಾಯಗಳಲ್ಲಿ ವಾಸಿಸುತ್ತಾರೆ. ಸ್ಥಾನೀಯತೆಯ ಅಂಶ ಕೊರತೆಯಿಂದಾಗಿಯೇ ಅಲೆಮಾರಿಗಳನ್ನು ಒಂದು ಸಮುದಾಯ ಎಂದು ಪರಿಗಣಿಸಲಾಗುವುದಿಲ್ಲವಷ್ಟೆ.

**6.2.2 ಸಾಪೇಕ್ಷ ಶಾಶ್ವತತೆ ಅಥವಾ ಸ್ಥಿರತೆ :** ಜನರು ಒಂದೆಡೆ ನೆಲೆನಿಂತು ವಾಸಿಸಲು ಆರಂಭಿಸಿದ ಮೇಲೆ ಅದನ್ನು ಅಷ್ಟು ಬೇಗನೆ ಬಿಟ್ಟು ಇನ್ನೊಂದೆಡೆಗೆ ಹೋಗುವುದಿಲ್ಲ. ಅದರಲ್ಲೂ ಸ್ಥಿರಾಸ್ತಿಯನ್ನು ಮಾಡಿಕೊಂಡ ಮೇಲಂತೂ ಆ ಭಾಗವನ್ನು ಬಿಟ್ಟು ಹೊರಡುವುದು ದೂರವೇ ಉಳಿಯಿತು. ತಾವು ನೆಲೆನಿಂತ ಪ್ರದೇಶದ ಒಡನಿರುವ ಭಾವನಾತ್ಮಕ ಸಂಬಂಧವು ಕೂಡ ಅದನ್ನು ಬಿಟ್ಟು ಹೋಗದಂತೆ ಒತ್ತಡ ಹೇರಿ ಅವರನ್ನು ಶಾಶ್ವತವಾಗಿ ಒಂದೆಡೆ ಅಲ್ಲಿಯೇ ನೆಲೆಯೂರುವಂತೆ ಮಾಡುವುದು. ಇದಕ್ಕೆ ಅಂದಿನ ಸಮಾಜದಲ್ಲಿದ್ದ ವಲಸೆ ಪ್ರಕ್ರಿಯೆಗಳನ್ನು ಉದಾಹರಿಸಬಹುದು–

- ಮಹಾಪ್ರಧಾನ ಪೆರ್ಮಾಡಿದೇವನ ಹಿರಿಯ ತಲೆಮಾರಿನವನಾದ ಮಾರಿಸೆಟ್ಟಿಯ ವಲಸೆ ಇದಕ್ಕೆ ಒಳ್ಳೆಯ ಉದಾಹರಣೆಯಾಗಿದೆ. ಅಯ್ಯಾವಳೆಯ ಬಳೆಗಾರ ಮಾರಿಶೆಟ್ಟಿಯು ತೆಂಕಣ ಪ್ರದೇಶದಲ್ಲಿ ವ್ಯವಹಾರ ಮಾಡಲು ಬಯಸಿ ಇಲ್ಲಿಗೆ ಬಂದು ಹೊಯ್ಸಳ ದೇವನನ್ನು ಕಂಡು ಅವನ ನಂಬಿಕೆ ಮೆಚ್ಚುಗೆ ಗಳಿಸಿದ್ದನು. ಇದರ ಫಲವಾಗಿ ಮಹಾಪ್ರಭು ಪದವಿಗೇರಿದ್ದನು.[3]
- 2ನೆ ವೀರಬಲ್ಲಾಳನು ನೊಳಂಬ ವಿಷಯದಲ್ಲಿರುವ ಆನುಜಮಹಾಗ್ರಹಾರದಲ್ಲಿ (?)ಬೀಡುಬಿಟ್ಟಿದ್ದಾಗ ಅವನ ತಂತ್ರಾಧಿಷ್ಟಾಯಕ, ಪರಮವಿಶ್ವಾಸಿ, ಮಹಾಪಸಾಯಿತನಾದ **ಅವತಾರಭಟ್ಟಯ್ಯ ನಾಯಕನು** ಹೇಗೂರಿನಲ್ಲಿ ಲಕ್ಷ್ಮಿ ನಾರಾಯಣ ದೇವರನ್ನು ಪ್ರತಿಷ್ಠಾಪಿಸಿ ದೇವರ ವಿವಿಧ ಸೇವೆಗಳಿಗೆಂದು ಬಿಟ್ಟೆಯನಹಳ್ಳಿ ಬಾಹುಬಲಿಹಳ್ಳಿಗಳನ್ನು ದತ್ತಿಯಾಗಿ ನೀಡಿದನು. 40 ಗದ್ಯಾಣವನ್ನು ಪಿಂಡಾದಾನ ವಾಗಿಯೂ ಸಹ ನೀಡಲಾಯಿತು. ಈ ಅವತಾರಭಟ್ಟಯ್ಯನಾಯಕನು ಕಾಶ್ಮೀರ ರಾಷ್ಟ್ರದ ಲೋಲಾಯ ದೇಶದ ಅಗ್ರಹಾರವಾದ ದಾರುಶ ಗ್ರಾಮಕ್ಕೆ ಸೇರಿದವನು.[4]

**6.2.3 ಸಂಘ:** ಪ್ರತೀ ಸಮುದಾಯವು ಎಲ್ಲರಿಗೂ ಅನ್ವಯವಾಗುವಂತಹ ಸಾಮಾನ್ಯ ಆಸಕ್ತಿಗಳನ್ನು ಹೊಂದಿರುತ್ತವೆ. ಇದು ಸಮಾಜಶಾಸ್ತ್ರೀಯ ಪರಿಕಲ್ಪನೆಯ ಪ್ರಭಾವಳಿಯಲ್ಲಿ ಪ್ರಾದೇಶಿಕತೆಯ ಅಂಶವನ್ನು ಒಳಗೊಂಡಿದೆ. ಈ ಪ್ರಾದೇಶಿಕತೆಯ ಅಂಶವು ಸ್ಥಳೀಯವಾಗಿ ಮಹತ್ವಪೂರ್ಣವಾಗಿರುತ್ತದೆ. ಹಾಗಾಗಿ ಸಮುದಾಯವು ಸಂಘಕ್ಕಿಂತಲೂ ಹೆಚ್ಚು ಸ್ಥಿರವಾಗಿ ಹಾಗೂ ಶಾಶ್ವತವಾಗಿರಬಲ್ಲದು. ಇದರ ವ್ಯಾಪ್ತಿಯೊಳಗೆ ಹಲವಾರು ಸಂಘಗಳಿರಬಹುದಾದ ಸಾಧ್ಯತೆಗಳೆ ಹೆಚ್ಚು. ಒಂದು ನಿಶ್ಚಿತ ಧರ್ಮಕ್ಕೆ ಸೇರಿದ ಆ ಧರ್ಮದ ಅನುಯಾಯಿಗಳು ಒಂದು ಸಮುದಾಯವಾಗಿ ನಿಶ್ಚಿತ ಭೂಪ್ರದೇಶಗಳಲ್ಲಿ ವಾಸಮಾಡುತ್ತಿದ್ದುದನ್ನು ಲಕ್ಷಿಸಬೇಕು. ಈ ಪ್ರದೇಶಗಳಲ್ಲಿ ನೆಲೆಕಂಡ ಮಠಗಳು ಮತ್ತು ದೇವಾಲಯಗಳು ಸಹ ಒಂದು ರೀತಿಯಲ್ಲಿ

ಸಂಘದ ಸ್ವರೂಪವನ್ನು ಪಡೆದಿದ್ದವು. ಹೀಗಾಗಿ ಇವುಗಳನ್ನು ಸಮಾಜಶಾಸ್ತ್ರೀಯ ಪರಿಕಲ್ಪನೆಯೊಳಗೆ ಸಂಘ ಎಂಬ ಪರಿಭಾಷೆಗೆ ಸೇರಿಸಿ ಅದರಲ್ಲಿ ಒಂದು ವಿಧವಾದ ಧಾರ್ಮಿಕ ಸಂಘಗಳೆಂದು ಕರೆಯಬಹುದು.

ಜೈನ ಧರ್ಮಕ್ಕೆ ಸೇರಿದ ಜನರ ಸಮೂಹವನ್ನು ಜೈನ ಸಮುದಾಯವೆಂದು ಕರೆದು, ಅವರು ಹೆಚ್ಚು ನೆಲೆಗೊಂಡಿರುವ ಶ್ರವಣಬೆಳಗೊಳ, ಕೊಪ್ಪಳ, ಹೊಂಬುಜ, ಮಂದರಗಿರಿ, ಹನಸೋಗೆ, ಸಾಲಿಗ್ರಾಮಗಳನ್ನು ಈ ಸಮುದಾಯದ ಪ್ರಧಾನ ಕೇಂದ್ರಗಳೆಂದು ಕರೆಯಬಹುದಾಗಿದೆ. ಈ ಜೈನ ಸಮುದಾಯದ ಒಳಗಡೆ ಯಾಪನೀಯ ಮತ್ತಿತರ ಸಂಘಗಳು ಇರುವುದನ್ನು ಗಮನಿಸಬಹುದು. ಅಂತೆಯೇ ಶೈವ ಧರ್ಮಕ್ಕೆ ಸೇರಿದ ಜನರ ಸಮೂಹವನ್ನು ಶೈವ ಸಮುದಾಯವೆಂದು ಕರೆದು ಅವರು ಹೆಚ್ಚು ನೆಲೆಗೊಂಡಿರುವ ಬಳ್ಳಿಗಾವೆ, ಹಳೇಬೀಡು, ಸೋಮನಾಥಪುರ, ತಲಕಾಡು, ಬಂಕಾಪುರ ಇತ್ಯಾದಿಗಳನ್ನು ಈ ಸಮುದಾಯದ ಪ್ರಧಾನ ಕೇಂದ್ರಗಳೆಂದು ಕರೆಯಬಹುದಾಗಿದೆ. ಈ ಶೈವಸಮುದಾಯದ ಒಳಗಡೆ ಕಾಳಾಮುಖರು, ಕಾಪಾಲಿಕರು ಮೊದಲಾದ ಸಂಘಟಿತ ಪಂಥಗಳು ಇದ್ದವು. ಇನ್ನು ಶ್ರೀವೈಷ್ಣವ ಧರ್ಮಕ್ಕೆ ಸೇರಿದ ಜನರ ಸಮೂಹವನ್ನು ಶ್ರೀವೈಷ್ಣವ ಸಮುದಾಯವೆಂದು ಕರೆದು ಅವರು ಹೆಚ್ಚು ನೆಲೆಗೊಂಡಿರುವ ಮೇಲುಕೋಟೆ, ತೊಣ್ಣೂರು, ಶ್ರೀರಂಗಪಟ್ಟಣ, ಶಿವನಸಮುದ್ರ ಮುಂತಾದವುಗಳನ್ನು ಈ ಸಮುದಾಯದ ಪ್ರಧಾನ ಕೇಂದ್ರಗಳೆಂದು ಕರೆಯಬಹುದಾಗಿದೆ. ಈ ಶ್ರೀವೈಷ್ಣವ ಸಮುದಾಯದ ಒಳಗಡೆ ಅನೇಕ ಸಂಘಟಿತ ಬಗೆಗಳು ಇರುವುದನ್ನು ಕಾಣಬಹುದು.

ಯಾವುದೇ ಸಮುದಾಯದ ಒಳಗಿನ ಸಂಘಗಳು ನಿರ್ದಿಷ್ಟ ಆಸಕ್ತಿ ಇಲ್ಲವೇ ಆಸಕ್ತಿಗಳನ್ನು ಹೊಂದಿದ್ದು ಅವು ಅವುಗಳಿಗೆ ಸಂಪೂರ್ಣವಾಗಿ ಬದ್ಧರಾಗಿ ಪ್ರಕಟಿತ ಸಂಘಟಿತವಾದ ಸಮೂಹವಾಗಿರುತ್ತವೆ. ಈ ಸಂಘಗಳು ಅತ್ಯಂತ ಸೂಕ್ಷ್ಮವಾದ ಆಯಾಮದಲ್ಲಿ ಸಾರ್ವಜನಿಕ ಸಮೂಹಗಳಾಗಿರುತ್ತವೆ ಎಂಬುದು ಮುಖ್ಯವಾಗಿರುತ್ತವೆ. ಆದ್ದರಿಂದ ಸಂಘಗಳಲ್ಲಿ ಸಂಘಟನೆಯು ಪ್ರಬಲವಾಗಿದ್ದು ಸಮುದಾಯದ ಜನರ ಭಾಗವಹಿಸುವಿಕೆಯನ್ನು ಹೆಚ್ಚು ಬೇಡುತ್ತದೆ. ಸಂಘಟನೆಯು ಸಂಘಕ್ಕೊಂದು ರೂಪವನ್ನು ವ್ಯವಸ್ಥೆಯನ್ನು ಭದ್ರತೆಯನ್ನು ನೀಡುತ್ತದೆ. ಹೊಯ್ಸಳ ಮಹಾಮಂಡಳೇಶ್ವರರು ತಮ್ಮ ಆಳ್ವಿಕೆಯ ಪ್ರದೇಶಗಳಲ್ಲಿ ತಮ್ಮ ಸಮುದಾಯವನ್ನು ಸಂಘಟಿಸುವಲ್ಲಿ ಮುಖ್ಯವಾದ ಪಾತ್ರವನ್ನು ನಿರ್ವಹಿಸಿದ್ದರು. ಉದಾ: ಗಂಗರಾಜನು ಅವನು ಅಲ್ಲಿ ನೆಲೆಗೊಳ್ಳುವವರೆಗೂ ತೀರ್ಥಕ್ಷೇತ್ರವಾಗಿದ್ದ ಶ್ರವಣಬೆಳಗೊಳವನ್ನು ಒಂದು ಪ್ರಸಿದ್ಧ ಜೈನ ಸಾಂಸ್ಕೃತಿಕ ಕೇಂದ್ರವನ್ನಾಗಿ ರೂಪಿಸುವಲ್ಲಿ ಮತ್ತು ಆ ಮುಖಾಂತರ ಜೈನ ಸಮುದಾಯವನ್ನು ಸಂಘಟಿಸುವಲ್ಲಿ ಪ್ರಧಾನವಾದ ಪಾತ್ರವನ್ನು ನಿರ್ವಹಿಸಿದ್ದಾನೆ. ಗಂಗರಾಜನ ತರುವಾಯ ಅಧಿಕಾರಕ್ಕೆ ಬಂದ ಹುಳ್ಳದಂಡಾಧಿಪ, ಚಂದ್ರಮೌಳಿ ಮೊದಲಾದ ದಂಡನಾಯಕರು ಗಂಗರಾಜನು ಹಾಕಿಕೊಟ್ಟ ಜೈನಸಮುದಾಯ ಪರ ಚಟುವಟಿಕೆಗಳನ್ನು ಮುಂದುವರಿಸಿಕೊಂಡು ಹೋಗುತ್ತಾರೆ.

➢ ಗೋವಿದೇವ ಮತ್ತು ಅವನ ನಂತರದ ಅಧಿಕಾರಿಗಳು ತುಮಕೂರು, ಚಿಕ್ಕನಾಯಕನಹಳ್ಳಿ, ಕಡೂರು, ಅರಸೀಕೆರೆ ಮತ್ತು ಅವುಗಳ ಸುತ್ತಮುತ್ತಲಿನ ಪರಿಸರದಲ್ಲಿ ಶೈವ ಸಮುದಾಯವನ್ನು

ಸಂಘಟಿಸುವಲ್ಲಿ ಈ ಪ್ರದೇಶಗಳಲ್ಲಿನ ಹಲವಾರು ಶೈವ ದೇಗುಲಗಳು, ಮಠಗಳನ್ನು ಸ್ಥಾಪಿಸಿ ದಾನ ದತ್ತಿಗಳನ್ನು ನೀಡಿ, ಅಲ್ಲಿನ ಸ್ಥಾನಿಕರಿಗೆ ಹೆಚ್ಚು ಬೆಂಬಲಗಳನ್ನು ನೀಡುತ್ತಾ ಅವರು ಪ್ರಬಲಗೊಳ್ಳುವಂತೆ ಮಾಡಿದರು. ಈ ನಡೆಗಳು ಆ ಮೂಲಕ ಶೈವ ಪಂಥೀಯರನ್ನು ಒಂದೆಡೆ ಸಂಘಟಿಸುವಲ್ಲಿ ನೆರವಾಯಿತು.

➢ ಚಕ್ರವರ್ತಿ ದಂಡನಾಯಕ, ಮಾಧವದಂಡನಾಯಕ, ಕುತ್ತಾಂಡಿದಂಡನಾಯಕ, ಅಚ್ಯುತಿಮಯ್ಯ ದಂಡನಾಯಕ ಮೊದಲಾದವರು ಶ್ರೀವೈಷ್ಣವ (ಮೇಲೇ ಉಲ್ಲೇಖಿಸಿದ ಪ್ರದೇಶಗಳಲ್ಲಿ) ಕೇಂದ್ರಗಳನ್ನು ನಿರ್ಮಿಸಿ, ಶ್ರೀವೈಷ್ಣವ ಸಮುದಾಯದ ಜನರು ಸಂಘಟಿತರಾಗಿ ನೆಲೆಯೂರುವಂತೆ ಮತ್ತು ತಮ್ಮ ಸಮುದಾಯದ ಜನಸಂಖ್ಯಾ ವೃದ್ಧಿಗೆ ಮತಾಂತರ ಪ್ರಕ್ರಿಯೆಯನ್ನು ಮಾನವ ಸ್ನೇಹಿಯಾಗುವಂತೆ ಮಾಡಿ ಶ್ರೀವೈಷ್ಣವ ಪಂತವು ಹೆಚ್ಚು ಜನಪ್ರಿಯವಾಗಲು ಕಾರಣರಾದರು.

**6.2.4 ಸಂಸ್ಥೆ :** ಸಂಸ್ಥೆ ಎಂಬ ಪರಿಕಲ್ಪನೆಯು ಸಮಾಜಶಾಸ್ತ್ರದ ಸಾಹಿತ್ಯದಲ್ಲಿ ಅತ್ಯಂತ ಮಹತ್ವವುಳ್ಳದ್ದು. ಸಮ್ನರ್ ಮತ್ತು ಕೆಲ್ಲರ್ ಹೇಳುವಂತೆ "ಜೀವಿಗಳಿಗೆ ಜೀವಕಣಗಳಿರುವಂಗೆ ಸಮಾಜಕ್ಕೆ ಲೋಕರೂಢಿಗಳಿದ್ದರೆ, ಸಂಸ್ಥೆಗಳು ಸಮಾಜದ ಮೂಳೆಗಳು ಮತ್ತು ಅಂಗಾಂಶಗಳು". ಸಂಸ್ಥೆ ಎನ್ನುವುದು ಒಂದು ಕಟ್ಟಡವಲ್ಲ; ಒಂದು ಸಮೂಹವಲ್ಲ; ಸಮಾವೇಶವೂ ಅಲ್ಲ. ಅದು ಸಾಮಾಜಿಕ ಜೀವನದ ಅವಿಚ್ಛಿನ್ನ ಭಾಗ. ಯಾವುದೇ ಸಮಾಜವಾದರೂ ಬದುಕುಳಿಯಬೇಕಾದರೆ ಹಾಗೂ ತನ್ನ ಸದಸ್ಯರುಗಳಿಗೆ ತೃಪ್ತಿದಾಯಕ ಜೀವನವನ್ನು ನೀಡಬೇಕಾದರೆ ಅದು ತನ್ನ ಮೂಲಭೂತ ಅಗತ್ಯತೆಗಳನ್ನು ಪೂರೈಸಿಕೊಡುವುದು ಅನಿವಾರ್ಯ. ಇಂತಹ ಮೂಲಭೂತ ಅಗತ್ಯತೆಗಳನ್ನು ಈಡೇರಿಸಲು ಪ್ರತಿಯೊಂದು ಸಮಾಜವು ಸೃಷ್ಟಿಸಿಕೊಳ್ಳುವ ಒಂದು ವಿಶಿಷ್ಟ ಕಾರ್ಯವಿಧಾನದ ವ್ಯವಸ್ಥೆಯೇ ಸಂಸ್ಥೆ. ಇಂಥ ಸಂಸ್ಥೆಯ ವ್ಯಾಪ್ತಿಗೆ ಕುಟುಂಬ, ಶಿಕ್ಷಣ, ವಿವಾಹ, ಧರ್ಮ, ನೈತಿಕತೆ, ಆಸ್ತಿಗಳು ಸೇರುತ್ತವೆ. ಈ ಸಂಸ್ಥೆಗಳು ನಮ್ಮ ಸಮೂಹ ಜೀವನದ ಅಯೋಜಿತ ಫಲಶ್ರುತಿಗಳೆಂಬಂತೆ ಹುಟ್ಟಿಕೊಳ್ಳುತ್ತವೆ; ಜನರು ತಮ್ಮ ಅಗತ್ಯತೆಗಳನ್ನು ಪೂರೈಕೆ ಮಾಡಿಕೊಳ್ಳುವ ವ್ಯಾವಹಾರಿಕ ವಿಧಾನಗಳನ್ನು ಹುಡುಕಿಕೊಳ್ಳಲು ಯತ್ನಿಸುತ್ತಲೇ ಇರುತ್ತಾರೆ. ತಮ್ಮ ಈ ಪ್ರಯತ್ನದಲ್ಲಿ ಅವರು ಕೆಲವೊಂದು ಕಾರ್ಯಸಾಧ್ಯವಾದ ಮಾದರಿಗಳನ್ನು ಕಂಡುಕೊಳ್ಳುವರು. ನಿರಂತರವಾದ ಪುನರಾವರ್ತನೆಯಿಂದಾಗಿ ಅವು ಸಮಾಜದ ಮನ್ನಣೆಗಳಿಸುತ್ತವೆ. ಕಾಲಸಂದಂತೆ ಅವು ಕೆಲವು ಸಹಾಯಕ ನಿರ್ಬಂಧಗಳನ್ನು ಕೂಡ ಬೆಳೆಸಿಕೊಳ್ಳುತ್ತವೆ. ಕಾಲಾನುಕ್ರಮದಲ್ಲಿ ಜನರು ಈ ಬಗೆಯ ಸಮಾಜ–ಮಾನ್ಯತೆ ಗಳಿಸಿದ ನಿರ್ದಿಷ್ಟ ಆಚರಣಾ ಮಾದರಿಗಳಿಗನುಗುಣವಾಗಿ ವರ್ತಿಸುವುದನ್ನು ಕಲಿತುಕೊಳ್ಳುವರು ಈ ಬಗೆಯ ನಿರ್ದಿಷ್ಟ ಆಚರಣಾವಿಧಾನ ಮತ್ತು ಮಾದರಿಗಳನ್ನು ಪರಿಸರದ ಅಗತ್ಯಕ್ಕೆ ಅಥವಾ ಕಾಲದ ಬೇಡಿಕೆಗೆ ತಕ್ಕಂತೆ ಅವರು ಮಾರ್ಪಡಿಸಿಕೊಳ್ಳುವುದೂ ಇದೆ. ಈ ಬಗೆಯಲ್ಲಿ ಈ ಕುಟುಂಬ, ಶಿಕ್ಷಣ, ವಿವಾಹ, ಧರ್ಮ, ನೈತಿಕತೆ, ಆಸ್ತಿಗಳೆಂಬ ಸಂಸ್ಥೆಗಳು ಹುಟ್ಟಿಕೊಳ್ಳುತ್ತವೆ. ಹೀಗೆ ಹುಟ್ಟಿಕೊಂಡ ಸಂಸ್ಥೆಗಳು ಜನಮಾನ್ಯತೆ ಪಡೆದ ಸಾಮಾಜಿಕ ನಿಯಮಗಳು ಮತ್ತು ಆಚರಣೆಗಳೇ ಆಗಿರುತ್ತವೆ. ಈ ಪ್ರಕ್ರಿಯೆಯೇ ಸಾಂಸ್ಥೀಕರಣ ಎಂಬ ಪರಿಕಲ್ಪನಾತ್ಮಕತೆಯ ಉಗಮಕ್ಕೂ ಕಾರಣವಾಗುತ್ತದೆ.

ಈ ಸಾಮಾಜಿಕ ಸಂಸ್ಥೆಗಳು ಎಲ್ಲ ಸಮಾಜಗಳಲ್ಲಿಯೂ ಮತ್ತು ಸಮಾಜದ ಐತಿಹಾಸಿಕ ಬೆಳವಣಿಗೆಯ ಎಲ್ಲಾ ಹಂತಗಳಲ್ಲಿಯೂ ಕಾಣಬಹುದಾಗಿದೆ. ಹಾಗಾಗಿ ಈ ಸಂಸ್ಥೆಗಳಿಗೆ ಸಾರ್ವತ್ರಿಕತೆಯ ಲಕ್ಷಣವು ಪ್ರಾಪ್ತವಾಗಿದೆ. ಇವು ಜನರ ಕಾರ್ಯವಿಧಾನದ ಬಗೆಯನ್ನು ಅಥವಾ ನೀತಿ ನಿಯಮಗಳನ್ನು ಸೂಚಿಸುತ್ತದೆ ಮತ್ತು ಅದನ್ನು ನಿಯಂತ್ರಿಸುತ್ತದೆ. ಉದಾ :

- 'ವಿವಾಹ' ಸಂಸ್ಥೆಯು ಪತಿಪತ್ನಿಯರ ನಡುವಿನ ಸಂಬಂಧವನ್ನು ನಿಯಂತ್ರಿಸುತ್ತದೆ.
- 'ಶಿಕ್ಷಣ' ಸಂಸ್ಥೆಯು ಗುರುಶಿಷ್ಯರ ನಡುವಿನ ಸಂಬಂಧವನ್ನು ಸೂಚಿಸುತ್ತಲೇ ನಾಗರಿಕವೂ ಸುಸಂಸ್ಕೃತವೂ ಆದ ಸಮಾಜವೊಂದರ ನಿರ್ಮಾಣವನ್ನು ರೂಪಿಸುತ್ತದೆ.
- ಸಾಮಾಜಿಕ ಸಂಸ್ಥೆಗಳು ಭೌತಿಕ ಮತ್ತು ಅಭೌತಿಕ ಸ್ವರೂಪದ ನಿರ್ದಿಷ್ಟ ಸಾಂಕೇತಿಕ ಲಕ್ಷಣವನ್ನು ಹೊಂದಿರುತ್ತವೆ.
- 'ವಿವಾಹ' ಸಂಸ್ಥೆಯಲ್ಲಿ ವೇಷಭೂಷಣ, ಮಾಂಗಲ್ಯ, ಉಂಗುರ ಇತ್ಯಾದಿ.
- ಪರಂಪರಾಗತ ವಸ್ತುಗಳು ಕುಟುಂಬ ಸಂಸ್ಥೆಯ ಸಾಂಕೇತಿಕ ಲಕ್ಷಣಗಳು.
- ಮೂರ್ತಿ, ಮಂತ್ರ, ಸ್ವಸ್ತಿಕ್, ಓಂಕಾರ ಚಿಹ್ನೆ, ಶಿಲ್ಪಗಳು, ವೀರಗಲ್ಲು, ಮಾಸ್ತಿಕಲ್ಲುಗಳಲ್ಲಿನ ಸೂರ್ಯ, ಚಂದ್ರ, ಮಾದಳ ಫಲ ಮೊದಲಾದ ಚಿಹ್ನೆಗಳು ನಿರ್ದಿಷ್ಟ ಸಾಂಕೇತಿಕ ಲಕ್ಷಣಗಳಾಗಿವೆ.
- ಶರಣಾಗತವಜ್ರಪಂಜರಂ, ಗೋತ್ರಪವಿತ್ರಂ, ಬಂಧುಜನ ಚಿಂತಾಮಣಿ, ಸಾಲಮಂನೆಯ ಬೇಂಟೆಕಾರಂ , ಸ್ವಾಮಿಸಂತೋಷ, ಸ್ವಾಮಿದ್ರೋಹರ ಗಂಡಂ, ದುಷ್ಟನಿಗ್ರಹ ಶಿಷ್ಟಪರಿಪಾಳಕ, ಶ್ರೀವೀರಬಲ್ಲಾಳದೇವರ ಕಟ್ಟಿದಲಗು, ತೊಡರ್ದರಡೊಂಕಿ, ತೊಡರೆ ಬಲ್ಗಂಡ, ಚಲಕೆಮಲವಸಾಮಂತರತೊತ್ತಳದುಳಿವ ಮುಂತಾದ ಮಹಾ ಮಂಡಲೇಶ್ವರರ ಬಿರುದುಗಳು ಅವರವರ ನೈತಿಕತೆಯನ್ನು ಸಮರ್ಥವಾಗಿ ಬಿಂಬಿಸುತ್ತವೆ. ನೀತಿ–ನೈತಿಕತೆ ಎಂಬ ಸಂಸ್ಥಾರೂಪವು ಅಮೂರ್ತವಾಗಿದ್ದರೂ ಸಹ ಸಮಾಜಕ್ಕೆ ಆದರ್ಶವಾಗಿ ಮಾದರಿಯಾಗಿ ನಿಲ್ಲಬಲ್ಲ ಅಂಶಗಳಾಗಿವೆ. ಇವುಗಳಲ್ಲಿ ಪ್ರಧಾನವಾಗಿ ವರ್ಣವ್ಯವಸ್ಥೆ, ಕುಟುಂಬ, ವಿವಾಹ ಮತ್ತು ಶಿಕ್ಷಣ ಸಂಸ್ಥೆಗಳನ್ನು ಈ ಮುಂದಿನಂತೆ ವಿವೇಚಿಸೋಣ

**6.2.4.1 ವರ್ಣವ್ಯವಸ್ಥೆ:** ಹೊಯ್ಸಳರ ಕಾಲಾವಧಿಯಲ್ಲಿ ಜಾತಿಪದ್ದತಿಯು ಸಮಾಜದಲ್ಲಿ ಅತ್ಯಂತ ಪ್ರಬಲವಾದ ರಚನೆಯಾಗಿತ್ತು. ರಾಜಪ್ರಭುತ್ವ ಮತ್ತು ಅದರ ನಿರ್ದೇಶನದ ಮೇರೆಗೆ ಪುರೋಹಿತಶಾಹಿಯು ಇಡೀ ಸಮಾಜವನ್ನು ಸಂಪೂರ್ಣ ವಾಗಿ ಜಾತಿಯ ಅಸ್ತ್ರವನ್ನು ಬಳಸಿಕೊಂಡು ತನ್ನ ಉದ್ದೇಶಗಳ ಈಡೇರಿಕೆಗಾಗಿ ನಿಯಂತ್ರಣದಲ್ಲಿಟ್ಟಿತ್ತು. ಎಂದಿನಂತೆಯೇ ಹೊಯ್ಸಳ ಮಹಾಮಂಡಳೇಶ್ವರರ ಆಳಿಕೆಯ ಪ್ರದೇಶಗಳಲ್ಲಿ ಸಮಾಜವನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಲಾಗಿತ್ತು. ಅವುಗಳೇಂದರೆ ಬ್ರಾಹ್ಮಣ, ಕ್ಷತಿಯ,

ವೈಶ್ಯ, ಶೂದ್ರ. ವೃತ್ತಿಗಳಲ್ಲಿ ಯಾವ ರೀತಿಯ ಬದಲಾವಣೆಗಳು ಕಾಣಿಸಿಕೊಳ್ಳುತ್ತಿದ್ದರೂ ಬ್ರಾಹ್ಮಣರ ಅಂತಸ್ತು ಮತ್ತು ಪ್ರಭಾವ ಉನ್ನತವಾಗಿಯೇ ಇತ್ತು. ಇನ್ನುಳಿದ ಮೂರು ವರ್ಣಗಳು ತಮ್ಮ ಸ್ಥಾನವನ್ನು ಬ್ರಾಹ್ಮಣರ ಮೂಲಕ ಗುರುತಿಸಿಕೊಂಡಿದ್ದರು. ಬ್ರಾಹ್ಮಣರಲ್ಲಿ ದೇವಾಲಯದ ಪುರೋಹಿತರು, ಅಧಿಕಾರಿಗಳು, ವ್ಯಾಪಾರಸ್ಥರು, ಮತ್ತು ಅಗ್ರಹಾರವನ್ನು ದಾನವಾಗಿ ಪಡೆದವರು ಮುಂತಾದ ಪಂಗಡಗಳಿದ್ದವು, ಒಟ್ಟಿನಲ್ಲಿ ಇವರ ಸ್ತಾನವು ಮಾತ್ರ ಔನ್ನತ್ಯದಲ್ಲಿತ್ತು.

ಬೆಟ್ಟರಸದಂಡನಾಯಕನು 2ನೆಯ ನರಸಿಂಹನ ಅಧಿಕಾರಿ. ಇವನ ವಂಶೀಯರು ಅಗಸ್ತ್ಯ ಗೋತ್ರಕ್ಕೆ ಸೇರಿದವರು. ಇವನ ವಂಶೀಯನಾದ ಕೇಶಿರಾಜ ದಂಡನಾಯಕನ ಶಾಸನದಲ್ಲಿ "ಹೊಯ್ಸಳರಸರು ಅಧಿಕಾರಕ್ಕೆ ಬಂದಾಗಿನಿಂದ ಅವರಲ್ಲಿ ಮಂತ್ರಿಪದವಿಯನ್ನು ಅಲಂಕರಿಸಿದ್ದ ವಂಶದಲ್ಲಿ ಹುಟ್ಟಿದವನಾಗಿದ್ದನು. ಇವನಿಗೆ ಅಮಾತ್ಯಪದವೀ ಕುಲತಿಲಕ ಎಂಬ ಬಿರುದಿತ್ತು."[5] ಮೂಲತಃ ಬ್ರಾಹ್ಮಣರಾಗಿದ್ದವರು ಕಾಲಕ್ರಮದಲ್ಲಿ ತಮ್ಮ ತಮ್ಮ ದಕ್ಷತೆ, ರಾಜನೀತಿಜ್ಞತೆಯ ಕಾರಣವಾಗಿ ಕ್ಷತ್ರಿಯರಾಗಿ ಉನ್ನತ ಪದವಿ, ಸ್ಥಾನಮಾನಗಳನ್ನು ಗ್ರಹಿಸಿದ್ದುದು ಲಕ್ಷ್ಯಾರ್ಹ ವಿಚಾರ. ಮಹಾಮಂಡಳೇಶ್ವರರು ಈ ಬ್ರಾಹ್ಮಣರಿಗೆ ಅನೇಕ ಭೂದಾನಗಳನ್ನು ನೀಡುವ ಮೂಲಕ ಅವರ ಒಲವನ್ನು ಮಾರ್ಗದರ್ಶನವನ್ನು ಬಯಸಿ ಕಾರ್ಯನಿರ್ವಹಿಸುತ್ತಿದ್ದರು. ಉದಾ

• ಮಹಾಪಸಾಯತ ವಿಶ್ವನಾಥದೇವನ ಸಮಕ್ಷಮದಲ್ಲಿ ಕುಮಾರನಹಳ್ಳಿ ಎಂಬ ಅಗ್ರಹಾರದಲ್ಲಿ ಪರಮಮಹೇಶ್ವರ, ಸಿವಪಾದಶೇಖರ ಎನಿಸಿದ್ದಂತಹ ಭಟ್ಟೋಪಾದ್ಯಾಯರು ವರದ ಸಿದ್ಧಮಲ್ಲಿಕಾರ್ಜುನ ದೇವರನ್ನು ರಾಜಾರಾಷ್ಟ್ರಕ್ಕೆ ಅಭ್ಯುದಯಕ್ಕಾಗಿ, ಗ್ರಾಮಬ್ರಹ್ಮೋತ್ತರವಾಗಲು ಹಾರೈಸಿ ಪ್ರತಿಷ್ಠಾಪಿಸಿದರು. ಇದನ್ನು ಕಂಡು ಅರಸನು ಭಕ್ತಿಯಿಂದ ದೇವರ ವಿವಿದ ಶ್ರೀಕಾರ್ಯಗಳಿಗೆಂದು ವರ್ಷಂಪ್ರತಿ ಹಾಲುಸೌದೆಗಾಗಿ ಸಹವಾಸಿಯಹಳ್ಳಿಯ ನಡುವೆ ಇರುವ ಬಯಲಿನಲ್ಲಿ ಸರ್ವ್ವಭಾದಾಪರಿಹಾರಾರ್ಥವಾಗಿ 8ಸಲಗೆ ಗದ್ದೆಯನ್ನು ಮತ್ತು ಆ ಕುಮಾರನಹಳ್ಳಿಯಲ್ಲಿಯೇ ಕ್ರಯವಾಗಿ ಕೊಂಡ ವ್ರಿತ್ತಿ 1ನ್ನುದಾನವಿತ್ತನು.[6]

• ಕ್ಷತ್ರಿಯ ವರ್ಗದ ವಿಚಾರಕ್ಕೆ ಬರುವುದಾದರೆ ಸ್ವತಃ ಮಹಾಮಂಡಳೇಶ್ವರರು ತಮ್ಮದು ಕ್ಷತ್ರಿಯರ ಸ್ಥಾನಮಾನವೆಂದು ತೀರ್ಮಾನಿಸಿಕೊಂಡಿದ್ದ ಹಾಗೆ ಕಾಣುತ್ತದೆ. ಸೈನಿಕ ವರ್ಗದವರೂ ಸೇರಿದ್ದ ಈ ವರ್ಗದಲ್ಲಿ ಪುರೋಹಿತರವರ್ಗದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರ ಸೂಚನೆಗಳು ಕಂಡುಬರುತ್ತವೆ. ಸಾಮಾಜಿಕ ಶ್ರೇಣಿಯಲ್ಲಿ ಮೂರನೆಯ ವರ್ಗವಾದ ವೈಶ್ಯರದ್ದು ರಾಜ್ಯದ ಆರ್ಥಿಕತೆಯ ದೃಷ್ಟಿಯಿಂದ ಪ್ರಮುಖ ಸ್ಥಾನ. ಇವರು ನಿರಂತರವಾಗಿ ಮಹಾಮಂಡಳೇಸ್ವರರಿಂದ ಪ್ರೋತ್ಸಾಹಗಳಿಗೆ ಅರ್ಹರಾಗಿದ್ದರು. ಹೊಯ್ಸಳ ಶಾಸನಗಳಲ್ಲಿ ಅನೇಕವು ಶ್ರೀಮಂತ ಮತ್ತು ಪ್ರಭಾವಿ ವಾಪಾರಸ್ಥರನ್ನು ರಾಜಶ್ರೇಷ್ಠಿಗಳ್ ಎಂದು ಹೇಳಲಾಗಿದೆ. ಹೊಯ್ಸಳ ಸೆಟ್ಟಿ ಎಂದೇ ಖ್ಯಾತರಾದ ಅನೇಕ ವ್ಯಾಪಾರಸ್ಥರು ಅಂದು ಪ್ರಭಾವಿಗಳಾಗಿದ್ದರು. ಇಂತಹ ಶ್ರೀಮಂತ ವರ್ತಕರು ಆಡಳಿತದಲ್ಲಿಯೂ ಪಾಲ್ಗೊಳ್ಳುತ್ತಿದ್ದರು. ಅರಸರೊಡನೆ ಆಡಳಿತಾತ್ಮಕ ಹಾಗೂ ಆರ್ಥಿಕ ಸಂಬಂಧವನ್ನು ಹೊಂದಿರುತ್ತಿದ್ದರು. ಉದಾಹರಣೆಗೆ,

ಹೊಯ್ಸಳ ಸೈನ್ಯವನ್ನು ಸದೃಢವಾಗಿ ಕಟ್ಟಿದ್ದರ ಪರಿಣಾಮವಾಗಿ ಕ್ರಮೇಣ ಕಾಮೆಯ ದಂಡನಾಯಕನು ವೀರಬಲ್ಲಾಳನಿಗೆ ಅತ್ಯಂತ ಹತ್ತಿರವಾದನು. ಅವರಿಬ್ಬರ ಆಡಳಿತವೂ ಅಭಿನ್ನವಾಗುವಷ್ಟು ದಾಖಲೆಗಳು ನಮಗೆ ದೊರಕುತ್ತವೆ. ಕ್ರಿ.ಶ 20–9–1331 ರ ಗುಬ್ಬಿಯ ಸಂಪಿಗೆ ಗ್ರಾಮದ ಶಾಸನದ ಪ್ರಕಾರ,[7] ವೀರಬಲ್ಲಾಳನೂ ಕಾಮೆಯದಂಡನಾಯಕನೂ ಶ್ರೀವಿರೂಪಾಕ್ಷ ಹೊಸದುರ್ಗದಲ್ಲಿ ಆಳುತ್ತಿದ್ದರು. ಇಲ್ಲಿನ ಶಾಸನದ ಒಕ್ಕಣೆಯನ್ನು ಗಮನಿಸಿದಾಗ ಇವರಿಬ್ಬರ ಅಧಿಕಾರವು ಅಭಿನ್ನವಾಗಿದ್ದವು ಎಂದು ತಿಳಿಯಬಹುದು. ಒಮ್ಮೆ ದಂಡನಾಯಕ ಪದವಿಯು ದೊರೆತಾಗ ಸೇನಾ ನಿರ್ವಹಣೆಯ ಜೊತೆಗೆ ನಾಡನ್ನು ಸರ್ವತೋಮುಖವಾಗಿ ಅಭಿವೃದ್ದಿಯ ಪಥದತ್ತ ಕರೆದುಕೊಂಡು ಹೋಗುವ ಅವಶ್ಯಕತೆ ಕಾಮೆಯ ದಂಡನಾಯಕನದ್ದಾಗಿತ್ತು. ಆ ಸಂದರ್ಭದಲ್ಲಿ ಅವನ ಆಡಳಿತವು ಎಲ್ಲೆಲ್ಲಿ ಚಾಲ್ತಿಯಲ್ಲಿತ್ತೋ ಅಲ್ಲೆಲ್ಲಾ ನಾನಾದೇಸಿಗಳಾದ ವ್ಯಾಪಾರಿಗಳನ್ನು ಕರೆತಂದು ವ್ಯಾಪಾರ ವಹಿವಾಟುಗಳಲ್ಲಿ ನಾಡನ್ನು ಕಟ್ಟಿದ ವ್ಯಕ್ತಿಯೂ ಈತನಾದನು. ಆಗ ಕಾಮೆಯದಂಡನಾಯಕನು ಪ್ರಧಾನಿಯಾಗಿದ್ದನು. ಮಹಾವಡ್ಡವ್ಯವಹಾರಿ, ಉಭಯ ನಾನಾದೇಶಿವರ್ಗ್ಗಮುಖ್ಯ, ಹೊಯ್ಸಳವೀರಬಲ್ಲಾಳನ ತ್ರೈಲೋಕ್ಯಪಟ್ಟಣಸ್ವಾಮಿ ಕಲಿಸೆಟ್ಟಿಯ ಮಗ ಸಿಂಗೆಸೆಟ್ಟಿಯು ವೀರಬಲ್ಲಾಳನನ್ನು ಸಂದರ್ಶಿಸಿದಾಗ ವೀರಬಲ್ಲಾಳನು ಅವನ ಮೇಲೆ ತುಂಬುಪ್ರೀತಿಯಿಟ್ಟಿದ್ದರ ಕಾರಣವಾಗಿ ಸಂಪಿಗೆಯ ಸ್ಥಳವನ್ನು ಕೊಡುಗೆಯಾಗಿ ನೀಡಿದನು. ಈ ಸಂಪಿಗೆಯ ಸ್ಥಳದ ಅಧಿಕಾರವು ಕಾಮೆಯ ದಂಡನಾಯಕನದ್ದಾಗಿತ್ತು. ಸಂಪಿಗೆಯ ಸ್ಥಳ ಚತುಸ್ಸೀಮೆಯೊಳಗೆ ಸೇರುವ ಹಳ್ಳಿಗಳನ್ನು ಮತ್ತು ಅದರಲ್ಲಿನ ಕಟ್ಟೆ ಕಿರುಕಟ್ಟೆಗಳನ್ನು ತಪ್ಪೆ ತೌಡಿ ಕಿರುಕುಳ ಸ್ಥಾನಮಾನ್ಯ ಮೊದಲಾದವುಗಳನ್ನು ಅರಸನ ಕೈಯಿಂದ ಕಾಮೆಯದಂಡನಾಯಕನ ಮುಖಾಂತರವಾಗಿ ಸಿಂಗೆಸೆಟ್ಟಿಗೆ ಅರಸನು ಆಚಂದ್ರಾರ್ಕವಾಗಿ ಸರ್ವ್ವಮಾನ್ಯವಾಗಿ ಕೊಡುಗೆಯಿತ್ತನು. ಈ ಮಾಹಿತಿಗಳನ್ನು ಎಚ್ಚರಿಕೆಯಿಂದ ಗಮನಿಸಿದಾಗ ಬಹಳ ಪ್ರಮುಖವಾದ ಆರ್ಥಿಕ ಪ್ರಕ್ರಿಯೆಗಳು ಈ ದಂಡನಾಯಕನ ಮುಖಾಂತರವಾಗಿ ನಡೆಯುತ್ತಿತ್ತು ಎಂಬುದು ತಿಳಿಯುತ್ತದೆ.

ವರ್ಣವ್ಯವಸ್ಥೆಯಲ್ಲಿ ಕೊನೆಯ ವರ್ಗವಾದ ಶೂದ್ರರು ತಮ್ಮಲ್ಲಿ ಹಲವಾರು ಜಾತಿ, ಉಪಜಾತಿಗಳಾಗಿ ವಿಭಜನೆ ಗೊಂಡಿದ್ದರು. ಈ ವರ್ಗದವರು ಕೃಷಿ, ಕೈಗಾರಿಕೆ, ವ್ಯಾಪಾರಗಳಲ್ಲೂ ಪರಿಣತರಾಗಿರುತ್ತಿದ್ದರು. ಅಗಸರು, ನಾವಿದರು, ನೇಕಾರರು, ಬಳೆಗಾರರು, ತೆಲ್ಲಿಗರು, ಬೆಸ್ತರು ಶಿಲ್ಪಿಗಳು, ತಂಬುಲಿಗರು ಮುಂತಾದವರು ಈ ವರ್ಗದೊಳಗೆ ಸೇರಿದ್ದರು. ಗುಡ್ಡ ಬೆಟ್ಟ ಕಾಡುಗಳಲ್ಲಿ ವಾಸವಿದ್ದ ಕೆಲವು ಬುಡಕಟ್ಟುಗಳ ಬಗ್ಗೆ ಮಾಹಿತಿ ಶಾಸನಗಳಲ್ಲಿ ದೊರೆಯುತ್ತದೆ. ಬೇಡರು, ಮಲೆಪರು, ಕುರುಬರು ಮುಂತದವರು. ಹೊಯ್ಸಳರಿಗೂ ಸೇವುಣರಿಗೂ ನಡೆದ ಯುದ್ಧದಲ್ಲಿ ಬೇಡ ಸೈನಿಕರು ನಿರ್ಣಾಯಕ ಪಾತ್ರವನ್ನು ಹೊಂದಿದ್ದರು. 1117ರಲ್ಲಿ ಹೊಯ್ಸಳ ವಿಷ್ಣುವರ್ಧನನು ಕಿರಾತ ಮುಖ್ಯಸ್ಥರನ್ನು ಶಕ್ತಿಶಾಲಿ ಬೇಡರನ್ನು ತನ್ನ ಸಹಾಯಕ್ಕೆ ಬಳಸಿಕೊಂಡಿದ್ದನು.

ಶ್ರವಣಬೆಳಗೊಳ ಮತ್ತು ಜಿನನಾಥಪುರ ಪಟ್ಟಣಗಳ ಹೊರವಲಯಗಳಲ್ಲಿ ಕೆಳಜಾತಿಯವರು ವಾಸಿಸುತ್ತಿದ್ದರು ಎನ್ನುವ ವಿವರ ಶಾಸನವೊಂದರಲ್ಲಿದೆ. ಸ್ವತಃ ಭೂಮಿಯನ್ನು ಹೊಂದಿರದ, ವ್ಯವಸಾಯವನ್ನು ಮಾಡದ ಕೆಳಜಾತಿಯ ಅಸ್ಪೃಶ್ಯರನ್ನು ಸಮಾಜದ ಮುಖ್ಯವಾಹಿನಿಯಿಂದ ದೂರ ಇಡಲಾಗಿತ್ತು ಹೊಲಗಳಲ್ಲಿ ದುಡಿಯುವ ಜೀತದಾಳುಗಳಾಗಿ, ಇದ್ದ ಬದ್ದ ಚೂರುಪಾರು ಕೆಲಸಗಳನ್ನು ಮಾಡುತ್ತಾ ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಅಸ್ಪೃಶ್ಯ ವರ್ಗವೊಂದು ಖಂಡಿತ ಇದ್ದಿರಲೂ ಸಾಕು. ಹಾಗಾಗಿಯೇ ರಾಮಾನುಜಾಚಾರ್ಯರು ಈ ಕನ್ನಡ ನಾಡಿನ ದಕ್ಷಿಣ ಪ್ರದೇಶಗಳಲ್ಲಿ ಗಂಭೀರವಾಗಿ ಅಸ್ಪೃಶ್ಯರಿಗೆ ಸಾಮಾಜಿಕ ಸ್ಥಾನಮಾನಗಳನ್ನು ಒದಗಿಸಲು ಪ್ರಯತ್ನಪಟ್ಟು ಯಶಸ್ವಿಯಾಗಲು ಕಾರಣವಾಯಿತು.

**ಕುಲಕಟ್ಟಳೆಗಳು**: ಸಮಾಜದ ಪ್ರತಿಯೊಂದು ಜಾತಿಗಳೂ ತಮ್ಮದೇ ಕುಲಕಟ್ಟಳೆಗಳನ್ನು ಈ ಕಾಲಘಟ್ಟದಲ್ಲಿ ರೂಪಿಸಿಕೊಂಡು ಬಿಟ್ಟಿದ್ದವು. ಮನುಧರ್ಮಶಾಸ್ತ್ರದ ಅಧಿಕೃತ ವಕ್ತಾರರಾದ ದೇವಾಲಯಗಳ ಆಡಳಿತ ಹಾಗೂ ಪುರೋಹಿತಶಾಹಿ ಮಂಡಳಿಯು ಇಂತಹ ಕಟ್ಟಳೆಗಳಲ್ಲಿ ತಮ್ಮ ಅಧಿಕಾರವನ್ನು ಮಂಡಿಸುತ್ತಿದ್ದವು. ಎರಡನೆಯ ಸಹಸ್ರಮಾನದ ಬಹಳ ಮುಖ್ಯ ಸಾಮಾಜಿಕ ಚಹರೆಯಾಗಿದ್ದ ಈ ಕುಲಕಟ್ಟಳೆಗಳು ರಾಜಶಾಸನಗಳಂತೆ ಜನಸಾಮಾನ್ಯರ ಮೇಲೆ ಪ್ರಭುತ್ವವನ್ನು ಸ್ಥಾಪಿಸುವುದರ ಜೊತೆಗೆ ಒಂದು ರೀತಿಯ ಚೌಕಟ್ಟನ್ನು ನಿರ್ಮಿಸಿತ್ತು. ಇಂತಹ ಕೆಲವು ಉದಾಹರಣೆಗಳನ್ನು ಗಮನಿಸಬಹುದು.

ಹತ್ತನೆಯ ಶತಮಾನದ ನಂತರ ಕನ್ನಡ ನಾಡಿನಲ್ಲಿ ಮತ್ತೆ ಮತ್ತೆ ಪ್ರಶ್ನೆಗೆ ಒಳಗಾಗುತ್ತಾ ಇದ್ದ ಸಂಗತಿಯೆಂದರೆ ಜಾತಿ. ಈ ಜಾತಿ ವ್ಯವಸ್ಥೆಯನ್ನು ಪಂಪ ಕೂಡ ಪ್ರಶ್ನಿಸಿದ.[8]

**"ಕುಲಮನೆ ಮುನ್ನ ಮುಗ್ಗಡಿಪಿರೇಂಗಳ ನಿಮ್ಮ ಕುಲಗಳಾಂತು ಮಾರ್ಮಲೆವನನ್ ಅಟ್ಟಿತಿಂ**

**ಬುವೆ ಕುಲಂ ಕುಲಮಲ್ತು, ಚಲಂ ಕುಲಂ ಗುಣಂ ಅಭಿಮಾನಮೊಂದೆ ಕುಲಂ ಅಣ್ಣುಕುಲಂ"**

ವಚನ ಚಳವಳಿಯ ಕಾಲದಲ್ಲೂ ಅಸಂಖ್ಯಾತ ವಚನಕಾರರು ಈ ಜಾತಿಯ ಹಲವು ಆಕ್ರಂದನಗಳನ್ನು ಅಭಿವ್ಯಕ್ತಿಸಿದ್ದಾರೆ. ಆದರೆ ಇದಕ್ಕೆ ವಿರುದ್ಧವಾಗಿ ಅಲ್ಲದಿದ್ದರೂ ವಿಭಿನ್ನವಾಗಿ ಶಾಸನಗಳಲ್ಲಿ ಮಾತ್ರ ಜಾತಿಯ ಸಂಗತಿಗಳು ಅಸ್ಮಿತೆಯ ಸಂಕೇತಗಳಾಗಿ ಹೊರಹೊಮ್ಮಿದೆ. ತಮ್ಮ ಜಾತಿಯ ಬಗೆಗಿನ ಸಂಗತಿಗಳು ತಮ್ಮ ಅಧಿಕೃತತೆಯನ್ನು ಹೆಚ್ಚಿಸುತ್ತದೆ. ಜಾತಿಯ ಬಗೆಗಿನ ಉಲ್ಲೇಖಗಳು ಕೆಲವೆಡೆ ಆ ಜಾತಿಯವರೇ ರೂಪಿಸಿಕೊಂಡಿರುವ ಕಟ್ಟಳೆಗಳಂತೆ ಅಭಿವ್ಯಕ್ತಿಗೊಂಡಿದೆಯೇ ವಿನಃ ಅನ್ಯಾಕ್ರಮಣದ ರೀತಿಯಲ್ಲಿ ದಾಖಲುಗೊಂಡಿಲ್ಲ. ಶಾಸನಗಳು ಜಾತಿಯ ಸಂಕರವನ್ನು ಕುರಿತು ಮಾತನಾಡುವಾಗ ಅಧಿಕಾರ ವಾಣಿಯಲ್ಲಿ ಮಾತನಾಡುತ್ತವೆ.

1207ರಲ್ಲಿ ಹೊಯ್ಸಳ ದೊರೆ ಇಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಕಾರ್ತಿಕೇಯ ತಪೋವನಾಧಿಪತಿ ವಿಷ್ಣುಕರ ಬ್ರಹ್ಮಚಾರಿ, ಸ್ಥಾನದ ಐದು ವರ್ಗ, ಏಳ್ಕೊಟಿ ಮಹಾದೇವರು, ಮುಮ್ಮರಿ ದಂಡಗಳು ಸೇರಿ ಮಾಡಿದ ಕಟ್ಟುಪಾಡೆಂದರೆ ಊರಿಗೆ ಅನ್ಯಾಯ, ಅವಾಂತರಗಳು ಬಂದರೆ ಅದನ್ನು ಸ್ಥಾನದ ಮುಖ್ಯನೇ ನೋಡಿಕೊಳ್ಳಬೇಕೆಂಬ ನಿಯಮವನ್ನು ಮಾಡಲಾಗಿದೆ.[9]

ಕುಲಕಟ್ಟಳೆಗಳಂತೆಯೇ ತಪ್ಪುಗಳನ್ನು ಮಾಡಿದಾಗ ದೇವಾಲಯದಂತಹ ಅತ್ಯಂತ ಮುಖ್ಯವಾದ ಸಾಮಾಜಿಕ ತಾಣವೊಂದರಲ್ಲಿ ನಡೆಸುವಂತಹ ದಿವ್ಯದಂತಹ ಆಚರಣೆ. ಇಂತಹುದೇ ದಿವ್ಯವನ್ನು ನಡೆಸಿದ ಕೆಲವು ಉದಾಹರಣೆಗಳಿವೆ. ಹಳೇಬೀಡಿನಲ್ಲಿ 1309ರಲ್ಲಿ ವೀರಬಲ್ಲಾಳನ ಕಾಲದಲ್ಲಿ ಹಳೇಬೀಡಿನ ಹೊಯ್ಸಳೇಶ್ವರ ದೇವರ ಸನ್ನಿಧಿಯಲ್ಲಿ ಮಹಾಪಸಾಯಿತ ಅಧ್ವರಿ ದೇವಣ್ಣನ ಮಗನಾದ ಅಧ್ವರಿ ರಾಮಣ್ಣನು ದಿವ್ಯವನ್ನು ಮಾಡಿ ಗೆದ್ದನು.[10] ಇದಕ್ಕೂ ಹಿಂದೆ ಕ್ರಿ.ಶ. 1275ರಲ್ಲಿ ಮುರುಡಿಪುರ ಹಾಗೂ ಗರುಡನಹಳ್ಳಿಯ ನಡುವೆ ಗಡಿವಿವಾದ ಉಂಟಾದಾಗ ರಾಜಧಾನಿ ಧೋರಸಮುದ್ರದ ಶ್ರೀ ಹೊಯ್ಸಳೇಶ್ವರ ಸನ್ನಿಧಿಯಲ್ಲಿ ಕನ್ನಯ್ಯನು ದಿವ್ಯವ ಹಿಡಿದು ಗೆದ್ದ ಕಾರಣ ಭಟಗವೆಯವರು ನೆಟ್ಟಿದ್ದ ಕಲ್ಲನ್ನು ಕಿತ್ತು ಗರುಡನಹಳ್ಳಿಗೆ ಆ ಭೂಮಿ ಸೇರಿದ್ದೆಂದು ತೀರ್ಮಾನಿಸಲಾಯಿತು.[11]

ಈ ರೀತಿ ದಿವ್ಯವನ್ನು ಮಾಡುತ್ತಿದ್ದವರು ಹೇಗೆ ಮಾಡುತ್ತಿದ್ದರು ಎಂಬುದನ್ನು ಗುತ್ತಲು ಶಾಸನ[12] ತಿಳಿಸುತ್ತದೆ. ಅರ್ಕೇಶ್ವರ ದೇವಸ್ಥಾನದಲ್ಲಿ ಕಬ್ಬಿಣದ ಕೊಪ್ಪರಿಗೆಯಲ್ಲಿ ತುಪ್ಪವನ್ನು ಹೊಯಿದು. ಚೆನ್ನಾಗಿ ಅದನ್ನು ಕುದಿಸಿ ತುಪ್ಪಕ್ಕೆ 3 ಪಿರಂಗಿ ಗುಂಡನ್ನು ಹಾಕಿದಾಗ ಹುಣಸೆ ಖೆಂಡದಿಂದ ಚೆನ್ನಾಗಿ ಕುದಿಸಿ ಈ ತುಪ್ಪದಲ್ಲಿ ದ್ರುಷ್ಟಪವಾಡ. ಇದರಲ್ಲಿ ಗೆದ್ದರೆ ದೇವಸ್ಥಾನದ ಹಕ್ಕುಬಾದ್ಯತೆ ನಿನಗೆಂದು ಹೇಳಿದಾಗ ಆಗ ಸ್ನಾನವನ್ನು ಮಾಡಿ ಮಡಿಯಿಂದ ದೇವರ ಮುಂದೆ ನಿಂತು ಮೂರು ಬಾರಿ ಪವಾಡ ಗೆದ್ದನು. ಇದರಿಂದ ಅರ್ಜಿವಖೇವಡೇಜಿಗೆ ದೇವರ ಪೂಜೆಗೆ ಅನುವು ಮಾಡಿಕೊಡಲಾಯಿತು.

ಜಾತಿಸಂಕರದ ವಿಷಯವೂ ಅಲ್ಲಲ್ಲಿ ಪ್ರಸ್ತಾಪಗೊಂಡಿದ್ದು ಯಳಂದೂರಿನಲ್ಲಿ ಹೆಣ್ಣು ಬದುಕು ತಪ್ಪಿದರೆ 5 ವರಹ ದಂಡವೆಂದಿದೆ.[13] ಬಾಗಳಿಯ ಕಲ್ಲೇಶ್ವರ ದೇಗುಲದ ಶಾಸನವು "ಬಾಲ್ಗುಳಿಯ 50 ಮಹಾಜನರ ಮತ್ತು ಹೆಗ್ಗಡೆ ಮಲ್ಲಯ್ಯ ಗೋಪಯ್ಯನ ಸಮ್ಮುಖದಲ್ಲಿ ಅಂಗಡಿ ತಾಳಯ್ಯನು ತಮ್ಮ ಮಗಳು ಜಾತಿ ಸಂಕರವಾದಾಗ ಕಲಿದೇವರ ದಂಡವಾಗಿ ಭೂದಾನ ನೀಡಿದ್ದಾನೆ.[14]

**ವಿಶಿಷ್ಟವಾದ ಕುಲಗಳು –**

**ಗಾದರಕುಲದ ಬಿಣ್ಣಾಂಡಿಯ ಕುಲ:** ಬಿಣ್ಣಾಂಡಿಯು ವಿಷ್ಣುವರ್ಧನನ ಅಧೀನ ಅಧಿಕಾರಿ. ಇವನು "ಸಿವಸಮೆಯ ಮಹಾಗಗನ ಶೋಭಾಕರ ದಿವಾಕರಂ ಸಕಳಮುನಿಜನ ನಿರಂತರದಾನಗುಣಾಶ್ರಯ ಶ್ರೇಯಾಂಶ, ಸರಸ್ವತೀ ಕರ್ಣ್ಣಾವತಂಸ, ಗೋತ್ರಪ್ರವೃತ್ತ, ಗಾರಂದರ ಕುಳಕಮಳಮಾರ್ತ್ತಾಂಡ" ಎಂದು ಪ್ರಸಿದ್ದನಾಗಿದ್ದನು. ಇವನು ಚಾಮಗೌಂಡನ ಮಗ. ಮುದುಗೆರೆಯನ್ನಾಳುತ್ತಿದ್ದ ಗಾರಂದರಕುಲದ ಬಿನ್ನಾಂಡಿಯು ಮುದಿಗೆರೆಯಲ್ಲಿ ತೀರಿಕೊಂಡ ತನ್ನ ಮುತ್ತಯ್ಯ ಮತ್ತು ತಾಯಿ ಚಾನವ್ವೆಯರ ನೆನಪಿಗಾಗಿ ಲಿಂಗಪ್ರತಿಷ್ಠೆಯನ್ನು ಮಾಡಿಸಿ ಕೆರೆಗೆ ತೂಬನ್ನು ಇಕ್ಕಿಸಿದ ವಿಷಯದ ಪ್ರಸ್ತಾಪವಿದೆ. ಗರಂಜೇಶ್ವರವೆಂಬ ಹೆಸರುಳ್ಳ ಆ ಲಿಂಗದ ಪೂಜೆ ನೈವೇದ್ಯಗಳಿಗಾಗಿ ಸೋವನಾಥಪಂಡಿತನಿಗೆ ಮಾಡಿದ್ದ ಭೂಮಿದಾನ ಅವನ ಕಾಲಾನಂತರ ಅವನ ಮಗ ರಾಜಪಂಡಿತನಿಗೆ ಪುನರ್ದತ್ತಿಯಾಗಿ ಸಂದಿದೆ. ದಾನಿಯು ಗಾರಂದರಕುಲಕ್ಕೆ

ಸೇರಿದವನೆಂದು ಈ ಶಾಸನದಲ್ಲಿ ತಿಳಿಸಿರುವುದು ಕುತೂಹಲಕರವಾಗಿದೆ. ಮದ್ದೂರು ತಾಲ್ಲೂಕಿನ ಕ್ರಿ.ಶ. 1200 ಹಾಗೂ 1201ರ ಎರಡು[15] ಶಾಸನಗಳಲ್ಲೂ ಬಾರಮದರ, ಬಾರಂದರ ಎಂಬ ಉಲ್ಲೇಖಗಳಿವೆ . ಇವು ಸಹ ವಂಶದ ಹೆಸರುಗಳಂತೆ ತೋರುತ್ತವೆ. ಇನ್ನೆರಡು ಶಾಸನಗಳಲ್ಲಿಯೂ[16] ಬಾರದರ, ಬಾರಂದರ ಎಂಬ ವಂಶಕ್ಕೆ ಸೇರಿದ ವ್ಯಕ್ತಿಗಳ ಉಲ್ಲೇಖಗಳಿವೆ. ಅದ್ದರಿಂದ ಬಹುಶಃ ಇದೊಂದು ಪುರಾತನ ವಂಶವಾಗಿದ್ದು ಕೊಂಗಲ್ನಾಡು ಕೆಳಲೆನಾಡುಗಳ ಭಾಗಗಳನ್ನೊಳಗೊಂಡ ಮೈಸೂರು ಮಂಡ್ಯ ಜಿಲ್ಲೆಗಳಲ್ಲಿದ್ದ ಗಾವುಂಡರ ವಂಶವಾಗಿದ್ದಿರಬಹುದು.[17]

• ಅರಕಲಗೂಡಿನ ರಾಮೇಶ್ವರ ದೇವಾಲಯದೊಳಗೆ ದಕ್ಷಿಣಮೂರ್ತಿ ಗುಡಿಯ ಹಿಂದೆ ಒಂದರ ಪಕ್ಕ ಇನ್ನೊಂದರಂತೆ ನಿಲ್ಲಿಸಿದ ನಾಲ್ಕು ಬೇರೆ ಬೇರೆ ಕಲ್ಲುಗಳ ಮೇಲೆ ಶಾಸನವನ್ನು ಕಂಡರಿಸಿರುವುದು ಒಂದು ಅಪರೂಪದ ನಿದರ್ಶನ.[18] ಶಾಸನದಲ್ಲಿ ಎರಡು ತೇದಿಗಳಿವೆ ಕ್ರಿ.ಶ. 27–10–1250, 21–6–1251. ಮೊದಲ ತೇದಿಯಂದು ನಡೆದ ಘಟನೆಯ ಎಂಟು ತಿಂಗಳ ನಂತರ ಎರಡನೆಯ ತೇದಿಯನ್ನು ಸೂಚಿಸಿದೆ. ಈ ತೇದಿಯಂದು ಶಾಸನವನ್ನು ಕಂಡರಿಸಲಾಯಿತೆಂಬುದು ಸ್ಪಷ್ಟ. ಹಿರಿಯ ಸಂಧಿ ವಿಗ್ರಹಿಯಾದ ಹಾಗೂ ಕೊಂಗಮಂಡಲದ ಅಧ್ಯಕ್ಷನಾದ ಬೊಮ್ಮಣ್ಣದಂಡನಾಯಕರ ಕೈಕೆಳಗಿದ್ದ ವಾಮರಸನ ಮಗ ಕಲ್ಲಯ್ಯನೆಂಬಾತ ರಾಮನಾಥದೇವರ ಪೂಜೆಗಾಗಿ ಹೂದೋಟವೊಂದನ್ನು ಮಾಡಿಸಲು ದೇವಾಲಯದ ಸ್ಥಾನಿಕರಿಂದ 95ಕಂಬ ಭೂಮಿಯನ್ನು ಕ್ರಯಕ್ಕೆ ಪಡೆದು ದಾನ ನೀಡಿದ. ಇದರಲ್ಲಿ 30 ಕೊಳಗ ತೋಟಿಗನ ಜೀವಿತಕ್ಕೆ ಸಂದಿತು. ತೋಟಕ್ಕೆ ಮತ್ತು ತೋಟಿಗನ ಮನೆ ತೆರಿಗೆಯನ್ನು ಮಾನ್ಯಮಾಡಲಾಯಿತು. ಕೆಲವು ತಿಂಗಳುಗಳ ಅನಂತರ ಈ ದತ್ತಿಯನ್ನು ಸ್ವಲ್ಪ ಮಾರ್ಪಡಿಸಲಾಯಿತು. ತೋಟಿಗನಿಗೆ ಕೊಟ್ಟಿದ್ದ 30 ಕೊಳಗ ಭೂಮಿಯನ್ನು ಈಗ ದೇವರಿಗೆ ಬಿಡಲಾಯಿತು. ಇದಕ್ಕೆ ಪ್ರತಿಯಾಗಿ, ಹೊಸದಾಗಿ 80ಕಂಬ ಭೂಮಿಯನ್ನು ಸ್ಥಾನಿಕರಿಂದ ತತ್ಕಾಲೋಚಿತ ಕ್ರಯಕ್ಕೆ ಪಡೆದು ತೋಟಿಗನ ಜೀವಿತಕ್ಕಾಗಿ ನೀಡಲಾಯಿತು. ಅಲ್ಲದೆ ಹೂದೋಟಕ್ಕೆ ನೀರುಣಿಸಲು ಬಳಸುವ ರಾಟಣಕ್ಕೆ ಹೂಡಿದ ಎತ್ತುಗಳ ಮೇವಿಗಾಗಿ ವರಗುಳಿಯ ವಾರ್ಷಿಕ ಸಿದ್ದಾಯದಿಂದ 3 ಗದ್ಯಾಣಗಳ್ನು ಮತ್ತು ನೆಲುವಾಗಿಲಿನ ವಾರ್ಷಿಕ ಆದಾಯದಿಂದ ಒಂದು ಗದ್ಯಾಣ ಮತ್ತು ಒಂದು ಹಣವನ್ನು ಕ್ರಮವಾಗಿ ಶ್ರೀಕರಣದ ನಾಕಣ್ಣ ವಿಜಯಣ್ಣನ ಅಳಿಯ ಸೋವಣ್ಣ ಹಾಗೂ ಶ್ರೀಕರಣದ ಕಾವಣ್ಣನ ಮಗ ಮದುಕಯ್ಯ ಇವರು ದಾನಕೊಟ್ಟರು.

ಈಶಾಸನವು ಹದಿನಾರು ಮೆಟ್ಟಿನ ಹಾಸಗಳೆಯ ಉದ್ದಳತೆಯ ಉಪಕರಣವನ್ನು ಉಲ್ಲೇಖಿಸುತ್ತದೆ. ಈ ಅಳತೆ ಕೋಲಿನಿಂದ ದಾನಭೂಮಿಯನ್ನು ಅಳೆಯಲಾಯಿತು. ಭುವಿಯ ಸೀಮಾವಿವರವನ್ನು ತಿಳಿಸುವಾಗ ಅದು ಸಿದ್ದನಾಥನ ದೇವಾಲಯವನ್ನು ಉಲ್ಲೇಖಿಸುತ್ತದೆ. ಈ ವ್ಯವಹಾರದ ಸಂಬಂಧದಲ್ಲಿ ದಾನಿಯು ಸ್ಥಾನಿಕರಿಂದ ಭೂಮಿಯನ್ನು ಯಥೋಚಿತ ಬೆಲೆಗೆ ಕೊಂಡುಕೊಳ್ಳಬೇಕಾಯಿತೆಂಬುದನ್ನು ಗಮನಿಸಿದರೆ, ಆ ಭೂಮಿಭಾಗಗಳು ಸ್ಥಾನಿಕರ ಖಾಸಗಿ ಆಸ್ತಿಯಾಗಿತ್ತೆಂದು ಸ್ಪಷ್ಟವಾಗಿ ವಿದಿತವಾಗುತ್ತದೆ.

➢ ತಳಾರನಾದ ಭೂತೆಯನಾಯಕ ಮತ್ತು ಅವನ ತಮ್ಮ ಮಾರ ಇಬ್ಬರು ಕಂಜಣನಕೆರೆ ಮತ್ತು ಜಕ್ಕವೆಗೆರೆಯನ್ನು ಸೇರಿಸಿ ಊರನ್ನು ನಿರ್ಮಾಣಮಾಡಬೇಕೆಂದು ಮಹಾಪ್ರಭು ಆದಿಗೌಡನಿಗೆ

ಪ್ರಾರ್ಥಿಸಿದರು. ಜೊತೆಗೆ ಒಂದು ಸಂತೆಯನ್ನು ನಿರ್ಮಿಸಿಕೊಟ್ಟರು. ಆಗ ಆದಿಗೌಡ ಮತ್ತು ಅವನ ತಮ್ಮ ಹಾಗೂ ಅವನ ಮಕ್ಕಳೆಲ್ಲರು ಸೇರಿ ಕಾಡನ್ನು ಕಡಿದು ಕನ್ನೆಗೆರೆಯನ್ನು ಕಟ್ಟಿಸಿದರು; ಅಲ್ಲಿಯೇ ಊರನ್ನು ನಿರ್ಮಿಸಿದರು. ಆದಿಗೌಡನು ಆ ಊರ ಮುಂದೆ ದೇವಾಲಯವನ್ನು ನಿರ್ಮಿಸಿ ಅದಕ್ಕೆ ಆದಿಮಲ್ಲಿಕಾರ್ಜುನ ದೇವರನ್ನು ಪ್ರತಿಷ್ಠಾಪಿಸಿದನು ದೇವರ ನಿತ್ಯಪೂಜೆ ಮುಂತಾದ ಸೇವೆಗಳಿಗೆಂದು 3 ಸಲಗೆ ಗದ್ದೆ 300 ಕಂಬ ಹೊಲಗಳನ್ನು 1 ಗಾಣವನ್ನು ದತ್ತಿಯಾಗಿ ತನ್ನ ಗುರು ನರಸಿಂಹಶಕ್ತಿಗೆ ನೀಡಿದನು.[19]

**ಕುಲಕೇಂದ್ರಿತ ನಿರ್ಮಿತಿಗಳು :**

ಪ್ರತಿಯೊಂದು ಕುಲವೂ ತನ್ನದೇ ಆದ ರೀತಿ–ನೀತಿಗಳನ್ನು ಹೊಂದಿರುತ್ತದೆ. ಕಡಿಮೆ ಸಂಖ್ಯೆಯಲ್ಲಿರುವ ವೈದಿಕ ಬ್ರಾಹ್ಮಣರು ನಡೆಸುವ ದೇವಾಲಯಗಳ ಕಟ್ಟಳೆಗಳು ಕೆಲವು ಸಲ ಎಲ್ಲರ ಒಪ್ಪಿಗೆಯನ್ನು ಮಾನ್ಯ ಮಾಡದೆಯೂ ಹೋಗಬಹುದು ಅಂತಹ ಸಂದರ್ಭಗಳಲ್ಲಿ ಆರ್ಥಿಕವಾಗಿ ಸಬಲವಾಗಿರುವ ಕೋಮುಗಳು ತಮ್ಮದೇ ಆದ ಧಾರ್ಮಿಕ ವ್ಯವಸ್ಥೆಯನ್ನು ತಮ್ಮದೇ ಆದ ಕುಲದೈವಗಳ ಹಿನ್ನೆಲೆಯಲ್ಲಿ ರೂಪಿಸಿಕೊಳ್ಳಲು ಆರಂಭಿಸುತ್ತವೆ. ಇದಕ್ಕೆ ಎರಡು ರೀತಿಯ ವಿಶೇಷಣಗಳಿರುತ್ತವೆ. ಮೊದಲನೆಯದು ತಮ್ಮದೇ ಆದ ಭಿನ್ನವಾದ ಅಸ್ಮಿತೆಯನ್ನು ಸ್ಥಾಪಿಸಿಕೊಳ್ಳುವುದು ಒಂದಾದರೆ ತಮ್ಮ ಕೋಮಿನ ರಾಜಕೀಯ ಪ್ರಾಬಲ್ಯಗಳೂ, ಜನಸಂಖ್ಯಾ ಪ್ರಾಬಲ್ಯಗಳನ್ನು ಸ್ಥಾಪಿಸಿಕೊಳ್ಳುವ ಬಗೆ ಇನ್ನೊಂದು ರೀತಿಯಲ್ಲಿ ಕೆಲಸ ಮಾಡುತ್ತಿರುತ್ತದೆ. ತಮ್ಮದೇ ಆದ ಧಾರ್ಮಿಕ ವ್ಯವಸ್ಥೆಯನ್ನು ಹೊಂದಿರುವುದೆಂದರೆ ತಮ್ಮದೇ ಆದ ಸಂವಿಧಾನವನ್ನು ಪೋಷಿಸಿಕೊಂಡಂತೆಯೇ ಸರಿ. ಅಂತಹ ಕೆಲವು ಕುಲಗಳು ರೂಪಿಸಿಕೊಂಡ ಕೆಲವು ದೇವಾಲಯಗಳನ್ನು ಪ್ರಾತಿನಿಧಿಕವಾಗಿ ಈ ಮುಂದೆ ಗಮನಿಸಬಹುದು. ಕ್ರಿ.ಶ. 1142ರಲ್ಲಿ[20] ಗಂಡರಾದಿತ್ಯಹೊಳಲಿನಲ್ಲಿದ್ದ ಗವರೇಶ್ವರ ದೇವಾಲಯಕ್ಕೆ ಉಯ್ಯವಂದ ದಂಡನಾಯಕರು ಮೂರು ಲಕ್ಷ ಅಡಿಕೆಯ ಸುಂಕವನ್ನು ನೀಡಿದನು. ಗವರೆಗಳು ಎಂದರೆ ಪ್ರಾಣಿಗಳ ಮೇಲೆ ವೀಳ್ಯದೆಲೆಯನ್ನು ಹಾಕಿಕೊಂಡು ಊರಿಂದ ಊರಿಗೆ ವ್ಯಾಪಾರ ನಡೆಸುವವರು.

ಹೊಳಲಿನಲ್ಲಿ ಕ್ರಿ.ಶ.1074ರಲ್ಲಿ ಗಂಡರಾದಿತ್ಯಮಂಗಲದ 120 ಮಹಾಜನಗಳು, ತೆಲ್ಲಿಗರು, ಮುಮ್ಮರಿ ದಂಡಗಳು, ಸೆಟ್ಟಿಗಳು ಎಲ್ಲರೂ ಸೇರಿ ಗವರೇಶ್ವರ ದೇವಾಲಯಕ್ಕೆ ದಾನಗಳನ್ನು ನೀಡಿದ್ದಾರೆ.[21] ಕ್ರಿ.ಶ.1093ರಲ್ಲಿ ತಲವಾಗಿಲ ಭೋಗೇಶ್ವರದ ಸ್ಥಾನೀಕ ಸತ್ತಾಗ ಚಿಕ್ಕಗೌಡ, ನೇಮಗೌಡ, ಅರವತ್ತೊಕ್ಕಲು, ಹನ್ನೆರಡು ಹಿಟ್ಟು ಸೇರಿ ಪೂಜಾರಿ ನಾಗಯ್ಯನಿಗೆ ಆಸ್ಥಾನವನ್ನು ವಹಿಸಿಕೊಟ್ಟರು.[22] ತಾವು ನಿರ್ಮಿಸಿದ ದೇವಾಲಯಗಳ ಆಡಳಿತ ವ್ಯವಸ್ಥೆಯು ತಮ್ಮ ಕುಲ ಬಾಂಧವರ ಕೈಯಲ್ಲಿದ್ದಂತೆ ತಮಗೆ ಬೇಕಾದವರನ್ನು ಸೇರಿಸಿಕೊಂಡು ತೀರ್ಮಾನ ತೆಗೆದುಕೊಳ್ಳುವ ಹಕ್ಕು ಇವರಲ್ಲಿತ್ತು.

ಮಾಣಿಕೇಶ್ವರ ದೇವರಿಗೆ ಅನೇಕ ಸೆಟ್ಟಿಯರೆಲ್ಲ ಸೇರಿ 1136ರಲ್ಲಿ ದಾನವನ್ನು ನೀಡಿದ್ದಾರೆ.[23] ಆಸಂದಿನಾಡ ಶ್ರೀವಿಷ್ಣು ಸಮುದ್ರದ ಅಶೇಷ ನಖರವಳಿಯಲು 1143ರಲ್ಲಿ ಅಶೇಷ ನಖರೇಶ್ವರ ದೇವರಿಗೆ ಅನೇಕ ದಾನಗಳನ್ನು ವ್ಯಾಪಾರಸ್ಥರು ನೀಡಿದರು[24] 1 ಅಡಕೆಯ ಹೇರಿಗೆ 20 ಅಡಿಕೆ, 1 ಎಲೆಯ ಹೇರಿಗೆ 100 ಎಲೆಯನ್ನು, ತೆಲ್ಲಿಗ ನಖರರು ಇಲ್ಲಿ ತಮ್ಮ ಭಾಗವಾಗಿ 1 ಗಾಣಕ್ಕೆ 1 ಸೊಲಿಗೆಯ ಎಣ್ಣೆಯ ಲೆಕ್ಕದಲ್ಲಿ ದಾನ ನೀಡಿದರು. ಅಯ್ಯಾವೊಳೆ 500ರ್ವರು ಎಂಟುನಾಡು ಹದಿನಾರು, ಸಮಸ್ತ ಮುಮ್ಮರಿದಂಡಗಳು, ನಾನಾದೇಶಿಗಳು ಸೇರಿ 1154ರಲ್ಲಿ ಮಹಾನಾಡಾಗಿದ್ದ ಮುದವೊಳಲಿ ಅಗ್ರಹಾರದಲಿ ಗವರೇಶ್ವರ ದೇವಾಲಯವನ್ನು ಸ್ಥಾಪಿಸಿದರು. ತಮ್ಮ ವ್ಯಾಪಾರೀ ವಸ್ತುಗಳ ಬಗ್ಗೆ ಇದರಲ್ಲಿ ವಿಶೇಷವಾದ ಮಾಹಿತಿಯನ್ನು ಒದಗಿಸಿದ್ದಾರೆ. ತಾವು ಅಳೆಯುವ, ತೂಗುವ, ಎಣಿಸುವ ಸಮಸ್ತ ಧಾನ್ಯವನ್ನು ಮಾರಿದಲ್ಲಿ, ಚಿನ್ನದ ಕಾಣಿ ಎರಡು, ಸೀರಿಯ ದಿಂಡಿನ ಬಂಡಿಯೊಂದಕ್ಕೆ ಒಂದು ಪಣ, ಎತ್ತಿನ ಮೇಲಿನ ಮಳವೆಗೆ 5 ವೀಸ, ಕತ್ತೆ ಮೇಲಿನ ಮಳವಿಗೆ 2 ವೀಸ, ತಲೆಯ ಮೇಲೆ ತರುವ ಜವಳಿಯ ಸೀರೆಗೆ 1 ವೀಸವನ್ನು ಈ ದೇವರಿಗೆ ಬಿಡಲಾಗುತ್ತದೆ. ಇದರಲ್ಲಿದೆ ಪ್ರತೀ ಒಕ್ಕಲುಗಳು 1 ಹಾಗವನ್ನು ಇದಕ್ಕೆ ಪೋಷಕವಾಗಿ ನೀಡಿದ್ದಾರೆ.

1157ರಲ್ಲಿ ಬೇಟೆಯ ಉದಯಾದಿತ್ಯನಾಯಕನು ಬಿಲ್ಲೇಶ್ವರ ದೇವರಿಗೆ ದಾನವನ್ನು ನೀಡಿದ್ದಾನೆ. ಕಾಮಾಡಿಸೆಟ್ಟಿಯು ಕಟ್ಟಿಸಿದ ಕೆರೆಯ ನೀರೊತ್ತಿನಿಂದ ತಾನು ಕಟ್ಟಿಸಿದ ಬಲ್ಲೇಶ್ವರ ದೇವರ ದೇವಾಲಯದವರೆಗೆ ಸಮಸ್ತ ನಕರರೂ ಸೇರಿ ಈ ದಾನವನ್ನು ನೀಡಲಾಗಿದೆ.[25]

ಕ್ರಿ.ಶ.1208ರಲ್ಲಿ ಮಗರೆ 300ರ ಮೊದಲಬಾಡವಾದ ಕಣಿಕಟ್ಟೆಯ ಸಮಸ್ತ ಪ್ರಜೆ ಗಾವುಂಡಗಳು ಸೇರಿ ಜಗತಿಯ ಕೊತ್ತಳಿಯ, ಜೇಡ ಗೊತ್ತಳಿಯ ಜನರೆಲ್ಲ ಸೇರಿ ಮೂಲಸ್ತಾನದ ಕಲಿದೇವರ ದೇವಾಲಯಕ್ಕೆ ಕೆಲವು ದಾನಗಳನ್ನು ನೀಡಿದ್ದಾರೆ.[26] ಗಾಣಿಗರು 1238ರಲ್ಲಿ ಯಳ್ಳೇಶಪುರದಲ್ಲಿ ನಿರ್ಮಿಸಿದ ಎಳ್ಳೇಶ್ವರ ದೇವಾಲಯವು ವಿಶೇಷ ವಾದುದು.[27] ಸಿಂಗಣದೇವನ ಆಳ್ವಿಕೆಯಲ್ಲಿ 1245ರಲ್ಲಿ ಆಲಗುರುವದ ಮಹಾಜನರು, ಸಮಸ್ತ ಪ್ರಜೆಗಳು, ಮೂಲಿಗರು, ಒಕ್ಕಲೆಲ್ಲ ಸೇರಿ ಮಲ್ಲಿಕಾರ್ಜುನ ದೇವರಿಗೆ ಕೆಲವು ದಾನಗಳನ್ನು ನೀಡುತ್ತಾರೆ.

**6.2.4.2 ಕುಟುಂಬ:** ಪ್ರತಿಯೊಂದು ಸಮಾಜವು ತನ್ನ ಹೊಸ ಸದಸ್ಯರಿಗೆ ಅವರು ಮುಂದೆ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಸಹಾಯಕವಾಗುವಂತೆ ಸರಿಯಾದ ತರಬೇತಿಯನ್ನು ನೀಡಲು ತನ್ನದೇ ಆದ ವಿಧಿ–ವಿಧಾನಗಳನ್ನು ನಿಗದಿಪಡಿಸಿರುತ್ತದೆ. ಇಂತಹ ಸಾಮಾಜಿಕ ತರಬೇತಿಯನ್ನು "ಸಾಮಾಜೀಕರಣ" ಎನ್ನಲಾಗಿದೆ. ವಿಲಿಯಂ ಎಫ್ ಆಗ್ ಬರ್ನ್ ಎಂಬಾತನ ಪ್ರಕಾರ,[28] ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಸಮಾಜದ ನಿಯಮಗಳಿಗೆ ಅನುಸಾರವಾಗಿ ತನ್ನ ನಡತೆಯನ್ನು ರೂಢಿಸಿಕೊಳ್ಳುವ ಪ್ರಕ್ರಿಯೆಯೇ ಸಾಮಾಜೀಕರಣ". ಸಾಮಾಜೀಕರಣದ ಪ್ರಕ್ರಿಯೆಯು ಬಹಳ ದೀರ್ಘಾವಧಿಯದು. ಮಾತ್ರವಲ್ಲದೆ ಇದು ವ್ಯಕ್ತಿಗಳ ಮೇಲೆ ಪರಿಣಾಮ ಬೀರುವ ಹಲವಾರು ಪ್ರಭಾವಗಳನ್ನು ಒಳಗೊಂಡಿರುತ್ತದೆ. ಇಂತಹ

ಪ್ರಭಾವಗಳು ವ್ಯಕ್ತಿಗಳು, ಸಮೂಹಗಳು ಹಾಗೂ ಸಂಸ್ಥೆಗಳಿಂದ ಹೊರಹೊಮ್ಮುತ್ತದೆ. ಇವುಗಳನ್ನೇ ಸಾಮಾಜೀಕರಣದ ನಿಯೋಗಿಗಳು ಎನ್ನಲಾಗಿದೆ. ಇವು ಸಮಾಜೀಕರಣದಲ್ಲಿ ಸಹಾಯಕ ಮತ್ತು ಸಂಪೋಷಕ ಪಾತ್ರವನ್ನು ನಿರ್ವಹಿಸುತ್ತವೆ. ಹೀಗಾಗಿ ಈ ಸಮಾಜೀಕರಣದ ನಿಯೋಗಿಗಳನ್ನು ಎರಡು ರೀತಿಯಲ್ಲಿ ವಿಂಗಡಿಸಲಾಗಿದೆ. ಒಂದು ಅನೌಪಚಚಾರಿಕ ನಿಯೋಗಿಗಳು. ಇದಕ್ಕೆ ಕುಟುಂಬ, ಸ್ನೇಹಿತರು, ಮತಧರ್ಮ, ಸಮುದಾಯ ಮುಂತಾದವು. ಇನ್ನೊಂದು ಔಪಚಾರಿಕ ನಿಯೋಗಿಗಳು. ಶಾಲೆ, ಸಮೂಹ ಮಾಧ್ಯಮ. ಸಾಹಿತ್ಯ, ಇತ್ಯಾದಿ.

**ಅನೌಪಚಾರಿಕ ನಿಯೋಗಿಯಾಗಿ ಕುಟುಂಬ :** ಕುಟುಂಬವು ಸಾಮಾಜಿಕ ಸಂರಚನೆಯ ಕೇಂದ್ರಸ್ಥಾನದಲ್ಲಿದೆ. ಕುಟುಂಬದ ಮೂಲಕವೇ ಮಗುವು ತನ್ನ ಜನಾಂಗಿಕ, ಜಾತೀಯ, ಧಾರ್ಮಿಕ, ಪ್ರಾದೇಶಿಕ, ಆರ್ಥಿಕ ಮತ್ತಿತರ ಅಂತಸ್ತುಗಳನ್ನು ಪಡೆದುಕೊಳ್ಳುವುದು. ಇವು ಮಗುವಿನ ಅಂತಃಕ್ರಿಯೆಯ ಹಾಗೂ ಸಾಮಾಜೀಕರಣದ ಮೇಲೆ ತಮ್ಮ ಪ್ರಭಾವ ಬೀರುವುವು. ಕುಟುಂಬವೊಂದು ರೂಢಿಸಿಕೊಂಡು ಬಂದಿರುವ ಸಂಸ್ಕಾರಗಳು, ನಂಬಿಕೆಗಳು ಇತ್ಯಾದಿ ಅಂಶಗಳು ಮಾನವೀಯಗುಣಗಳನ್ನು ಬೆಳೆಸಿಕೊಳ್ಳುವಂತೆ ಇಂಬುನೀಡುತ್ತದೆ. ಉದಾ: ಕುಟುಂಬವು ತಮ್ಮ ಮಕ್ಕಳು ಹಿಂದುವಾಗಿ ಹುಟ್ಟಿದರೆ ಹಿಂದುವಾಗಿ ಬೆಳೆಸುತ್ತದೆ. ಅಂತೆಯೇ ಜೈನನಾಗಿ ಹುಟ್ಟಿದರೆ ಹಾಗೆಯೇ ಬೆಳೆಸುತ್ತದೆ. ದಂಡನಾಯಕನ ಕುಟುಂಬವು ಮುಂದಿನ ತಲೆಮಾರಿಗೆ ಸಮರ್ಥ ದಂಡನಾಯಕನನ್ನು ರೂಪಿಸುತ್ತದೆ. ಕುಟುಂಬವು ಮಗುವನ್ನು ಆವರಿಸಿಕೊಳ್ಳುವ ಪ್ರಾಥಮಿಕ ಸಮೂಹವಾಗಿರುತ್ತದೆ. ಹಾಗೆಂದೇ ಪ್ರತಿಯೊಬ್ಬ ಮನುಸ್ಯನು ರೂಪುಗೊಳ್ಳುವಲ್ಲಿ ಈ ಕುಟುಂಬದ ಪಾತ್ರ ಹಿರಿದಾಗಿರುತ್ತದೆ. ಸಮಾಜದ ರಚನೆಯಲ್ಲಿ ಕುಟುಂಬವು ಮಹತ್ವದ ಪಾತ್ರವನ್ನ ವಹಿಸುತ್ತದೆ. ಅಂತೆಯೇ ಹೊಯ್ಸಳ ಮಹಾಮಂಡಳೇಶ್ವರರ ಅಧಿಕಾರ ಕೇಂದ್ರಗಳುಳ್ಳ ಪ್ರದೇಶಗಳಲ್ಲಿ ಈ ಕುಟುಂಬದ ವ್ಯಾಪ್ತಿಯೊಳಗೆ ಕುಟುಂಬದ ಗಾತ್ರ, ಕುಟುಂಬದ ಯಜಮಾನಿಕೆ, ಮಹಿಳೆಯರ ಸ್ಥಾನ, ವಿವಾಹಗಳು ಮುಂತಾದವು ಬರುತ್ತವೆ. ಹೊಯ್ಸಳರ ಮಹಾಮಂಡಳೇಶ್ವರರ ಆಳ್ವಿಕೆಯ ಪ್ರದೇಶಗಳಲ್ಲಿ ಪಿತೃಪ್ರಧಾನ ವ್ಯವಸ್ಥೆ, ಬಹುಪತ್ನಿತ್ವ, ಸತಿಪದ್ಧತಿ ಮುಂತಾದವು ಸಮಾಜದ ಪ್ರಧಾನ ಲಕ್ಷಣಗಳಾಗಿದ್ದವು. ಮಹಾಮಂಡಳೇಶ್ವರರ ಕುಟುಂಬಗಳಲ್ಲಿಯೇ ಈ ಬಹುಪತ್ನಿತ್ವವು ಸಾಮಾನ್ಯವಾಗಿತ್ತಲ್ಲದೆ ಸಮಾಜದಲ್ಲಿಯೂ ಸಹ ಯಾವ ಅಡೆತಡೆಯೂ ಇಲ್ಲದಂತೆ ಮುಂದುವರಿದುಕೊಂಡು ಹೋಗುತ್ತಿತ್ತು. ಒಬ್ಬ ಪುರುಷನು ಅನೇಕ ಮಂದಿ ಸ್ತ್ರೀಯರನ್ನು ವಿವಾಹವಾಗುವ ಪದ್ದತಿಗೆ ಬಹುಪತ್ನಿತ್ವ ಎಂದು ಕರೆಯುತ್ತಾರೆ. ಪ್ರಾಚೀನ ಕಾಲದಿಂದಲೂ ಈ ಪದ್ದತಿಗೆ ನಮ್ಮ ಸಮಾಜದಲ್ಲಿ ಅವಕಾಶವಿದ್ದೇ ಇದೆ. ಇದಕ್ಕೆ ಕಾರಣಗಳು ಹಲವಾರು. ಯುದ್ದ, ಬೇಟೆ, ಕ್ರೂರ ಮತ್ತು ಅಸಹನೀಯ ಭೌಗೋಳಿಕ ಪರಿಸರಗಳಿಂದ ಪುರುಷರ ಸಂಖ್ಯೆ ಕಡಿಮೆಯಾಗುವ ಸಾಧ್ಯತೆಯಿತ್ತು. ಅಂತಹ ಸಂದರ್ಭಗಳಲ್ಲಿ ಗಂಡಸರ ಕೊರತೆಯಿಂದಾಗಿ ಜೀವನಪರ್ಯಂತ ಅವಿವಾಹಿತೆಯರಾಗಿ ಉಳಿಯುವುದರ ಬದಲು ಸ್ತ್ರೀಯರು ಬಹುಪತ್ನಿತ್ವಕ್ಕೆ ಸಿದ್ದರಾಗುತ್ತಿದ್ದರು. ಕೆಲವೊಮ್ಮೆ ರಾಜರು ಶ್ರೀಮಂತರು ಅಧಿಕಾರಿಗಳು ತಮ್ಮ ಪ್ರತಿಷ್ಠೆಯನ್ನು ಪ್ರದರ್ಶಿಸುವುದಕ್ಕಾಗಿ ಹೆಚ್ಚು ಮಂದಿ ಸ್ತ್ರೀಯರನ್ನು ವಿವಾಹವಾಗುತ್ತಿದ್ದರು. ಮೊದಲ ಪತ್ನಿಯಿಂದ ತನಗೆ ಸಂತಾನ ಪ್ರಾಪ್ತಿಯಾಗದಿದ್ದಾಗ ಪತಿಯು ಮತ್ತೊಬ್ಬ

ಸ್ತ್ರೀಯನ್ನು ವರಿಸುತ್ತಿದ್ದನು. ಮೊದಲ ಪತ್ನಿಯು ಪುತ್ರಸಂತಾನವನ್ನು ಪಡೆಯಲು ಅಸಮರ್ಥಳಾದಾಗ ಅಂತಹ ಸಂದರ್ಭದಲ್ಲಿ ಪತಿಯು ಮತ್ತೊಬ್ಬ ಸ್ತ್ರೀಯನ್ನು ವಿವಾಹವಾಗುವುದು ಸಾಮಾನ್ಯವಾಗಿತ್ತು,

ಬಹುಪತ್ನಿತ್ವದ ನಡುವೆಯೂ ಮಹಾಮಂಡಳೇಶ್ವರರ ಮಡದಿಯರು ತಮ್ಮ ಪತಿಯೊಂದಿಗೆ ಆಡಳಿತ ದಲ್ಲಿ ಭಾಗವಹಿಸುತ್ತಿದ್ದರು. ಕೆರೆ ಕಟ್ಟೆ ನಿರ್ಮಾಣ, ದಾನದತ್ತಿಗಳನ್ನು ನೀಡುವುದು, ಬಸದಿ ಆಲಯಗಳನ್ನು ಕಟ್ಟಿಸುವುದು ಮೊದಲಾದ ಸಾಮಾಜಿಕ ಕಾರ್ಯ ಚಟುವಟಿಕೆಗಳಲ್ಲಿ ಮಹಾಮಂಡಳೇಶ್ವರರ ಕುಟುಂಬದ ಸ್ತ್ರೀಯರು ಮತ್ತು ಅವರ ಅಧೀನ ಪ್ರದೇಶಗಳಲ್ಲಿನ ಶ್ರೀಮಂತ ವರ್ಗದ ಸ್ತ್ರೀಯರು ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದುದಕ್ಕೆ ಸಾಕಷ್ಟು ಶಾಸನಾಧಾರಗಳಿವೆ. ಈ ವಿಚಾರಗಳನ್ನು ಮುಂದಿನಂತೆ ಕಾಣಬಹುದು.

**ಸ್ತ್ರೀಯರು: ಸ್ಥಳೀಯ ಸಮಾಜದಲ್ಲಿನ ಅಸ್ಮಿತೆಯ ಆಯಾಮಗಳು –**

**ನಾಯಕತ್ವ ಮತ್ತು ಸಾಮಾಜಿಕ ಅಸ್ಮಿತೆಯ ಕಾರ್ಯ ಕಾರಣಗಳು :** ನಾಯಕತ್ವ ಎನ್ನುವುದು ಕೇವಲ ಪುರುಷರ ಸ್ವತ್ತಲ್ಲ. ಅದು ಮಹಿಳೆಯರಲ್ಲೂ ಇರುವ ಮುಖಂಡತ್ವದ ಗುಣವೇ ಆಗಿದೆ. ಈ ರೀತಿಯ ಗುಣಗಳು ಕನ್ನಡ ನಾಡಿನಲ್ಲಿ ಆರಂಭದಿಂದಲೂ ಇದ್ದಿತಾದರೂ ಹತ್ತನೆಯ ಶತಮಾನದ ನಂತರ ಸ್ತ್ರೀಯರಲ್ಲಿ ಅತ್ಯಂತ ವಿಸ್ತಾರವಾಗುತ್ತಾ ಸಾಗಿತು. ಹನ್ನೆರಡನೆಯ ಶತಮಾನದ ವಚನ ಚಳವಳಿಯ ನಂತರವಂತೂ ಹೆಣ್ಣಿನ ಬಾಹುಗಳು ಹತ್ತಾರು ಕಡೆ ಚಾಚಿಕೊಂಡಿತು.

ಕ್ರಿ.ಶ. 1267 ರ ಬೈರಾಪುರದ ಶಾಸನವು[29] ಸೋಮಯದಂಡನಾಯಕನಿಗೆ ರೇಕವ್ವೆ ದಂಡನಾಯಿಕಿತಿ ಎಂಬ ಹಿರಿಯ ಸಹೋದರಿಯಿದ್ದ ವಿಚಾರವನ್ನು ತಿಳಿಸುತ್ತದೆ. ಪ್ರಸ್ತುತ ಶಾಸನದ ಪ್ರಕಾರ, ರೇಕವ್ವೆ ದಂಡನಾಯಿಕಿತಿಯ ಮಗಳು ತಿಪ್ಪವ್ವೆ; ಅಳಿಯ ಬಿಜ್ಜಲೇಶ್ವರಪುರವೆನಿಸಿದ ಮಾಚನಹಳ್ಳಿಯ ಸ್ಥಾನಿಕನಾದ ಮಾರೆಯ ನಾಯಕ. ಈ ದಂಪತಿಗಳ ಕುವರಿ ಸೋಯಕ್ಕ. ರೇಕವ್ವೆ ದಂಡನಾಯಕಿತಿಯು ಬೊಮ್ಮಯ ನಾಯಕನಹಳ್ಳಿಯಲ್ಲಿ ಭೈರವೇಶ್ವರ ದೇಗುಲವನ್ನು ಕಟ್ಟಿಸಿ, ಆ ಗ್ರಾಮವನ್ನು ಭೈರವಪುರವೆಂಬ ಅಗ್ರಹಾರವನ್ನಾಗಿಸಿದಳು. ಈ ದೇಗುಲದ ನಾಲ್ಕು ವ್ರಿತ್ತಿಯ ಪ್ರಾಪ್ತಿಯೊಳಗಾದ ಗೃಹಕ್ಷೇತ್ರ ಅಷ್ಟಭೋಗ ತೇಜಸ್ವಾಮ್ಯಗಳನ್ನು ತನ್ನ ಮಗಳು. ಅಳಿಯ ಮತ್ತು ಮೊಮ್ಮಗಳಿಗೆ ಪ್ರೀತಿಯಿಂದ ದಾನ ಮಾಡಿದಳು. ಈ ಅಂಶವನ್ನು ಅನುಲಕ್ಷಿಸಿ, ಹೊಯ್ಸಳರ ಆಡಳಿತ ಯಂತ್ರದಲ್ಲಿ ಸ್ತ್ರೀಯೋರ್ವಳು ದಂಡನಾಯಕಿಯಾಗಿ ಜವಾಬ್ದಾರಿಯುತ ಪಾತ್ರವನ್ನು ನಿರ್ವಹಿಸುತ್ತಿದ್ದಳೆಂದು ಊಹಿಸಬಹುದು.

ಮಹಾಮಂಡಲೇಶ್ವರ ಬಲ್ಲದೇವರಸನಿಗೆ ಇಬ್ಬರು ಮಡದಿಯರು; ಸೋವಲದೇವಿ ಮತ್ತು ಮಾರಲದೇವಿ (=ಮಾದರದೇವಿ) ಈ ಇರ್ವರಲ್ಲಿ ಮಾರಲದೇವಿ ಹಿರಿಯರಸಿ.[30] ಈಕೆಗೆ ಚಿಕ್ಕಬಲ್ಲಯ್ಯನಾಯಕ ಮತ್ತು ನಾರಸಿಂಹ ಎಂಬ ಇಬ್ಬರು ಪುತ್ರರಿದ್ದರು. ಸೋವಲ ದೇವಿಯನ್ನು ಬೂದಿಹಾಳಿನ ಶಾಸನವು[31] ವರ್ಣಿಸಿದೆ: ಸದಾ ಶಿವನ ಧ್ಯಾನದಲ್ಲಿ ತಲ್ಲೀನಳಾಗಿ, ಶಿವಭಕ್ತರಿಗೆ ಮಿಗಿಲಾದ ಸೇವೆಗಳನ್ನು ಸಮರ್ಪಿಸುತ್ತ, ಅತ್ಯಂತ ಆನಂದಚಿತ್ತವುಳ್ಳವಳಾಗಿ ತನ್ನ ಸ್ವಧರ್ಮವನ್ನು ಪಾಲಿಸುತ್ತಿರುವ ಸೋವಲದೇವಿಯು ಮೃದುವಚನೆ, ಶ್ರೇಷ್ಠವಾದ ಗುಣವುಳ್ಳ ಸತಿ ಎಂದು ಶಾಸನಕವಿ ಹೊಗಳಿದ್ದಾನೆ. ಬಲ್ಲನ

ಹಿರಿಯರಸಿ ಮತ್ತು ಅವಳ ಮಕ್ಕಳ ಬಗ್ಗೆ ಶಾಸನಗಳು ಮೌನತಾಳಿರುವುದರಿಂದ ಅವರ ಹೆಸರಿನ–ಸಂಬಂಧಗಳ ಆಂಶಿಕ ವಿಚಾರವನ್ನು ಹೊರುತುಪಡಿಸಿ ಉಳಿದ ಮಾಹಿತಿಗಳು ಸದ್ಯಕ್ಕೆ ಲಭ್ಯವಿಲ್ಲ.

ಮಹಾಸಾಮಂತ ಚಟ್ಟಯ್ಯನಿಗೆ ಚಂದವ್ವೆ ಅಥವಾ ಚಂದವ್ವೆನಾಯಿಕಿತಿ ಎಂಬ ಹೆಂಡತಿ ಇದ್ದಳಾದರೂ ಶಾಂತಲೆ ಅಥವಾ ಸಾತವ್ವೆಯು ಸಹ ಈತನ ಇನ್ನೊರ್ವ ಮಡದಿಯೆಂಬುದು ಶಾಸನಗಳಿಂದ ವೇದ್ಯವಾಗುತ್ತದೆ. ಆದರೆ ಕಿರಿಯರಸಿ ಯಾರು? ಪಿರಿಯರಸಿ ಯಾರು? ಎಂಬುದು ಸ್ಪಷ್ಟವಾಗಿಲ್ಲ. ಆದರೂ ಶಾಂತಲೆಯು ಚಿಕ್ಕನಾಯಕನ ಹಳ್ಳಿ ಪರಿಸರದ ಶಾಸನಗಳಲ್ಲಿ ಮಾತ್ರ ಉಲ್ಲೇಖಗೊಂಡಿದ್ದರೆ, ಚಂದವ್ವೆಯು ಕಡೂರು ಪರಿಸರದ ಶಾಸನಗಳಲ್ಲಿ ಮಾತ್ರ ಉಲ್ಲೇಖಗೊಂಡಿದ್ದಾಳೆ. ಚಟ್ಟನ ಮೊದಮೊದಲಿನ ಶಾಸನಗಳು ಚಿಕ್ಕನಾಯಕನ ಹಳ್ಳಿಯಲ್ಲೂ ಆನಂತರದ ಶಾಸನಗಳು ಕಡೂರಿನಲ್ಲಿ ದೊರೆತಿರುವುದರಿಂದ ಬಹುಶಃ ಶಾಂತಲೆಯೇ ಚಟ್ಟನ ಮೊದಲಮಡದಿ ಇರಬಹುದು; ಶಾಂತಲೆಯ ಮಗ ಬಿಟ್ಟಿದೇವ ಅಥವಾ ವಿಷ್ಣುದೇವನು ಚಟ್ಟನ ನಂತರ ಹುಳಿಯೇರು ಪುರವರಾಧೀಶ್ವರ ಎಂದು ಕರೆಯಲ್ಪಡುವುದರಿಂದ ಈ ಬಿಟ್ಟದೇವನೇ ಚಟ್ಟನ ಹಿರಿಯ ಮಗ ಎಂದೆನಿಸುತ್ತದೆ.

ಮಹಾಸಾಮಂತಾಧಿಪತಿಯಾದ ಚಟ್ಟಯ್ಯನ ಮಡದಿ ಶಾಂತಲೆಯ ವ್ಯಕ್ತಿತ್ವವನ್ನು ಗುಣಾತಿಶಯವನ್ನು ಶಾಸನಗಳು ಸೊಗಸಾಗಿ ಕಟ್ಟಿಕೊಟ್ಟಿವೆ:

**ನುಡಿದಡೆ ಮಂದರಾಚಳದಲಂ 'ಬುಜಭವಂ ಬರದಕ್ಕರಕ್ಕವಿಂ**
**ಮ್ಮಡಿ ನೆನಗೀವೆನೆಂದಡೆ ಭವಂ ಕುಡಲಿತ್ತ ಬರಕ್ಕದಂತು ನಾ**
**ಲ್ವಡಿ ಸರಣಾರ್ತ್ಥಿಗಂಜದಿರೀವೆಂದಡೆ ವಜ್ರದ ಕೋಟಿಗಂ ಪದಿ**
**ಮ್ಮ್ಡಿಯೆನೆ ಶಾಂತೆ ಶಾಂತಲೆ ಜಸಂ ಬಡೆದಿರ್ದ್ದಳಳಾತಳಾಗ್ರದೊಳು**[32]

ಮಾತನಾಡುವಿಕೆಯಲ್ಲಿ ಮಂದರಪರ್ವತದಂತೆ ಗಂಭೀರ, ಬ್ರಹ್ಮನ ಬರವಣಿಗೆಗೂ ಇಮ್ಮಡಿ. ದಾನ ಮಾಡುವುದರಲ್ಲಿ ನಾಲ್ಕುಪಟ್ಟು ಕೊಡುಗೈದಾನಿ, ಶರಣು ಬಂದವರಿಗೆ ಆಶ್ರಯ ನೀಡುವಲ್ಲಿ ಹತ್ತುಪಟ್ಟು ಮಿಗಿಲಾದವಳು ಈ ಶಾಂತಲೆ.

**ತೆರೆನಳಿತೋಳಳಂಬುರುಹವಾನನವುದ್ಗತ ಕಂಬಂಕನ್ಧರಂ**
**ಸುರುಚಿರಸಪ್ರವಾಳ ವಧರಂ ದಷನದ್ಯುತಿ ಮೌಕ್ತಿಕೋತ್ಕರಂ**
**ಗುರುಕಚಭಾರನೀಳರತ್ನಂ ನಗೆವಾಃ ಕಣವಾಗೆ ಹೋಲ್ತಳೀ**
**ನಿರುಪಮಕಾನ್ತೆ ಸಾನ್ತಲೆ ಶುಧಾಂಶುಕಳಾಶ್ರಿತ ದುಗ್ಧವಾರ್ದ್ಧಿಯಂ**[33]

ನಿಡಿದಾದ ತೋಳುಗಳು, ಕಮಲದಂತಹ ಮುಖ, ನೀಳವೂ ತೇಜೋಮಯವೂ ಆದ ಕೊರಳು, ರಸಮಯವಾದ ಅರುಣರಾಗವನ್ನು ಹೋಲುವ ಅಧರ, ಮುತ್ತುಗಳ ರಾಶಿಯಂತ ಹಲ್ಲುಗಳು, ವಿಸ್ತಾರವಾದ ಕೇಶರಾಶಿ, ಸುಂದರವಾದ ನಗೆ ಒಟ್ಟಿನಲ್ಲಿ ಹಾಲಿನ ಸಾಗರವೆಂಬಂತೆ ಶುದ್ಧ ವ್ಯಕ್ತಿತ್ವವನ್ನು ಶಾಂತಲೆ ಹೊಂದಿದ್ದಳು. ಶಾಂತಲೆಯ ಧಾರ್ಮಿಕ ಪ್ರವೃತ್ತಿ, ಪತಿನಿಷ್ಠೆಯನ್ನು ಶಾಸನದ ಈ ಸಾಲುಗಳು ವಿಶೇಷವಾಗಿ ಬಣ್ಣಿಸಿವೆ:

**ಸ್ಥಿರಗಂಭೀರ ಉದಾತ್ತಸದ್ಗುಣ ಸದಾ**
**ಚಾರತ್ವಮೆಂಬೀ ಗುಣೋನ್ನತಿಯಂ ತಾಳ್ದಿ ಮಹೇ**
**ಶ್ವರಾಗಮ ಜಿನಶ್ರೀಧರ್ಮ್ಮ ಸದ್ವೈಷ್ಣವಾಶ್ರಿತ ಚಾ**
**ತುರ್ಯೆಗೆ ಕಾನ್ತೆ ಶಾನ್ತಲೆಗೆ ಪೇಳಾರುಂ ಸಮಂ ಬಪ್ಪರೇ.**[34]

ಶೈವ, ಜೈನ, ವೈಷ್ಣವ, ಬೌದ್ಧ– ಈ ನಾಲ್ಕು ಧರ್ಮಗಳ ಬೆಳವಣಿಗೆಗೆ ಶ್ರಮಿಸಿದ ಶಾಂತಲೆಯು ಗಾಂಭೀರ್ಯ, ಉದಾತ್ತತೆ, ಸದ್ಗುಣ, ಸದಾಚಾರಗಳಲ್ಲಿ ಸದಾಕಾಲ ಸ್ಥಿರತೆಯನ್ನು ಶ್ರೇಷ್ಠತೆಯನ್ನು ಕಾಯ್ದುಕೊಂಡು ಬಂದವಳು. ಇಂತಹ ಶಾಂತಲೆಗೆ ಸರಿಸಮಾನರಾದವರು ಯಾರು ಎಂಬುದು ಈ ಶಾಸನ ಕವಿಯ ಪ್ರಶ್ನೆ.

ಮಹಿಳೆಯರ ಆಡಳಿತ, ಶೌರ್ಯತನ, ಧಾನ–ಧಮಕಾರ್ಯಗಳು, ಆಕೆಯ ವಿವಿಧ ಮುಖವನ್ನು ತೋರಿಸುತ್ತಿ ರುವಂತೆಯೇ ಸಮಕಾಲೀನ ಸಮಾಜದಲ್ಲಿ ಆಕೆಗಿದ್ದ ಸ್ಥಾನಮಾನವನ್ನು ನಾವು ಗುರುತಿಸಬಹುದಾಗಿದೆ. ಆಕೆಗೆ ಸಮಾಜದಲ್ಲಿ ಪುರುಷರಿಗಿದ್ದಷ್ಟೇ ಸ್ಥಾನಮಾನವಿತ್ತು ಎಂದು ಹೇಳಲು ಸಾಧ್ಯವಿಲ್ಲವಾದರೂ ಆಕೆಗೇನೂ ಕಡಿಮೆ ಸ್ಥಾನವಿರಲಿಲ್ಲ ಎಂದು ತಿಳಿಸಬೇಕಾಗಿದೆ. ಸಿಕ್ಕಿರುವ ದಾಖಲೆಗಳೆಲ್ಲ ಪುರುಷರ ಪಾರಮ್ಯವನ್ನೇ ಎತ್ತಿ ತೋರುತ್ತಿದ್ದರೂ ಮಹಿಳೆಯರ ಬಗೆಗಿನ ದಾಖಲೆಗಳೂ ವಿಶೇಷವಾದ ಸಂಗತಿಗಳನ್ನು ತನ್ನಲ್ಲಿ ಬಚ್ಚಿಟ್ಟುಕೊಂಡಿದೆ. ಹೊಯ್ಸಳ ಮಹಾಮಂಡಳೇಶ್ವರರ ಆಳ್ವಿಕೆಯ ಕಾಲಾವಧಿಯಲ್ಲಿ ಮಹಿಳೆಗೆ ಹಂತಹಂತವಾಗಿ ಪ್ರಾಮುಖ್ಯತೆ ಹೆಚ್ಚಿರುವುದು ತಿಳಿಯುತ್ತದೆ. ಈ ಎಲ್ಲ ಬೆಳವಣಿಗೆಗೆ ಮುಖ್ಯ ಕಾರಣವೆಂದರೆ ಆಕೆಗೆ ಆಸ್ತಿಯಲ್ಲಿ ಸಿಗುತ್ತಿದ್ದ ಪಾಲು. ಪಿತ್ರಾರ್ಜಿತ ಆಸ್ತಿಯಲ್ಲಿ ಆಕೆಗೂ ಪಾಲಿತ್ತು. ವ್ಯಾಪಾರ–ವ್ಯವಹಾರಗಳಲ್ಲಿ ಆಕೆ ತೊಡಗಿಸಿಕೊಳ್ಳುತ್ತಿದ್ದಳು. ಭಾರತೀಯ ಕೃಷಿಯ ಬೆನ್ನೆಲುಬಾಗಿ ಜೀವ ತೆತ್ತ ಮಹಿಳೆ ಕೃಷಿ ವ್ಯವಸ್ಥೆಯನ್ನು ನಿರ್ವಹಿಸಿದ ರೀತಿಯೂ ವಿಶೇಷ ಉಲ್ಲೇಖನೀಯ ವಿಷಯವಾಗಿದೆ.(ಆರ್ಥಿಕ ವಿಷಯಗಳಲ್ಲಿ ಮಹಿಳೆಗೆ ಇದ್ದ ಘನವಾದ ಸ್ಥಾನ ಮತ್ತು ಗೌರವ, ಜಾಣ್ಮೆಗಳನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.)ಸಾಮಾಜಿಕತೆಗೆ ಯಾವುದೇ ರೀತಿಯ ಚೌಕಟ್ಟು ಇಲ್ಲವಾದರೂ ಕೆಲವು ಮುಖ್ಯ ವಿಷಯಗಳನ್ನು ತೆಗೆದುಕೊಂಡು ಮುಂದೆ ಚರ್ಚಿಸಲಾಗುವುದು.

**ಮಹಾಮಂಡಳೇಶ್ವರರ ಮಡದಿಯರ ಆಡಳಿತ ಮತ್ತು ಅದರ ಸಾಮಾಜಿಕ ಪರಿಣಾಮಗಳು:**

ಹೊಯ್ಸಳ ಕಾಲಘಟ್ಟವನ್ನು ಗಮನಿಸಿದರೆ ಕನ್ನಡನಾಡಿನಲ್ಲಿ ನಡೆದ ಹಲವಾರು ಮಹತ್ವದ ಸಂಗತಿಗಳಿಗೆ ಕಾರಣವೆಂದರೆ ಚಕ್ರವರ್ತಿಗಳ ರಾಣಿಯರ ಆಡಳಿತವೆಂದೇ ತಿಳಿಯಬಹುದು. ರಾಣಿಯರ ಆಡಳಿತದಿಂದ ಉಂಟಾದ ನೇರವಾದ ಪರಿಣಾಮವೆಂದರೆ ಮಹಾರಾಣಿಯರು ತಾವು ಆಡಳಿತ ನಡೆಸುವಂತೆಯೇ ತಮ್ಮ ಅಧೀನ ಅರಸರೂ ತಮ್ಮ ಪತ್ನಿಯರನ್ನು ಆಡಳಿತದಲ್ಲಿ ನೇಮಿಸುವಂತೆ ಪರೋಕ್ಷವಾಗಿ ಪ್ರಭಾವವನ್ನು ಬೀರಿದರು. ಇದರ ಪರಿಣಾಮವಾಗಿ ಎಷ್ಟೊಂದು ಮಹಾಮಂಡಲೇಶ್ವರರ

ಮನೆತನಗಳು, ಸಾಮಂತ ಅರಸುಕುಲಗಳು, ಸಣ್ಣಪುಟ್ಟ ಸ್ಥಳೀಯ ಅರಸರು ತಮ್ಮ ಸತಿಯರನ್ನು ಆಡಳಿತದಲ್ಲಿ ತೊಡಗಿಸಿದರು.

ಹುಳಿಯೇರು ಪ್ರಭುಗಳ ಪತ್ನಿಯರಾದ ಹೊನ್ನಪ್ಪ, ಚಟ್ಟಿಯಕ್ಕ, ವಾಜಿವಂಶದ ವೀರನಾಗವರ್ಮನ ಮಡದಿ ಲಕ್ಷ್ಮಾಂಬಿಕೆ, ಕತ್ತರಿಗಟ್ಟದ ನಾಡಪ್ರಭು ಮಾಚಗೌಡನ ಅರ್ಧಾಂಗಲಕ್ಷ್ಮಿ, ಮುಂತಾದ ಅಸಂಖ್ಯಾತ ಸಾಮಂತ ರಾಣಿಯರು ಆಡಳಿತದಲ್ಲಿ ತೊಡಗಿಸಿಕೊಳ್ಳಲು ಸಹಕಾರಿಯಾಯಿತು. ಯಾವಾಗ ಸಾಮಂತ ರಾಣಿಯರು ಆಡಳಿತ ನಡೆಸಲು ಆರಂಭಿಸಿದರೋ ಅವರ ಕೈಕೆಳಗಿನ ನಾಡಗಾವುಂಡಿಯರು, ಗಾವುಂಡಿಯರು ಆಳ್ವಿಕೆಗೆ ಬರತೊಡಗಿದರು. ಯಾವಾಗ ಗಾವುಂಡಿಯನ್ನು ಜನ ನೋಡಿದರೋ ಆಗ ಬಹುಸಂಖ್ಯೆಯ ಸೆಟ್ಟಿತಿಯರು ವ್ಯಾಪಾರದಲ್ಲಿ ತೊಡಗುವ ಮನಸ್ಸು ಮಾಡಿದರು. ಗಾವುಂಡಿಯ ನೆರವಿನಿಂದ ಅನೇಕ ಜನ ಅನೇಕ ಕುಲದ ಜನ ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಲು ಆರಂಭಿಸಿ ಪ್ರವರ್ಧಮಾನಕ್ಕೆ ಬಂದದ್ದು ಈ ಕಾಲದಲ್ಲಿಯೇ ಎಂದು ಒತ್ತಿ ಹೇಳಬೇಕಾಗುತ್ತದೆ. ಇದಕ್ಕೆ ಪ್ರಮುಖ ಕಾರಣವೆಂದರೆ ಮಹಾಮಂಡಳೇಶ್ವರರು ತಮ್ಮ ಮಡದಿಯರನ್ನು ಆಡಳಿತದಲ್ಲಿ ತೊಡಗಿಸಿದುದೇ ಆಗಿದೆ.

12ನೆಯ ಶತಮಾನದ ಹಲಕೂರಿನ ಶಾಸನವೊಂದು[35] ತಿಳಿಸುವ ಹಾಗೆ ಅನೇಕ ಗೌಡರು, ಜೇಡಗೊತ್ತಳಿಯವರು, ಮಹಾಪಸಾಯಿತರು, ಅನೇಕ ದೇವಾಲಯಗಳ ಸ್ತಾನೀಕರೂ ಸೇರಿ ಬೊಮ್ಮವ್ವೆ ನಾಯಕಿಗೆ ಈ ಊರಿನ ಗೌಡಿಕೆಯನ್ನು ಕೊಟ್ಟು ಇದರ ನಿರ್ವಹಣೆಗೆ ಕೆರೆಯ ಸಂತೆಯ ಬೊಮ್ಮದೇವರ ದೇವಾಲಯದಿಂದ ಪಡುವಲು ಮಾಳೀಯ ಬೊಮ್ಮಯ್ಯನ ಕಟ್ಟೆಯ ಬಡಗಲು 8 ಸಲಗೆ ಗದ್ದೆಯನ್ನು ಕೊಟ್ಟು ವಿಜೃಂಭಣೆಯಿಂದ ಕಾರ್ಯಕ್ರಮ ಮಾಡಿದರು ಎಂದ ಮೇಲೆ ಆಕೆಯಲ್ಲಿ ಎಂತಹ ನಾಯಕತ್ವದ ಗುಣವಿರಬೇಕು. ಈಕೆಗೆ ನೀಡಿದ್ದು ಮಹಾಮಂಡಳೇಶ್ವರಿಯೋ, ಸಾಮಂತ ಪದವಿಯೋ ಅಲ್ಲದೆ ಕೇವಲ ಊರಗೌಡಿಕೆಯಷ್ಟೇ. ಆದರೂ ಈಕೆಯ ನಾಯಕತ್ವ ದ ಗುಣ ಬಹುಶ: ಪ್ರಸಿದ್ಧಿಯಾಗಿರಬೇಕು.

ಏಚಿಮಯ್ಯ ಹಾಗೂ ನಾಚಿಯಬ್ಬೆಯ ಸುಪುತ್ರೆಯಾದ ನಾಗಲತೆಯು ಕಳ್ಚುಟ್ಟಿ ಅಗ್ರಹಾರದ ಸಮಸ್ತರಿಗೆ ಭೂದಾನ ನೀಡುವ ಸಂದರ್ಭದಲ್ಲಿ[36] ತಾನು ಈ ಭೂಮಿಯನ್ನು ಹೊಯ್ಸಳ ದೊರೆಯನ್ನು ಕರೆಸಿ ಅವನ ಕೈಯಿಂದ ಭೂದಾನವನ್ನು ನಡೆಸಿಕೊಡುವಷ್ಟು ಆಕೆ ಜನಪ್ರಿಯ ನಾಯಕಿಯಾಗಿದ್ದಳು. ಅರಸಿಯಕೆರೆಯ ಮಹಾಪ್ರಭು ಕಲಿಯಮಗೌಡನಿಗೆ ಗಂಡು ಸಂತಾನ ಇಲ್ಲದೇ ಇದ್ದುದರಿಂದ ತನ್ನ ಗೌಡಿಕೆಯನ್ನು ತನ್ನ ಮಗಳಾದ ಬಾಚಲದೇವಿಗೆ ವಹಿಸಿಕೊಟ್ಟನು. ಕಣಕ ಪಿರಿಯಾಡ ಸೆಟ್ಟಿಯೊಂದಿಗೆ ಈಕೆಯನ್ನು ವಿವಾಹ ಮಾಡಿಕೊಟ್ಟರೂ ತನ್ನೆಲ್ಲ ಆಸ್ತಿಯನ್ನು ಈಕೆಗೆ ವಹಿಸಿಕೊಟ್ಟನು. ಈಕೆ ಆಗ ಅರಸಿಯಕೆರೆಯ ಗೌಡಿಯಾದಳು. ಆ ಸಂದರ್ಭದಲ್ಲಿ ತನ್ನ ಹಣದಿಂದ ಸ್ವಯಂಭು ಕಲಿದೇವರ ಅಂಗಭೋಗಕ್ಕೆ 1 ಕೊಳವನ್ನು ನಿರ್ಮಿಸಿಕೊಟ್ಟು 1 ಕಿಸುಮತ್ತರು ಭೂಮಿಯನ್ನು, 2 ಮತ್ತರು ಹುಣಸೆ ತೆಂಕಲು ಗದ್ದೆ, ಮೂಡಲ ಗದ್ದೆಯಲ್ಲಿ 600 ಕಮ್ಮ ದಾನವಾಗಿ ಬಿಟ್ಟಿರುವಳು.

ಇನ್ನು ಕೆಲವು ಉದಾಹರಣೆಗಳನ್ನು ನೋಡುವುದಾದರೆ ಮಾದಗವುಡಿ, ದುಬಿಗಾವುಂಡಿ, ದಾನಯ ಸಹಣಿಯರ ಸಾಹಿಣತಿ ಜರಾವ್ವೆ, ಬಮ್ಮಯಗಾವುಂಡನ ಹೆಂಡತಿ ಧರ್ಮಗಾವುಂಡಿ, ರೇವಿಕವ್ವೆಗೌಡಿ, ಇಂತಹ ಹೆಸರುಗಳು ಕಂಡುಬರುವುದು ಕೂಡ ಈ ಕಾಲಘಟ್ಟದಲ್ಲಿಯೇ ಹಾಗೂ ಈ ರೀತಿಯ ಹುದ್ದೆಗಳು ಜನಮಾನ್ಯವಾಗಿದ್ದು ಕೂಡ ಈ ಕಾಲದಲ್ಲಿಯೇ. ಈ ರಾಣಿಯರು, ಕೈಕೆಳಗಿನ ಸಾಮಂತ ರಾಣಿಯರು, ಗಾವುಂಡಿಯರು ಮುನ್ನೆಲೆಗೆ ಬಂದ ಕಾರಣವಾಗಿ ಅನೇಕ ಸೆಟ್ಟಿಗಿತ್ತಿಯರು ಕೂಡ ವ್ಯಾಪಾರದಲ್ಲಿ ತೊಡಗಿಕೊಳ್ಳಲು ಸಹಕಾರಿಯಾಯಿತು. ಅನೇಕ ಸೆಟ್ಟಿಗಿತ್ತಿಯರು ದೇವಾಲಯಗಳಿಗೆ ಹೇರಳವಾದ ದಾನಗಳನ್ನು ನೀಡಲು ಆರಂಭಿಸಿದ್ದು ಇದೇ ಕಾಲದಲ್ಲಿಯೇ. ಸಾರ್ವಜನಿಕ ಜೀವನಕ್ಕೆ ಹೆಂಗಸರು ಬರುವುದು ಹೆಚ್ಚಾದಂತೆಯೇ ಸ್ವಾಭಾವಿಕವಾಗಿ ಸಮಸಮಾಜದ ಮೌಲ್ಯ ಸಮಾಜದಲ್ಲಿ ಕ್ರಮೇಣ ಹರಡಿಕೊಳ್ಳಲು ಸಹಕಾರಿಯಾಯಿತು. ತುಳಿತಕ್ಕೆ ಒಳಗಾದ ಸಮುದಾಯಗಳು ಕ್ರಮೇಣ ಮೇಲಕ್ಕೆ ಬರಲು ದಾರಿಮಾಡಿಕೊಳ್ಳುವುದನ್ನು ಆರಂಭಿಸಿತು.

ನಿರ್ಮಾಣ ಪ್ರಕ್ರಿಯೆಗಳಲ್ಲಿ ಮಹಿಳೆಯರು ತೊಡಗಿಕೊಳ್ಳಲು ಕೂಡ ಇದೇ ಪ್ರಮುಖ ಕಾರಣ. ಆರಂಭದಲ್ಲಿ ಚಕ್ರವರ್ತಿಗಳ ರಾಣಿಯರಿಗೆ ಮಾತ್ರ ಸಾಧ್ಯವಾಗಬಹುದಾಗಿದ್ದ ದೇವಾಲಯ ನಿರ್ಮಾಣ, ಕೆರೆ–ಕಟ್ಟೆಗಳ ನಿರ್ಮಾಣ, ಅಧೀನ ಅರಸರ ಪತ್ನಿಯರ ಪಾಲಿಗೂ ಸಿಗಬೇಕಾದರೆ ಈ ಕಾಲಘಟ್ಟದಲ್ಲಿ ನಡೆದ ಆರ್ಥಿಕ ಉನ್ನತಿಯನ್ನು ನಾವು ಗಮನಿಸಬೇಕು. ಕ್ರಮೇಣ ದೇಗುಲ ನಿರ್ಮಾಣದಲ್ಲಿ, ಎಲ್ಲ ವರ್ಗದ ಮಹಿಳೆಯರು ಪಾಲುದಾರರಾಗುತ್ತಾ ಸಾಗಿದ್ದು ಅವರ ಕರ್ತವ್ಯಶಕ್ತಿಯ ಜೊತೆಗೆ ಅವರ ಸಾಮಾಜಿಕ ಏಳ್ಗೆಯನ್ನು ತೋರಿಸುತ್ತದೆ. ನಿರ್ಮಾಣ ಪ್ರಕ್ರಿಯೆಯಲ್ಲಿ ತೊಡಗಿಕೊಂಡ ಮಹಿಳೆ ಕ್ರಮೇಣ ಅದರ ನಿರ್ವಹಣೆಯಲ್ಲೂ ತೊಡಗಿಸಿಕೊಂಡು ಅಧಿಕಾರದ ವಿವಿಧ ಮಜಲುಗಳನ್ನು, ಅಧಿಕಾರದಲ್ಲಿ ಮಹಿಳೆಯರನ್ನು ಸೇರಿಸುವುದನ್ನು ಧಾರ್ಮಿಕ ರಂಗದಲ್ಲೂ ಮಹಿಳೆಯರನ್ನು ಮುನ್ನೆಲೆಗೆ ತರುವುದನ್ನು ತಮ್ಮ ಧ್ಯೇಯವನ್ನಾಗಿ ಮಾಡಿಕೊಂಡರು.

ಬಹಳ ಮುಖ್ಯವಾದ ಆಯಕಟ್ಟಿನ ಜಾಗಗಳಲ್ಲಿ ಮಹಿಳೆಯರ ಪ್ರಭಾವ ನಿಧಾನವಾಗಿ ಪಸರಿಸಿದಂತೆ ಕೃಷಿ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿದ್ದ ಮಹಿಳೆ ಕ್ರಮೇಣ ಊಳಿಗಮಾನ್ಯ ವ್ಯವಸ್ಥೆಯ ಒಡತಿಯಾಗಿ, ಗೃಹ ಕೃತ್ಯದಲ್ಲಿ ನಿರತಳಾಗಿದ್ದ ಮಹಿಳೆ ಗೃಹೋದ್ಯಮದ ಒಡತಿಯಾಗಿ, ಧರ್ಮಕ್ಕೆ ತಲೆಬಾಗುತ್ತಿದ್ದ ಮಹಿಳೆ ಧಾರ್ಮಿಕ ನಾಯಕಿಯಾಗಿ, ವಿದ್ಯೆಗಾಗಿ ಹಂಬಲಿಸುತ್ತಿದ್ದ ಹೆಣ್ಣು ವಿದ್ಯಾಸಂಸ್ಥೆಗಳ ಪೋಷಕಿಯಾಗಿ, ದಾನ ನೀಡಲು ಕೈ ಹಾಕುತ್ತಿದ್ದ ಮಹಿಳೆ ದಾನ ಸ್ವೀಕರಿಸುವ ಹಂತಕ್ಕೆ ಏರಿಕೆಯಾಗಿ, ತೆರಿಗೆ ವ್ಯವಸ್ಥೆಯಲ್ಲಿ ತನ್ನದೇ ಆದ ವಲಯಗಳಿಂದ ತೆರಿಗೆಯನ್ನು ನೀಡುವಷ್ಟು ಸಬಲಳಾಗಿಯೂ ಮುನ್ನಲೆಗೆ ಬಂದದ್ದು ಆಳ್ವಿಕೆಯ ಪರಿಣಾಮವೆಂದೇ ನನ್ನ ಭಾವನೆ.

**ಮಹಿಳೆಯರ ಆತ್ಮಛಲದ ವಿಶಿಷ್ಟ ಮಾದರಿಗಳು:** ಮಹಿಳೆಯರ ಆತ್ಮಛಲದ ಅದ್ಭುತವಾದ ಉದಾಹರಣೆ ನಮಗೆ ದೊರೆಯುವುದು ಕಾಸರಗೋಡು ತಾಲೂಕಿನ ಕ್ರಿ.ಶ.10ನೆಯ ಶತಮಾನದ ತಳಂಗೆರೆಯ ಶಾಸನದಿಂದ.[38] ಇಲ್ಲಿ ಜಯಸಿಂಹ ಎಂಬ ದೊರೆಯು ಕನ್ಯಾದಾನವೆಂದು ಯಾರಿಗೂ ಬೇಡದ

ಪಾಳು ಭೂಮಿಯನ್ನು ಮೋಚಬ್ಬರಸಿ ಎಂಬಾಕೆಗೆ ನೀಡಿದನು. ಈಕೆ ಈತನ ಮಗಳೇ ಅಲ್ಲವೆ ಎಂದು ಕೂಡ ಯೋಚಿಸಬೇಕಾಗಿದೆ. ಒಂದು ವೇಳೆ ತಂದೆಯಾಗಿದ್ದರೆ ಇಂತಹ ಪಾಳು ಭೂಮಿಯನ್ನು ನೀಡುತ್ತಿದ್ದನೆ, ತಂದೆಯಲ್ಲದೆ ಹೋಗಿದ್ದರೆ ಕನ್ಯಾದಾನ ಈತ ಯಾಕೆ ಮಾಡಬೇಕಾಗಿತ್ತು? ಆದರೆ ಮೋಚಬ್ಬರಸಿಗೆ ಜಯಸಿಂಹನು ಕನ್ಯಾದಾನವಾಗಿ ನಿನಗೆ ಈ ನೆಲವನ್ನು ನೀಡುತ್ತಿದ್ದಾನೆ ಎಂದರೆ ಯಾರಾದರೂ ಹೆದರಬೇಕಾಗಿತ್ತು. ಆದರೆ ಆಕೆ ಸಂತೋಷವನ್ನು ಹೊಂದಿದ್ದು ತನ್ನಲ್ಲಿದ್ದ ಆತ್ಮಬಲದಿಂದಲೇ ಹೊರತು ಬೇರೆಯಲ್ಲ. ದಾನ ಕೊಟ್ಟ ಭೂಮಿಯು "ಊರ ಕಡೆಯ ತೊರೆಯ ತೀರದಲ್ಲಿ ಕರಿಯಕಲ್ಲ ಮೋರದಿಂದ ಪುತ್ತೂರ ಹೊಲೆಯರಿದ್ದ ಕೇರಿಯಲ್ಲಿದ್ದ ಕಲ್ಲಿನ ಕಾಡ ಬೆಟ್ಟಗಳಿದ್ದ ಭೂಮಿಯಾಗಿತ್ತು". ಆದರೆ ಮೋಚಬ್ಬರಸಿಯು ನೀರಭೂಮಿಯನ್ನು ಸಾರಭೂರುಹಂಗಳ ಓಳಿಯೊಳಗೆ ನೆರೆದ ಕೆರೆಯನ್ನಾಗಿ ಮಾಡಿದಳು. ಹರಿಯುತ್ತಿದ್ದ ನದಿಗೆ ಅಣೆಕಟ್ಟೆಯನ್ನು ಕಟ್ಟಿಸಿದಳು. ಕಲ್ಲಿನ ಕಾಡಬೆಟ್ಟವನ್ನು ಸಮತಳವನ್ನಾಗಿ ಮಾಡಿ ಓಡಿಲ (ಬಹುಶ: ದೋಣಿಯನ್ನು ನಿಲ್ಲಿಸುವ ತಾಣ ಎಂದು ನನ್ನ ಊಹೆ), ಮನೆಯನ್ನು ಕಟ್ಟಿಸಿಕೊಂಡು ಉಪ್ಪುನೆಲದ ಭೂಮಿಯನ್ನು ನಂದನವನವನ್ನಾಗಿಸಿದಳು. ಇಡೀ ಶಾಸನದಲ್ಲಿ ಜಯಸಿಂಹನು ದಾನಕೊಟ್ಟ ಸಂಗತಿಯನ್ನು ಹೊರತುಪಡಿಸಿದರೆ ಯಾವ ಪುರುಷನ ಸಹಕಾರವೂ ಇಲ್ಲದೆ ಒಬ್ಬಳೇ ಈ ಎಲ್ಲ ಕಾರ್ಯವನ್ನು ಮಾಡಿಸಿರುವುದು ಬಹಳ ವಿಶೇಷವಾಗಿದೆ.

ಈ ಶಾಸನದ ಶಾಪಾಶಯ ಕೂಡ ಅತ್ಯಂತ ವಿಶೇಷವಾಗಿದೆ. ಇಷ್ಟೆಲ್ಲ ಕಷ್ಟಪಟ್ಟು ಹಾಳುನೆಲವನ್ನು ಸುಕ್ಷೇತ್ರವಾಗಿಸಿದ ಮೇಲೆ ಈ ಕನ್ಯಾದಾನದ ಭೂಮಿಯನ್ನು ಅಪಹರಿಸಿದವನು ಅಲ್ಪಾಯುಷಿಯಾಗುತ್ತಾನೆ. ಹೆಣ್ಣುಮಗಳು ಆತನಿಗೆ ಹುಟ್ಟದೇ ಹೋಗುತ್ತಾರೆ. ಜೋಗಪ್ಪಿಯ ಹೆಣ್ಣು ಸಂತಾನಕ್ಕೆ ಮಾತ್ರ ಈ ನೆಲದ ಉತ್ತರಾಧಿಕಾರ ಸಿಗುತ್ತದೆ. ಒಂದು ವೇಳೆ ಹೆಣ್ಣುಮಕ್ಕಳೇ ಆಗದೇ ಹೋದಾಗ ಮಾತ್ರ ಗಂಡು ಸಂತಾನಕ್ಕೆ ಸಲ್ಲುತ್ತದೆ ಎಂದು ತಿಳಿಸಲಾಗಿದೆ. ಇದು ಕಾಸರಗೋಡು ಮಲೆನಾಡಿನ ಶಾಸನವಾದ್ದರಿಂದ ಇದೊಂದು ಅಳಿಯಕಟ್ಟು ಸಂತಾನದ ಹಿನ್ನೆಲೆಯ ಮಾತಿರಬಹುದು ಎಂದೆನಿಸಿದರೂ ಮೋಚಬ್ಬರಸಿಯ ಆತ್ಮಬಲ ಮಾತ್ರ ಕನ್ನಡನಾಡಿನ ಮಹಿಳೆಯರ ಆದರ್ಶವಾಗಬೇಕು ಎಂಬುದರಲ್ಲಿ ಎರಡು ಮಾತಿಲ್ಲ.

ಇದೇ ರೀತಿ ಕಾವಗಾವುಂಡರ ಮಗಳು ಮಾಂಗಬ್ಬೆಯು ತನ್ನ ತಂದೆಯು ಭಿಕ್ಷಾವೃತ್ತಿಯಿಂದ ನಿರ್ಮಿಸಿದ ಶಿವಾಲಯವನ್ನು ರಕ್ಷಿಸಿಕೊಂಡು ಇಲ್ಲಿಯ ಭಟ್ಟರನ್ನು ರಕ್ಷಿಸಿ ಕೆರೆಯನ್ನು ಕಟ್ಟಿಸಿ ತೋಟವನ್ನು ಮಾಡಿಕೊಂಡು ತನ್ನ ಆದಾಯವನ್ನು ತಮ್ಮ ದೇವಾಲಯದ ನಿರ್ವಹಣೆಗೆ ಸಂಚಯನ ಮಾಡಿಕೊಂಡ ಉದಾಹರಣೆಯೂ ಇದೆ. ಬಹುಶ: ಯಾರನ್ನೂ ಬೇಡದೆ ಈ ದೇವಾಲಯದ ನಿರ್ವಹಣೆಯನ್ನು ತನ್ನ ಸ್ವಂತ ಖರ್ಚಿನಲ್ಲಿಯೇ ನಿರ್ವಹಿಸಿರುವುದು ಸಾಮಾನ್ಯವಾದ ಸಂಗತಿಯಲ್ಲ.[39]

ಇದೇ ಸಂದರ್ಭದಲ್ಲಿ ಹೆಣ್ಣುಮಕ್ಕಳ ಸ್ಥಾನಮಾನಕ್ಕೆ ಸಂಬಂಧಿಸಿದಂತೆ ಅತ್ಯದ್ಭುತವಾದ ಒಂದು ಮಾತು ನಿಂಬಾಳದ ಶಾಸನದಲ್ಲಿ ಬಂದಿದೆ. ಇಂದಿಗೆ ಕೂಡ ಈ ರೀತಿ ಹೇಳುವ ಎದೆಗಾರಿಕೆ ಇಲ್ಲವಾಗಿರುವಾಗ 13ನೆಯ ಶತಮಾನದಲ್ಲಿ ಈ ಮಾತನ್ನು ಹೇಳಿರುವುದು ನಿಜಕ್ಕೂ ವಿಶೇಷವಾದುದಾಗಿದೆ. ಶಂಕರಲಿಂಗಗುಡಿಯ ಪ್ರದೇಶದ್ವಾರದ ಛಾವಣಿಗೆ ಕೂಡಿಸಿರುವ ಶಾಸನವೊಂದು ತನ್ನ ಶಾಪಾಶಯದ

ಭಾಗದಲ್ಲಿ ಈ ಮಾತನ್ನು ಹೇಳುತ್ತದೆ. ಈ ದೇವಾಲಯಕ್ಕೆ ಬಹುಶ: ಭೂದಾನವನ್ನು ನೀಡುವ ಸಂದರ್ಭದಲ್ಲಿ "ಈ ಗುಡಿಯ ಸ್ಥಾನೀಕನು ಲಿಂಗಭೇದವನ್ನು ಮಾಡಿದರೆ ಗಂಡು ಹೆಣ್ಣೆಂಬ ತಾರತಮ್ಯವನ್ನು ಮಾಡಿದರೆ ವಾರಣಾಸಿಯಲ್ಲಿ ಕವಿಲೆಯನ್ನೂ, ಬ್ರಾಹ್ಮಣರನ್ನೂ ಕೊಂದ ಪಾಪ ಬರುತ್ತದೆ" ಎನ್ನಲಾಗಿದೆ. ಬಹುಶ: ಈ ಶಾಸನವನ್ನು ಯಾರೋ ಹೆಣ್ಣುಮಗಳೇ ಹಾಕಿಸಿರಬೇಕು ಅಥವಾ ಲಿಂಗತಾರತಮ್ಯವನ್ನು ವಿರೋಧಿಸುವ ವ್ಯಕ್ತಿಯೇ ಹಾಕಿಸಿರಬೇಕು.[40]

**ಸೂಳೆಯರು : ಸ್ಥಳೀಯ ಸಮಾಜದ ಪ್ರಭಾವಿಗಳು**

ಸೂಳೆ ಎಂಬ ಪದವನ್ನು ನಾವು ಇಂದು ಯಾವ ಹೀನಾರ್ಥದಲ್ಲಿ ಬಳಸುತ್ತಿದ್ದೇವೆಯೋ ಅಂತಹ ಪರಿಸ್ಥಿತಿ ಪ್ರಾಚೀನ ಕರ್ನಾಟಕದಲ್ಲಿ ಇರಲಿಲ್ಲ. ಸೂಳೆಯರಿಗೆ ಸಮಾಜದಲ್ಲಿ ಉನ್ನತವಾದ ಸ್ಥಾನಮಾನಗಳಿದ್ದವು. ವ್ಯಕ್ತಿಯೊಬ್ಬ ತನ್ನ ಕಾಮನೆಗಳನ್ನು ಪೂರೈಸಿಕೊಳ್ಳಲು ಇಟ್ಟುಕೊಂಡವಳನ್ನು ವ್ಯಕ್ತಿಸೂಳೆಯೆಂತಲೂ ದೇವಾಲಯಗಳಲ್ಲಿ ರಂಗಭೋಗದ ಸೇವೆಯನ್ನು ನಡೆಸಿಕೊಡಲು ನಿಯುಕ್ತಳಾದ ಸ್ತ್ರೀಯನ್ನು ದೇವಸೂಳೆಯೆಂತಲೂ ಕರೆಯಬಹುದು. ವ್ಯಕ್ತಿಸೂಳೆಗಳಿಗಿಂತ ಸಮಾಜದಲ್ಲಿ ದೇವಸೂಳೆಯರಿಗೆ ಉನ್ನತವಾದ ಸ್ಥಾನಮಾನಗಳಿದ್ದವು.

ಇವರು ಬಹುಶ: ಸರ್ಕಾರದಿಂದ ಪರವಾನಗಿಯನ್ನು ಪಡೆದುಕೊಂಡಿದ್ದ ವೃತ್ತಿನಿರತರು. ಹಾಗಾಗಿಯೇ ಇವರು ತಮ್ಮ ವೃತ್ತಿಗಾಗಿ ಸರ್ಕಾರಕ್ಕೆ ಸೂಳೆದೆರೆಯನ್ನು ಅಂದರೆ ತೆರಿಗೆಯನ್ನು ಸಲ್ಲಿಸುತ್ತಿದ್ದರು. ಬಹಳ ಬೆಲೆಬಾಳುವ ಕನ್ನಡಿಗಳನ್ನು ಇವರು ಬಹುಶ: ಉಪಯೋಗಿಸುತ್ತಿದ್ದಿರಬೇಕು. ಹಾಗಾಗಿ ಇವರು ಕನ್ನಡಿವಣವನ್ನು ಕೂಡ ಸರ್ಕಾರಕ್ಕೆ ತೆರುತ್ತಿದ್ದರು. ಸರ್ಕಾರದ ಆದಾಯದಲ್ಲಿ ಸೂಳೆಯರಿಂದ ಬರುತ್ತಿದ್ದ ತೆರಿಗೆಯ ಪಾಲೂ ಇದ್ದುದರಿಂದ ರಾಜತ್ವವು ಇವರಿಗೆ ಅನಿವಾರ್ಯವಾಗಿ ಉತ್ತಮ ಸವಲತ್ತುಗಳನ್ನು ಒದಗಿಸಲೇಬೇಕಿತ್ತು. ಪ್ರಾಚೀನ ಕರ್ನಾಟಕದಲ್ಲಿ ಈ ರೀತಿಯಲ್ಲಿ ಯಥೇಚ್ಛವಾಗಿ ಸಂಪಾದಿಸಿದ ಸೂಳೆಯರು ತಮ್ಮ ಸಂಪತ್ತನ್ನು ತಾವು ನಂಬಿಕೊಂಡು ಬಂದ ಧರ್ಮಕಾರ್ಯಗಳಿಗೆ ವಿನಿಯೋಗಿಸುತ್ತಿದ್ದರು.

ಅನೇಕ ದೇವಾಲಯಗಳು ನಡೆಸುತ್ತಿದ್ದ ಬ್ಯಾಂಕಿಂಗ್ ವ್ಯವಹಾರಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದ ಸ್ತ್ರೀ ಸಮುದಾಯಗಳಲ್ಲಿ ಈ ಸೂಳೆಸಮಾಜವೂ ಭಾಗವಹಿಸುತ್ತಿತ್ತು. ಅನೇಕ ದೇವಾಲಯಗಳ ನಿರ್ಮಾಣದಲ್ಲಿಯೂ, ನಿರ್ವಹಣೆಯಲ್ಲಿಯೂ ಈ ಸಮಾಜದ ಜನ ಹೇರಳವಾದ ಕೊಡುಗೆಯನ್ನು ನೀಡಿ ಸಮಕಾಲೀನ ಪ್ರಪಂಚದಲ್ಲಿ ಒಳ್ಳೆಯ ಹೆಸರನ್ನು ಪಡೆದಿದ್ದರು. ಆದುದರಿಂದಲೇ ರಾಜರಾಗಲಿ, ಪ್ರತಿಷ್ಠಿತರಾಗಲಿ, ಶ್ರೀಮಂತರಾಗಲಿ, ಸೂಳೆಯರನ್ನು ಇಟ್ಟುಕೊಳ್ಳುವುದನ್ನು ಅವಮಾನಕರ ವಿಷಯವೆಂದು ಎಂದೂ ಎಣಿಸಿರಲಿಲ್ಲ. ಕೆಲವು ಶಾಸನಗಳಲ್ಲಿ ತಮ್ಮನ್ನು ತಾವು ವಿಟಚಕ್ರವರ್ತಿ, ವೇಶ್ಯಾಭುಜಂಗ, ವೀರವಧೂಜನಕಾಮ ಎಂದೆಲ್ಲ ರಾಜರು ಹೊಗಳಿಕೊಂಡಿದ್ದಾರೆ.

ಬಹುಶ: ರಾಜರುಗಳಿಂದಲೇ ಹೀಗೆ ಆರಂಭಗೊಂಡ ಸೂಳೆಯರನ್ನು ಇಟ್ಟುಕೊಳ್ಳುವ ಪರಿಪಾಠವೂ ಕ್ರಮೇಣ ಇನ್ನಿತರ ಶ್ರೀಮಂತ ವಲಯಕ್ಕೆ ಹಬ್ಬಿರಬೇಕು. ಅದಕ್ಕೆ ಬಲಿಯಾಗುತ್ತಿದ್ದವರು ಮಾತ್ರ ಕೆಳವರ್ಗದ

ಹೆಣ್ಣು ಮಕ್ಕಳೇ ಸರಿ. ಶ್ರೀಮಂತರ ಭೋಗವಸ್ತುವಾಗಿ ಈಕೆ ವೈಯಕ್ತಿಕವಾಗಿ ನೋವುಂಡರೂ ಸಮಾಜದಲ್ಲಿ ಅಂತಹ ಹೀನಾಯವಾದ ಸ್ಥಿತಿ ಇವರಿಗಿರಲಿಲ್ಲ ಎಂದೆನಿಸುತ್ತದೆ. ಇದೇ ಸಂದರ್ಭದಲ್ಲಿ ಮತ್ತೊಂದು ಮಹತ್ವದ ವಿಷಯವನ್ನು ಗಮನಿಸುವುದು ಒಳಿತು. ಸೂಳೆ, ವೇಶ್ಯೆ, ವಾರಾಂಗನೆ, ಗಣಿಕೆ ಮುಂತಾದ ಪದಗಳನ್ನು ನಾವಿಂದು ಒಂದೇ ಅರ್ಥದಲ್ಲಿ ಬಳಸುತ್ತಿದ್ದೇವೆ. ಆದರೆ ಇವುಗಳು ಹಾಗಿಲ್ಲ. ಡಾ.ಎಂ.ಚಿದಾನಂದಮೂರ್ತಿಯವರು ಹೇಳುವಂತೆ "ದೇವದಾಸಿಯರೆಲ್ಲರೂ ವೇಶ್ಯೆಯರೇ ಆಗಿದ್ದರೂ ವೇಶ್ಯೆಯರೆಲ್ಲರೂ ದೇವದಾಸಿಯರಲ್ಲ. ದೇವಸ್ಥಾನದ ದತ್ತಿಗಳಲ್ಲಿ 'ಸೂಳೆ' ಎಂಬ ಮಾತು ಬಂದರೆ ಅದು ದೇವದಾಸಿಯನ್ನು ಸೂಚಿಸುತ್ತದೆ. ಬೇರೆಯ ಕಡೆ ಬಂದಾಗ ಅದು ವೇಶ್ಯೆಯನ್ನು ಸೂಚಿಸುತ್ತದೆ."[41]

ಈ ದೇವದಾಸಿಯರ ಕೆಲಸವೆಂದರೆ ದೇವಾಲಯಗಳಲ್ಲಿ ರಂಗಭೋಗದ ಸೇವೆಯನ್ನು ಸಲ್ಲಿಸುವುದು. ದೇವರಿಗಾಗಿ ಮಾತ್ರ ನೃತ್ಯವನ್ನೋ, ನಾಟಕವನ್ನೋ ಮಾಡುವುದು ಇವರ ವೃತ್ತಿಯಾಗಿದೆ. ಗೀತನೃತ್ಯಗಳ ಮೂಲಕ ಭಗವಂತನ ಸೇವೆಯನ್ನು ಸಲ್ಲಿಸುತ್ತಿದ್ದವರು ಇವರು. ಎಲ್ಲೆಲ್ಲಿ ದೇವಾಲಯಗಳು ವಿಸ್ತೃತಗೊಂಡು ಮಹಾನ್ ಸಂಸ್ಥೆಯಾಗಿ ರೂಪುಗೊಂಡಿರುವವೋ ಅಲ್ಲೆಲ್ಲ ಈ ದೇವದಾಸಿಯರ ಪಾತ್ರ ಬಹಳ ಮುಖ್ಯವಾಗಿವೆ. ಈಕೆಯ ಸಂಪಾದನೆಯ ಮೂಲ ದೇವಾಲಯಗಳೇ ಆಗಿದ್ದುದರಿಂದ ಅವರುಗಳು ಆ ಹಣವನ್ನು ದೇವಾಲಯಗಳಿಗಾಗಿಯೇ ವಿನಿಯೋಗಿಸುತ್ತಿದ್ದರು. ಆ ಮೂಲಕ ಹಲವಾರು ದೇಗುಲಗಳೂ ಕಾಲಕಾಲಕ್ಕೆ ನವೀಕರಣಗೊಂಡು ಶಾಶ್ವತವಾಗಿ ನಿಲ್ಲುವಲ್ಲಿ ಇವರ ಕೊಡುಗೆಯೂ ಅಪಾರವಾಗಿದೆ.

ಶಾಸನಗಳಲ್ಲಿ ಬಂದಿರುವ ವಿಷಯಗಳನ್ನು ಆಧಾರವಾಗಿ ಇಟ್ಟುಕೊಂಡು ದೇವಾಲಯದಿಂದ ಸೂಳೆಯರಿಗೆ ಸಲ್ಲಿಸಲ್ಪಟ್ಟ ಗೌರವ ಹಾಗೂ ಸೂಳೆಯರಿಂದ ದೇವಾಲಯಗಳಿಗೆ ಸಲ್ಲಿಸಲ್ಪಟ್ಟ ಗೌರವ ಎಂಬ ಎರಡು ಭಾಗಗಳಲ್ಲಿ ಗಮನಿಸಬಹುದು. ಒಟ್ಟಾರೆ ಕರ್ನಾಟಕದ ಸಾಮಾಜಿಕ ಹಾಗೂ ಆರ್ಥಿಕ ಇತಿಹಾಸದಲ್ಲಿ ಇದೂ ಕೂಡ ಪ್ರಮುಖ ಅಧ್ಯಾಯವೆಂಬುದನ್ನು ನಾವು ಮರೆಯಬಾರದು.

ಹತ್ತನೆಯ ಶತಮಾನದ ನಂತರ ದೇವಾಲಯದ ಭೌತಿಕ ಚಟುವಟಿಕೆಗಳು ವಿಸ್ತರಣೆಗೊಂಡ ನಂತರ ದೇವಾಲಯಗಳ ಅವಶ್ಯಕತೆಗೆ ಅನುಸಾರವಾಗಿ ಈ ದೇವದಾಸಿಯರಲ್ಲಿ ಪಾತ್ರದವರು, ಸೂಳೆಯರು ಎಂದು ವಿಂಗಡಣೆಗೊಂಡಿರುವುದನ್ನು ಗಮನಿಸಬೇಕು. ಹಾಗಾಗಿ ರಂಗಭೋಗ ಸೇವೆಗೆ ವಿಶೇಷವಾದ ಒತ್ತನ್ನು ಇಲ್ಲಿಂದ ಮುಂದೆ ನೀಡಲು ಆರಂಭವಾಯಿತು. ಕೇವಲ ರಂಗಭೋಗಕ್ಕೆ ಮಾತ್ರವಲ್ಲದೆ ಗರ್ಭಗುಡಿಯಲ್ಲಿರುವ ಮೂಲ ಮೂರ್ತಿಯ ಪೂಜಾದಿ ಮಹೋತ್ಸವಗಳಿಗೆ ಪುರೋಹಿತರಿಗೆ ವಿಶೇಷವಾಗಿ ನೆರವಾಗಲು ಅಂಗಭೋಗದ ಸೂಳೆ ಯರೂ ಕೂಡ ಇರುತ್ತಿದ್ದರು. ಬಾಗಳಿಯಲ್ಲಿ ಹೀಗೆ ದೇವರ ಅಂಗಭೋಗದ ಸೇವೆಯಲ್ಲಿ ನಿರತರಾದ 12 ಜನ ಸೂಳೆಯರ ಬಗ್ಗೆ ಮಾಹಿತಿಯಿದೆ. ಅಂಗಭೋಗದ ಸೇವೆಗೆ ನಿರತರಾಗಿದ್ದ ಸೂಳೆಯರಿಗೆ "ತೆರೆಯ ಮರೆಯ ಸೂಳೆ, ತೆರೆಯೊಳಗೆ ಬಿಟ್ಟ ಸೂಳೆ, ತಿರಿಯರವಾಳ ಸೂಳೆ, ಪೆರ್ಗಡೆವಾಳ ಸೂಳೆ, ತರುಕೆರಗ ಭೋಗದ ಸೂಳೆಯರೆಂಬ ಪರ್ಯಾಯನಾಮಗಳು" ಇದ್ದುದನ್ನು ವಿದ್ವಾಂಸರು ಗುರುತಿಸಿದ್ದಾರೆ.[42] ಇವರಿಗೆ ಮಾತ್ರ ಗರ್ಭಗುಡಿಯಲ್ಲಿ ಪ್ರವೇಶವಿತ್ತೇ ಹೊರತು ರಂಗಭೋಗದ ಸೂಳೆಯರಿಗೆ ಈ ಭಾಗ್ಯವಿರಲಿಲ್ಲ. ದಾನದ ಸಂದರ್ಭದಲ್ಲಿ ಅಂಗಭೋಗದ ಸೂಳೆಯರಿಗೆ ರಂಗಭೋಗದ

ಸೂಳೆಯರಿಗಿಂತ ಹೆಚ್ಚಿನ ಪಾಲು ದೊರೆಯುತ್ತಿತ್ತು. ಬಸರಾಳಿನ ಮಲ್ಲಿಕಾರ್ಜುನ ದೇವಾಲಯದ ಶಾಸನವೊಂದು ಈ ದೇವಾಲಯದಲ್ಲಿ ದೇವರಾರತಿಯನ್ನು ಸೂಳೆಯು ಬೆಳಗುತ್ತಿದ್ದಳು ಎಂಬುದಕ್ಕೆ ಸ್ಪಷ್ಟವಾದ ನಿದರ್ಶನವನ್ನು ಒದಗಿಸುತ್ತದೆ.[43]

ಅಂಗಭೋಗದ ಸೂಳೆಯರು ಅಲ್ಪಪ್ರಮಾಣದಲ್ಲಿಯೂ ರಂಗಭೋಗದ ಸೂಳೆಯರು ಬಹುಪ್ರಮಾಣದಲ್ಲಿಯೂ ಉಲ್ಲೇಖಗೊಂಡಿದ್ದಾರೆ. ರಂಗಭೋಗದ ಸೇವೆಯಲ್ಲಿ ದೇವರಿಗೆ ನೃತ್ಯಾದಿ ಸೇವೆಗಳನ್ನು ನಡೆಸುವುದು. ಹಾಡುವವರು, ವಿವಿಧ ರೀತಿಯ ವಾದ್ಯಗಳನ್ನು ನುಡಿಸುವವರು, ಕಂಬದ ಸೂಳೆಯರೂ ಬಹುಮಟ್ಟಿಗೆ ಸ್ತ್ರೀಯರೇ ಆಗಿರುತ್ತಿದ್ದರು. ಇವರೆಲ್ಲರೂ ದೇವಸೂಳೆಯರೇ ಆಗಿದ್ದರು. ವಿಶೇಷವೆಂದರೆ ಪಾತ್ರದವರು ಪಾತ್ರ ಮಾಡುವಾಗ ಈ ಕಂಬದ ಸೂಳೆಯರು ಒಂದೊಂದು ಕಂಬಕ್ಕೆ ಒರಗಿಕೊಂಡು ಸುಮ್ಮನೆ ನಿಲ್ಲಬೇಕಿತ್ತು. ಸಾಲಂಕೃತರಾದ ಈ ಕಂಬದ ಸೂಳೆಯರಲ್ಲಿ ಕೆಲವರು ದೀಪಗಳನ್ನು, ಕೆಲವರು ಛಾಮರಗಳನ್ನು, ಕೆಲವರು ತಾಳಗಳನ್ನು, ಹಿಡಿದು ನಿಂತಿರುತ್ತಿದ್ದರು ಎಂದು ತೋರುತ್ತದೆ. ಈ ಕಂಬದ ಸೂಳೆಯರೊಂದಿಗೆ ದೇವಾಲಯಗಳ ಒಳಬದಿಯಲ್ಲಿರುವ ದೇವಕೋಷ್ಟಗಳಲ್ಲಿಯೋ ಅಥವಾ ಅದರ ಬಳಿಯೋ ನಿಂತಿರುತ್ತಿದ್ದ ಮಾಡದ ಸೂಳೆಯರ ಉಲ್ಲೇಖಗಳೂ ಇವೆ.

ಸಾಮಾನ್ಯವಾಗಿ ಹೊಯ್ಸಳರ, ಕಲ್ಯಾಣದ ಚಾಲುಕ್ಯರ ಕಾಲದ ಶಾಸನಗಳಲ್ಲಿ ವಿಶೇಷವಾಗಿ ರಂಗಭೋಗದ ಸೂಳೆಯರ ಬಗ್ಗೆ ಹೆಚ್ಚಿನ ಮಾಹಿತಿ ಸಿಗುತ್ತದೆ. ದೇಗುಲಗಳ ನಿರ್ಮಾಣ ಪ್ರಕ್ರಿಯೆಯ ಹಂತಹಂತಗಳಲ್ಲೂ ಈ ಸೂಳೆಯರ ಪ್ರಸ್ತುತಿಗಳನ್ನು ಗಮನದಲ್ಲಿ ಇಟ್ಟುಕೊಂಡು ದೇಗುಲಗಳನ್ನು ನಿರ್ಮಿಸುತ್ತಿದ್ದರಬೇಕು. ಸಾಮಾನ್ಯವಾಗಿ ಸಾಕಷ್ಟು ದೊಡ್ಡದಾದ ದೇವಾಲಯವಾದರೂ ನವರಂಗದಲ್ಲಿಯೇ ನೃತ್ಯಸೇವೆ ನಡೆಯುತ್ತಿದ್ದುದರಿಂದ ನವರಂಗದ ನಾಲ್ಕು ಕಂಬಗಳಿಗೂ ಒರಗಿಕೊಂಡು ನಿಂತಿರುತ್ತಿದ್ದ ನಾಲ್ವರು ಕಂಬದ ಸೂಳೆಯರ ಉಲ್ಲೇಖಗಳೇ ಹೆಚ್ಚು. ಸೂಂಡಿಯ ಅರ್ಕೇಶ್ವರ ಹಾಗೂ ನಾಗೇಶ್ವರ ದೇವಾಲಯದ ಶಾಸನಗಳು ಕಂಬದ ಸೂಳೆಯರನ್ನು ಕುರಿತು ಮಾಹಿತಿಯನ್ನು ಒದಗಿಸುತ್ತದೆ. "ಬಲದ ದೆಸೆಯ ಮೊದಲ ಕಂಬದ ಸೂಳೆ, ಎಡದ ದೆಸೆಯ ಮೊದಲ ಕಂಬದ ಸೂಳೆ ರೇವಕಬ್ಬೆ, ಅಲ್ಲಿಯ ಕಂಬದ ಸೂಳೆ ಅಸಗಬ್ಬೆ ಅಲ್ಲಿಯ ಕಂಬದ ಸೂಳೆ ಗುಬ್ಬಿಯ ಚಾವುಂಡಬ್ಬೆ" ಎಂದು ಹೆಸರಿಸಿ ಎಡದಲ್ಲಿ ನಿಲ್ಲುವ ಸೂಳೆಯರಿಗೂ ಬಲದಲ್ಲಿ ನಿಲ್ಲುವ ಸೂಳೆಯರಿಗೂ ನೀಡಿರುವ ದಾನಗಳಲ್ಲಿಯೇ ವ್ಯತ್ಯಾಸವಿರುವುದು ಎದ್ದು ಕಾಣುತ್ತದೆ.

ಬಂಕಾಪುರದ ಕದಂಬೇಶ್ವರ ದೇಗುಲದ 4 ಜನ ಕಂಬದಸೂಳೆಯರಿಗೆ 20 ಮತ್ತರು ಭೂಮಿಯನ್ನು ಕ್ರಿ.ಶ.1055ರಲ್ಲಿ, ಸೊಂಡಿಯ ನಾಗೇಶ್ವರ ದೇವಾಲಯದ ಬಲಪಕ್ಕದ ಎಡಪಕ್ಕದ ಕಂಬದ ಸೂಳೆಯರಿಗೆ 48 ಮತ್ತರು ಭೂಮಿಯನ್ನು ಕ್ರಿ.ಶ.1058ರಲ್ಲಿಯೂ, ನಾಗಾವಿಯ ಮಧುಸೂಧನ ದೇವಾಲಯದ ನಾಲ್ವರು ಕಂಬದ ಸೂಳೆಯರಿಗೆ 36 ಮತ್ತರು ಭೂಮಿಯನ್ನು ಕ್ರಿ.ಶ.1085ರಲ್ಲೂ, ಹಂಡರಕಿಯ ಲೋಕೇಶ್ವರ ದೇಗುಲದ ಕಂಬದ ಸೂಳೆಯರಿಗೆ ಕ್ರಿ.ಶ.1118ರಲ್ಲೂ, ಕಾಗಿನೆಲೆಯ ಕಾಳೇಶ್ವರ ದೇವಾಲಯದ ಕಂಬದ ಸೂಳೆಯರಿಗೆ 12 ಮತ್ತರು ಎರೆಭೂಮಿಯನ್ನು, 10 ಮತ್ತರು ಮಾಗೆಭೂಮಿಯನ್ನು

1121ರಲ್ಲಿಯೂ, ದಾನ ನೀಡಲಾಗಿದೆ. ನಾಲತ್‌ವಾಳದ ಕ್ರಿ.ಶ.16.10.1148ರ ಶಾಸನ ತಿಳಿಸುವ ಹಾಗೆ ಕಲರೇತರ ಪೂಜೆಗಾಗಿ ಹಲವಾರು ದಾನಗಳನ್ನು ನೀಡಿರುವ ಸಂದರ್ಭದಲ್ಲಿ ಇಲ್ಲಿನ ಸೂಳೆವಾಳ, ಬಾಸೆಕಾರ, ಕಂಬದ ಸೂಳೆಯರಿಗೂ ದಾನಗಳನ್ನು ನೀಡಲಾಗಿದೆ. ಹಿರಿಯ ಗೊಬ್ಬೂರಿನ ಮಹಾಜನಗಳೆಲ್ಲ ಸೇರಿ ಗೊಬ್ಬೂರು ಮಹಾಜನಗಳ ಪಾದಾರಾಧಕರಾಗಿದ್ದ ಸೋಮೇಶ್ವರದೇವರ ಭಕ್ತರಾದ ಜೇಡಕುಳತಿಳಕರೆಲ್ಲ ಸೇರಿ (ಜೇಡಗೊತ್ತಳಿಗಳು) ತಮ್ಮ ಕುಲದೈವವಾದ ಗೊಜ್ಜೇಶ್ವರ ದೇವಾಲಯವನ್ನು ನಿರ್ಮಿಸಿದಾಗ ನೀಡಲಾದ ದಾನಗಳಲ್ಲಿ ಮುಖ್ಯವಾದ ಸಂಗತಿಯೆಂದರೆ ಈ ದೇಗುಲ ನಿರ್ಮಾಣಕ್ಕೆ ಸೂಳೆ ಹೇಮವ್ವೆಯೂ ಒಂದು ಹಣವನ್ನು ದಾನವಾಗಿ ನೀಡುತ್ತಾಳೆ.[44]

ಕಂಬಕ್ಕೆ ಒರಗಿನಿಂತ ಕಂಬದ ಸೂಳೆಯರ ಜೊತೆಗೆ ಚಾಮರವನ್ನು ಬೀಸುತ್ತಿದ್ದ ಚಾಮರದ ಸೂಳೆಯರೂ ಇರುತ್ತಿದ್ದರು. ಇವರ ಕಂಬದ ಸೂಳೆಯರಿಗಿಂದ ಒಂದು ಕೈ ಮಿಗಿಲಾಗಿದ್ದವರು. ಸೂಂಡಿಯ ಅಕ್ಕೇಶ್ವರ ದೇವಾಲಯದಲ್ಲಿದ್ದ ನಾಲ್ವರು ಚಾಮರದ ಸೂಳೆಯರಿಗೆ 47 ಮತ್ತರು ಭೂಮಿಯನ್ನು ನೀಡಿರುವುದು ಒಂದು ಉದಾಹರಣೆ ಅಷ್ಟೆ. ಇಂತಹ ಅನೇಕ ಉದಾಹರಣೆಗಳಿವೆ.

ಸೂಳೆಯರಲ್ಲಿ ಕಂಬದ ಸೂಳೆ, ಮಾಡದ ಸೂಳೆ, ಚಾಮರ ಸೂಳೆಯರಲ್ಲದೆ ವಾದ್ಯನುಡಿಸುವ ಅನೇಕ ಜನ ಸೂಳೆಯರು ಇರುತ್ತಿದ್ದರು. ಹಾಡುವವರು ಕೂಡ ವಿಶೇಷವಾಗಿ ಇರುತ್ತಿದ್ದರು. ಇದರಲ್ಲಿ ವಾದ್ಯ ನುಡಿಸುವ ಸೂಳೆಯರಿಗಿಂತ ಹಾಡುಗಾರರಿಗೆ ವಿಶೇಷವಾದ ಪ್ರಾಶಸ್ತ್ಯವಿತ್ತು. ಇಂದಿಗೂ ಅದೇ ರೀತಿಯ ವಾತಾವರಣವಿರುವುದನ್ನು ಗಮನಿಸಬಹುದಾಗಿದೆ. ಇವರನ್ನು ಹೊರತುಪಡಿಸಿ ದೇವಾಲಯದಲ್ಲಿ ಮುಖ್ಯಪಾತ್ರದಲ್ಲಿ ನಟಿಸುತ್ತಿದ್ದ ಅಥವಾ ಮುಖ್ಯ ಕಲಾವಿದರಾಗಿ ನೃತ್ಯ ಮಾಡುತ್ತಿದ್ದ ಸೂಳೆಯರನ್ನು ಪಾತ್ರದವರು ಎಂದು ಕರೆಯಲಾಗುತ್ತಿತ್ತು. ಇವರು ವೇದಿಕೆಯಲ್ಲಿ ವೈಭೋಗದಿಂದ ಮೆರೆಯುತ್ತಿದ್ದವರು. ಇವರಿಗೇ ಸಹ ಅನೇಕ ಕಡೆ ವಿಶೇಷವಾದ ದಾನಗಳು ಸಂದಾಯವಾಗಿವೆ. ದಾನ ನೀಡುವಾಗ ಸೂಳೆಯರನ್ನು ಪ್ರತ್ಯೇಕವಾಗಿ ಹೆಸರಿಸಿ ಪಾತ್ರದವರನ್ನು ಪ್ರತ್ಯೇಕವಾಗಿ ದಾಖಲಿಸಿರುವುದು ಇವರು ಇವರೊಡನೆ ಸೇರಿದರೂ ಇವರಿಗಿಂತ ಉನ್ನತಹಂತದಲ್ಲಿ ಇರುವವರು ಎಂದು ಗುರುತಿಸಬಹುದಾಗಿದೆ.

ಉದಾಹರಣೆಗೆ ಹೆಬ್ಬಾಳದ ಕ್ರಿ.ಶ. 975ರ ಶಾಸನವು ಭುಜಬೇಶ್ವರ ದೇಗುಲದಲ್ಲಿದ್ದ ಐವರು ಸೂಳೆಯರು ಹಾಗೂ ಒಬ್ಬಳು ಪಾತ್ರದವಳಿಗೆ ದಾನ ನೀಡಿದ್ದಾರೆ. ಸಾಮಾನ್ಯವಾಗಿ ಸೂಳೆಯರ ಸಂಖ್ಯೆಯನ್ನು ಹೋಲಿಸಿದರೆ ಪಾತ್ರದವರ ಸಂಖ್ಯೆ ಕಡಿಮೆಯಿದ್ದರೂ ಸ್ಥಾನಮಾನದಲ್ಲಿ ಇವರಿಗೆ ವಿಶೇಷವಾದ ಆದ್ಯತೆಯಿದೆ. ಬಹುತೇಕ ಎಲ್ಲ ಪ್ರಮುಖ ದೇವಾಲಯಗಳಲ್ಲೂ ಈ ಪಾತ್ರದವರು ಇದ್ದೇ ಇರುತ್ತಿದ್ದರು. ಕೆಲವೆಡೆಗಳಲ್ಲಿದ್ದ ಪಾತ್ರದವರನ್ನು ದೇವರ ತೊತ್ತು ಎಂದು ಸಹ ಗುರುತಿಸಲಾಗಿದೆ. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದಲ್ಲಿ ಪಾತ್ರದ ಮಣಿಗಾರ ಮಾರವ್ವೆ, ಆನೆಯ ಮಾಳವ್ವೆ, ನಾಗೌವ್ವೆ, ಚಂದವ್ವೆ, ಗೋಪವ್ವೆ, ಪಾತ್ರದ ಚಿಣ್ಣಯ್ಯನ ದೇವವ್ವೆ, ವಿಸ್ಸವೆ, ಲಖ್ಖವ್ವೆ ಮೊದಲಾದವರ ಉಲ್ಲೇಖಗಳು ನಮಗೆ ದೊರೆಯುತ್ತದೆ.[45]

ಗುಂಡ್ಲುಪೇಟೆಯ ಶಾಸನವೊಂದು ಈ ಪಾತ್ರದ ಸೂಳೆಯರ ಬಗ್ಗೆ ವಿಶೇಷವಾದ ಮಾಹಿತಿಯನ್ನು ಒದಗಿಸುತ್ತದೆ. ರಾಮನಾಥದೇವರ ಪಾತ್ರದ ಕೇತವ್ವೆಯನ್ನು ನಾಲ್ಕಾರು ಗ್ರಾಮಗಳ ಮುಖಂಡರು ಸೇರಿ ಅವಳನ್ನು ಆಯ್ಕೆ ಮಾಡಿ ಅವಳ ಜೀವನದ ಸುಲಭ ನಿರ್ವಹಣೆಗೆಂದು ಈ ನಾಲ್ಕು ಗ್ರಾಮಗಳು ಮಾಡಿದ ನಿಯಮವೊಂದನ್ನು ಇಲ್ಲಿ ಎತ್ತಿ ಹೇಳಬೇಕಾಗಿದೆ. ಅವಳ ಜೀವಿತಕ್ಕೆ ಪ್ರತಿಗ್ರಾಮದ ಬಡಗಿಗಳು, ಅಕ್ಕಸಾಲಿಗರು, ಕಂಚಗಾರರು, ದತ್ತಿ ಬಿಟ್ಟಿದ್ದಾರೆ.[46] ಈ ಸೂಳೆಯರನ್ನು ದೇವಾಲಯಗಳು ಹಣಕೊಟ್ಟು ಇಟ್ಟುಕೊಳ್ಳುತ್ತಿದ್ದುದು ಸಾಮಾನ್ಯವಾದ ವಿಷಯವಾದರೂ ಕೆಲವು ಸಂದರ್ಭಗಳಲ್ಲಿ ತಮ್ಮ ಆರಾಧ್ಯದೈವಗಳಿಗೆ ಅನೇಕ ದಾನದತ್ತಿಗಳನ್ನು ನೀಡಿರುವುದೂ ಕೂಡ ವಿಶೇಷವಾಗಿದೆ.

ಕುಂದೂರಿನ ಶಾಸನವು ತಿಳಿಸುವ ಹಾಗೆ ಕೆಲವು ಸೂಳೆಯರು ಸೇರಿ 100 ಗದ್ಯಾಣ ಹೊನ್ನನ್ನು ಶಿವಾಲಯಕ್ಕೆ ದಾನ ನೀಡಿದರು.[47] ಶ್ರೀಕಲಿದೇವರ ತೊತ್ತಾದ ಪಾತ್ರದ ಸಿರಿಯವ್ವೆಯು ತನ್ನ ಮನೆಯನ್ನೇ ಕಲಿದೇವರಿಗೆ ದಾನವಾಗಿ ನೀಡಿದಳು. ಈ ಸಂದರ್ಭದಲ್ಲಿ ತನ್ನ ವಂಶದಲ್ಲಿ ಯಾರಾದರೂ ಈ ಮನೆಯಲ್ಲಿ ವಾಸಿಸಿದರೆ ದೇವರ ನಂದಾದೀವಿಗೆಗೆ 2 ಪಣ ಕೊಡಬೇಕೆಂದು ಆಣತಿಯನ್ನು ಕೂಡ ಮಾಡಿದ್ದಾಳೆ. ಇದು ಇವರ ಸಾಮಾಜಿಕ ಬದ್ಧತೆಯನ್ನು ಎತ್ತಿ ತೋರಿಸುತ್ತದೆ.

ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದಲ್ಲಿ ಶಿವರಾತ್ರಿಯಂದು ನಡೆಯುವ ಮಹಾಪರ್ವಕ್ಕೆ ಬಂದು ಜಾಗರಣೆಯನ್ನು ಮಾಡುವವರು ಮಾರನೆಯ ದಿನದ ಸಮಾರಾಧನೆಗೆಂದು ದೇವರ ಪಾತ್ರದ ಆನೆಯ ಮಾಳೆವ್ವೆಯು ಬೀಜವೊನ್ನಾಗಿ ಮೂರು ಗದ್ಯಾಣದ ಇಡುಗಂಟನ್ನು ಇಟ್ಟಿರುವುದು ವಿಶೇಷವಾಗಿದೆ.[48] ಇದೇ ಹೊಯ್ಸಳೇಶ್ವರ ದೇವರ ಹಾಡುವ ಕಲ್ಲವ್ವೆಯು ಇಲ್ಲಿನ ಪಂಚಿಕೇಶ್ವರ ದೇವರಿಗೆ ಕೆಲವು ಗದ್ಯಾಣಗಳನ್ನು ದಾನವಾಗಿ ನೀಡಿದ್ದಾಳೆ.[49] ಇದೇ ದೇವಾಲಯದ ಪಾತ್ರದ ಮಣಿಗಾರ ಮಾದವ್ವೆಯು ದೇವರಿಗೆ ಪಟ್ಟಹೂವು ಎರಡು ಸಹಿತ ಹರಳು ಎರಡಲ್ಲದ ಮಿಸುನಿಲೊಕ್ಕಿ ತೂಕ 20ನ್ನು ದಾನವಾಗಿ ನೀಡಿದ್ದಾಳೆ.[50] ಇವರೇ ಅಲ್ಲದೆ ಅನೇಕ ಸೂಳೆಯರು ಅನೇಕ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಉದಾಹರಣೆಗೆ ಶ್ರವಣಬೆಳಗೊಳದ ಮಾಂಗಾಯಿ ಬಸದಿಯನ್ನು ಸೂಳೆಬಸದಿ ಎಂದೇ ಕರೆಯಲಾಗುತ್ತದೆ. ಈ ಮಂಗಾಯಿಯು ಮೂಲಸಂಘ ದೇಸಿಯಗಣದ ಪುಸ್ತಕಗಚ್ಚದ ಕೊಂಡಕುಂದಾನ್ವಯ ಅಭಿನವ ಚಾರುಕೀರ್ತಿಪಂಡಿತಾಚಾರ್ಯರ ಶಿಷ್ಯೆಯಾಗಿದ್ದು ಸಮ್ಯಕ್ತ ಚೂಡಾಮಣಿಯೆಂದೂ ಹಾಗೂ ರಾಯಪಾತ್ರ ಚೂಡಾಮಣಿ ಎಂದೂ ಹೆಸರಾಗಿದ್ದವಳು.[51] ಹೀಗೆ ಅನೇಕ ದೇವಾಲಯಗಳಲ್ಲಿ ಹೇರಳವಾದ ದಾನಗಳನ್ನು ನೀಡುವುದರ ಮೂಲಕವೂ ವಾಸ್ತು ನಿರ್ಮಿತಿಗಳನ್ನು ಮಾಡಿಸುವಲ್ಲಿಯೂ ಇವರು ಧರ್ಮ ಕಾರ್ಯವನ್ನು ಮೆರೆದಿದ್ದಾರೆ. ತಮ್ಮ ಕುಟುಂಬದ ಇನ್ನಿತರರನ್ನು ದಾನಗಳನ್ನು ನೀಡಲು ಹುರಿದುಂಬಿಸಿದ್ದಾರೆ. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದಲ್ಲಿ ದಾನಗಳನ್ನು ನೀಡಿದ್ದ ಕಂಬದ ಬೂಚವ್ವೆಯ ಪ್ರಭಾವದಿಂದ ಆಕೆಯ ಮಕ್ಕಳಾದ ವಿಸ್ಸವೆ ಹಾಗೂ ಆಕೆಯ ತಂಗಿ ಲಖ್ಖವ್ವೆ ಇಬ್ಬರೂ ಒಂದೊಂದು ಗದ್ಯಾಣವನ್ನು ದಾನವಾಗಿ ನೀಡಿರುವುದನ್ನು ನೋಡಬಹುದು.[52]

ಸೂಳೆಯರು ಸಮಾಜದಲ್ಲಿ ಸರ್ವತಂತ್ರ ಸ್ವತಂತ್ರರು. ದೇವರಿಗೆ ತಮ್ಮ ನಿಗದಿತ ಸೇವೆಯನ್ನು ನಿಷ್ಠೆಯಿಂದ ಸಲ್ಲಿಸುವವರು ಇದರ ಹೊರತಾಗಿ ತಮ್ಮ ತಮ್ಮ ಕಸುಬುಗಳಲ್ಲಿಯೂ ಮುಂದುವರೆದಿರುವರು. ಇವರು ನಿರಂತರವಾಗಿ ಗೀತ, ವಾದ್ಯ, ನರ್ತನಗಳಲ್ಲಿ ತಾಲೀಮು ನಡೆಸಬೇಕಾಗಿತ್ತು. ಜೀವನ ನಿರ್ವಹಣೆಗೆ ಅವರಿಗೆ ದಾನದ ಅಥವಾ ಸಂಬಳದ ಭೂಮಿಯಿರುತ್ತಿತ್ತು. ಆರಂಭದಲ್ಲಿ ಅಂಗಭೋಗದ ಪರಿಚಾರಕರಾಗಿದ್ದ ಇವರು ಕ್ರಮೇಣ ರಂಗಭೋಗಕ್ಕೆ ಮಾತ್ರ ಮೀಸಲಾದರು. ಇವರಲ್ಲದೆ ಸಮಾಜ ಸೂಳೆಯರು ಇದ್ದುದಕ್ಕೆ ಯಾವುದೇ ಪುರಾವೆಗಳು ದೊರೆತಿಲ್ಲ. ಶಾಸನಗಳಲ್ಲಿ ದೊರೆಯದ ಈ ರೀತಿಯ ಉಲ್ಲೇಖಗಳು ಕಾವ್ಯಗಳಲ್ಲಿ ಹೇರಳವಾಗಿ ಬಂದಿದೆ. ಇವರು ಕಲಾವಿದರು. ಹುಟ್ಟು ಕಲಾವಿದರು. ತಮ್ಮ ಸಂಪಾದನೆಯನ್ನು ನಿಯಮಿತವಾಗಿ ಮಾಡುವವರಾಗಿದ್ದುದರಿಂದ ಇವರ ಮೇಲೆ ಸೂಳೆದೆರೆ, ಸೂಳೆವಣ, ಕನ್ನಡಿದೆರೆ, ಕನ್ನಡಿವಣ ಮುಂತಾದ ಹೆಸರುಗಳಿಂದ ನಿಯಮಿತವಾಗಿ ತೆರಿಗೆಯನ್ನು ಕಟ್ಟುತ್ತಿದ್ದರು. ಮುಂದೆ ವಿಜಯನಗರ ಕಾಲಕ್ಕಂತೂ ಇಡೀ ಸಾಮ್ರಾಜ್ಯದ ಆದಾಯದ ಬಹುಪಾಲು ಈ ವಲಯದಿಂದಲೇ ಬರುತ್ತಿತ್ತೆಂಬುದನ್ನು ಗಮನಿಸಿದರೆ 10ನೆಯ ಶತಮಾನದ ಆಸುಪಾಸಿನಲ್ಲಿ ಆರಂಭವಾದ ಇವರ ವ್ಯವಹಾರವು ಕ್ರಮೇಣ ವಿಕಾಸಹೊಂದಿತು ಎಂದು ಹೇಳಬಹುದು. ಈ ರೀತಿಯ ವ್ಯವಹಾರಗಳು ಜಾಸ್ತಿ ಯಾಗುತ್ತಿದ್ದಂತೆಯೇ ಈ ಸೂಳೆಯರ ಮುಖಂಡನೊಬ್ಬ ರೂಪುಗೊಂಡಂತೆ ತೋರುತ್ತದೆ. ಅವನನ್ನು ಸೂಳೆವಳ ಎನ್ನಲಾಗುತ್ತದೆ. ಇಂತಹ ಸೂಳೆಯರು ಸಾಮಾನ್ಯವಾಗಿ ವಾಸಿಸುತ್ತಿದ್ದ ಕೇರಿಗಳನ್ನು ನಾಗವಾಸ ಎಂತಲೂ ಕರೆಯುತ್ತಿದ್ದರು. ಈ ನಾಗವಾಸಗಳನ್ನು ನೋಡಿಕೊಳ್ಳುತ್ತಿದ್ದವನನ್ನು ಮೊಖರಿತಿ ಎಂದು ಕರೆಯಲಾಗಿದೆ. ಈ ಮೊಖರಿತಿಯ ಮೂಲಕ ನಾಗವಾಸದ ಎಲ್ಲ ಸೂಳೆಯರಿಗೂ ದಾನಗಳನ್ನು ನೀಡಿರುವ ಉದಾಹರಣೆಗಳೂ ಇವೆ.

**ಕುಟುಂಬದ ಆಸ್ತಿಯ ವ್ಯವಸ್ಥಿತ ನಿರ್ವಹಣೆ ಮತ್ತು ಸ್ಥಳೀಯ ವಿನಿಯೋಗ**

ತಂದೆ–ತಾಯಿಯರು ಸಂಪಾದಿಸಿದ ಹಣ ಮತ್ತು ಆಸ್ತಿಗೆ ಯಾವಾಗಲೂ ವಾರಸುದಾರರೆಂದರೆ ಅವರ ಮಕ್ಕಳೇ. ತಂದೆ–ತಾಯಿಯ ಎಲ್ಲ ಕಷ್ಟ–ಸುಖಗಳ ಪಾಲೂ ಇವರದ್ದೆ. ತಂದೆ ಸಾಲ ಮಾಡಿದ್ದರೆ ಅದನ್ನು ತೀರಿಸುವುದು ಮಗನ ಕರ್ತವ್ಯವಾಗಿತ್ತು. ಆದರೆ ತಾವು ಸಂಪತ್ತನ್ನು ಗಳಿಸಿ ತಮಗೆ ಮಕ್ಕಳೇ ಇಲ್ಲದೇ ಹೋದ ಸಂದರ್ಭ ಒದಗಿದರೆ ಆ ಆಸ್ತಿಯ ಪಾಲು ಯಾರಿಗೆ ಸೇರಬೇಕು ಎಂದು ನಿರಂತರವಾಗಿ ಕಾಲಕಾಲಕ್ಕೆ ಜನ ಕೇಳಿಕೊಂಡು ಬಂದಿದ್ದಾರೆ.

ಇದಕ್ಕೆ ಪ್ರಭುತ್ವ ನೀಡಿದ ಉತ್ತರವೆಂದರೆ ಆ ಸಂಪತ್ತು ಇನ್ನು ಯಾರಿಗೂ ಸಲ್ಲತಕ್ಕದ್ದಲ್ಲ. ಬದಲಿಗೆ ಅದು ಆ ಊರಿನ ದೇವಾಲಯಕ್ಕೋ ಅಥವಾ ರಾಜನ ಅರಮನೆಗೆ ಸಂದಾಯವಾಗಬೇಕೆಂದು ಹಲವು ಸಲ ತೀರ್ಮಾನಗಳು ಆಗಿರುವಂತೆ ಶಾಸನಗಳು ತಿಳಿಸುತ್ತವೆ. ಕೆಲವೇ ಕೆಲವು ಉದಾಹರಣೆಗಳನ್ನು ತೆಗೆದುಕೊಂಡು ಈ ರೀತಿಯ ಮಕ್ಕಳಿಲ್ಲದವರು ಸಂಪಾದಿಸಿರುವ ಆಸ್ತಿ ಯಾರಿಗೆ ಸಲ್ಲುತ್ತದೆ ಎಂದು ಗಮನಿಸಬಹುದಾಗಿದೆ ಇಂತವುಗಳನ್ನು 'ಅಪುತ್ರಕ ದಾನ'ಗಳು ಎಂದು ಕರೆಯಲಾಗುತ್ತದೆ.

ಅನೇಕ ಸಂದರ್ಭಗಳಲ್ಲಿ ತಾನು ಸಾಯುವ ಮೊದಲೇ ತನ್ನ ಆಸ್ತಿಯನ್ನು ಆತ ಯಾರಿಗೆ ಬೇಕಾದರೂ ದಾನ ನೀಡಬಹುದಾಗಿತ್ತು. ಹಾಗೆ ಮಾಡಿದರೆ ಯಾವುದೇ ತೊಂದರೆಯೂ ಇಲ್ಲ. ಇದಕ್ಕೆ ಯಾರ ಒಪ್ಪಿಗೆಯೂ ಬೇಕಾಗಿರಲಿಲ್ಲ. ಆದರೆ ಹೀಗೆ ನಿಷ್ಕರ್ಷೆ ಮಾಡದೇ ತೀರಿಹೋದ ಸಂದರ್ಭದಲ್ಲಿ ಸಂಬಂಧಿಕರು ಈ ಆಸ್ತಿ ತನಗೆ ಸೇರಿದ್ದೆಂದು ಇಂದಿನಂತೆಯೇ ಅಂದೂ ದಾವೆ ಹೂಡುತ್ತಿದ್ದರು. ಅಂತಹ ಸಂದರ್ಭದಲ್ಲಿ ಗ್ರಾಮಸಭೆ ನಡೆಸಿ ತೀರ್ಮಾನಗಳನ್ನು ತೆಗೆದುಕೊಳ್ಳಲಾಗುತ್ತಿತ್ತು.

ಮದ್ದೂರು ತಾಲ್ಲೂಕಿನ ತಿಪ್ಪೂರಿನ ಶಾಸನವು[53] "ಅಣ್ಣನ ಒಡವೆ ತಮ್ಮನಿಗೆ ತಮ್ಮನ ಒಡವೆ ಅಣ್ಣನಿಗೆ ಮಾವನ ಒಡವೆ ಅಳಿಯಂಗೆ ಅಳಿಯನ ಒಡವೆ ಮಾವಂಗೆ ಸೇರ್ದುಕೊಂಡು ಸಪ್ರತಿಬದ್ದದೆ ಗಂಡನುಳ್ಳಡೆ ವಡವೆಯ ಹಳಿಗೆ ಸುಡುವುದು. ತೊತ್ತಪ್ಪಡೆ ಎಳೆದು ಬಿಸುಡುವುದು, ಹಗಲುಸೂಳೆ ಇರುಳು ಸಜ್ಜನ, ವೊಡಲಲ್ಲಿ ವೊಕ್ಕಲ ರಣಕ್ಕ ದಂಡವಿಲ್ಲ ಮತ್ತು ಸತ್ತುದು ಹಣ ತುಂಬಿದುದು ಕಿಳುಗು, ಬಿಸಾಡಿ ಕೊಡುವುದು, ಹಾದರಕ್ಕೆ ದಂಡವಿಲ್ಲ" ಎಂದು ಹೇಳುತ್ತದೆ ಬಹಳ ಕಾವ್ಯಾತ್ಮಕವಾಗಿರುವ ಈ ಸಾಲುಗಳಲ್ಲಿ ಅಂತರ್ಗತವಾಗಿರುವ ಸಂಗತಿಯನ್ನು ಎಚ್ಚರಿಕೆಯಿಂದ ಗಮನಿಸಬೇಕಾಗಿದೆ.

ಕ್ರಿ.ಶ.1253ರ ಗೌಡಗೆರೆಯ ಶಾಸನವು[54] ಸಹ ಅಣ್ಣನ ಒಡವೆ ತಮ್ಮನಿಗೆ ತಮ್ಮನ ಒಡವೆ ಅಣ್ಣನಿಗೆ ಹೋದರೆ ಯಾವುದೇ ದಂಡವಿಲ್ಲ ಎನ್ನುತ್ತದೆ. ಆದರೆ ಈ ಎರಡೂ ಶಾಸನಗಳು ಅಣ್ಣ–ತಮ್ಮಂದಿರ ಆಸ್ತಿ ಪರರಿಗೆ ಸಲ್ಲಬಹುದು ಎಂದು ಖಚಿತವಾಗಿ ಹೇಳುತ್ತದೆಯಾದರೂ ಅಪುತ್ರಕರ ವಿಷಯ ಇಲ್ಲಿ ಇಲ್ಲ. ಹಾಗೂ ಈ ತೀರ್ಮಾನದಲ್ಲಿ ದೇವಾಲಯದ ಪಾತ್ರವೂ ಏನೂ ಇಲ್ಲ.

ಕ್ರಿ.ಶ. 1330ಕ್ಕೆ ಸೇರಿದ ಕಿತ್ತನೆಲ್ಲಿ ಗ್ರಾಮದ ಶಾಸನವು[55] ರೈತವರ್ಗದ ವ್ಯಕ್ತಿಯೊಬ್ಬನ ಸಾವಿನ ನಂತರ ಅವನ ಆಸ್ತಿ ಯಾರಿಗೆ ಸೇರಬೇಕು ಎಂಬ ವಿಷಯದಲ್ಲಿ ವ್ಯಾಜ್ಯಕ್ಕೆ ಬಂದಾಗ ದಂಬಾಳದ ಹಲರು (ರೈತವರ್ಗದವರು) ಮಾಡಿಕೊಂಡ ನಿಯಮವೆಂದರೆ ಈ ಕುಲದಲ್ಲಿ ಯಾರಾದರೂ ಸತ್ತರೆ ಆತನಿಗೆ ಗಂಡು ಮಕ್ಕಳಿಲ್ಲದಿದ್ದರೆ ಆಸ್ತಿಯು ಅಣ್ಣ–ತಮ್ಮಂದಿರಿಗೆ ದೊರೆಯುತ್ತದೆ. ಅಣ್ಣ–ತಮ್ಮಂದಿರು ಇಲ್ಲದ ಪಕ್ಷದಲ್ಲಿ ಅಳಿಯ ಮತ್ತು ಮೊಮ್ಮಗಳಿಗೆ ಸೇರುತ್ತದೆ. ಇವರಾರೂ ಇಲ್ಲದಿದ್ದರೆ ಆ ಹಲರು ಯಾವ ಜಾತಿಗೆ ಸೇರುತ್ತಾರೋ ಆ ಜಾತಿಗೆ ಸೇರಿದ ಧಾರ್ಮಿಕ ಸಂಸ್ಥೆಗೆ (ಅಂದರೆ ದೇವಾಲಯ) ಅದು ಸೇರಬೇಕು ಎಂದು ಹೇಳಿ ಇನ್ನು ಒಂದು ವಿಷಯವನ್ನು ಖಚಿತಪಡಿಸುತ್ತದೆ. ಅದೇಂದರೆ ಇದೆ ನಿಯಮವನ್ನು ವೀರಬಲ್ಲಾಳನು ದೋರಸಮುದ್ರದಲ್ಲಿ ಪರಿಪಾಲಿಸುತ್ತಾನೆ ಎಂದೂ. ಅಂದರೆ ರಾಜಧಾನಿಯಲ್ಲಿ ಹೊಯ್ಸಳ ದೊರೆ ಯಾವ ನಿಯಮವನ್ನು ಪಾಲಿಸುತ್ತಾನೋ ಅದೇ ರೀತಿಯ ನಿಯಮವನ್ನು ಬೆಂಗಳೂರು ಜಿಲ್ಲೆಯ ಹಲರೂ ಕೂಡ ಅನುಸರಿಸುತ್ತಾರೆ.

ಇನ್ನು ಕೆಲವು ಸಂದರ್ಭದಲ್ಲಿ ಹೀಗೆ ಅಪುತ್ರರರ ಸಂಪತ್ತನ್ನು ದೇವಾಲಯಗಳಿಗೆ ವಹಿಸಿಕೊಡಬೇಕೆಂದು ನಿಯಮವನ್ನು ಮೀರಿ ರಾಜಸ್ವವೇ ಅದನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡು ಬಿಡುತ್ತದೆ. ನಂತರ ಆ ಆಸ್ತಿಯನ್ನು ಮತ್ತೆ ಅದು ಅದೇ ದೇವಾಲಯಕ್ಕೆ ಬಿಡಬೇಕಾಗುತ್ತದೆ. ಕೂತನಪುರದ

ಶಾಸನವು[56] ಅಪುತ್ರಿಕೆಯ ಆಸ್ತಿಯನ್ನು ಹೀಗೆ ರಾಜಸ್ವವು ತೆಗೆದುಕೊಂಡ ಸಂಗತಿಯನ್ನು ತಿಳಿಸುತ್ತದೆ. ಕೆಂಪಕೇತಪು ಸೆಟ್ಟಿಯ ಮಗ ವೀರಭದ್ರ ಸೆಟ್ಟಿಯು ಕಾಲಾವಾದಾಗ ಅವನ ಉಡುಯನೆಲ್ಲವನ್ನು ನಾವು ಅಪುತ್ರಿಕೆಯ ಕಾರಣದಿಂದ ತೆಗೆದುಕೊಂಡಿದ್ದೇನೆ. ಅವನಿಗೆ ನಡೆದು ಬರುತ್ತಿದ್ದ ಕೂತನಪುರದ ಸರ್ವಸ್ವಾಮ್ಯವನ್ನು ತಾವು ತೆಗೆದುಕೊಂಡು ಮಹಾಮಂಡಳೇಶ್ವರ ವೀರ ನಂಜರಾಯರ ಕುಮಾರರಾದ ಚಿಕ್ಕರಾಯರು ಬೇರೆಯವರಿಗೆ ವಹಿಸಿಕೊಟ್ಟಿರುವುದನ್ನು ಕಾಣಬಹುದು. ಹೀಗೆ ತೆಗೆದುಕೊಂಡಿದ್ದನ್ನು ನರಸಮಂಗಲದ ರಾಮೇದೇವರ ಭಂಡಾರಕ್ಕೆ ವರುಷ ವರುಷಕ್ಕೆ ತೆರಿಗೆಯಾಗಿ ಕೊಡಬೇಕೆಂತಲೂ ತಿಳಿಸಲಾಗಿದೆ.

ಬಾಳೆಪಾಲ ಬಂದಪ್ಪನ ಮಗ ಲಿಂಗಣ್ಣನು ನಷ್ಟ ಸಂತಾನವಾಗಿ ಹೋದ ಸಂಬಂಧ ಆತನ ಭೂಮಿ ನಾಗಲಾಪುರದ ಗ್ರಾಮದೊಳಗೆ ತೆಂಗಿನ ಹಿತ್ತಲಗದ್ದೆ ಖಂಡುಗ ಒಂಬತ್ತು ಬೆಳವರಿ, ಆ ಭೂಮಿ ನಮ್ಮ ಅರಮನೆಗೆ ಹರವರಿಯಾಗಿ ಬಂದ ಸಂಬಂಧ.[57] ಬಾಳೆಪಾಲ ತಮ್ಮಯ್ಯನ ಮಗ ನರಸಪ್ಪನು ನಷ್ಟಸಂತಾನವಾಗಲು ಹೋದ ಸಂಬಂಧ ಎಂಟು ಖಂಡುಗ ಬೇಜವರಿ ಭೂಮಿ ನಮ್ಮ ಅರಮನೆಗೆ ಹರವರಿಯಾಗಿ ಬಂದ ಸಂಬಂಧ[58]

ಈ ಎರಡೂ ಹೇಳಿಕೆಗಳು ದಾನಿವಾಸಿ ಒಡೆಯರು ಎಂಬ ಚಿಕ್ಕ ಪಾಳೆಯಪಟ್ಟನ ಒಡೆಯರಿಗೆ ಸಂಬಂಧಿಸಿದ ದಾಖಲೆಗಳು ಇವರು ತಾವು ವಶಪಡಿಸಿಕೊಂಡ ಭೂಮಿಯನ್ನು ಗೇರುಸೊಪ್ಪೆಯ ಜಿನಮಠದ ವೀರಸೇನದೇವರಿಗೆ ಕ್ರಯಕ್ಕೆ ನೀಡಿದರು. ಹೀಗೆ ದೇವಾಲಯಗಳು ತಮ್ಮ ಆರ್ಥಿಕ ಸಂಚಲನವನ್ನು ಹೀಗೆ ವಾರಸುದಾರರಿಲ್ಲದೇ ಹಾಳಾಗಿ ಹೋಗಿಬಿಡಬಹುದಾದ ಆಸ್ತಿಯನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡು ಅದನ್ನು ಬೇರೆಯವರಿಗೆ ಗೆಯ್ಮೆ ಮಾಡಿಕೊಳ್ಳಲು ಅನುಮತಿ ನೀಡಿ ಲಾಭವನ್ನು ಪಡೆದುಕೊಳ್ಳುತ್ತಿದ್ದ ಸಂಗತಿಯು ಎರಡನೆಯ ಸಹಸ್ರಮಾನದ ಬಹುಮುಖ್ಯ ಆರ್ಥಿಕ ಸಬಲತೆಯ ದ್ಯೋತಕವಾಗಿದೆ.

### 6.2.4.3 ಔಪಚಾರಿಕ ನಿಯೋಗಿಯಾಗಿ ಶಿಕ್ಷಣ : ಸ್ಥಳೀಯ ಸಮಾಜಮೌಲ್ಯಗಳನ್ನು ಸಂವರ್ಧಿಸಿದ ಸಾಂಸ್ಥಿಕತೆ :

ಶಿಕ್ಷಣ ಸಂಸ್ಥೆಗಳು ಮನುಷ್ಯನನ್ನು ಸಾಮಾಜೀಕರಣಗೊಳಿಸುವ ಹೊಣೆಗಾರಿಕೆಯನ್ನು ಹೊತ್ತಿರುತ್ತವೆ. ಶಿಕ್ಷಣದ ಜೊತೆಗೆ ಈ ಕೇಂದ್ರಗಳು ತನ್ನ ಸಂಸ್ಕೃತಿಯ ನೈತಿಕ ನಿಯಮಗಳು, ಆದರ್ಶಗಳು, ಸಂಪ್ರದಾಯ–ರೂಢಿಗಳು ಇನ್ನಿತರ ಸಾಮಾಜಿಕ ಮೌಲ್ಯಗಳನ್ನು ತಿಳಿಯಹೇಳುವ ಕೆಲಸವನ್ನು ನಿರ್ವಹಿಸುತ್ತವೆ. ವ್ಯಕ್ತಿಯ ಪ್ರತಿಭೆ, ಸುಪ್ತವಾದ ಚೈತನ್ಯ, ದಕ್ಷತೆ, ಕ್ಷಮತೆ ಮುಂತಾದವು ಸಂಚಯನಗೊಳ್ಳುವ ಮತ್ತು ಆ ಮೂಲಕ ಸರ್ವತೋಮುಖ ವ್ಯಕ್ತಿತ್ವದ ಬೆಳವಣಿಗೆಗೆ ಸಹಾಯಕವಾಗುವ ಸಾಮರ್ಥ್ಯವನ್ನು ಹಾಗೂ ಶಿಸ್ತನ್ನು ಶಿಕ್ಷಣವು ಒದಗಿಸಿಕೊಡುತ್ತದೆ. ಹೊಯ್ಸಳ ಅವಧಿಯಲ್ಲಿ ಶಿಕ್ಷಣವನ್ನು ನೀಡುತ್ತಿದ್ದ ಕೇಂದ್ರಗಳೆಂದರೆ ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳು, ಮಠಗಳು, ದೇವಾಲಯಗಳು.

**ಅಗ್ರಹಾರಗಳು:**

ಬ್ರಾಹ್ಮಣರ ಜನವಸತಿ ಇರುವ ಪ್ರದೇಶಗಳನ್ನು ಅಗ್ರಹಾರಗಳು ಎಂದು ಕರೆಯುತ್ತಿದ್ದರು. ಇವು ದಾನದ ರೂಪದಲ್ಲಿ ಬಂದ ಪ್ರದೇಶಗಳು. ಇಂಥ ಗ್ರಾಮಗಳನ್ನು ಬ್ರಾಹ್ಮಣರೇ ನೋಡಿಕೊಳ್ಳುತ್ತಿದ್ದರು. ಈ ವ್ಯವಸ್ಥೆಯನ್ನು ಬ್ರಹ್ಮದೇಯ ಎಂತಲೂ ಕರೆಯುತ್ತಿದ್ದರು. ಬ್ರಾಹ್ಮಣರು ಬ್ರಹ್ಮದೇಯ ಭೂಮಿಯ ಮಹಾಜನರಾಗಿರುತ್ತಿದ್ದರು. ಮಹಾಮಂಡಳೇಶ್ವರರಲ್ಲಿ ಅನೇಕರು ಅಗ್ರಹಾರಗಳ ಸ್ಥಾಪನೆ ಮತ್ತು ಅವುಗಳಿಗೆ ನೀಡುವ ದಾನ ದತ್ತಿಗಳನ್ನು ನೀಡುತ್ತ ಶಿಕ್ಷಣಕ್ಕೆ ಮಹತ್ತರವಾದ ಕೊಡುಗೆಯನ್ನು ನೀಡಿದ್ದರು ಎಂಬುದನ್ನು ಮನಗಾಣಬಹುದು.

- ಹೊಯ್ಸಳ ದಂಡನಾಯಕ ಬಿಟ್ಟಿಯಣ್ಣನು ಧರ್ಮಪುರ ಎಂಬ ಅಗ್ರಹಾರವನ್ನು ಸ್ಥಾಪಿಸಿದ್ದನು.
- ಕೇಶವ ದಂಡನಾಯಕನು ತಾಳಗುಂದ ಅಗ್ರಹಾರಕ್ಕೆ ವಿವಿಧ ವಿಷಯಗಳನ್ನು ಕಲಿಸುವುದಕ್ಕಾಗಿ ಭೂಮಿಯನ್ನು ದಾನವಾಗಿ ನೀಡಿದ್ದನು.
- 15–3–1261ರ ಬೇಲೂರಿನ ಶಾಸನದನ್ವಯ[59] 3ನೆಯ ನರಸಿಂಹನು ಕಲಕುಣಿನಾಡಿನ ಬೆಳ್ಳೂರು ಮತ್ತು ಅದರ ಉಪಗ್ರಾಮಗಳನ್ನು ಅವುಗಳ ಸರ್ವಾದಾಯ ಸಮೇತವಾಗಿ ಪೆರುಮಾಳೆದೇವ ದಂಡನಾಯಕನಿಗೆ ಅಗ್ರಹಾರವನ್ನು ನಿರ್ಮಿಸಲು ನೀಡಿದನು. ದೊರೆಯ ಅಭಿಲಾಷೆಯಂತೆ ಪೆರುಮಾಳೆದೇವ ದಂಡನಾಯಕನು ಅಗ್ರಹಾರವನ್ನು ನಿರ್ಮಿಸಿ ಅದಕ್ಕೆ ಉದ್ಭವ ನರಸಿಂಹಪುರ ಎಂದು ಹೆಸರಿಟ್ಟು ಅದನ್ನು 86 ವೃತ್ತಿಗಳನ್ನಾಗಿ ವಿಭಾಗಿಸಿ ವಿದ್ಯಾವಿಶಾರದರಾದ ಬ್ರಾಹ್ಮಣೋತ್ತಮರಿಗೆ ದಾನ ನೀಡಿದನು. 29–3–1271ರ ಶಾಸನದ[60] ಪ್ರಕಾರ, ಪೆರುಮಾಳೆದೇವದಂಡನಾಯಕನು ಬೆಳ್ಳೂರಿನ ಮಾಧವ ದೇವಾಲಯದಲ್ಲಿ ಪಂಚಿಕೇಶ್ವರ ಮೂರ್ತಿಯನ್ನು ಪ್ರತಿಷ್ಠಾಪಿಸಿ ಇಂದ್ರಪರ್ವ ಮತ್ತು ಆರಣಪೂಜೆಗಳಿಗಾಗಿ ದತ್ತಿ ನೀಡಿದನು. ಅಲ್ಲಿಯೇ ಋಗ್ ಮತ್ತು ಯಜುರ್ವೇದಗಳನ್ನು ಪಠಿಸುವುದಕ್ಕಾಗಿ ಮತ್ತು ಬಾಲಶಿಕ್ಷೆಗಾಗಿ ಆ ಭೂಮಿಯಲ್ಲಿಯೇ ಕೆಲವು ಭಾಗಗಳನ್ನು ದತ್ತಿಬಿಟ್ಟನು. ಕ್ರಿ.ಶ. 1285ರ ಚಿತ್ರದುರ್ಗದ ಶಾಸನವು[61] ಈ ದಂಡನಾಯಕನು ಪೆರುಮಾಳೆಪುರವಾಗಿ ಮಾಡಿದ ಬ್ರಹ್ಮಪುರಿಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ. 1290ರ ಟಿ.ನರಸೀಪುರದ[62] ಶಾಸನವು ಪೆರುಮಾಳೆದೇವ ದಂಡನಾಯಕನು ಖಂಡಿಕ ಬಾಲಶಿಕ್ಷೆಯನ್ನು ನಡೆಸುವುದಕ್ಕೆ ಬಾಲಕರಿಗೆ ನಾಗರ, ಕನ್ನಡ, ತಿಗುಳ ಆರ್ಯಗಳನ್ನು ಕಲಿಸುವ ಉಪಾಧ್ಯಾಯರಿಗೆ, ಋಗ್ವೇದವನ್ನು ಓದಿಸುವ ಉಪಾಧ್ಯಾಯರಿಗೆ ಮತ್ತು ಅವರ ಜೀವಿತಕ್ಕೆಂದು ಭೂಮಿಯನ್ನು ಕೊಂಡು ದತ್ತಿಬಿಟ್ಟಿರುವುದನ್ನು ತಿಳಿಸುತ್ತದೆ. ಇದರೊಂದಿಗೆ 2 ಮನೆಗಳನ್ನು ಹಾಗೂ 6 ಗದ್ಯಾಣಗಳನ್ನು ಉಪಾಧ್ಯಾಯರಿಗೆಂದು ನೀಡಲಾಗಿತ್ತು. ಕೊಟ್ಟ ಭೂಮಿಯಲ್ಲಿ ಸಾಗುವಳಿ ನಡೆಸಲು ಇಬ್ಬರು ಉಪಾಧ್ಯಾಯರಿಗೆ 2 ದುಗದ ಗದ್ಯಾಣವನ್ನು ಕೊಡಲಾಗಿತ್ತು. ಇವುಗಳನ್ನು ಅವರು ಖಂಡಿಕೆಯನ್ನು ನಡೆಸಲು ಬಳಸುತ್ತಿದ್ದರು. ಈ ಕೈಂಕರ್ಯಕ್ಕೆ ತೆರಬೇಕಾದ ತೆರಿಗೆಗಳನ್ನು ಮಹಾಜನರು ತೆರಬೇಕೆಂದು ದಂಡನಾಯಕನು ಸೂಚಿಸಿರುವನು.[63] ಈ ಎಲ್ಲ ಶಾಸನೋಕ್ತ ವಿವರಗಳಿಂದ ಪೆರುಮಾಳೆದೇವದಂಡನಾಯಕನು ಅಗ್ರಹಾರ ಮತ್ತು ಬ್ರಹ್ಮಪುರಿಗಳನ್ನು ನಿರ್ಮಿಸಿ ವೇದಾಧ್ಯಯನ,

ಭಾಷಾಧ್ಯಯನಗಳ ಮೂಲಕ ವಿವಿಧ ಆಯಾಮಗಳಲ್ಲಿ ಶಿಕ್ಷಣವನ್ನು ಪ್ರೋತ್ಸಾಹಿಸಿ ವಿದ್ಯಾವಂತ ವರ್ಗದ ನಿರ್ಮಾಣಕ್ಕೆ ತನ್ನದೇ ಆದ ವಿಶಿಷ್ಟವಾದ ಕೊಡುಗೆಯನ್ನು ಕೊಟ್ಟಿರುವುದು ವೇದ್ಯವಾಗುತ್ತದೆ.

- ರಾಮನಾಥನು ಆಳುತ್ತಿದ್ದಾಗ ಕೇಶಿ ಅರಸನು(ವಿರ್ರಚುನೈನ) ಕುರನೆಳ್ಳಿಯ ಸಾಮ . . . ನಿಗೆ ಭಟ್ಟವೃತ್ತಿಯಾಗಿ ಕೆಲವು ಭುದಾನಗಳನ್ನು ನೀಡಿದನು

- ಸೇನಾನಿ ಕಂಬಯ್ಯಟಿಣ ತೊಂಡದೇಶದ ಚಾತಗ್ರಾಮಕ್ಕೆ ಸೇರಿದ ಆದಿತ್ಯನ ಮೊಮ್ಮಗ. ದೇವಪಿಲ್ಲ ಮತ್ತು ಚೀಲಾದೇವಿಯರ ಮಗನೆಂದು ಹೇಳಿದೆ. ಇಮ್ಮಡಿ ಬಲ್ಲಾಳನ ದಿಗ್ವಿಜಯ ಹಾಗೂ ಯಶಶೌರ್ಯಗಳನ್ನು ಕೇಳಿದ ದೇವಪಿಲ್ಲನು ಅರಸನ ಸೇವೆಗೆಂದು ಬಂದ ಆತನಿಗೆ ಕಂಬಯ್ಯನಲ್ಲದೆ ಕರುಮಾನಿಕ ಮತ್ತು ಅಲ್ಲಾಳದೇವ ಎಂಬ ಇನ್ನಿಬ್ಬರು ಮಕ್ಕಳಿದ್ದರು. ಸೋಮೇಶ್ವರನ ಕೈಕೆಳಗೆ ಸೇನಾಮುಖ್ಯಸ್ಥನಾದ ಕಂಬಯ್ಯನು ಅರಸನ ಚೋಳದೇಶದ ಮೇಲಿನ ದಿಗ್ವಿಜಯ ಯಾತ್ರೆಗಳಲ್ಲಿ ನೆರವಾದನೆಂಬುದು ಸ್ಪಷ್ಟ. ಚೋಳಮಂಡಲದ ವಿಕ್ರಮಪುರವೆಂಬ ಹೆಸರಿನ ರಾಜಧಾನಿಯೊಂದನ್ನು ಅರಸ ನಿರ್ಮಿಸಿದ; ಚಾಕರಸನಬೀಡು. ಮಾಕಬ್ಬೆಯ ಹೆಸರಿನಲ್ಲಿ ಒಂದು ಮಹಾಗ್ರಹಾರವಾಗಿ ಪರಿವರ್ತಿಸಿ ನಿರ್ದಿಷ್ಟ ತೇದಿಯಂದು (1242) ದಾನವಿತ್ತ. ದಾನವಿತ್ತ ಈ ಗ್ರಾಮವನ್ನು ಆನೆಯವೂಲಿಗದ ಕಣ್ಣವಾಡಿ ಎಂದು ಉಲ್ಲೇಖಿಸಿದೆ. ಈ ಗ್ರಾಮವನ್ನು ಪಡೆದ ಪತಿಗ್ರಹಿಯು 120 ವೃತ್ತಿಗಳನ್ನಾಗಿ ಅದನ್ನು ವಿಭಜಿಸಿ ದಾನಿವಿತ್ತನು. 120 ವೃತ್ತಿಗಳಲ್ಲಿ ಪಂಚಿಕೇಶ್ವರಕ್ಕೆ ಒಂದು ವೃತ್ತಿ, ಚೆನ್ನಕೇಶವದೇವರಿಗಗೆ 5ವೃತ್ತಿ, ದೇವೇಶ್ವರ, ಚೀಲೇಶ್ವರ, ಕಂಬೇಶ್ವರ ದೇವರ ತ್ರಿಕೂಟಕ್ಕೆ 5 ವೃತ್ತಿಗಳನ್ನು ನೀಡಲಾಯಿತೆಂದು ದಾನದ ಹೆಚ್ಚಿನ ವಿವರಗಳನ್ನು ಕೊಡುವ ಕನ್ನಡಬಾಗವು ತಿಳಿಸುತ್ತದೆ. ಈ ದೇಗುಲಗಳೂ ಆತನು ಕಟ್ಟಿಸದವು. ತ್ರಿಕೂಟದ ಮೂರು ದೇವತೆಗಳನ್ನು ಕ್ರಮವಾಗಿ ತಂದೆ ತಾಯಿ ಹಾಗೂ ತನ್ನ ಹೆಸರಿನಲ್ಲಿ ಪ್ರತಿಷ್ಠೆ ಮಾಡಿಸಿದನೆಂಬುದನ್ನು ಗಮನಿಸಬಹದು. ಋಗ್ವೇದ, ಯಜುರ್ವೇದ ಸಾಮವೇದ ಖಂಡಿಕಗಳಿಗೆ ತಲಾ ಒಂದರಂತೆ ವೃತ್ತಿಗಳು ಸಂದವು ಭುಮಿಗಳನ್ನು ವೃತಿಗಳಾಗಿ ಸ್ವೀಕರಿಸಿದ ಬ್ರಾಹ್ಮಣರು ಅರಮನೆಯ ಬೊಕ್ಕಸಕ್ಕೆ ಕಟ್ಟುಗುತ್ತಗೆ ಹಾಗೂ ಪಿಂಡಾದಾನವಾಗಿ ಒಟ್ಟು 168 ಗದ್ಯಾಣ ಮತ್ತು 31/4 ಪಣಗಳನ್ನು ತೆರಬೇಕೆಂಬ ಅಧಿಸೂಚನೆಯಿದೆ. ಇದರಿಂದ ಕಂಬಯ್ಯ ಆ ಗ್ರಾಮವನ್ನು ಮಹಾಗ್ರಹಾರವಾಗಿ ಪಡೆದರೂ ದೇವಾಲಯಗಳ ನಿರ್ವಹಣೆಗಾಗಿ ಬ್ರಾಹ್ಮಣರಿಗೆ ಇಡೀ ಗ್ರಾಮವನ್ನು ನೀಡಿದನೆಂಬುದು ಮತ್ತು ವಸ್ತುತಃ ಆ ಗ್ರಾಮಗಳ ಭೂಮಿಗಳ ಒಡೆಯರಾದ ಬ್ರಾಹಣರು ಅರಮನೆಯ ಬೊಕ್ಕಸಕ್ಕೆ ನೇರವಾಗಿ ತೆರಿಗೆಗಳನ್ನು ತೆರುತ್ತದ್ದರೆಂದು ಅರ್ಥವಾಗುತ್ತದೆ.[64]

- ಹೆಗ್ಗಡೆ ಎರೆಯಣ್ಣನು ಅರಸಿಕೆರೆ ಹತ್ತಿರದ ನರಸಿಂಹಪುರದ ಅಗ್ರಹಾರದಲ್ಲಿ ಊಟ ಉಪಚಾರಗಳಿರುವ ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಿ, ಮನೆಯೊಂದನ್ನು ಕಟ್ಟಿಸಿ ಬೋಳೆಯ ಸೋವಿಯಣ್ಣನನ್ನು ಕರ್ನಾಟಕ ಬಾಲಶಿಕ್ಷೆಯನ್ನು ಬೋಧಿಸಲು ನೇಮಿಸಿದ್ದ. ಅಲ್ಲಿ ಇಪ್ಪತ್ತು ವಿದ್ಯಾರ್ಥಿಗಳಿದ್ದರು. ಅಗ್ರಹಾರದ ಸದಸ್ಯರೆಲ್ಲರೂ ಬ್ರಾಹ್ಮಣರೆ ಇರಬೇಕೆಂಬ ಕಡ್ಡಾಯವೇನೂ ಇರಲಿಲ್ಲ. ಇಂಥ ಅಗ್ರಹಾರಗಳ ಸಂರಕ್ಷಣೆಗಾಗಿ ಶೌರ್ಯದಿಂದ ಹೋರಾಡಿದ ವೀರರಿದ್ದರು. ಹೆಚ್ಚಾಗಿ ಅಗ್ರಹಾರಗಳೆಲ್ಲವು ವಿದ್ಯಾಲಯಗಳನ್ನು ಹೊಂದಿದ್ದ ವಾಸಸ್ಥಾನಗಳಾಗಿದ್ದವು. ಬ್ರಹ್ಮಪುರಿ, ಮಠ, ಶಾಲೆ ಮತ್ತು ಘಟಿಕೆಗಳೊಡನೆ

ನಿಕಟ ಸಂಪರ್ಕ ಹೊಂದಿರುತ್ತಿದ್ದವು. ಆದ್ದರಿಂದ ಕರ್ನಾಟಕದ ಶಿಕ್ಷಣ ಪರಂಪರೆಯಲ್ಲಿ ಅಗ್ರಹಾರವನ್ನು ಮೂಲ ವಿದ್ಯಾಸಂಸ್ಥೆಯೆಂದು ಪರಿಗಣಿಸಲಾಗುತ್ತದೆ. ಕರ್ನಾಟಕದಲ್ಲಿ ನೂರಾರು ಅಗ್ರಹಾರಗಳಿದ್ದವೆಂದು ಊಹೆಯನ್ನು ಮಾಡಲಾರೆವು. ಅಷ್ಟೊಂದು ಪ್ರಮಾಣದಲ್ಲಿ ಅವು ಅಸಂಖ್ಯ. ಲೀಲಾ ಶಾಂತಕುಮಾರಿಯವರು ತಮ್ಮ ಅಧ್ಯಯನದಲ್ಲಿ ಇಂತಹ ಅಗ್ರಹಾರಗಳನ್ನು ಗುರುತಿಸಿದ್ದಾರೆ.[65]

**ಬ್ರಹ್ಮಪುರಿಗಳು**

ಊರಿನ ಭಾಗವೊಂದನ್ನು ಬ್ರಾಹ್ಮಣರಿಗೆ ಕೊಟ್ಟು ಶಿಕ್ಷಣಕ್ಕೆ ಮೀಸಲಿಟ್ಟರೆ ಅದನ್ನು ಬ್ರಹ್ಮಪುರಿ ಎಂದು ಗುರುತಿಸಲಾಗುತ್ತಿತ್ತು. ಅರಸರು ದಂಡನಾಯಕರು ಧಾರ್ಮಿಕ ಸ್ಥಳಗಳಿಗೆ ಭೇಟಿ ಕೊಟ್ಟಾಗ ಅಲ್ಲಿ ಧರ್ಮ ಪ್ರಸಂಗ ಗಳನ್ನು ಏರ್ಪಡಿಸಿ ಬ್ರಹ್ಮಪುರ ಅಗ್ರಹಾರಗಳಂತಹ ಸಂಸ್ಥೆಗಳನ್ನು ಸ್ಥಾಪಿಸಲಿಕ್ಕೆ ದಾನದತ್ತಿಗಳನ್ನು ನೀಡುವುದಕ್ಕೆ ವ್ಯವಸ್ಥೆ ಮಾಡಲಾಗುತ್ತಿತ್ತು. ಪ್ರಭಾವಿಗಳಾದ ದಂಡನಾಯಕರು ಅಥವಾ ಮಹಾಮಂಡಳೇಶ್ವರರು ಕೊಡುಗೈ ದಾನಿಗಳೂ ಆಗಿರುತ್ತಿದ್ದರು. ಇಂಥ ಧರ್ಮಪ್ರಸಂಗದ ನಂತರ ಕೇಶವ ದಂಡನಾಯಕನು ದಕ್ಷಿಣ ಬಳ್ಳಿಗಾವಿಯಲ್ಲಿ ಹಣ್ಣುಹಂಪಲು ಗಳಿಂದ ಸಮೃದ್ದವಾದ ಪರಿಸರದಲ್ಲಿ ಕೇಶವ ದೇವಾಲಯವನ್ನು ಕಟ್ಟಿಸಿ ವೀರಕೇಶವಪುರವೆಂಬ ಬ್ರಹ್ಮಪುರಿಯನ್ನು 1103ರಲ್ಲಿ ಸ್ಥಾಪಿಸುತ್ತಾನೆ.[66] ವೇದ ವೇದಾಂಗಗಳನ್ನು ಕಲಿಸುವ ಭಟ್ಟೋಪಾಧ್ಯಾಯರಿಗೂ, ಇತರ ಬ್ರಾಹ್ಮಣರಿಗೂ ಮಂಚ, ಹಾಸಿಗೆ, ಮನೆ ಇತ್ಯಾದಿಗಳನ್ನು ವ್ಯವಸ್ಥೆ ಮಾಡುತ್ತಾನೆ. ಬಳ್ಳಿಗಾವಿಯಲ್ಲಿ 7 ಬ್ರಹ್ಮಪುರಿಗಳು ಇದ್ದವು.

ಪೇಟೆ ಅಥವ ಪಟ್ಟಣಗಳಲ್ಲಿರುವ ಶಿಕ್ಷಣ ಕೇಂದ್ರಗಳನ್ನು ಬ್ರಹ್ಮಪುರಿಗಳೆಂದು ಕರೆಯುತ್ತಿದ್ದರು. ಇಲ್ಲಿಯೂ ಬ್ರಾಹ್ಮಣರು ವಾಸವಾಗಿದ್ದರು. ಅಂದು ನಗರಗಳು ಹೆಚ್ಚಾಗಿ ಇಲ್ಲದಿದ್ದ ಕಾರಣ ಅಗ್ರಹಾರಗಳ ಸಂಖ್ಯೆಯೇ ಹೆಚ್ಚಾಗಿ ಇತ್ತು. ಕೇಶಿರಾಜ ದಂಡನಾಯಕನು ಕೇಶವ ದೇಗುಲವನ್ನು ನಿರ್ಮಿಸಿ ಅದರ ಎದುರುಗಡೆ ವೀರಕೇಶವಪುರ ಎಂಬ ನಗರವನ್ನು ನಿರ್ಮಿಸಿದ. ಆ ನಗರವನ್ನು ಶಾಸನದಲ್ಲಿ ಬ್ರಹ್ಮಪುರಿ ಎಂದು ಕರೆಯಲಾಗಿದೆ. 1165ರ ಸೊರಬ ಶಾಸನವು ಮೂರು ಬ್ರಹ್ಮಪುರಿಗಳನ್ನು ಉಲ್ಲೇಖಿಸಿದೆ. ಕಡ್ಲೆವೇಡು ಶಾಸನವು ಎಂಟು ಬ್ರಹ್ಮಪುರಿಗಳನ್ನು ಉಲ್ಲೇಖಿಸುತ್ತದೆ. ಸ್ವರೂಪದಲ್ಲಿ ಅಗ್ರಹಾರಗಳಿಗೂ ಬ್ರಹ್ಮಪುರಿಗಳಿಗೂ ಅಂತಹ ಯಾವ ವ್ಯತ್ಯಾಸವು ಇಲ್ಲ. ಇರುವ ಒಂದೇ ಒಂದು ಭಿನ್ನತೆಯೆಂದರೆ, ಅಗ್ರಹಾರಗಳು ಹಳ್ಳಿಗಳಲ್ಲಿದ್ದವು. ಬ್ರಹ್ಮಪುರಿಗಳು ನಗರಪ್ರದೇಶಗಳಲ್ಲಿದ್ದವು.[67]

**ಘಟಿಕಾಸ್ಥಾನಗಳು :**

ಪ್ರಾಚೀನ ಮತ್ತು ಮಧ್ಯಯುಗದಲ್ಲಿ ಉನ್ನತಶಿಕ್ಷಣಕ್ಕಾಗಿಯೇ ಮೀಸಲಾದ ವಿದ್ಯಾಲಯಗಳಲ್ಲಿ ಘಳಿಗೆ ಅಥವಾ ಸಮಯದ ಆಧಾರದ ಮೇಲೆ ಪರೀಕ್ಷೆಗಳನ್ನು ನಡೆಸಿ ಸ್ನಾತಕ ಪದವಿಗಳನ್ನು ಒದಗಿಸುವ ತಾಣವನ್ನು ಘಟಿಕಾಸ್ಥಾನಗಳೆಂದು ಗುರುತಿಸಲಾಗುತ್ತಿತ್ತು. ಈ ಶಬ್ದವು ಸಂಸ್ಕೃತಿ 'ಘಟ್' (ಘಟಿಸು, ಸಂಭವಿಸು) ಎಂಬ ಧಾತು ವಿನಿಂದ ಉತ್ಪನ್ನವಾಗಿದೆ. ವಾತ್ಸ್ಯಾಯನನು ಘಟಾವನ್ನು ಧರ್ಮಸಭೆ ಎಂದು

ಗುರುತಿಸಿದರೆ, ಜರ್ಮನ್ ವಿದ್ವಾಂಸ ಕೀಲ್‌ಹಾರ್ನ್‌ರು ಅದನ್ನು ಬ್ರಾಹ್ಮಣರ ಸಭೆ ಎಂದು ಅರ್ಥಮಾಡಿ ಬ್ರಹ್ಮಪುರಿಗೆ ಅನ್ವಯಿಸಿದ್ದಾರೆ. ಇಂಗ್ಲಿಷ್ ಪ್ರಾಧ್ಯಾಪಕ ಬಾರ್ನೆಟ್ ಅವರು ಅದೊಂದು ವಿದ್ವಾಂಸರ ಸಭೆಯೆಂದರು. ಕೆ.ಬಿ.ಪಾಠಕರು ಅದೊಂದು ಧಾರ್ಮಿಕ ಸಂಘಟನೆ ಇರಬಹುದೆಂದರು. ಸಿ. ಮೀನಾಕ್ಷಿ ಎಂಬುವವರು ಘಟಿಕಾಸ್ಥಾನವು ವಿದ್ಯಾರ್ಥಿಗಳೊಂದಿಗೆ ವಿದ್ವಾಂಸರೂ ಜ್ಞಾನಾರ್ಜನೆಗೆ ಹೋಗುತ್ತಿದ್ದ ಉಚ್ಚ ಶಿಕ್ಷಣ ಸಂಸ್ಥೆಯಾಗಿತ್ತೆಂದು ದೃಢಪಡಿಸಿದ್ದಾರೆ. ತಮಿಳುನಾಡಿನಲ್ಲಿ ಕ್ರಿ.ಶ ಮೊದಲ ಶತಕಗಳಲ್ಲಿ ಇದ್ದ ಘಟಿಕಾಸ್ಥಾನಗಳು ನಂತರ ಕರ್ನಾಟಕದಲ್ಲಿಯೂ ಕಂಡುಬಂದವು.

- ಈ ಶೈಕ್ಷಣಿಕ ಸಂಸ್ಥೆಯ ಉಲ್ಲೇಖ ನಮಗೆ ಮೊದಲು ಕಂಡುಬರುವುದು ಕದಂಬ ಕಾಕುತ್ಸ್ಥವರ್ಮನ ಕ್ರಿ.ಶ. 4ನೆಯ ಶತಮಾನದ ತಾಳಗುಂದ ಶಾಸನದಲ್ಲಿ ಸಿಗುತ್ತದೆ. ಕದಂಬ ದೊರೆ ಮಯೂರಶರ್ಮನು ತನ್ನ ಗುರು ವೀರಶರ್ಮನೊಂದಿಗೆ 'ನಿಖಿಲಂ ಪ್ರವಚನಂ' ಅಭ್ಯಸಿಸಲು ಕಾಂಚಿಯ ಘಟಿಕಾಸ್ಥಾನಕ್ಕೆ ತೆರಳುತ್ತಾನೆ. ಅಂದು ಕನ್ನಡ ನಾಡಿನಲ್ಲಿ ವಿವಿಧೆಡೆಗಳಲ್ಲಿನ ಜನರು ಅಂದು ಲಭ್ಯವಿದ್ದ ವಿದ್ಯಾಭ್ಯಾಸವನ್ನೆಲ್ಲ ಮುಗಿಸಿ ತರುಣರು ಹೆಚ್ಚಿನ ಪರಿಣತಿ ಸಾಧಿಸಲು ಕಾಂಚಿಗೆ ಹೋಗುತ್ತಿದ್ದಿರಬೇಕು. ಅಲ್ಲಿ ಯಶಸ್ವಿಯಾಗಿ ಜ್ಞಾನಾರ್ಜನೆ ಮಾಡಿ ಖ್ಯಾತಿ ಗಳಿಸಬೇಕೆಂಬುದು ಅಂದಿನ ವಿದ್ಯಾಕಾಂಕ್ಷಿಗೆ ಸಹಜವಾದ ಆಸೆಯಾಗಿತ್ತು.

- ವಿಪರ್ಯಾಸವೆಂದರೆ, 10ನೆಯ ಶತಮಾನಕ್ಕೆ ಪೂರ್ವದಲ್ಲಿ ಕರ್ನಾಟಕದಲ್ಲಿ ಘಟಿಕಾಸ್ಥಾನಗಳಿದ್ದುದಕ್ಕೆ ಸದ್ಯಕ್ಕೆ ದಾಖಲೆಗಳಿಲ್ಲ; ಆದರೆ ಅವು ಅಸ್ತಿತ್ವದಲ್ಲಿ ಇದ್ದಿರಬಹುದಾದ ಸಾಧ್ಯತೆಗಳಿವೆ. ಕರ್ನಾಟಕದಲ್ಲಿ ಮೊದಲು ಚಾಲುಕ್ಯರ ಕಾಲದಲ್ಲಿ ಘಟಿಕಾಸ್ಥಾನಗಳು ಇದ್ದುದು ವರದಿಯಾಗಿವೆ. ಧಾರವಾಡದ ಕಾಡಿಯೂರು ಕಳಸ, ಹೊಟ್ಟೂರು, ತುಂಬಳ, ಸೂಡಿ, ಬಳ್ಳಾರಿಯ ಮೋರಿಗೆರೆ, ಗುಲ್ಬರ್ಗಾದ ನಾಗಾಯಿ, ಬೆಳಗಾವಿಯ ರಾಯಭಾಗ, ಪುಲಿಗೆರೆ, ಮಹಾರಾಷ್ಟ್ರದ ಏರಿಗೆ, ತುಮಕೂರು ಸಮೀಪದ ಹೆಂಜೇರು ಘಟಿಕಾಸ್ಥಾನಗಳಾಗಿದ್ದವೆಂದು ಶಾಸನಗಳು ತಿಳಿಸುತ್ತವೆ. ಅದರಲ್ಲೂ ಹೊಟ್ಟೂರು 'ಅಖಿಳ ಘಟಿಕಾಸ್ಥಾನ'ವೆಂದೂ, ರಾಯಭಾಗ ಮತ್ತು ಹೆಂಜೇರು ಮಹಾಘಟಿಕಾಸ್ಥಾನಗಳಾಗಿದ್ದವು. ಇನ್ನಿತರವು ಘಟಿಕಾಸ್ಥಾನಗಳಾಗಿದ್ದವು. ಘಟಿಕಾಸ್ಥಾನಗಳಿಗೆ ಶಾಸನವೊಂದರಲ್ಲಿ ಶಾಲೆ ಎಂದು ಪರಿಗಣಿಸಿದರೂ ಅವು ಉಚ್ಚಶಿಕ್ಷಣದ ಕೇಂದ್ರವಾಗಿದ್ದವು ಎಂದು ಅವುಗಳ ಆಡಳಿತ, ಸೌಕರ್ಯಗಳು, ಶಿಕ್ಷಕವರ್ಗ, ವಿದ್ಯಾರ್ಥಿಗಳ ಸಂಖ್ಯೆಗಳನ್ನು ಗಮನಿದರೆ ಅರಿವಾಗುತ್ತದೆ. ಆಳರಸರು, ಸಾಮಂತರು, ಮಾಂಡಲಿಕರು ಘಟಿಕಾಸ್ಥಾನಗಳನ್ನು ಸ್ಥಾಪಿಸಿ ಅವುಗಳ ನಿರ್ವಹಣೆಗೆ ದತ್ತಿಗಳನ್ನು ನೀಡುತ್ತಿದ್ದರು. ಅವುಗಳ ಪ್ರತಿದಿನದ ಆಗುಹೋಗುಗಳು ಮಹಾಜನರ ಮಂಡಳಿ ನೋಡಿಕೊಳ್ಳುತ್ತಿತ್ತು, ಘಟಿಕಾಸ್ಥಾನಗಳಿಗೆ ಕನ್ನಡ ನಾಡಿನ ಮೂಲೆಮೂಲೆಯಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ದತ್ತಿ ಕೊಟ್ಟ ಉತ್ಪನ್ನದಿಂದ ಎಲ್ಲ ಖರ್ಚುಗಳನ್ನು ತೂಗಿಸಿಕೊಂಡು ಹೋಗುತ್ತಿದ್ದುದರಿಂದ ವಿದ್ಯಾರ್ಜನೆಯಲ್ಲಿ ತೊಡುಗಿರುತ್ತಿದ್ದವರಿಗೆ ಹಣದ ಅವಶ್ಯಕತೆ ಇದ್ದಿರಲಿಲ್ಲ. ವಿಶೇಷ ಸಂದರ್ಭಗಳಲ್ಲಿ ಊರವರು ಉದಾರವಾಗಿ ಧನಸಹಾಯ ನೀಡುತ್ತಿದ್ದರು.

ದಕ್ಷಿಣ ಕರ್ನಾಟಕದಲ್ಲಿ ಹೆಂಜೇರು ಮಹಾಘಟಿಕಾ ಸ್ಥಾನವಾಗಿತ್ತು ಎಂಬ ಸಂಗತಿ ನನಗೆ ತುಂಬ ಕುತೂಹಲಕಾರಿಯೆನಿಸಿದೆ. ಏಕೆಂದರೆ, ಅಂದಿನ ಇಡೀ ಕರ್ನಾಟಕದಲ್ಲಿ ರಾಯಭಾಗವನ್ನು ಬಿಟ್ಟರೆ ಹೆಂಜೇರು ಮಾತ್ರ ಮಹಾಘಟಿಕಾಸ್ಥಾನ ಎಂಬ ಕೀರುತಿಗೆ ಪಾತ್ರವಾಗಿತ್ತು. ಇದೇ ಏಕೆ ಮಹಾಘಟಿಕಾಸ್ಥಾನವಾಗಿತ್ತು ಎಂಬ ಪ್ರಶ್ನೆಯನ್ನು ಕೇಳಿಕೊಂಡರೆ ಇಲ್ಲಿ ಮಾತ್ರ ಉನ್ನತ ಶಿಕ್ಷಣದಲ್ಲಿ ವೈವಿಧ್ಯಮಯವಾದ ತರಬೇತಿಯನ್ನು ನೀಡಲಾಗುತ್ತಿತ್ತು. ಹಾಗೂ ಇಲ್ಲಿ ಪರೀಕ್ಷೆಗಳನ್ನು ತೆಗೆದುಕೊಂಡು ಘಟಿಕೋತ್ಸವವನ್ನು ನಡೆಸಲಾಗುತ್ತಿತ್ತು ಎಂದು ಬಗೆಯಬಹದಾಗಿದೆ.

➢ **ದಾಮದಂಡಾಧಿಪ:** 3ನೆಯ ಬಲ್ಲಾಳನು ಆಳುತ್ತಿದ್ದಾಗ, ನಂದವಾಡಿ ಅಗ್ರಹಾರದ ದಾಮದಂಡಾಧಿಪ ಅಥವಾ ಡಾವಣ ದಂಡನಾಯಕರು ಸೀರೆನಾಡೊಳಗಣ ಹೆಂಜೇರು ಪಟ್ಟಣದ ಮಹಾಘಟಿಕಾ ಸ್ಥಾನ ಶ್ರೀ ನೊಣಂಬೇಶ್ವರ ದೇವರ ಸೇವೆಗಾಗಿ 12 ಮಂದಿ ಬ್ರಾಹ್ಮಣರು 12 ಮಂದಿ ತಪೋಧನರು, ನಾಲ್ವರು ಘಳಿಯಾರ ದವರು, ಇಬ್ಬರು ಪೂಜಾರಿಗಳು ಒಟ್ಟು 30 ಮನುಷ್ಯರ ಆಹಾರದಾನಕ್ಕೆ **'ಕೊರೆಹೆ'** ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದರು. ನಂದವಾಡಿಗೆ ಎಂಬ ಅಗ್ರಹಾರದಲ್ಲಿದ್ದ ಧರಾಮರಮುಖ್ಯನೆನಿಸಿದ್ದ ನರಸಿಂಹದೇವ ಘಳಿಸನ ಉಲ್ಲೇಖವನ್ನು ಇದರಲ್ಲಿ ಕಾಣಬಹುದು. ಇವು ಉನ್ನತ ಶಿಕ್ಷಣದ ಕೇಂದ್ರಗಳಾಗಿರುತ್ತಿದ್ದವು. ಶಿಕಾರಿಪುರದ ಶಾಸನವು ಕುಂತಳದಲ್ಲಿ ಅನೇಕ ಘಟಿಕಾಸ್ಥಾನಗಳಿದ್ದವು ಎಂದು ತಿಳಿಸುತ್ತದೆ.

**ಮಠಗಳು**

ಮಠಗಳು ಧಾರ್ಮಿಕ ಆಚರಣೆಗಳಿಗೆ ಹೆಚ್ಚಿನ ಒತ್ತನ್ನು ನೀಡಿ ಆ ಹಿನ್ನೆಲೆಯಲ್ಲಿ ಶಿಕ್ಷಣವನ್ನು ಒದಗಿಸುತ್ತಿದ್ದವು. ಸಂನ್ಯಾಸಿಗಳ ಆಶ್ರಯ ತಾಣಗಳೇ ಕ್ರಮೇಣ ಧಾರ್ಮಿಕ ವಿಚಾರಗಳನ್ನು ಬೋಧಿಸುವ ಕೇಂದ್ರಗಳಾದವು. ಶೈವ ಧರ್ಮ(ಅದ್ವೈತ ಮುಂತಾದವು) ಮತ್ತು ವೈಷ್ಣವ ಧರ್ಮಗಳು (ವಿಶಿಷ್ಟಾದ್ವೈತ ಮತ್ತು ದ್ವೈತ)ಹೆಚ್ಚೆಚ್ಚು ಪ್ರಚಾರಕ್ಕೆ ಬಂದಂತೆ ಅದರ ಅನುಯಾಯಿಗಳ ಸಂಖ್ಯೆಯೂ ಹೆಚ್ಚಾಯಿತು. ಹೀಗಾಗಿ ಅವು ಒಂದು ಗೂಡಿ ಜೈನಧರ್ಮವನ್ನು ಹೊರದಬ್ಬುವ ಕೆಲಸವನ್ನು ಸಾಂಘಿಕವಾಗಿ ವ್ಯವಸ್ಥಿತವಾಗಿ ಮಾಡಲು ಪ್ರಯತ್ನಿಸದವು. ಈ ಧರ್ಮಗಳ ಪ್ರತಿಪಾದಕರೆಂದೆನೆಸಿಕೊಂಡವರು ತಮ್ಮ ತಮ್ಮ ಸಿದ್ಧಾಂತ ಮತ್ತು ಬೋಧನೆಗಳ ಪ್ರಚಾರಕ್ಕೆಂದು ಒಂದು ಸ್ಥಳವನ್ನು ಆಯ್ಕೆಮಾಡಿಕೊಕಂಡರು. ಈ ಪ್ರಯತ್ನಗಳ ಫಲವಾಗಿ ಮಠದಂತಹ ಸಂಸ್ಥೆಯೊಂದು ಉಗಮವಾಯಿತು. ಇವು ಮೇಲ್ನೋಟಕ್ಕೆ ಶಿಕ್ಷಣ ನೀಡುವ ಕಾರ್ಯಸ್ಥಾನಗಳಾಗಿದ್ದವೇ ವಿನಃ ಮಾಡುತ್ತಿದ್ದುದು ಮಾತ್ರ ಧರ್ಮ ಪ್ರತಿಪಾದನೆ.

ಮಸಣಗೌಡನು ಗೋವಿದೇವನ ನಿಷ್ಠಾವಂತ ಸೇವಕನಾಗಿದ್ದನು. ಈತನು ತನ್ನ ತಮ್ಮಂದಿರೊಡಗೂಡಿ ಬಿದಿರೆಯ ಮೂಲಸ್ಥಾನದ ಕಲಿದೇವರಿಗೆಂದು ಕಾರ್ತಿಕದೇವರ ಮೊದಲಬಾಡವಾದ ಕೊಟ್ಟಿತಣೆಯ ಕಲ್ಲುಮಠದ ಮಲ್ಲಿಕಾರ್ಜುನ ಪಂಡಿತರ ಪುತ್ರರಾದ ಸಂಕರಾಶಿಪಂಡಿತ ಮತ್ತು ಸಂತರಾಶಿಪಂಡಿತರಿಗೆ ಭೂದಾನಗಳನ್ನು ನೀಡಿದನು. ಮಠಗಳೊಂದಿಗೆ ದೇವಾಲಯಗಳು

ಹೊಂದಿಕೊಂಡಿರುತ್ತಿದ್ದವು. ಹೀಗೆ ಹೊಯ್ಸಳ ಮಹಾ ಅಮಂಡಳೇಶ್ವರರ ಅವಧಿಯಲ್ಲಿ ರೂಪುಗೊಂಡ ಮಠಗಳು ಹಲವಾರು ಇವೆ.[69]

**ದೇವಾಲಯಗಳು :**

ದೇವಾಲಯಗಳು ಕೇವಲ ಧಾರ್ಮಿಕ ಕೇಂದ್ರಗಳಾಗಿ ಆಸ್ತಿಕರಿಗೆ ಸಮಾಧಾನವನ್ನು ನೀಡುವುದು ಮಾತ್ರವಲ್ಲದೇ ಶಿಕ್ಷಣಕೇಂದ್ರಗಳಾಗಿ ಎಳೆಯರಿಗೆ ಮತ್ತು ಯುವಕರಿಗೆ ಸಂಸ್ಕಾರವನ್ನು ನೀಡುವ ಮಹಾನ್ ವಿದ್ಯಾಸಂಸ್ಥೆಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದವು. ಮಹಾಮಂಡಳೇಶ್ವರರು, ಅವರ ಪತ್ನಿಯರು, ಅವರ ಅಧಿಕಾರಿಗಳು ತಮ್ಮ ಧಾರ್ಮಿಕ ಸೇವೆಗಳನ್ನು ಕೈಗೊಳ್ಳುವ ಸಂದರ್ಭದಲ್ಲಿ ಅವರಿಗೆ ಮೊದಲು ಜ್ಞಾಪಕಕ್ಕೆ ಬರುತ್ತಿದ್ದುದು ಇಂತಹ ದೇವಾಲಯಗಳೇ ಆಗಿರುತ್ತಿದ್ದವು. ಮಹಾಮಂಡಳೇಶ್ವರರೂ ಸಹ ತಮ್ಮ ಹಾಗೂ ತಮ್ಮ ಅಧೀನ ಅಧಿಕಾರಿಗಳ ಮೂಲಕ ದೇವಾಲಯಗಳಲ್ಲಿ ನಡೆಯುತ್ತಿದ್ದ ಇಂತಹ ಶಿಕ್ಷಣ ಕೇಂದ್ರಗಳಿಗೆ ಅನೇಕ ದತ್ತಿಗಳನ್ನು ಸ್ಥಾಪಿಸಿ ಶಿಕ್ಷಣಕ್ಕೆ ಉತ್ತಮ ಪ್ರೋತ್ಸಾಹವನ್ನು ನೀಡುತ್ತಿದ್ದರು. ಅಂತಹ ಕೆಲವು ಉದಾಹರಣೆಗಳನ್ನು ಈಗ ಗಮನಿಸಬಹುದು.

➢ ಹೆಗ್ಗಡಿತಿ ಜಕ್ಕಿಯಬ್ಬೆಯು ತನ್ನ ಮಗಳೂ, ಬೊಪ್ಪಲೆಯ ಮೊಮ್ಮಗಳೂ ಹಾಗೂ ವಿಷ್ಣುವರ್ಧನನರಸಿಯೂ ಆದ ಚಿಕ್ಕ ಶಾಂತಲೆಯ ಸ್ಮರಣಾರ್ಥ ಪರೋಕ್ಷವಿನಯವಾಗಿ ದಾನನೀಡಿದ ಸಂಗತಿಯನ್ನು ತಿಳಿಸುತ್ತವೆ. ಎರಡನೆಯ ಶಾಸನವು ಹಾನಿಹೊಂದಿದ್ದು ದಾನಿಯ ಹೆಸರು ನಷ್ಟವಾಗಿದೆ. ಆದರೆ ಜಕ್ಕಿಯಬ್ಬೆಯೇ ದಾನಿಯಾಗಿರುವ ಸಾಧ್ಯತೆ ಹೆಚ್ಚು. ಎರಡು ಶಾಸನಗಳ ತೇದಿಯೂ ಒಂದೇ. ಅದರ ವಿವರಗಳು ಹೀಗಿವೆ; ನಿರ್ಗುಂದನಾಡಿಗೆ ಸೇರಿದ ಎಲೆಗುಂದದಲ್ಲಿ ಶಾಂತಲೇಶ್ವರ ಮತ್ತು ಬೊಪ್ಪಲೇಶ್ವರ ಎಂಬೆರಡು ದೇಗುಲಗಳ ನಿರ್ಮಾಣ ಮತ್ತು ಪ್ರತಿಷ್ಠಾಪನೆ ಆ ಸ್ಥಳದ ಮಹಾದೇವ ದೇವಾಲಯಕ್ಕೆ ಅಲ್ಲಿನ ಮಹಾಜನರಿಗೆ ಹಾಗೂ ಜಕ್ಕಿಯಬ್ಬೆಗೆ ಕೂಡ ಅರಸನು ನೀಡಿದ ಭೂದಾನ ಮುಂತಾದ ವಿಷಯವನ್ನು ಮೊದಲನೆಯ ಶಾಸನ ತಿಳಿಸುತ್ತದೆ. ಜಕ್ಕಿಯಬ್ಬೆಯು ತನಗೆ ಸಂದ ಭೂಪ್ರದೇಶವನ್ನು ತಾನೂ ಪ್ರತಿಷ್ಠೆ ಮಾಡಿದ ಆ 2 ದೇಗುಲಗಳಿಗೆ ನೀಡಿದಳು. ಇದರಲ್ಲಿ ಹೇಳಿರುವ ಇತರ ಸಾದನಗಳಲ್ಲಿ ಗಮನಾರ್ಹವಾದುದೆಂದರೆ ವೇದಖಂಡಿಕಕೆ ಎಂದರೆ ವೇದಪಾಠಶಾಲೆಯ ನಿರ್ವಹಣೆಗೆ ನೀಡಿದ ದಾನ. 67ನೆಯ ಶಾಸನವು ಎಲೆಗುಂದದ ಚಂಡಿಮುಂಡಿತೀರ್ಥದ ಮಹಾದೇವರಿಗೆ ದಾನವೊಂದನ್ನು ನೀಡಿದ ವಿಷಯವನ್ನು ನಿರೂಪಿಸಿದೆ. ದಾನದ ಪ್ರತಿಗ್ರಾಹಿಯನ್ನು ಸ್ಥಾನಪತಿ ಶಾಮಂವೆ ಎಂದು ಹೆಸರಿಸುತ್ತದೆ. ಶಾಮಂವೆ ಎಂಬ ಹೆಸರಿನ ಅನಂತರದ ಕೆಲವು ಅಕ್ಷರಗಳು ನಷ್ಟವಾಗಿವೆ. ಆದರೂ ಹೆಸರು ಪೂರ್ಣಗೊಂಡಿರುವಂತೆ ತೊರುತ್ತದೆ. ಮತ್ತು ಸ್ತ್ರೀಗುರುವೊಬ್ಬಾಕೆಯ ಹೆಸರಾಗಿದ್ದಂತೆ ಕಾಣುತ್ತದೆ. ಇದೊಂದು ಕುತೂಹಲಕರ ವಿಷಯವಾಗಿದೆ.[70]

➢ ಮಂಡ್ಯದ ಬಸುರಿವಾಳಿನಲ್ಲಿರುವ(ಇಂದಿನ ಬಸರಾಳು) ಮಲ್ಲಿಕಾರ್ಜುನ ದೇವಾಲಯವು ಸಹ ಶಿಕ್ಷಣ ಕೇಂದ್ರವಾಗಿತ್ತು. ಈ ಕೇಂದ್ರದಲ್ಲಿ ಹರಿಹರದಂಡನಾಯಕನ ಮಗ ಹರಿಯಣ್ಣನು ಸ್ಥಾನಿಕನಾಗಿ

ಕಾರ್ಯನಿರ್ವಹಿಸುತ್ತಾ ವಿದ್ಯಾ ವಿನಿಯೋಗದಲ್ಲಿ ತೊಡಗಿದ್ದನು. ಈ ಕೈಂಕರ್ಯದ ನಿರ್ವಹಣೆಗಾಗಿ ಈತನು ಬೆಳೆಯನಹಳ್ಳಿ 15ಗದ್ಯಾಣ, ತೆರಣಿ 1ಗದ್ಯಾಣ, ಬೇಬಿ 50ಗದ್ಯಾಣ ಗಳನ್ನು ದೇವರ ಶ್ರೀಕಾರ್ಯಗಳಿಗೆಂದು ಪಡೆದನು.[71]

- ಹರಿಹರದಲ್ಲಿಯ ಹರಿಹರ ದೇವಸ್ಥಾನದ ಶಾಲೆಯಲ್ಲಿ ಪ್ರಾಥಮಿಕ ಮತ್ತು ಉಚ್ಚ ಶಿಕ್ಷಣದ ಏರ್ಪಾಡು ಇದ್ದು ಅಲ್ಲಿ ಆರು ಜನ ಶಿಕ್ಷಕರಿದ್ದರು. ಒಟ್ಟಿನಲ್ಲಿ, ಅಗ್ರಹಾರಗಳು ಹಳ್ಳಿಗಳಲ್ಲಿ ಇದ್ದು ಸ್ಥಳೀಯ ಶಿಕ್ಷಣದ ಅವಶ್ಯಕತೆಯನ್ನು ನೋಡಿಕೊಳ್ಳುತ್ತಿದ್ದವು ಎನಿಸುತ್ತದೆ. ಊರುಗಳಲ್ಲಿ ಬ್ರಹ್ಮಪುರಿಗಳು ಸ್ಥಾಪನೆಗೊಂಡು ವಿದ್ಯಾಭ್ಯಾಸಕ್ಕೆ ಮಣೆಹಾಕಿದ್ದವು. ವಿಶೇಷವಾಗಿ ಮಠಗಳಲ್ಲಿ ಮತ್ತು ಅದಕ್ಕೆ ಹೊಂದಿಕೊಂಡಂತಿರುವ ದೇಗುಲಗಳಲ್ಲಿ ಕಾಳಾಮುಖ ಯತಿಗಳು ಉಚ್ಚಶಿಕ್ಷಣ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವುದರಲ್ಲಿ ಯಶಸ್ಸು ಕಂಡರು. ಕಾಳಾಮುಖ ಯತಿಗಳಿಗೆ ನಿವಾಸ ಸ್ಥಾನವಾಗಿ ಮಠಗಳು ಹಲವು ಶತಮಾನಗಳಿಂದ ಅಸ್ತಿತ್ವದಲ್ಲಿದ್ದರೂ ವಿದ್ಯಾಸಂಸ್ಥೆಗಳಾಗಿ ಅವು ಊರ್ಜಿತವಾದದ್ದು 10ನೆಯ ಶತಮಾನದ ನಂತರ ಎಂಬುದಕ್ಕೆ ಶಾಸನಾಧಾರಗಳಿವೆ. ಕಾಳಾಮುಖರೆಂದು ಹೆಸರುವಾಸಿಯಾದ ಪಾಶುಪತಶೈವರು ಕರ್ನಾಟಕದಲ್ಲಿ ಮಠಗಳಿಗೆ ವಿದ್ಯಾಕ್ಷೇತ್ರದ ಸ್ಥಾನವನ್ನು ತಂದುಕೊಟ್ಟರು. ಹಲವು ಕಾಳಾಮುಖ ಯತಿಗಳು ರಾಜಗುರುಗಳೂ ಆಗಿದ್ದರು. ಇವರು ಸ್ಥಾಪಿಸಿದ ಮಠಗಳಲ್ಲಿ ಬಳ್ಳಿಗಾವಿಯ ಕೇದಾರೇಶ್ವರ ದೇವಸ್ಥಾನಕ್ಕೆ ಹೊಂದಿಕೊಂಡಿದ್ದ ಕೋಡಿಯಮಠ ಹೆಸರುವಾಸಿಯಾಗಿದೆ. ಹೀಗೆಯೇ ಹಲವು ಸಮರ್ಥ ಮತ್ತು ಆಸಕ್ತ ಕಾಳಾಮುಖ ಯತಿಗಳು ತಾವು ಇದ್ದಂತಹ ಮಠಗಳನ್ನು ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳ ಕೇಂದ್ರವನ್ನಾಗಿ ಕಟ್ಟಿದರು. ಇಂಥ ಮಠಗಳಲ್ಲಿ ಸ್ವಾಧ್ಯಾಯ, ಅಧ್ಯಯನ ಮತ್ತು ವ್ಯಾಖ್ಯಾನಗಳೆಂಬ ಮೂರು ಬಗೆಯ ವಿದ್ಯಾಭ್ಯಾಸದ ಕ್ರಮಗಳಿದ್ದವು. ಹೀಗೆ ಮಠ, ದೇಗುಲ, ಅಗ್ರಹಾರ, ಬ್ರಹ್ಮಪುರಿಗಳಲ್ಲಿ ಔಪಚಾರಿಕ ವಾಗಿ ಶಿಕ್ಷಣ ಕೊಡಮಾಡುವುದಕ್ಕೆ ಸುವ್ಯವಸ್ಥೆ ಒದಗಿದ್ದಿತು. ವೃತ್ತಿಸಂಘಗಳಲ್ಲಿನ ಅನೇಕ ವೃತ್ತಿನಿರತರು ಪರಂಪರೆ ಯಿಂದ ಬಂದಂತಹ ತಮ್ಮ ಕುಲಕಸುಬುಗಳಿಗೆ ಸಂಬಂಧಿಸಿದ ಜ್ಞಾನವನ್ನು ಅನೌಪಚಾರಿಕವಾಗಿ ನೀಡುತ್ತಿದ್ದರು. ವೀರಶೈವ ಕ್ರಾಂತಿಯ ನಂತರ ಶಿಕ್ಷಣ ಪದ್ಧತಿಯಲ್ಲಿ ಕಾಯಕಕ್ಕೆ ಹೆಚ್ಚಿನ ಸ್ಥಾನವು ಲಭ್ಯವಾದುದರಿಂದ ಉದರ ನಿರ್ವಹಣೆಯ ವ್ಯವಸ್ಥೆಯಾಗುವಂತೆ ಮಾಡಿದ್ದರಿಂದ ಓದುಬರಹಗಳು ಜನಸಾಮಾನ್ಯರಿಗೂ ಎಟುಕುವಂಥಾಯಿತು. ಇಂಥ ವೃತ್ತಿಮೂಲ ಶಿಕ್ಷಣದಲ್ಲಿ ವಿಶೇಷವಾಗಿ ಶಿಲ್ಪಿಗಳು, ಕಲ್ಲುಕುಟಿಗರು, ತೆಲ್ಲಿಗರು, ಕುಂಬಾರರು, ಕಮ್ಮಾರರು, ಕೃಷಿಕರು, ಬಡಗಿಗಳು, ತಾಳರರು, ಮಾಲೆಗಾರರು ಮೊದಲಾದ ವೃತ್ತಿನಿರತ ನಿಪುಣರೇ ಅನೌಪಚಾರಿಕವಾಗಿ ಶಿಕ್ಷಕರಾಗಿದ್ದು ಕೊಂಡು ವೃತ್ತಿಕೌಶಲ್ಯವನ್ನು ಮುಂದಿನ ತಲೆಮಾರಿನವರಿಗೆ, ಆಸಕ್ತರಿಗೆ ದಾಟಿಸುವ ಗುರುತರವಾದ ಜವಾಬ್ದಾರಿಯನ್ನು ಅನಾಯಾಸವಾಗಿ ನಿರ್ವಹಿಸುತ್ತಿದ್ದರು.

ಶಿಕ್ಷಣವು ಉತ್ತಮವಾಗಿ ಔಪಚಾರಿಕವಾಗಿ ದೊರೆತದ್ದರಿಂದಲೇ ಹೊಯ್ಸಳ ಮಹಾಮಂಡಲೇಶ್ವರರ ಶಾಸನಗಳ ಸಾಹಿತ್ಯ ಮತ್ತು ಸೃಜನಶೀಲ ಕವಿಕೃತಿಗಳು ಅತ್ಯಂತ ಶ್ರೀಮಂತಿಕೆಯಿಂದ

ಸ್ಫುಟತೆಯಿಂದ ಸ್ಪಷ್ಟತೆಯಿಂದ ಕೂಡಿವೆ. ಇಷ್ಟೆಲ್ಲ ವಿಚಾರಗಳು ಸಾಮಾನ್ಯಾದರೂ ಕಾಡುವ ಅಂಶಗಳಿವೆ ಅವುಗಳನ್ನು ಪ್ರಶ್ನೋತ್ತರದ ಸ್ವರೂಪದಲ್ಲಿ ಮಂಡಿಸಬಯಸುತ್ತೇನೆ :

- ಇಡೀ ಶಿಕ್ಷಣ ವ್ಯವಸ್ಥೆ ಯಾರ ನಿಯಂತ್ರಣದಲ್ಲಿತ್ತು?

ಇಡೀ ಶಿಕ್ಷಣ ವ್ಯವಸ್ಥೆಯು ರಾಜ್ಯದ ಪರಮಾಧಿಕಾರವನ್ನು ಹೊಂದಿದ್ದ ರಾಜನ ಕೈಯಲ್ಲಿಯೇ ಇತ್ತಾದರೂ ಸ್ಥಳೀಯವಾದ ಶಿಕ್ಷಣದ ಜವಾಬ್ದಾರಿಗಳು ಹೊಯ್ಸಳ ಮಹಾಮಂಡಲೇಶ್ವರರ ಕೈಯಲ್ಲಿಯೇ ಇದ್ದಿತ್ತು ಎಂಬುದು ಅವರು ನೀಡಿರುವ ದಾನದತ್ತಿಗಳಿಂದ ದೃಢಪಡುತ್ತದೆ.

- ಶಿಕ್ಷಣವನ್ನು ನೀಡುತ್ತಿದ್ದವರು ಯಾರು? ಯಾರಿಗೆ?

ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣವನ್ನು ಆಯಾ ಪ್ರಾದೇಶಿಕ ಪರಿಸ್ಥಿತಿಯಲ್ಲಿ ಸ್ಥಳೀಯ ಆಡಳಿತಾಧಿಕಾರಿಯಾದ ಮಹಾಮಂಡಳೇಶ್ವರನ ಅನುಮತಿಯ ಮೇರೆಗೆ ವಿದ್ವಾಂಸರು, ಕ್ಷೇತ್ರಜ್ಞರು, ಕಾಳಾಮುಖ ಯತಿಗಳು, ವೈದಿಕ ಬ್ರಾಹ್ಮಣರು, ಕುಲಕಸಬುಗಳಲ್ಲಿ ನಿಪುಣರಾದ ಹಿರಿಯ ತಲೆಮಾರಿನವರು ಇಚ್ಚಿತ ಅರ್ಹ ವಿದ್ಯಾರ್ಥಿಗಳಿಗೆ ಅಥವಾ ವ್ಯಕ್ತಿಗಳಿಗೆ ನೀಡುತ್ತಿದ್ದರು.

- ಶಿಕ್ಷಣವನ್ನು ದಾನ ದತ್ತಿಗಳ ಮೂಲಕ ಪ್ರೋತ್ಸಾಹಿಸುತ್ತಿದ್ದವರು ಯಾರು?

ಅಪಾರ ದಾನದತ್ತಿಗಳ ಮೂಲಕ ಪ್ರೋತ್ಸಾಹ ನೀಡುತ್ತಿದ್ದವರು ಮತ್ತು ಆ ಮುಖಾಂತರ ಇಡೀ ಸಾಮ್ರಾಜ್ಯದ ಶೈಕ್ಷಣಿಕ ಪ್ರಗತಿಗೆ ಕಾರಣಕರ್ತರಾಗಿದ್ದವರು ಹೊಯ್ಸಳ ಮಹಾಮಂಡಲೇಶ್ವರರು.

- ಶಿಕ್ಷಣದ ಪಠ್ಯಗಳು ಯಾವುದಾಗಿದ್ದವು?

ಹಲವು ಶಾಲೆಗಳು ಒಂದೇ ವಿಷಯದಲ್ಲಿ ಪರಿಣತ ಬೋಧನೆ ನೀಡುತ್ತಿದ್ದವು. ಲೊಕ್ಕಿಗುಂಡಿಯ ಶಾಲೆಯು ಮೀಮಾಂಸೆ, ರೋಣದ ಶಾಲೆಯು ತರ್ಕಶಾಸ್ತ್ರಗಳನ್ನು ಕಲಿಸುತ್ತಿದ್ದವು. ಕುಮಾರ ವ್ಯಾಕರಣ, ಋಗ್ವೇದಗಳನ್ನು ಕಲಿಸುವ ಶಾಲೆಗಳು ಇದ್ದವು. ಮೀಮಾಂಸೆ, ವೇದಾಂಗಗಳು, ಶಿಕ್ಷಾ, ವ್ಯಾಕರಣ, ಬಾಲಭಾಷೆ, ತರ್ಕಶಾಸ್ತ್ರ, ನ್ಯಾಯಶಾಸ್ತ್ರ, ಖಂಡಿಕೆ ಮೊದಲಾದವು ಪಠ್ಯಗಳಾಗಿದ್ದವು. ಶಿಕ್ಷಣ ಹಂತದಲ್ಲಿ ಮುಖ್ಯವಾಗಿ ಪ್ರಾತಮಿಕ ಶಿಕ್ಷಣವನ್ನು ಕನ್ನಡದಲ್ಲಿಯೇ ನೀಡಲಾಗುತ್ತಿತ್ತು.ಕನ್ನಡ ಪಂಡಿತನು ಕರ್ನಾಟ ಶಿಕ್ಷೆ, ಬಾಲಶಿಕ್ಷೆ, ಕನ್ನಡಾಕ್ಷರ ಶಿಕ್ಷೆ, ಕರ್ನಾಟ ಬಾಲಶಿಕ್ಷೆ ಎಂದು ವಿವಿಧ ಹೆಸರುಗಳಿಂಧ ಗುರುತಿಸುವ ಕನ್ನಡ ವಿದ್ಯಾಭ್ಯಾಸದ ಮುಖ್ಯಸ್ಥನಾಗಿದ್ದನು. ಕನ್ನಡ ಅಕ್ಷ್ಯರಾಭ್ಯಾಸದ ಜೊತೆಗೆ ವ್ಯಾಕರಣ, ಗಣಿತಗಳ ಪರಿಚಯವನ್ನೂ ಮಾಡಿಸುತ್ತಿದ್ದರು. ಬೇಲೂರಿನ ಉದ್ಭವ ನರಸಿಂಹಪುರಗ್ರಹಾರದಲ್ಲಿ ಬಾಲಕರಿಗೆ ಋಗ್ವೇದ, ಯಜುರ್ವೇದಗಳನ್ನು ಕಲಿಸಲಿಕ್ಕೆ ಉಂಬಳಿ ನೀಡಲಾಗಿತ್ತು. ಇನ್ನೂ ಕೆಲವೆಡೆ ಖಂಡಿಕೆ ಅಥವಾ ವೇದಗಳ ಭಾಗ(ಖಂಡ)ಗಳನ್ನು ಕಲಿಸಲಿಕ್ಕೆಂದೇ ಮೀಸಲಾದ ವೇಗಳ ಪ್ರಾಥಮಿಕ ಶಾಲೆಗಳಿದ್ದವು. ಬಹುಶಃ ವೇದಗಳ ಸರಳ ಪ್ರಾರ್ಥನೆಗಳು ಮತ್ತು ದೈನಂದಿನ ಪೂಜಾ ಪ್ರಕಾರದ ಋಕ್ಕುಗಳನ್ನು ಮಕ್ಕಳಿಗೆ ಕಂಠಪಾಠ

ಮಾಡಿಸುವುದಕ್ಕೆಂದೇ ಈ ಖಂಡಿಕೆಗಳು ಹುಟ್ಟಿಕೊಂಡಿರಬೇಕು. ಅಲ್ಲದೆ ಪದಪಾಠ ಪರಿಚಯ, ಕ್ರಮವಾಗಿ ಪದಗಳನ್ನು ಭೇದಿಸಿ 'ಅರಣ' ಬ್ರಾಹ್ಮಣ ಸೂತ್ರಗಳನ್ನು ರುದ್ರವನ್ನು ಪಠಿಸುವುದು ಖಂಡಿಕೆಗಳಲ್ಲಿ ನಡೆಯುತ್ತಿತ್ತು. ಕನ್ನಡ ಜೊತೆಗೆ ನಾಗರ, ತಿಗುಳ ಮತ್ತು ಆರ್ಯ ಎಂದರೆ ಸಂಸ್ಕೃತ, ಮರಾಠಿ, ತಮಿಳು ಭಾಷೆಗಳನ್ನು ಕೆಲವು ಅಗ್ರಹಾರಗಳಲ್ಲಿ ಕಲಿಸುತ್ತಿದ್ದರು. ವ್ಯಾಪಾರಕ್ಕಾಗಿ ದೇಶದ ಬೇರೆ ಬೇರೆ ಭಾಗಗಳಿಗೆ ಹೋಗಲಿಚ್ಛಿಸುವ ಮಕ್ಕಳಿಗೆ ಈ ಭಾಷಾಭ್ಯಾಸದಿಂದ ಹೆಚ್ಚಿನ ಲಾಭವಾಗುತ್ತಿದ್ದರಬೇಕು.

**ಅನೌಪಚಾರಿಕ ಶಿಕ್ಷಣ :** ನೇಯುವುದು, ಚಮ್ಮಾರಿಕೆ, ಕಮ್ಮಾರಿಕೆ, ಕುಂಬಾರಿಕೆ, ಹೂಗಾರ ವೃತ್ತಿ, ಉಳುವುದು, ಬಟ್ಟೆ ಹೊಲಿಯುವುದು, ಇನ್ನಿತರ ಕಾರ್ಯಗಳನ್ನು ನಿರ್ವಹಿಸುವುದನ್ನು ಸೂಕ್ಷ್ಮವಾಗಿ ಅನುಲಕ್ಷಿಸಿದಾಗ, ಈ ಕೆಲಸಗಳಲ್ಲಿಯು ಕುಶಲತೆಗಳು ಇರುವುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಇಂತಹುದೇ ಹತ್ತು ಹಲವು ಕುಶಲತೆಗಳ (ಶಿಕ್ಷಣ)ಜ್ಞಾನವನ್ನು ಅಂದಿನ ಸಮಾಜದಲ್ಲಿ ತಲೆಮಾರಿನಿಂದ ತಲೆಮಾರಿಗೆ, ವ್ಯಕ್ತಿಯಿಂದ ವ್ಯಕ್ತಿಗೆ ಅನೌಪಚಾರಿಕವಾದ ರೀತಿಯಲ್ಲಿ ತಂದೆಯಿಂದ ಮಗನಿಗೆ, ಹಿರಿಯರಿಂದ ಕಿರಿಯರಿಗೆ ದಾಟಿಸಲಾಗುತ್ತಿತ್ತು. ಈ ಕೆಲವು ವೃತ್ತಿಗಳು ಬದುಕಿಗೆ ಬಹಳ ಮುಖ್ಯವಾದ ಅವಶ್ಯಕಗಳಾಗಿದ್ದುದರಿಂದ ಇವುಗಳು ತೆರಿಗೆಯ ವ್ಯಾಪ್ತಿಯಲ್ಲೂ ಬರುತ್ತಿದ್ದವು. ಹಾಗಾಗಿ ಇಂತಹ ಕುಶಲ ಕಲೆಗಳನ್ನು ಪಾರಂಪರಿಕವಾಗಿ ಸಾತತ್ಯಗೊಳಿಸುವುದು ಅವಶ್ಯಕತೆಯಾಗಿತ್ತು.

**ಧಾರ್ಮಿಕ ಶಿಕ್ಷಣ :** ಸಲ್ಲೇಖನ ಸ್ಮಾರಕಗಳು, ನಿಸಿಧಿಗಲ್ಲುಗಳ ಮೇಲೆ, ಶಾಸನಗಳಲ್ಲಿ ಬೋಧನೆಯಲ್ಲಿ ತೊಡಗಿದ ಗುರುಗಳ ಚಿತ್ರಗಳನ್ನು ಗುರುತಿಸಬಹುದು. ಒಂದರಲ್ಲಿ, ಪೀಠದಲ್ಲಿ ಕುಳಿತು ಎಡಗೈಯಲ್ಲಿ ತಾಳೆಗರಿ ಹಿಡಿದು, ವಿದ್ಯಾದಾನ ಮಾಡುತ್ತಿದ್ದರೆ, ಇನ್ನೊಂದರಲ್ಲಿ ಪ್ರೌಢರಿಗೆ ಮೋಕ್ಷದ ಕಲ್ಪನೆ ಕೊಡುವಂತಿದೆ. ಈ ಗುರುಗಳ ಸಾಧನೆಗೆ ಕೊನೆಮೊದಲಿಲ್ಲ. ಅವರು ಬಿಟ್ಟುಹೋದ ಅಸಂಖ್ಯ ತಾಳೆಗರಿ ಮತ್ತಿತರ ಹಸ್ತಪ್ರತಿಗಳು ಈ ವರ್ಗದ ಅಧ್ಯಯನದ ಆಳವನ್ನು ಸೂಚಿಸುತ್ತವೆ. ಗುಣಭದ್ರ, ಕುಂದಕುಂದಾಚಾರ್ಯ, ಸಮಂತಭದ್ರ, ಶಾಕಟಾಯನ ಅನಂತವೀರ್ಯ, ಪ್ರಭಾಚಂದ್ರ, ಪೂಜ್ಯಪಾದ ಮೊದಲಾದ ಯತಿಗಳು ಜೈನಾಗಮಗಳಿಗೆ ವೃತ್ತಿ ಬರೆಯುವುದರ ಜೊತೆಗೆ ಶಾಸ್ತ್ರಗ್ರಂಥಗಳನ್ನು, ವ್ಯಾಕರಣ ಗ್ರಂಥಗಳನ್ನು ರಚಿಸಿದ್ದಾರೆ. ಜೈನರು ಇವುಗಳಿಗೆ ಧರ್ಮಗ್ರಂಥಗಳ ಸ್ಥಾನಮಾನವನ್ನು ಕೊಟ್ಟು ಎಚ್ಚರಿಕೆಯಿಂದ ಸಂರಕ್ಷಿಸಿಕೊಂಡು ಬಂದಿದ್ದಾರೆ. ಮೂಡಬಿದರೆ, ಶ್ರವಣಬೆಳಗೊಳ, ವಿದ್ಯಾಭಂಢಾರಗಳಲ್ಲಿ ಏಳೆಂಟು ಶತಮಾನಗಳಷ್ಟು ಹಳೆಯ ಹಸ್ತಪ್ರತಿಗಳಿವೆ. ಇಷ್ಟೆಲ್ಲ ಈ ಭಂಡಾರ ಶ್ರೀಮಂತಿಕೆಗೆ ಆಳರಸರ ಪ್ರೋತ್ಸಾಹ ಶ್ಲಾಘನೀಯವಾದುದು. ಅದರಲ್ಲೂ ಮುಖ್ಯವಾಗಿ ಹೊಯ್ಸಳರ ಕಾಲದಲ್ಲಿ ಮಹಾಮಂಡಲೇಶ್ವರರು ಬೇರೆ ಬೇರೆ ಪಂಥಗಳನ್ನು ಅನುಸರಿಸಿದರೂ ಜೈನಧರ್ಮ, ಶಿಕ್ಷಣಗಳಿಗೆ ಉದಾರಕೊಡುಗೆಯಿತ್ತಿದ್ದರು. ಬೌದ್ಧರು ಅನುಮಾನಿಸುತ್ತ ಭಿಕ್ಷುಣಿಯರನ್ನು ಸಂಘಕ್ಕೆ ಬರಮಾಡಿಕೊಂಡರೆ ಜೈನರು ಪ್ರಾರಂಭದಿಂದಲೇ ತೆರೆದ ಮನಸ್ಸಿನಿಂದ ಸನ್ಯಾಸಿನಿಯರನ್ನು ಸ್ವಾಗತಿಸಿದರು. ಧರ್ಮದಾನವೇ ತಮ್ಮ ಏಕೈಕ ಗುರಿ ಎಂದು ಸನ್ಯಾಸಿನಿಯಾಗಲು ಹೊರಟ ಹೆಂಗಳೆಯರಿಗೆ ಗುಜರಾತದ ತಪೋಗಚ್ಛ ವಿಶ್ವವಿದ್ಯಾನಿಲಯವು ಹೊಯ್ಸಳರ

ಕಾಲಘಟ್ಟದಲ್ಲಿಯೇ ಅಸ್ತಿತ್ವದಲ್ಲಿದ್ದು, ಹಲವಾರು ಕ್ಷೇತ್ರಗಳಲ್ಲಿ ಆಳವಾದ ತರಬೇತಿ ನೀಡುತ್ತಿತ್ತು. ಪಂಪನ ಆದಿಪುರಾಣದಲ್ಲಿ 'ಪಂಡಿತೆ'ಎಂಬ ದಾದಿಯು ಶ್ರೀಮತಿಗೆ ಓದು ಬರೆಹ ಚಿತ್ರಕಲೆಗಳನ್ನು ಕಲಿಸಿ ಪ್ರವೀಣೆಯನ್ನಾಗಿ ಮಾಡಿದ ಉಲ್ಲೇಖವು ದೊರೆಯುತ್ತದೆ.

**ಸಾಮೂಹಿಕ ಶಿಕ್ಷಣ :** ಪ್ರಾಚೀನ ಕಾಲದಿಂದಲೂ ನಮ್ಮ ನಾಡಿನ ಶಿಕ್ಷಣ ಪದ್ದತಿಯು ವಿವಿಧ ಹಂತಗಳಲ್ಲಿ ಬೆಳೆಯುತ್ತ ಬಂದು ವಿಕಾಸಗೊಂಡಿದೆ. ಆದರೆ ಅದು ಸಾಗಿ ಬಂದ ಹಾದಿ ಹೆಚ್ಚು ಸ್ಫುಟವಾಗಿ ನಮಗೆ ಗೋಚರಿಸುವುದಕ್ಕೆ ಆಧಾರಗಳ ಕೊರತೆಯಿದೆ. ಆದಾಗ್ಯೂ ಲಭ್ಯ ಆಕರಗಳಾದ ಪುರಾತನ ಅವಶೇಷಗಳು, ಶಾಸನಗಳು, ಪ್ರವಾಸಿ ಬರಹಗಳು, ಸಾಹಿತ್ಯಕೃತಿಗಳು ಕೆಲವೆಡೆ ವಿಸ್ತೃತ ವಿವರಗಳನ್ನು ಪೂರೈಸಿದರೆ, ಕೆಲವೆಡೆಯಲ್ಲಿ ಸಂಪೂರ್ಣವಾಗಿ ಮೌನವಾಗಿವೆ. ಗುರುಕುಲಗಳಲ್ಲಿ ನಡೆಯುತ್ತಿದ್ದ ಶಿಕ್ಷಣ ಪದ್ದತಿಯು ಕ್ರಮೇಣ ಸಂಸ್ಥೆಗಳ ಮೂಲಕ ಸಂಘಟಿತವಾಗಿ ಲಭ್ಯವಾಯಿತು. ಹೊಯ್ಸಳ ಮಹಾಮಂಡಳೇಶ್ವರರ ಆಳ್ವಿಕೆಯ ಕಾಲ ಮತ್ತು ಪ್ರದೇಶಗಳಲ್ಲಿ ಅವರು ಹಲವು ಅಗ್ರಹಾರಗಳನ್ನು, ಬ್ರಹ್ಮಪುರಿಗಳನ್ನು, ಮಠಗಳನ್ನು, ದೇಗುಲಗಳನ್ನು ಸ್ಥಾಪಿಸುವ ಹಿನ್ನೆಲೆಯಲ್ಲಿ ಸ್ಥಳೀಯವಾಗಿ ಶಿಕ್ಷಣ ಸೌಕರ್ಯವನ್ನು ಒದಗಿಸುವುದರ ಆಸಕ್ತಿಯನ್ನು ಗುರುತಿಸಬಹುದು. ಜೊತೆಗೆ ಅವರ ಸಾವಿರಾರು ಶಾಸನಗಳು ಹೆಚ್ಚು ಕನ್ನಡಯುಕ್ತ ಮತ್ತು ಕ್ವಚಿತ್ತಾಗಿ ಸಂಸ್ಕೃತದ ಬಳಕೆ ಮಾಡಿರುವುದರಿಂದ ಸಂಸ್ಕೃತದ ಜೊತೆಗೆ ಸ್ಥಳೀಯ ಭಾಷೆಯಾದ ಕನ್ನಡವನ್ನು ಈ ಶಿಕ್ಷಣ ಕೇಂದ್ರಗಳಲ್ಲಿ ಕಲಿಸುವ ಮತ್ತು ಸಾಹಿತ್ಯಾಭಿರುಚಿಗೆ ಹಚ್ಚುವ, ಸಾಹಿತ್ಯ ನಿರ್ಮಿತಿ ಮಾಡುವ ಸುಪ್ತಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸುವ ಕೆಲಸವನ್ನು ನಿರ್ವಹಿಸಲಾಗುತ್ತಿತ್ತು ಎಂದು ಊಹಿಸಬಹುದು. ಇಲ್ಲದೇ ಹೋಗಿದ್ದರೆ ಈ ಕಾಲಘಟ್ಟದಲ್ಲಿ ಇಷ್ಟೋಂದು ಸಾಹಿತ್ಯಕೃತಿಗಳು ನಿರ್ಮಾನವಾಗುತ್ತಿರಲಿಲ್ಲ.

**ಶಾರೀರಿಕ ಶಿಕ್ಷಣ :** ಹೊಯ್ಸಳ ಮಹಾಮಂಡಳೇಶ್ವರರಲ್ಲಿ ಎಲ್ಲರೂ ಸಹ ಮೊದಮೊದಲು ಸೇನಾಧಿಪತಿಗಳಾಗಿ ಸೇವೆಗೆ ಸೇರಿ ಕಾಲಕ್ರಮೇಣ ತಮ್ಮ ದಕ್ಷತೆ, ಸಾಮರ್ಥ್ಯ, ಪ್ರತಿಭೆಗಳಿಂದ ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದರು. ಅವರಿಗೆ ಗೌರವ ಪೂರ್ವಕವಾಗಿ ಸಂದಾಯವಾಗಿರುವ ಹಲವು ಬಗೆಯ ಬಿರುದುಗಳು ಅವರ ದೇಹದಾರ್ಢ್ಯತೆಯನ್ನು ಸುಸ್ಪಷ್ಟಗೊಳಿಸುತ್ತವೆ. ಬಹುಶಃ ಅಂದಿನ ಸಮಾಜದಲ್ಲಿ ಕೊಡಮಾಡುತ್ತಿದ್ದ ಅನೌಪಚಾರಿಕ ಶಿಕ್ಷಣಕ್ರಮದಲ್ಲಿ ಅದ್ಭುತವಾದ ಶಾರೀರಿಕ ದಕ್ಷತೆಗಾಗಿ ಶಾರೀರಿಕ ಶಿಕ್ಷಣವನ್ನು ನೀಡುತ್ತಿದ್ದರೆಂದು ತೋರುತ್ತವೆ.

**ಔಪಚಾರಿಕ ನಿಯೋಗಿಯಾಗಿ ಸಾಹಿತ್ಯ:** ಸಾಕ್ಷರಸ್ಥರ ಪ್ರಪಂಚದಲ್ಲಿ ಸಾಹಿತ್ಯದ ಪ್ರಾಮುಖ್ಯತೆಯು ಬಹಳವಾದುದು. ನಾವು ಆರ್ಜಿಸಿಕೊಂಡಿರುವ ನಾಗರಿಕತೆಯು ಸಾಹಿತ್ಯದ ಮೂಲಕ ಶಬ್ದ ಪ್ರಪಂಚದ ಮೂಲಕವೇ ರಚಿತವಾಗಿದೆ ಎಂದರೂ ಉತ್ಪ್ರೇಕ್ಷೆಯೇನಲ್ಲ. ಹೀಗಾಗಿ ಕವಿಗಳು ತಮ್ಮ ಕೃತಿಗಳ ಮೂಲಕ ನೀಡುವ ಸಂದೇಶಗಳು, ಅಭಿಪ್ರಾಯಗಳು, ಚಿಂತನೆಗಳು ಓದುವ ಅಥವಾ ಕೇಳುವ ಸಹೃದಯನ್ನು ಸಾಮಾಜೀಕರಣಗೊಳಿಸುವ ಪ್ರಕ್ರಿಯೆಯಲ್ಲಿ ತೊಡಗುತ್ತವೆ. ಅವುಗಳ ಅಂತಿಮ ಆಶಯ ಸಾಮಾಜಿಕವಾಗಿ ಒಳಿತು ಕಾಣುವ ಮತ್ತು ಬಯಸುವ, ಸ್ಥಾಪಿಸುವಂತಹುದೇ ಆಗಿರುತ್ತದೆ.

ಸಮಾಜದ ಮಧ್ಯದಲ್ಲಿ ಬಾಳುವುದಕ್ಕೆ ಸಾಕಷ್ಟು ಆತ್ಮಸಂಯಮ ಅಥವಾ ಸ್ವನಿಯಂತ್ರಣ ಅವಶ್ಯಕ. ಸ್ವ ನಿಯಂತ್ರಣವನ್ನು ಬೆಳೆಸಿಕೊಳ್ಳುವುದಕ್ಕೆ ಸಂಬಂಧಿಸಿದ ಶಿಕ್ಷಣವು ತರಬೇತಿ ನೀಡುತ್ತದೆ ತರಬೇತಿ ನೀಡಲ್ಪಡುವ ಪಠ್ಯವು ಸಾಹಿತ್ಯಕೃತಿಗಳೆ ಆಗಿರುತ್ತವೆ ಎಂಬುದು ವಿಶೇಷ. ಉದಾ: ಸ್ತ್ರೀಯರ ಪಾತಿವ್ರತ್ಯ ಗುಣಗಳನ್ನು ಮನದುಂಬಿ ಹೊಗಳುವ ಶಾಸನ ಸಾಹಿತ್ಯ ಒಂದೆಡೆಯಾದರೆ, ಗಂಡನನ್ನು ದಿಕ್ಕರಿಸಿ ಹೊರಟ ಸತಿಗೆ ಒದಗುವ ರವರವ ನರಕದ ಪರಿಕಲ್ಪನೆಯನ್ನು ನೀಡುವ ಜನ್ನನ ಯಶೋಧರಚರಿತೆ ಮತ್ತೊಂದೆಡೆ ಇದೆ. ದಾನವನ್ನು ಉಳಿಸಿದರೆ ಒದಗುವ ಪುಣ್ಯವನ್ನು ಮತ್ತು  ಹಾಳುಗೆಡಹಬಾರದೆಂಬ ಸ್ವನಿಯಂತ್ರಣವನ್ನು ಶಾಪಾಶಯದ ಭಾಗವು ಬೋಧಿಸುತ್ತದೆ. ಒಟ್ಟಿನಲ್ಲಿ ಈ ಸಾಮಾಜಿಕ ಸಂಸ್ಥೆಗಳು ಸಾಮಾಜಿಕ ಜೀವನದ ಅತ್ಯವಶ್ಯ ಅಂಶಗಳನ್ನು ಕಾಪಿಡುವುದರ ಮೂಲಕ ವ್ಯವಸ್ಥೆಯ ನಿರಂತರತೆಗೆ ಕಾರಣವಾಗಿವೆ. ಸಾಮಾಜಿಕ ಪರಂಪರೆಯ ವರ್ಗಾವಣೆಗೂ ಅವು ಸಹಾಯಕವಾಗಿವೆ. ಸಂಸ್ಥೆಗಳ ನಿಯಂತ್ರಣ ಸ್ವರೂಪವು ಸಾಮಾಜಿಕ ಏಕತೆ ಮತ್ತು ಏಕರೂಪತೆಗೆ ಕಾರಣವಾಗುತ್ತವೆ.

**ಶೈಕ್ಷಣಿಕ ಸಾಧನಗಳು :** ಹೊಯ್ಸಳ ಅರಸರು ಹಿಂದಿನ ಆಳರಸರಂತೆ ಶಾಸನಗಳನ್ನು ಶಿಲಾಫಲಕದ ಮೇಲೆ ಬರೆಯಿಸಿ ಎಲ್ಲರ ಕಣ್ಣಿಗೆ ಬೀಳುವಂತೆ ನಿಲ್ಲಿಸುವ ಪರಿಪಾಠವನ್ನು ಮುಂದುವರೆಸಿದರು. ಅರಸರು. ಅಧಿಕಾರಿಗಳು, ದಾನಿಗಳು ತಮ್ಮ ಜೀವನದ ಮಹತ್ವದ ದಾನ ಪ್ರಸಂಗಗಳನ್ನು ಬೇರೆ ಬೇರೆ ತಜ್ಞರೊಡನೆ ಚರ್ಚಿಸಿ ಅವುಗಳನ್ನು ಬರವಣಿಗೆಗೆ ಇಳಿಸಲು ವಿನಂತಿಸಿಕೊಳ್ಳುತ್ತಿದ್ದರು. ಶಾಸನಗಳಲ್ಲಿ ಸೇರಿಸಬೇಕಾಗಿದದ ಭಾಷೆಯನ್ನು ತಿದ್ದಿ, ಅಕ್ಷರಗಳನ್ನು ತೀಡಿ ಪರಷ್ಕೃತ ಪಾಠ ಸಿದ್ಧವಾದಾಗ ಅದನ್ನು ಲಿಪಿಕಾರನು ಬಳಪದಿಂದ ಶಿಳಾಫಲಕದ ಮೇಲೆ ಬರೆಯುತ್ತಿದ್ದ. ನಂತರ ಶಿಲ್ಪಿಯು ಎಚ್ಚರಿಕೆಯಿಂದ ಆಯ್ದ ಶಿಲಾಫಲಕದ ಮೇಲೆ ಅಕ್ಷರಗಳನ್ನು ಒಂದೊಂದಾಗಿ ಕೊರೆಯುತ್ತಿದ್ದ.

ಶ್ರವಣಬೆಳಗೊಳದ ಚಂದ್ರಗಿರಿಯಲ್ಲಿ ಜೈನಯತಿ ಮಲ್ಲಿಷೇಣನ ಗೌರವಾರ್ಥವಾಗಿ ನಿಲ್ಲಿಸಿದ ಶಾಸನವನ್ನು ಮಲಧಾರಿ ದೇವರ ಶಿಷ್ಯ "ಮದನ ಮಹೇಶ್ವರ" ಎಂಬ ಬಿರುದು ಇದ್ದ ಮಲ್ಲಿನಾಥನು ಬರೆದಿದ್ದಾನೆ. ಅದನ್ನು ಶಾಸನವಾಗಿ ರೂಪಿಸಿದವನು "ಬಿರುದು ರೂವಾರಿ ಮುಖ ತಿಳಕ" ನೆಂದು ಬಿರುದು ಪಡೆದ ಗಂಗಾಚಾರಿ. ಚಿತ್ರದುರ್ಗದ ಶಾಸನವೊಂದನ್ನು ರೂಪಿಸಿದ ರುದ್ರರೂವಾರಿ ಮಹಾಕಾಳನು ಅಕ್ಷರಗಳಲ್ಲಿ ಆನೆ, ಸಿಂಹ, ಗಿಳಿ ಮುಂತಾದವುಗಳನ್ನು ಸೇರಿಸುವುದರಲ್ಲಿ ಅತ್ಯಂತ ನಿಪುಣನಾಗಿದ್ದನಂತೆ.

➢ ಸಮಾಜದಲ್ಲಿ ಅನಕ್ಷರಸ್ಥರ ಸಂಖ್ಯೆಯೇ ಹೆಚ್ಚಾಗಿದ್ದುದರಿಂದ ಕೇವಲ ಶಾಸನಗಳನ್ನು ಬರೆಸಿದರೆ ಅದರ ಲಾಭ ಪಡೆಯುವವರು ತೀರ ಕಡಿಮೆ ಜನವೆಂದು, ಶಿಲಾಶಾಸನಗಳಲ್ಲಿ ಉಬ್ಬು ಚಿತ್ರಗಳನ್ನು ಸೇರಿಸಲಾರಂಭಿಸಿದರು. ಇದರಿಂದ ಅರಿಯದವರು ಚಿತ್ರದ ವಿವರಗಳನ್ನು ತಿಳಿದುಕೊಳ್ಳಲು ಸಹಾಯವಾಯಿತು. ಕೆಲವು ಶಾಸನಗಳಲ್ಲಂತೂ ಬರವಣಿಗೆ ಹಿಂದಕ್ಕೆ ಸರಿದು ಚಿತ್ರಗಳೇ ಪ್ರಾಮುಖ್ಯತೆಯನ್ನು ಪಡೆದದ್ದೂ ಇದೆ. ಇದನ್ನು ಹೆಚ್ಚಾಗಿ ವೀರಗಲ್ಲು ಮತ್ತು ನಿಸಿಧಿಗಲ್ಲುಗಳಲ್ಲಿ ಕಾಣಬಹುದು. ಹೀಗಾಗಿ ಶಿಲಾ

ಸಮೂಹಗಳೇ ಅಂದು ಪ್ರಮುಖವಾದ ಜನಸಂಪರ್ಕಕ್ಕೆ ನಿಲುಕುವ ಜ್ಞಾನವನ್ನು ಪ್ರವಹಿಸುವ ಮತ್ತು ಆ ಮೂಲಕ ಸಾಂಸ್ಕೃತಿಕವಾದ ಅರಿವನ್ನು ಮೂಡಿಸುವ ಶೈಕ್ಷಣಿಕ ಸಾಧನವಾಯಿತು.

**6.3 ಸಾಮಾಜಿಕ ಅಂತಃಕ್ರಿಯೆ:**

ಸಮಾಜದ ನಿರ್ಮಿತಿಗೆ ಕಾರಣರಾದ ವ್ಯಕ್ತಿಗಳು ಪರಸ್ಪರ ಹತ್ತಿರ ಬಂದು ಒಡನಾಟ ನಡೆಸುವುದನ್ನು ಸಾಮಾಜಿಕ ಅಂತಃಕ್ರಿಯೆ ಎನ್ನುವರು. ಇಲ್ಲಿ ಒಬ್ಬರ ಕ್ರಿಯೆಗಳು ಇನ್ನೊಬ್ಬಾತನ ಕ್ರಿಯೆಗಳ ಮೇಲೆ ಪ್ರಭಾವ ಬೀರುತ್ತಾ ಅಥವಾ ಪ್ರಭಾವಕ್ಕೆ ಒಳಪಡುತ್ತಾ ಸಾಗುತ್ತದೆ. ಇದು ಜನರನ್ನು 'ಸಮೂಹ–ಸಮುದಾಯ–ಸಮಾಜ'ಗಳ ರೂಪದಲ್ಲಿ ಬೆಸೆಯುವ ಶಕ್ತಿಯಾಗಿದೆ.

**6.3.1 ಸಾಮಾಜಿಕ ಅಂತಃಕ್ರಿಯೆಯ ಮೂಲಾಂಶಗಳು: ಸಂಪರ್ಕ ಮತ್ತು ಸಂವಹನ** : ಈ ಸಾಮಾಜಿಕ ಅಂತಃಕ್ರಿಯೆಯ ಮೂಲಾಂಶಗಳು ಎರಡು. ಅವುಗಳೆಂದರೆ, ಒಂದು ಸಂಪರ್ಕ ಮತ್ತು ಸಂವಹನ. ಇದರಲ್ಲಿ ಮೊದಲನೆಯದರ ಬಗ್ಗೆ ವಿವೇಚಿಸುವುದಾದರೆ, ಸಂಪರ್ಕವಿಲ್ಲದೆ ಅಂತಃಕ್ರಿಯೆ ಏರ್ಪಡದು. ಇದು ಸಾಮಾಜಿಕ ಅಂತಃಕ್ರಿಯೆಯ ಆರಂಭಿಕ ಹಂತವಾಗಿದ್ದು, ಸಾಮಾಜಿಕ ಘಟಕಗಳಂತಿರುವ ವ್ಯಕ್ತಿಗಳನ್ನು ಪರಸ್ಪರ ಹತ್ತಿರ ತರುವುದು. ಸಂಪರ್ಕವು ವ್ಯಕ್ತಿಗಳನ್ನು ಮಾನಸಿಕವಾಗಿ ಹಾಗೂ ದೈಹಿಕವಾಗಿ ಹತ್ತಿರ ತರುವಂತಹ ಒಂದು ಪ್ರಯತ್ನವಾಗಿರುತ್ತದೆ. ಇದು ಪರಸ್ಪರ ಪ್ರತಿಕ್ರಿಯೆಯನ್ನು ಒಳಗೊಂಡಿರುತ್ತದೆ. ಅಲ್ಲದೆ ಒಬ್ಬರು ಮತ್ತೊಬ್ಬರ ವರ್ತನೆಯನ್ನು ಅಥವಾ ಕ್ರಿಯೆಯನ್ನು ಅರ್ಥೈಸಿಕೊಂಡು ಅದರೊಂದಿಗೆ ಹೊಂದಿಕೊಳ್ಳುವಂತಹ ಮಾನಸಿಕ ಸಿದ್ದತೆಯ ಅಂಶವನ್ನು ಕೂಡ ಒಳಗೊಂಡಿರುತ್ತದೆ.

ಸಂಪರ್ಕದಲ್ಲಿ ಎರಡು ಪ್ರಕಾರಗಳಿವೆ. ಅವೆಂದರೆ: ಒಂದು, ಸಾಮಯಿಕ ಸಂಪರ್ಕ, ಇನ್ನೊಂದು ಪ್ರಾದೇಶಿಕ ಸಂಪರ್ಕ. ಸಾಮಾಯಿಕ ಸಂಪರ್ಕವು ವ್ಯಕ್ತಿಗಳು ತಮಗಿಂತಲೂ ಹಿರಿಯ ತಲೆಮಾರಿನ ಜನರೊಂದಿಗೆ ರೂಢಿ, ಸಂಪ್ರದಾಯಗಳು, ಲೋಕಾಚಾರಗಳು, ನಿಯಮಗಳು, ಮೌಲ್ಯಗಳು, ಆಚರಣೆಗಳು ಮುಂತಾದವು ಗಳನ್ನೊಳಗೊಂಡ ಜೀವನಕ್ರಮದ ಮೂಲಕ ಹೊಂದಿರುವ ಸಂಪರ್ಕವನ್ನು ಸೂಚಿಸುವುದು. ಇದು ಪರೋಕ್ಷ ಸ್ವರೂಪದ ಸಂಪರ್ಕ. ಪ್ರಾದೇಶಿಕ ಸಂಪರ್ಕವು ನಿರ್ದಿಷ್ಟ ಪ್ರದೇಶದಲ್ಲಿ ಸಮಕಾಲೀನ ವ್ಯಕ್ತಿಗಳು ಮತ್ತು ಸಮೂಹಗಳೊಳಗಿನ ಸಂಪರ್ಕವನ್ನು ಸೂಚಿಸುವುದು. ಸಂವಹನವು ಸಾಮಾಜಿಕ ಅಂತಃಕ್ರಿಯೆಯ ಮಾಧ್ಯಮ ವಾಗಿರುತ್ತದೆ. ಸಂವಹನದ ಮೂಲಕ ಒಬ್ಬಾತನು ಇನ್ನೊಬ್ಬಾತನ ಅಭಿಪ್ರಾಯಗಳನ್ನು ಆಲೋಚನೆಗಳನ್ನು ಭಾವನೆಗಳನ್ನು ಕ್ರಿಯೆಗಳನ್ನು ಅಥವಾ ವರ್ತನೆಗಳನ್ನು ಅರ್ಥೈಸಿಕೊಂಡು ಅದಕ್ಕನುಸಾರವಾಗಿ ಪ್ರತಿಕ್ರಿಯಿಸಲು ಸಾಧ್ಯವಾಗುವುದು.

ಪಾರ್ಕ್ ಮತ್ತು ಬರ್ಗೆಸ್ ಎಂಬ ಸಮಾಜಶಾಸ್ತ್ರಜ್ಞರ ಪ್ರಕಾರ ಸಂವಹನದಲ್ಲಿ ಎರಡು ವಿಧಗಳಿವೆ. ಅವುಗಳೆಂದರೆ, ಒಂದು ಸಂವೇದನಾತ್ಮಕ ಸಂವಹನ, ಇನ್ನೊಂದು ಸಂವೇಗಾತ್ಮಕ ಸಂವಹನ.

ಸಂವೇದನಾತ್ಮಕ ಸಂವಹನದಲ್ಲಿ ಪಂಚೇಂದ್ರಿಯಗಳು ಅಥವಾ ಜ್ಞಾನೇಂದ್ರಿಯಗಳ ಮುಖಾಂತರ ವಿಚಾರ ವಿಷಯಗಳನ್ನು ಗ್ರಹಿಸುವ ಹಾಗೂ ಅಭಿವ್ಯಕ್ತಗೊಳಿಸುವ ಪ್ರಯತ್ನವಿರುತ್ತದೆ.[72] ಉದಾ: ನೋಡುವುದು, ಕೇಳುವುದು, ಇತ್ಯಾದಿ. ಸಂವೇಗಾತ್ಮಕ ಸಂವಹನದಲ್ಲಿ ಮನಸ್ಸಿನಲ್ಲಿ ಉತ್ಪನ್ನವಾಗುವ ಆವೇಗಗಳನ್ನು ವ್ಯಕ್ತಪಡಿಸುವ ರೀತಿ ಸಂವಹನಕ್ಕೆ ಕಾರಣವಾಗುವುದು. ದುಃಖ, ಸಂತಸ, ಲಜ್ಜೆ, ಕೋಪ, ಗಂಭೀರತೆ, ಮತ್ಸರ ಮುಂತಾದ ಮನಸ್ಸಿನ ಆವೇಗಗಳು ಮುಖಭಾವ ಮತ್ತು ಭಾವಾಭಿನಯದ ಮೂಲಕ ವ್ಯಕ್ತವಾಗುವುವು. ಉದಾ: ಬೆಟ್ಟರಸ ದಂಡನಾಯಕನು ತನ್ನ ಮನಸ್ಸಂತೋಷಕ್ಕಾಗಿ ಪ್ರತಾಪಪುರವೆನಿಸಿದ ಅಂಮೆಳೆ ಅಶೇಷದ್ವಾದಶಪುರದ ಅಶೇಷ ಮಹಾಜನರು ಮತ್ತು ಪಟ್ಟಣಸ್ವಾಮಿ ಸಿರೆಯ ಪದ್ಮಣ ಮೊದಲಾದ ಸಮಸ್ತ ನಖರಗಳ ಸಮ್ಮುಖದಲ್ಲಿ ಅಮ್ಮೆಳೆಯ ಊರೊಡೆಯ ಮಾಚಯ್ಯ ಮೊದಲಾದ ಸಮಸ್ತ ಪ್ರಜೆಗಾವುಂಡರ ಸಿದ್ದಾಯದಲ್ಲಿ 10 ಗದ್ಯಾಣಗಳನ್ನು ದೇವದಾನವಾಗಿ ಪಂಚಮಠದ ದೇವರುಗಳಿಗೆ ಮತ್ತು 2 ಬಸದಿಗಳಿಗೆ ಮತ್ತು ಊರಿನ ಎಲ್ಲ ದೇವರುಗಳಿಗೆ ಸರ್ವಬಾದಾ ಪರಿಹಾರರ್ಥವಾಗಿ ದಾನವಿತ್ತನು.[73]

**6.3.2 ಸಾಮಾಜಿಕ ಪ್ರಕ್ರಿಯೆ:** ಸಮಾಜಶಾಸ್ತ್ರಜ್ಞರು ಪರಸ್ಪರ ಪ್ರಚೋದನೆ ಮತ್ತು ಪ್ರತಿಕ್ರಿಯೆಗಳ ಮೂಲಕ ಮಾನವರು ಒಬ್ಬರು ಇನ್ನೊಬ್ಬರ ಮೇಲೆ ಪರಸ್ಪರ ಪ್ರಭಾವ ಬೀರುವುದಕ್ಕೆ ಸಾಮಾಜಿಕ ಅಂತಃಕ್ರಿಯೆ ಎಂದು ಕರೆದಿದ್ದಾರೆ. ಎನ್.ಪಿ.ಗಿಶ್ ಹೇಳುವ ಹಾಗೆ ಸಮಾಜದ ಗತಿಶೀಲ ಅಂಶಗಳಾದ ಸಾಮಾಜಿಕ ಅಂತಃಕ್ರಿಯೆಯಗಳು ವಿವಿಧ ರೂಪಗಳನ್ನು ತಳೆಯುತ್ತಿರುತ್ತವೆ. ಉದಾ: ಸಹಕಾರದಿಂದ ದುಡಿಯುವ ಮಂದಿ ಒಮ್ಮೊಮ್ಮೆ ಪೈಪೋಟಿ ನಡೆಸಬಹುದು. ಈ ಪೈಪೋಟಿಯು ಮುಂದುವರಿದು ಸಂಘರ್ಷಕ್ಕೆ ಕಾರಣವಾಗಿ ಗಂಭೀರವಾದ ರೂಪವನ್ನು ಪಡೆಯಲುಬಹುದು. ಇಂತಹ ಸಂದರ್ಭಗಳಲ್ಲಿ ಸಾಮಾಜಿಕ ಅಂತಃಕ್ರಿಯೆಯು ಜನರನ್ನು ಹತ್ತಿರಕ್ಕೆ ತರಲು ಸಹಾಯಮಾಡುತ್ತದೆ. ಒಮ್ಮೊಮ್ಮೆ ಅದು ಜನರನ್ನು ಮತ್ತಷ್ಟು ದೂರಸರಿಯುವಂತೆಯೂ ಮಾಡಬಹುದು. ಇಂತಹ ಕೆಲವು ಅಂತಃಕ್ರಿಯೆಗಳು ತಳೆಯುವ ವಿವಿಧ ರೂಪಗಳನ್ನು ಸಾಮಾಜಿಕ ಪ್ರಕ್ರಿಯೆಗಳೆಂದು ಕರೆಯುತ್ತೇವೆ.

ಸಾಮಾಜಿಕ ಜೀವನದಲ್ಲಿ ಸಾಮಾನ್ಯವಾಗಿ ಕಂಡುಬರುವ ಪುನರಾವರ್ತನೆ ಸ್ವರೂಪದ ವರ್ತನೆಯ ಬಗೆಗಳನ್ನು ಸಾಮಾಜಿಕ ಪ್ರಕ್ರಿಯೆಗಳು ಎಂದು ಸಮಾಜಶಾಸ್ತ್ರಜ್ಞರು ಕರೆಯುತ್ತಾರೆ[74] ಈ ಸಾಮಾಜಿಕ ಪ್ರಕ್ರಿಯೆಗಳಲ್ಲಿ ಪ್ರಧಾನವಾಗಿ ಸಹಕಾರ, ಸ್ಪರ್ಧೆ, ಸಂಘರ್ಷ, ಹೊಂದಾಣಿಕೆ ಮತ್ತು ಸ್ವಾಂಗೀಕರಣ ನಾಲ್ಕು ಮೂಲಭೂತವಾದ ರೂಪಗಳಿವೆ. ಇವುಗಳ ಪ್ರತಿಫಲನವು ಹೊಯ್ಸಳ ಮಹಾಮಂಡಳೇಶ್ವರರ ಆಳ್ವಿಕೆಯ ಪ್ರದೇಶ ಮತ್ತು ಪರಿಸರಗಳಲ್ಲಿ ಹೇಗಿತ್ತು ಎಂಬುದನ್ನು ಈಗ ಕಾಣಬಹುದು:

**6.3.2.1 ಸಹಕಾರ:** ಸಾಮಾನ್ಯವಾಗಿ ಹೇಳುವುದಾದರೆ, ಸಹಕಾರವೆಂಬುದು ಸಾಮಾನ್ಯ ಉದ್ದೇಶಗಳನ್ನು ಸಾಧಿಸಲು ಅಥವಾ ಪರಸ್ಪರ ಹಂಚಿಕೊಳ್ಳಬಹುದಾದ ಪ್ರತಿಫಲಗಳನ್ನು ಪಡೆಯಲು ಜನರು ನಡೆಸುವ ಜಂಟಿ ಪ್ರಯತ್ನವಾಗಿದೆ. ಈ ಸಹಕಾರ ಪರಿಕಲ್ಪನೆಯಲ್ಲಿ ಸಾರ್ವತ್ರಿಕತೆ, ನಿರಂತರತೆ, ಸಾಮಾನ್ಯ ಉದ್ದೇಶಗಳ ಗ್ರಹಿಕೆ, ಕೂಡಿ ದುಡಿಯುವಿಕೆ ಈ ಅಂಶಗಳು ಮಿಳಿತವಾಗಿರುತ್ತವೆ. ಎಲ್ಲಕ್ಕಿಂತ ಮಿಗಿಲಾಗಿ

ಸಹಕಾರವು ಸಾಮಾಜಿಕ ಅಗತ್ಯತೆಯಾಗಿರುತ್ತದೆ. ಕುಟುಂಬದಲ್ಲಿನ ಸ್ತ್ರೀ ಪುರುಷರ ನಡುವಿನ ಸಹಕಾರವು ಅನಿವಾರ್ಯವಾಗಿರುತ್ತದೆ. ಈ ನೆಲೆಯಲ್ಲಿ ಯೋಚಿಸಿದಾಗ ಸಹಕಾರವು ಜೈವಿಕ ಮಟ್ಟದಲ್ಲಿಯೂ ಅಗತ್ಯವಾಗಿರುತ್ತದೆ.

ಸಹಕಾರದಲ್ಲಿ ಪ್ರತ್ಯಕ್ಷ ಸಹಕಾರ ಮತ್ತು ಪರೋಕ್ಷ ಸಹಕಾರ ಎಂಬ 2 ಬಗೆಗಳಿವೆ. ಪ್ರತ್ಯಕ್ಷ ಸಹಕಾರದಲ್ಲಿ ವ್ಯಕ್ತಿಗಳು ಸಾಮಾನ್ಯವಾಗಿ ತಮ್ಮ ಸಮಾನ ಗುರಿಯನ್ನು ಸಾಧಿಸಲು ಒಮ್ಮತದಿಂದ ಒಂದೇ ಕಾರ್ಯದಲ್ಲಿ ನಿರತವಾಗಿರುತ್ತಾರೆ. ಒಟ್ಟಿಗೆ ರೈತರು ಹೊಲದಲ್ಲಿ ದುಡಿಯುವುದು, ಒಟ್ಟಿಗೆ ಕೈಗಾರಿಕೆಗಳಲ್ಲಿ ಕೆಲಸ ಮಾಡುವುದು , ಒಟ್ಟಿಗೆ ಉತ್ಸವ ಮತ್ತು ಧಾರ್ಮಿಕ ಸಮಾರಂಭಗಳನ್ನು ನಡೆಸುವುದು ಇತ್ಯಾದಿ. ಇಂತಹ ಸಹಕಾರವು ವ್ಯಕ್ತಿಗಳಲ್ಲಿ ಅನ್ಯೋನ್ಯತೆಯನ್ನು ಐಕ್ಯತೆಯನ್ನು ಬೆಳೆಸುವುದು ಮಾತ್ರವಲ್ಲದೆ ವ್ಯಕ್ತಿಗಳಿಗೆ ಮತ್ತು ಸಮೂಹಗಳಿಗೆ ಸಾಮಾಜಿಕ ಸಂತೃಪ್ತಿಯನ್ನು ತರುವುದು. ಪ್ರಾಥಮಿಕ ಸಮೂಹಗಳಾದ ಕುಟುಂಬ, ಗ್ರಾಮ–ಪಟ್ಟಣ ಸಮುದಾಯ ಮತ್ತು ನೆರೆಹೊರೆಗಳಲ್ಲಿ ಈ ಬಗೆಯ ಸಹಕಾರವು ಹೆಚ್ಚಾಗಿ ಕಂಡುಬರುವುದು. ಉದಾಹರಣೆಗೆ: ಸಾಮಂತನಾಗಿದ್ದ ಮುದ್ದನು ತಾನಿದ್ದ ಪ್ರದೇಶದಲ್ಲಿ ಜನರೊಂದಿಗೆ ಎಷ್ಟು ಸಹಕಾರಯುತವಾದ ಧೋರಣೆಯನ್ನು ಅನುಸರಿಸಿದ್ದನು ಎಂಬುದನ್ನು ಶಾಸನ ಪದ್ಯವೇ ತಿಳಿಯಪಡಿಸುತ್ತದೆ–

**ಕವಿಗಳ ಮುದ್ದನಾಶ್ರಿತರ ಮುದ್ದನನಾಥರ ಮುದ್ದನಿಷ್ಟ ರ**

**ಷ್ಟವರ್ಗದ ಮುದ್ದನರ್ತ್ಥಿಗಳ ಮುದ್ದನದಣ್ಣೆಲೆಗೊಂಡರಿಷ್ಟ ಬಾ**

**ನ್ಧವರೆಸೆವೊನ್ದು ಮುದ್ದನೆಸವಂ ಪರಿವಾರದ ಮುದ್ದನಂಗನಾ**

**ನಿವಹದ ಮುದ್ದ ನೆಯ್ದೆ ಸಲಿಪಂ ಪ್ರಭು ಮುದ್ದನಿಳಾತಳಾಗ್ರದೊಳ್**[75]

ಪರೋಕ್ಷ ಸಹಕಾರದಲ್ಲಿ ವ್ಯಕ್ತಿಗಳು ವೈಯಕ್ತಿಕ ನೆಲೆಯಲ್ಲಿ ವಿವಿಧ ಬಗೆಯ ಕಾರ್ಯಗಳಲ್ಲಿ ಕೆಲಸ ಮಾಡುತ್ತಾರಾದರೂ ಅವರ ಉದ್ದೇಶವು ಒಂದೇ ಆಗಿರುವುದು. ಈ ಬಗೆಯ ಸಹಕಾರವು ಶ್ರಮವಿಭಜನೆ ಮತ್ತು ವಿಶೇಷ ಪರಿಣತಿಯ ತತ್ವಗಳನ್ನು ಆಧರಿಸಿದೆ. ಉದಾಹರಣೆಗೆ ಶಿಕ್ಷಣ ಸಂಸ್ಥೆಗಳು, ಧಾರ್ಮಿಕ ಸಂಸ್ಥೆಗಳು.

**6.3.2.2 ಸ್ಪರ್ಧೆ:** ಸಹಕಾರದಂತೆ ಸ್ಪರ್ಧೆಯೂ ಕೂಡಾ ಒಂದು ಸಾರ್ವತ್ರಿಕವಾದ ಹಾಗೂ ಮೂಲಭೂತವಾದ ಸಾಮಾಜಿಕ ಪ್ರಕ್ರಿಯೆಯಾಗಿದೆ. ತನ್ನ ಅಸ್ತಿತ್ವಕ್ಕಾಗಿ ನಡೆಸುವ ಹೋರಾಟದ ಫಲವಾಗಿರುವ ಸ್ಪರ್ಧೆಯು ಜನರು ಸಾಮಾನ್ಯವಾಗಿ ಬಯಸುವ ವಸ್ತುಗಳು ಪೂರೈಕೆಯಲ್ಲಿ ಸೀಮಿತವಾದಾಗ ಅವುಗಳನ್ನು ಪಡೆಯಲು ಅನಿವಾರ್ಯ ವಾಗುವುದು. "ಸ್ಪರ್ಧೆಯು ಎಲ್ಲಾ ಪ್ರತಿಸ್ಪರ್ಧಿಗಳನ್ನು ಹಿಂದೆ ತಳ್ಳಿ ಪ್ರತಿಫಲದ ಮೇಲೆ ಏಕಸ್ವಾಮ್ಯವನ್ನು ಸ್ಥಾಪಿಸುವ ಪ್ರಯತ್ನವೇ ಆಗಿರುತ್ತದೆ"[76] ಸಂಪತ್ತು, ಕೀರ್ತಿ, ಸ್ಥಾನಮಾನಗಳಿಗಾಗಿ

ನಡೆಯುವ ಸ್ಪರ್ಧೆಯು ಸಾಮಾಜಿಕತೆಯಲ್ಲಿ ಒಂದು ನಿರಂತರ ಪ್ರಕ್ರಿಯೆಯಾಗಿದೆ. ರಚನಾತ್ಮಕ ಸ್ಪರ್ಧೆಯಿಂದ ಎಲ್ಲರಿಗೂ ಲಾಭವಾಗುವುದನ್ನು ನಾವು ಗಮನಿಸಬಹುದು.

**6.3.2.3 ಸಂಘರ್ಷ:** ಹಾರ್ಟನ್ ಮತ್ತು ಹಂಟ್‌ರವರ ಪ್ರಕಾರ, "ಎದುರಾಳಿಗಳನ್ನು ದುರ್ಬಲಗೊಳಿಸುವ ಅಥವಾ ನಾಶ ಪಡಿಸುವುದರ ಮೂಲಕ ಪ್ರತಿಫಲಗಳ ಮೇಲೆ ಏಕಸ್ವಾಮ್ಯವನ್ನು ಸ್ಥಾಪಿಸುವ ಪ್ರಕ್ರಿಯೆಯೇ ಸಂಘರ್ಷವಾಗಿದೆ". ಎಷ್ಟೋ ವೇಳೆ ಮಿತಿಮೀರಿದ ಸ್ಪರ್ಧೆಯು ಸಂಘರ್ಷದಲ್ಲಿ ಪರ್ಯಾವಸಾನವಾಗುವುದು. ಇದು ಬಹುವೇಳೆ ಗಂಭೀರ ಪರಿಣಾಮಗಳಿಗೆ ಕಾರಣವಾಗುವುದು. ಕಾರ್ಲ್ ಮಾರ್ಕ್ಸ್ ಹೇಳುವಂತೆ "ಇದುವರೆಗಿನ ಮಾನವ ಸಮಾಜದ ಇತಿಹಾಸವು ವರ್ಗ ಸಂಘರ್ಷದ ಇತಿಹಾಸವೇ ಆಗಿದೆ." ಹಾಗಾಗಿ ಸಂಘರ್ಷವು ಸಾರ್ವತ್ರಿಕ ಸ್ವರೂಪವನ್ನು ಪಡೆದಿದೆ. ಜೊತೆಗೆ ಎದುರಾಳಿಗಳನ್ನು ಉರುಳಿಸಲೇಬೇಕೆಂಬ ಗುರಿಯಿಟ್ಟುಕೊಂಡಿರುವ ವ್ಯಕ್ತಿಗಳು ಪ್ರಜ್ಞಾ ಪೂರ್ವಕವಾಗಿಯೇ ಹೋರಾಡಲು ಅನುವಾಗುವುದರಿಂದ ಇದು ಒಂದು ಪ್ರಜ್ಞಾಪೂರ್ವಕ ಪ್ರಕ್ರಿಯೆಯೂ ಆಗಿದೆ. ಸಂಘರ್ಷವು ವೈಷಮ್ಯಕ್ಕೆ ಕಾರಣವಾಗಿರುವ ವಿಷಯಗಳನ್ನು ಸೂಚಿಸುವುದು. ಉದಾ: ರಾಜಕೀಯ, ಆರ್ಥಿಕ, ಧಾರ್ಮಿಕ, ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಮತ್ತು ವಿವಾದಗಳು ಸಂಘರ್ಷಕ್ಕೆ ಕಾರಣವಾಗುವುದು. ಇದಕ್ಕೆ ಉದಾಹರಣೆಯಾಗಿ ಮಹಾಮಂಡಳೇಶ್ವರನಾದ ಗಂಗರಾಜನು ತನ್ನ ಹಿಂದಿನ ಗಂಗದೊರೆಗಳೊಂದಿಗೆ ಚೋಳರಿಂದ ಕಂಟಕವನ್ನು ಎದುರಿಸಲು ಸಿದ್ದನಾದುದನ್ನು ತಿಳಿಯಬಹುದು. ಜಾರ್ಜ್ ಸಿಮ್ಮೆಲ್ ಎಂಬ ಸಮಾಜ ಶಾಸ್ತ್ರಜ್ಞನು[77] ಸಂಘರ್ಷದಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳನ್ನು ಸೂಚಿಸಿದ್ದಾನೆ. ಅವುಗಳೆಂದರೆ

1. ಯುದ್ಧ

2. ಅಂತಃಕಲಹ

3. ಮೊಕದ್ದಮೆ ಅಥವಾ ದಾವೆಹೂಡುವುದು

ಯುದ್ದವು ಮಾನವನಲ್ಲಿ ಅತ್ಯಂತ ಆಳವಾಗಿ ಬೇರೂರಿರುವ ವಿರೋಧಾತ್ಮಕ ಆವೇಗವನ್ನು ಪ್ರತಿನಿಧಿಸುವುದು. ದ್ವೇಷ, ಪ್ರತಿಕಾರ, ಸಂಪತ್ತು, ಸಾಮ್ರಾಜ್ಯ ವಿಸ್ತರಣೆ, ಮುಂತಾದ ಗುರಿಗಳನ್ನು ಮುಂದಿಟ್ಟುಕೊಂಡು ಈ ಆವೇಗವು ಕಾರ್ಯರೂಪಕ್ಕೆ ಇಳಿದು ಯುದ್ದದ ರೂಪದಲ್ಲಿ ಕಾಣಿಸಬಹುದು. ಘೋರ ಸ್ವರೂಪದ ಈ ಯುದ್ದವು ಬಹಳ ಹಾನಿಯನ್ನು ಉಂಟುಮಾಡುವುದು. ಉದಾಹರಣೆಗೆ

➢ ವೀರನರಸಿಂಹನು ಪೃಥ್ವಿಯನ್ನು ಆಳುತ್ತಿದ್ದಾಗ ಮಹಾಸರ್ವಾಧಿಕಾರಿಯಾದ ಅಮರೇಶ್ವರ ದಂಡನಾಯಕನು ವಿಜಯಾದಿತ್ಯ ಮಂಗಲದಲ್ಲಿ 1167ರಲ್ಲಿ ಒಂದು ಸೈನ್ಯ ಶಿಬಿರವನ್ನು ನಿರ್ಮಿಸಿದನು.[78]

➢ ಬೆಟ್ಟರಸ ದಂಡನಾಯಕನು 2ನೆಯ ನರಸಿಂಹನ ಅಧೀನ ಅಧಿಕಾರಿಯಾಗಿದ್ದನು. ಇವನ ಶಾಸನವು ಹೊಯ್ಸಳ ಸೇವುಣ ಸಂಘರ್ಷದ ದೃಷ್ಟಿಯಿಂದ ಕುತೂಹಲವನ್ನುಂಟುಮಾಡುತ್ತದೆ. ಇಮ್ಮಡಿ

ಬಲ್ಲಾಳನ ಮರಣದಿಂದ ಸಿಂಘಣನು ಸೇವುಣರ ವಶದಿಂದ ಜಾರಿಹೋಗಿದ್ದ ಪ್ರದೇಶಗಳನ್ನು ಪುನಃ ಗೆದ್ದುಕೊಳ್ಳಲು ಉತ್ತೇಜಿತನಾಗಿ ಕೂಡಲೇ ಹೊಯ್ಸಳರಾಜ್ಯದ ಮೇಲೆ ದಾಳಿ ಮಾಡಿದ್ದನು. ಆದರೆ 2ನೆಯ ನರಸಿಂಹನು ಸೇವುಣ ಸೈನ್ಯವನ್ನು ತಡೆದನು. ವೀರರೂ ಶೂರರೂ ಅಗಿದ್ದ ವಿಕ್ರಮ ಪಾಲ ಮತ್ತು ಪಾವುಷ ಎಂಬುವವರು ಸೇವುಣದ ಸೈನ್ಯದ ನೇತೃತ್ವವನ್ನು ವಹಿಸಿದ್ದನು. ಆದರೆ ಇಮ್ಮಡಿ ನರಸಿಂಹನು 1249ರಲ್ಲಿ ಸೇವುಣರನ್ನು ಸೋಲಿಸಿ ಆ ಇಬ್ಬರನ್ನೂ ಕೊಂದನು.[79] ಈ ದೃಶ್ಯವನ್ನು ಹೊಯ್ಸಳ ಶಾಸನಗಳು ವರ್ಣಿಸುತ್ತವೆ. "ಹೊಯ್ಸಳ ನರಸಿಂಹನು ತುಂಗಭದ್ರೆಯ ಸೇವುಣರ ರಕ್ತದಿಂದ ತುಂಬಿಸಿದನು. ವಿಕ್ರಮಪಾಲ, ಪಾವುಷ ಮತ್ತಿತರರನ್ನು ಕೊಂದು ಅಪ್ಸರೆಯರ ಲೋಕವನ್ನು ಸೇವುಣರ ರಕ್ತದಿಂದ ತುಂಬಿದನು. ಇದರಿಂದ ಅವನು ಮಧು ಮತ್ತು ಕೈಟಭರನ್ನು ಜ್ಞಾಪಕಕೆ ತಂದನು. ಆನೆಯ ಮೇಲಿದ್ದ ಅಂಬಾರಿಯ ಎರಡೂ ಧ್ವಜಸ್ಥಂಬಗಳಲ್ಲಿ ನೇತುಹಾಕಿದ್ದ ವಿಕ್ರಮಪಾಲನು ಮತ್ತಿ ಪಾವುಷರ ರುಂಡಗಳು ನರಸಿಂಹನ ಶೌರ್ಯವನ್ನು ಹೊಗಳುತ್ತಿವೆಯೋ ಎನ್ನುವಂತೆ ಅಲ್ಲಾಡುತ್ತಿದ್ದವು".[80]

➢ ಅಳಿಯ ಮಾಚೆಯದಂಡನಾಯಕನು ತುಂಬೆಯಕಲ್ಲಿನಲ್ಲಿ ನಡೆದ ಯುದ್ಧದಲ್ಲಿ ಜಯಗಳಿಸಿದನು. ಈ ಯುದ್ಧದಲ್ಲಿ ಮಹಾನಾಡಪ್ರಭು ಸಿರಿವರದ ಧೀಮಗೌಡನ ಮಗ ಅಜಪನು ಸತ್ತನು.[81] ಇದೇ ಮಹಾಪ್ರಧಾನಿ ಅಳಿಯ ಮಾಚೆಯದಂಡನಾಯಕನು ಪೆನುಗೊಂಡೆಯಲ್ಲಿ ಆಳುತ್ತಿದ್ದನು. ಆಗ ಆತನು ಮೇಲುಮಾವಿನ ಮನ್ನೆಯರ ಮೇಲೆ ದಂಡೆತ್ತಿ ಹೋಗುತ್ತಾನೆ. ಮಹಾಸಾಮಂತಾದಿಪತಿ ಹೊಳಕಲ್ಲ ಗಂಗೆಯ ನಾಯ್ಕರ ಮಗ ಹಿರಿಯ ಬೊಮ್ಮಯ ನಾಯಕನು ಕುದುರೆಯ ದಳದ ಮೇಲೆ ಏರಿ ಹೊಯಿಕುಟ್ಟ ಎಂಬಲ್ಲಿ ನಡೆದ ಯುದ್ಧದಲಿ ಸತ್ತನು.[82]

➢ ರಾಜ್ಯವನ್ನು ವೈರಿಗಳಿಂದ ನಿಷ್ಕಂಟಕಮಾಡಿ ಅಲ್ಲಿ ಅರಸನಾದ ನರಸಿಂಹನನ್ನು ಪ್ರತಿಷ್ಠಾಪಿಸಿದವನು ಎಂಬುದಾಗಿ ಲಕುಮಯ್ಯ ವರ್ಣಿತನಾಗಿದ್ದಾನೆ. ನಾರಸಿಂಹನು ಸ್ವತಂತ್ರ ಆಳ್ವಿಕೆಯನ್ನು ಆರಂಭಿಸಿದ ಒಂದು ದಶಕದೊಳಗೇ ಆತ ಕಳಚುರಿ ಬಿಜ್ಜಳನ ಆಕ್ರಮಣವನ್ನು ಎದುರಿಸಬೇಕಾಯಿತೆಂಬುದು ನಮಗೆ ತಿಳಿದ ವಿಷಯ. 1163ರ ಸುಮರಿಗೆ ಈ ಎರಡನೆಯ ಅರಸ ನರಸಿಂಹನ ಮೇಲೆ ಆಕ್ರಮಣವನ್ನು ನಡೆಸಿದುದನ್ನು ಆಗ ಲಕುಮಯ್ಯನಾಯಕನು ಯಶಸ್ವಿಯಾಗಿ ವೈರಿಯನ್ನು ತಡೆಗಟ್ಟಿದುದನ್ನು ಕಾಣುತ್ತೇವೆ. ಇನ್ನೂ ಹಿಂದೆಯೇ ಕ್ರಿ.ಶ 1160ರಲ್ಲಿ ಬಿಜ್ಜಳನ ಸಾಮಂತರಲ್ಲೊಬ್ಬನಾದ ಬಮ್ಮರಸನು ನಾರಸಿಂಹನ್ನು ಸೋಲಿಸಿದ್ದನು. ತನ್ನ ಭೂಪ್ರದೇಶವನ್ನು ಉಳಿಸಿಕೊಳ್ಳುವಲ್ಲಿ ಲಕುಮಯ್ಯ ದಂಡನಾಯಕ ಮತ್ತು ಇತರರೂ ನಾರಸಿಂಹನಿಗೆ ಸಹಾಯ ಮಾಡಿದ್ದರಬೇಕು. ಆ ಕಾರಣ ಲಕುಮಯ್ಯನ ಸೇವೆಯನ್ನು ಗುರುತಿಸಿ ಅರಸ ಅವನಿಗೆ ದಾನನೀಡಿದನು.[83]

ಅಂತಃಕಲವು ಒಂದು ಸಮೂಹದೊಳಗೆ ನಡೆಯುವ ಒಂದು ಬಗೆಯ ಘರ್ಷಣೆಯಾಗಿದೆ. ಈ ಬಗೆಯ ಸಂಘರ್ಷವು ಒಂದು ಕುಟುಂಬ, ಸಂಘ, ಸಂಘಟನೆಯ ವ್ಯಕ್ತಿಗಳು ತಮ್ಮ ಸಮೂಹದ ವಿರುದ್ದವೇ ಬಂಡೇಳುವ ಪ್ರಕ್ರಿಯೆಯಾಗಿದೆ. ಉದಾಹರಣೆಗೆ:

➢ ಬೊಂಮಯನಾಯಕನು "ಸಾಮಂತಾಧಿಪತಿ, ಗಡಿಯಂಕ ಭೀಮಗಡಿಗೆ ಲಾಳವಿಂಡಿಗೆ ಮಜಿಪೊಕ್ಕರ ಕಾವ ಸಿತಗರಗಂಡ ಎರಡು ಗೆಲಕೆ ಕೂಡಿ ಕೂಟಕೆ ತಪ್ಪುವ ನಾಯಕರಗಂಡ ಅರವತ್ತಾರು ಮಂಡಳಿಕರ ತಲೆಗೊಂಡಗಂಡ ಅರುವತ್ತಾರು ಮಂಡಳಿಕರ ಬೆಂನಚಂಮರಿಗೆ" ಎನಿಸಿದ್ದನು. ಈತನ ಪೂರ್ವಜರು ಹೊಳೆಕಲ್ಲಿನವರೆಂದು ತೋರುತ್ತದೆ. ಊರಳಿವಿನಸಂದರ್ಭದಲ್ಲಿ ಹೋರಾಡಿ ಸತ್ತನು. [84]

➢ ಸಾಮಂತ ದೇಕೆನಾಯಕನು "ಕುನ್ನಿಯ ಬೀರೆಯನಾಯಕನ ಮಗ. ಇಮ್ಮಡಿ ಬಲ್ಲಾಳನ ಅಧೀನವರ್ತಿ. ಮಹಾಸಾಮಂತ, ಎಸುವರಾದಿತ್ಯ ಕಣ್ಣಂಬಿನೊಡೆಯ, ಸೈಗೋಲಮಾತ್ಯ, ಬಂಟರಬಾವ, ದಾಯಿಗಬೇಂಟೆಕಾಜಿ", ಎಂದು ಹೆಸರಾಗಿದ್ದನು. ಇವನು ಆಳುತ್ತಿದ್ದ ಕಾಲದಲ್ಲಿ (ಬಹುಶಃ ಹೊನ್ನೇನಹಳ್ಳಿ ಮತ್ತು ಸುತ್ತಮುತ್ತಲಿನ ಪ್ರದೇಶ) ನಡೆದ ತುರುಗಾಳಗದಲ್ಲಿ ಹೊನ್ನೇಗೌಡನು ತುರುಗಳನ್ನು ಕಾಪಾಡುತ್ತಲೆ ಸ್ವರ್ಗಕ್ಕೆ ಹೋದನು. ಅವನ ಸ್ಮರಣೆಗಾಗಿ ಅವನ ಅಣ್ಣ ಮಂಚಗೌಡ ಮತ್ತು ತಮ್ಮ ಜಕ್ಕೆಯಕಲೆಯನು 1180ರಲ್ಲಿ ವೀರಗಲ್ಲನ್ನು ನಿಲಿಸಿದರು.[85]

➢ "ದ್ವಾರಾವತೀ ಪುರವರಾಧೀಶ್ವರ ಎನೆಗರಾನೆ ಕೋಳಾಲನಾಡಾಳ್ವ, ಕೋಳಾಲದೇವಿಲಬ್ಧವರಪ್ರಸಾದಂ ಕಾಡರ್ದ್ವರಗಾಳ ಚಲದಂಕರಾಮ ಚಲಕೆಮಲವಸಾಮಂತರತೊತ್ತಳದುಳಿವ" ನಾದ ಹಿರಿಯಬೆಂಡೆಯ ಬಿಲ್ಲಮೊತ್ತದ ಹೂವಿನಹಳ್ಳಿಯ ಬಮೆಯನಾಯಕನು ಬಲ್ಲಾಳದೇವನ ಪರವಾಗಿ ನಿಂತು ಊರಳಿವನಲ್ಲಿ ಹೋರಾಡಿ ಸತ್ತನು. ಇವನ ಮಡದಿ ಮಾರವೆನಾಯಿಕಿತಿ. ಈದಂಪತಿಗಳ ಮಕ್ಕಳಾದ ಸೂರೆಯ ನಾಯಕ, ಮಾದೆಯನಾಯಕರು ಇವನಿಗೆ ಪರೋಕ್ಷವಿನಯವಾಗಿ 1–3–1172ರಲ್ಲಿ ವೀರಗಲ್ಲನ್ನು ಹಾಕಿಸಿದರು.[86]

➢ ಕುಮಾರ ಲಕ್ಷ್ಮೀಧರ ದಂಡನಾಯಕನು 2ನೆಯ ವೀರಬಲ್ಲಾಳನ ಅಧೀನ ಅಧಿಕಾರಿಯಾಗಿದ್ದನು. ಹನ್ನೊಂದು ನಾಡಿನ ಅಧಿಪತ್ಯವನ್ನು ಇವನು ವಹಿಸಿದ್ದನು. ಇವನ ಹನ್ನೊಂದು ನಾಡಿಗಾಗಿ ಆಸೆಪಟ್ಟ ಬಲ್ಲಗೌಡನು ಅರವಳ್ಳಿಯ ಮೇಲೆ ದಾಳಿ ಮಾಡಿ ಅಲ್ಲಿನ ತುರುಗಳನ್ನು ಹಿಡಿದನು. ಆಗ ಲಕ್ಕಯ್ಯನೆಂಬಾತನು ಬಲ್ಲಗೌಡನನ್ನು ಕೊಂದು ತುರುಗಳನ್ನು 1205ರಲ್ಲಿ ಕಾಪಾಡಿದನು. ಜೊತೆಗೆ ಮುನ್ನೂರು ಹೊನ್ನಿನ ದಂಡವನ್ನು ವಸೂಲಿಮಾಡಿದನು.[87]

➢ ಪೊಯ್ಸಳದೇವನ ದಂಡನಾಐಕ ವಿಟ್ಟಿಯಣ್ಣನು ಇರುಮಡಿನಾಡಿನಲ್ಲಿನ ನುಗಪಟ್ಟಿಯ ಮೇಲೆ ದಾಳಿ ಮಾಡಿ ಹಲವು ಕುದುರೆಗಳನ್ನು ಜನರನ್ನು ಕೊಂದನು. ಈ ಹೋರಾಟದಲ್ಲಿ ಎಚ್ಚರಸನು ಹೋರಾಡಿ ಸತ್ತನು. ಎಚ್ಚರಸನ ಮಗ ಪುಲ್ಲದೇವನು 1109 ರಲ್ಲಿ ವೀರಗಲ್ಲನ್ನು ನೆಟ್ಟನು.[88]

**ದಾವೆ: ನ್ಯಾಯವ್ಯವಸ್ಥೆಯ ಮುನ್ನುಡಿ:** ದಾವೆಯು ಒಂದು ಕಾನೂನಿನ ಹೋರಾಟ. ಒಬ್ಬ ವ್ಯಕ್ತಿ ಅಥವಾ ಒಂದು ಸಮೂಹ ತನ್ನ ಹಕ್ಕುಗಳಿಗಾಗಿ ನ್ಯಾಯ ದೊರಕಿಸಿಕೊಳ್ಳಲು ನ್ಯಾಯಾಲಯದ ಮೂಲಕ ಹೋರಾಟಕ್ಕೆ ಇಳಿಯುವಂತಹುದಾಗಿದೆ. ಈ ಬಗೆಯ ಸಂಘರ್ಷದಲ್ಲಿ ಭಾವನಾತ್ಮಕತೆಗಿಂತ ವಾಸ್ತವಿಕತೆಗೆ ಹೆಚ್ಚಿನ ಪ್ರಾಧಾನ್ಯತೆಯಿದೆ.(ಕುಟುಂಬದ ಆಸ್ತಿಯ ವ್ಯವಸ್ಥಿತ ನಿರ್ವಹಣೆ ಮತ್ತು ವಿನಿಯೋಗ ಎಂಬ

ಉಪಶೀರ್ಷಿಕೆಯಡಿಯಲ್ಲಿ ಈ ದಾವೆಯ ಪರಿಕಲ್ಪನಾತ್ಮಕ ವಿಚಾರದೊಂದಿಗೆ ಹೊಯ್ಸಳ ಮಹಾಮಂಡಳೇಶ್ವರರನ್ನು ಕೇಂದ್ರವಾಗಿಟ್ಟುಕೊಂಡು ಈಗಾಗಲೇ ಚರ್ಚಿಸಲಾಗಿದೆ)

**6.3.2.4 ಹೊಂದಾಣಿಕೆ:** ಜೀವನದುದ್ದಕ್ಕೂ ಮಾನವನು ಹಲವಾರು ಬಗೆಯ ಅಡೆತಡೆಗಳನ್ನು ಎದುರಿಸಬೇಕಾಗುವುದು. ಹಾಗೆಯೇ ಸಂಘರ್ಷಗಳೂ ತಲೆದೋರುವುವು. ಆದಾಗ್ಯೂ ಸಂಘರ್ಷದಲ್ಲಿ ಭಾಗಿಗಳಾದ ವ್ಯಕ್ತಿಗಳು ಮತ್ತು ಸಮೂಹಗಳು ತಮ್ಮ ಭಿನ್ನತೆಗಳನ್ನು ಬದಿಗಿಟ್ಟು ದುಡಿಯಬೇಕಾದ ಹಾಗೂ ಸಹಬಾಳ್ವೆ ನಡೆಸಬೇಕಾದ ಪರಿಸ್ಥಿತಿ ಉಂಟಾಗುವುದು. "ಮಾನವನು ತನ್ನ ಪರಿಸರದೊಂದಿಗೆ ಮತ್ತು ಸಹಚರರೊಂದಿಗೆ ಸಾಮರಸ್ಯ ಸಾಧಿಸಿಕೊಳ್ಳುತ್ತಾ ಸಾಗುವ ಪ್ರಕ್ರಿಯೆಯನ್ನು ಹೊಂದಾಣಿಕೆ ಎನ್ನಬಹುದು." ಎಂದು ಪ್ರಖ್ಯಾತ ಸಮಾಜಶಾಸ್ತ್ರಜ್ಞನಾದ ಮೆಕೈವರ್ ಅಭಿಪ್ರಾಯಿಸುತ್ತಾನೆ. ಸಂಘರ್ಷವನ್ನು ಸತತವಾಗಿ ನಡೆಸಲು ಸಾಧ್ಯವಾಗಿರುವುದರಿಂದಲೇ ಅದು ಸಹಜವಾಗಿ ಹೊಂದಾಣಿಕೆಗೆ ಅವಕಾಶ ನೀಡುವುದು. ವ್ಯಕ್ತಿಗಳು ಮತ್ತು ಸಮೂಹಗಳು ಸಂಘರ್ಷವನ್ನು ಇಷ್ಟಪಡದೇ ಇದ್ದಾಗ ಅವರು ಒಪ್ಪಂದಕ್ಕೆ ಸಿದ್ದರಾಗುತ್ತಾರೆ. ಅಂತಹ ಶಾಶ್ವತ ಅಶಾಶ್ವತ ಸ್ವರೂಪದ ಒಪ್ಪಂದಗಳನ್ನೇ ನಾವು ಹೊಂದಾಣಿಕೆ ಎಂದೆನ್ನಬಹುದು. ಗಿಲಿನ್ ಮತ್ತು ಗಿಲಿನ್ ಎನ್ನುವ ಸಮಾಜಶಾಸ್ತ್ರಜ್ಞರು ಹೊಂದಾಣಿಕೆಯ ಆರು ಮುಖ್ಯ ವಿಧಾನಗಳನ್ನು ತಿಳಿಸಿದ್ದಾರೆ.[89] ಅವುಗಳೆಂದರೆ,

01. ಬಲಪ್ರಯೋಗದ ಮೂಲಕ ಮಣಿಸಿ ಹೊಂದಾಣಿಕೆಯನ್ನುಂಟುಮಾಡುವುದು.
02. ಸಂಘರ್ಷನಿರತ ಗುಂಪುಗಳ ನಡುವೆ ಒಪ್ಪಂದ ಅಥವಾ ರಾಜಿಯನ್ನುಂಟುಮಾಡುವುದು. ಈ ಒಪ್ಪಂದವು ಪಂಚಾಯಿತಿ, ಮಧ್ಯಸ್ಥಿಕೆ, ಮನವೊಲಿಸುವಿಕೆ ಈ ಮೂರು ರೀತಿಗಳಲ್ಲಿ ವ್ಯಕ್ತವಾಗುತ್ತದೆ.
03. ವ್ಯಕ್ತಿಗಳು ಮತ್ತು ಗುಂಪುಗಳು ಸಹನೆಯನ್ನು ಬೆಳೆಸಿಕೊಂಡು ಸಂಘರ್ಷವನ್ನು ತೊರೆದುಬಿಡುವುದು.

ಚಕ್ರವರ್ತಿ ದಂಡನಾಯಕನು ವೀರಬಲ್ಲಾಳನ ಕೈಕೆಳಗೆ ಮಹಾಪ್ರಧಾನನಾಗಿದ್ದನು ಇವನು ಯಲಹಂಕ ನಾಡನ್ನಾಳುತ್ತಿದ್ದನು. ಅತಿವೃಷ್ಟಿಯಾಗಿ ಕಲಕೆಱೆ ಕೆರಳಬೆನಹಳ್ಳಿ ಮಾಚಗವನೆಲಬಕೆಱೆ ಎರದೊಡವಾಗಿ ಒಡೆದುಹೋಯಿತು. ಆಗ ಚಕ್ರವರ್ತಿ ದಂಡನಾಯಕನು ಆ ನಾಡಿನ ಸಮಸ್ತ ಪ್ರಜೆಗೌಡುಗಳು ಸೇರಿ ಆ ಎರಡು ಒಡ್ಡನ್ನು ಕಟ್ಟುವ ಕೆಲಸಕ್ಕೆ ಒಪ್ಪಿದರು. ಆಗ ಆ ಕಲುಕೆಱೆಯ ದಾಮೋದರ ಸೆಟ್ಟಿ ಕೋಡಿಯಪ್ಪನೂ ತಮ್ಮ ಭಾಗದ ಒಡ್ಡನ್ನೂ ಕಟ್ಟಿದರು. ಆದರೆ ಆ ಕೆರಳಬೆನಹಳ್ಳಿಯವರು ತಮ್ಮ ಭಾಗದ ಒಡ್ಡನ್ನು ಕಟ್ಟಲಾರೆವು ಎಂದರು. ಆಗ ಆ ಒಡ್ಡನ್ನು ಸಹ ದಾಮೋದರ ಸೆಟ್ಟಿ ಮತ್ತು ಕೋಡಿಯಪ್ಪನು ಸಂಘರ್ಷಕ್ಕೆ ಎಡೆಕೊಡದೆ ಒಡ್ಡನ್ನು ಕಟ್ಟಿದರು. ಆ ಎರಡು ಒಡ್ಡನ್ನು ಕಟ್ಟಿದ್ದಕ್ಕಾಗಿ ಕಟ್ಟುಕೊಡುಗೆಯಾಗಿ ಕಲುಕೆರೆಯ ಭಾಗದಲ್ಲಿ 6ಸಲಗೆ ಗದ್ದೆ, ಆ ಕೆರಳ ಬೆನಹಳ್ಳಿಯ ಭಾಗದ ನಡುಬಯಲಿನಲ್ಲಿ 6ಸಲಗೆ ಗದ್ದೆ ಒಟ್ಟು 12 ಸಲಗೆ ಗದ್ದೆಗಳನ್ನು ದಾಮೋದರ ಸೆಟ್ಟಿಯು ಕೋಡಿಯಪ್ಪನಿಗೆ ಕೆರೆಕೊಡುಗೆಯಾಗಿ ದಾನವಿತ್ತನು.[90]

04. ಯಾವುದೋ ಸಂದರ್ಭದಲ್ಲಿ ಸಂಘರ್ಷನಿರತ ವ್ಯಕ್ತಿಗಳು ದೃಢ ನಿಶ್ಚಯಗಳನ್ನು ಮಾಡಿಕೊಂಡು ಇದ್ದಕ್ಕಿದ್ದಂತೆ ಬದಲಿಸಿ ಎದುರಾಳಿಗಳು ಹೇಳಿದ್ದನ್ನು ಸ್ವೀಕರಿಸುವುದು. ಇದನ್ನು ಮನಃಪರಿವರ್ತನೆ ಎನ್ನಲಾಗಿದೆ.

05. ಆಕ್ರಮಣಶೀಲ ಪ್ರವೃತ್ತಿಯನು ತೊರೆದು ಸೌಹಾರ್ದಯುತ ಸಹಜೀವನದ ಪ್ರಾಮುಖ್ಯತೆಯನ್ನು ಅರಿತು ಅದನ್ನು ಜೀವನದಲ್ಲಿ ಅಳವಡಿಸಿಕೊಳ್ಳವ ಪ್ರಯತ್ನವೇ ಉದಾತ್ತೀಕರಣ. ಸಂಘರ್ಷದಿಂದ ವ್ಯಯವಾಗುವ ಶಕ್ತಿಯನ್ನು ಅದರ ಬದಲು ಉನ್ನತ ಗುರಿಯ ಕಡೆಗೆ ತಿರುಗಿಸುವುದೇ ಶ್ರೇಯಸ್ಕರವೆಂದು ಭಾವಿಸಿ ಅದರಂತೆ ನಡೆದುಕೊಳ್ಳುವುದು.

**6.3.2.5 ಸ್ವಾಂಗೀಕರಣ:** ಸ್ವಾಂಗೀಕರಣವು ಸಾಮಾಜಿಕ ಅಂತಃಕ್ರಿಯೆಯ ಇನ್ನೊಂದು ಪ್ರಕಾರ. ಇದು ಒಂದು ಬಗೆಯ ಸಾಮಾಜಿಕ ಹೊಂದಾಣಿಕೆಯೂ ಹೌದು. ಇಲ್ಲಿ ವ್ಯಕ್ತಿ ಅಥವಾ ಸಮೂಹ ನಿಧಾನಗತಿಯಿಂದ ಕ್ರಮಕ್ರಮವಾಗಿ ಹೊಸ ಸ್ಥಿತಿಗತಿಗಳಲ್ಲಿ ಲೀನವಾಗುವುದನ್ನು ಕಾಣಬಹುದು. ಇದನ್ನು ಒಂದು ಸಂಸ್ಕೃತಿ ಇನ್ನೊಂದು ಸಂಸ್ಕೃತಿಯಲ್ಲಿ ಸಮರಸಗೊಳ್ಳುವ ಪ್ರಕ್ರಿಯೆ ಎನ್ನಲಾಗಿದೆ. ಆಗಬರ್ನ್ ಮತ್ತು ನಿಮ್ಕಾಫ್ ಎಂಬ ಸಮಾಜಶಾಸ್ತ್ರಜ್ಞರು ಸ್ವಾಂಗೀಕರಣವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ[91]– **"**ಯಾವ ಪ್ರಕ್ರಿಯೆಯ ಮೂಲಕ ಒಮ್ಮೆ ಭಿನ್ನವಾದ ವ್ಯಕ್ತಿಗಳು ಇಲ್ಲವೇ ಸಮೂಹಗಳು ತಮ್ಮ ಭಿನ್ನತೆಯಲ್ಲಿ ಕಳೆದುಕೊಳ್ಳುತ್ತವೆಯೋ ಮತ್ತು ಅವುಗಳ ಆಸಕ್ತಿ ಮತ್ತು ದೃಷ್ಟಿಕೋನಗಳಲ್ಲಿ ಅನನ್ಯತೆ ಉಂಟಾಗುವುದೋ ಆ ಪ್ರಕ್ರಿಯೆಯನ್ನು ಸ್ವಾಂಗೀಕರಣ ಎನ್ನಬಹುದು**"**.ಇದರ ಗುಣಲಕ್ಷಣಗಳ ಮೂಲಕವೇ ಇದರ ರೂಪಸ್ವರೂಪಗಳನ್ನು ಅರಿಯಬಹುದಾಗಿದೆ.

- ಸ್ವಾಂಗೀಕರಣವು ಯಾವುದೇ ಒಂದು ಕ್ಷೇತ್ರಕ್ಕೆ ಸೀಮಿತವಾಗಿರದೆ ಜೀವನದ ಎಲ್ಲಾ ಕ್ಷೇತ್ರಗಳಲ್ಲಿ ಕಾಣಬಹುದು. ಉದಾ: ತಮ್ಮ ಮತವನ್ನು ಧರ್ಮವನ್ನು ತೊರೆದ ವ್ಯಕ್ತಿಗಳು ಬೇರೆ ಮತವನ್ನು ಸ್ವೀಕರಿಸುವ ಮತಾಂತರವನ್ನು ನಾವು ಇದಕ್ಕೆ ಅತ್ಯುತ್ತಮ ಉದಾಹರಣೆಯಾಗಿ ನೋಡಬಹುದು. ಮಹಾಮಂಡಳೇಶ್ವರರಲ್ಲಿ ಚಂದ್ರಮೌಳಿ ದಂಡನಾಯಕ ಮೊದಲಾದವರು ಮೂಲತಃ ಬ್ರಾಹ್ಮಣರಾಗಿದ್ದು ಕಾಲಕ್ರಮದಲ್ಲಿ ಆ ಕಾಲಕ್ಕೆ ಹೆಚ್ಚು ಪ್ರವರ್ಧಮಾನಕ್ಕೆ ಬರತೊಡಗಿದ್ದ ಜೈನಧರ್ಮದ ಮತಾವಲಂಬಿಗಳಾದ ಸಂಗತಿಯನ್ನು ನಾವು ಇದಕ್ಕೆ ಅತ್ಯುತ್ತಮ ಉದಾಹರಣೆಯನ್ನಾಗಿ ನೋಡಬಹುದು.
- ಸ್ವಾಂಗೀಕರಣವು ಮಂದಗತಿಯಿಂದ ಕ್ರಮಕ್ರಮವಾಗಿ ನಡೆಯುವುದು. ಉದಾ: ಸೋಮಯ ದಂಡನಾಯಕನು ಸಂವರ್ಧಿಸಿದ ಸೋಮನಾಥನ ಆರಾಧನಾ ಪರಂಪರೆ ಮತ್ತು ಪೆರುಮಾಳೆದಂಡನಾಯಕನು ಮುನ್ನೆಲೆಗೆ ತಂದಂತಹ ಅಲ್ಲಾಳನಾಥನ ಪರಂಪರೆಗಳನ್ನು ಸ್ಥಳೀಯ ಜನರು ನಿಧಾನವಾಗಿ ಅನುಸರಿಸಿರುವುದು.
- ಸ್ವಾಂಗೀಕರಣವು ಸಾಮಾನ್ಯವಾಗಿ ಪ್ರಜ್ಞಾಪೂರ್ವಕವಲ್ಲದ ಒಂದು ಪ್ರಕ್ರಿಯೆಯಾಗಿದೆ. ಏಕೆಂದರೆ ಈ ಪ್ರಕ್ರಿಯೆಯಲ್ಲಿ ವ್ಯಕ್ತಿಗಳಿಗೆ ಮತ್ತು ಸಮೂಹಗಳಿಗೆ ಏನು ನಡೆಯುತ್ತದೆ ಎನ್ನುವುದರ ಪರಿವೆಯೇ

ಇಲ್ಲದಿರುವುದು. ಉದಾ: ಮತ ಪಂಥಗಳು ನಡೆಸುವ ತತ್ವಾವಬೋಧನ (ಇಂಡಾಕ್ಟರಿನೇಷನ್) .ಇದರ ಪರಣಾಮವಾಗಿ ಅನೇಕರು ಆ ಮತ ಪಂಥಗಳನ್ನು ಅನುಸರಿಸುವಂತಾದುದು.

➢ ಸ್ವಾಂಗೀಕರಣವು ಒಮ್ಮುಖವಾದಪ್ರಕ್ರಿಯೆಯಲ್ಲ. ಇಲ್ಲಿ ಕೊಡುಕೊಳ್ಳುವ ತತ್ವವು ಅನುಸರಿಸಲ್ಪಡುವುದಿಲ್ಲ. ಸಾಮಾನ್ಯವಾಗಿ ಇದು 'ಸಂಸ್ಕೃತಿ ಗ್ರಹಣ' (ಅಕ್ಕಲ್ಚರೇಷನ್) ಪ್ರಕ್ರಿಯೆಯ ನಂತರವೇ ಸಂಭವಿಸುವುದು. ಸಾಂಸ್ಕೃತಿಕ ಅಂಶಗಳನ್ನು (ಕಲ್ಚರಲ್ ಎಲಿಮೆಂಟ್ಸ್) ಎರವಲು ಪಡೆದು ಅವುಗಳನ್ನು ಕಾಲಕ್ರಮೇಣವಾಗಿ ತನ್ನದಾಗಿಸಿಕೊಳ್ಳುವ ಪ್ರಕ್ರಿಯೆಯನ್ನು ಸಂಸ್ಕೃತಿಗ್ರಹಣ ಎನ್ನುವರು. ಉದಾ: ಜೈನಧರ್ಮವು ನಿಧಾನಕ್ರಮೇಣವಾಗಿಯಾದರೂ ವೈದಿಕ ಸಂಸ್ಕೃತಿಯ ಹಲವು ಅಂಶಗಳನ್ನು ಸಂಗತಿಗಳನ್ನು ಸ್ವೀಕರಿಸಿ ತಮ್ಮದಾಗಿಸಿಕೊಂಡಿವೆ. ಇದಕ್ಕೆ ಮಹಾಮಂಡಳೇಶ್ವರರು ಸಹಕರಿಸಿರುವುದನ್ನು ಗಮನಿಸಬಹುದು. ಇನ್ನೊಂದು ಗಮನಾರ್ಹ ಅಂಶವೆಂದರೆ, ಸ್ವಾಂಗೀಕರಣವು ಯಾವಾಗಲೂ ಮಂದಗತಿಯಿಂದ ಕ್ರಮಕ್ರಮವಾಗಿ ನಡೆಯುವುದು. ಅದಕ್ಕೆ ಹೆಚ್ಚು ಕಾಲಾವಧಿ ಅಗತ್ಯ. ಉದಾ: ವಲಸೆ ಬಂದ ಜನರು ದೇಶೀಯರೊಂದಿಗೆ ಸಂಪೂರ್ಣವಾಗಿ ಸಮರಸಗೊಳ್ಳಲು ಸಮಯ ಬೇಕಾಗುವುದು.

### 6.4 ಸಾಮಾಜಿಕ ನಿಯಂತ್ರಣ :

ಮಾನವ ಸಮಾಜವು ನಿರಾತಂಕವಾಗಿ ಬಾಳಬೇಕಾದರೆ ಮತ್ತು ಸುಗಮವಾಗಿ ಕಾರ್ಯವೆಸಗಬೇಕಾದರೆ ಸಮಾಜದಲ್ಲಿ ಸಾಮರಸ್ಯ ಮತ್ತು ಐಕ್ಯಭಾವ ಇರಬೇಕಾದುದು ಅಗತ್ಯ. ಆದರೆ ಇದು ಇದ್ದಕ್ಕಿದ್ದಂತೆ ಮೂಡಿ ಬರುವುದಿಲ್ಲ. ಸಮಾಜದ ಸದಸ್ಯರ ಉದ್ದೇಶಪೂರ್ವಕ ಪ್ರಯತ್ನದಿಂದ ಮಾತ್ರ ಅದು ಸಾಧ್ಯ. ಸಮಾಜ ಸ್ಥಾಪಿತ ನಿಯಮಗಳಿಗೆ ಅನುಸಾರವಾಗಿ ಎಲ್ಲರೂ ನಡೆದುಕೊಳ್ಳುವುದರಿಂದ ಸಮಾಜದಲ್ಲಿ ಸ್ಥಿರತೆ ಮತ್ತು ಐಕ್ಯತೆ ನೆಲೆಸಲು ಸಾಧ್ಯ. ಇದಕ್ಕೆ ಸಾಮಾಜಿಕ ನಿಯಂತ್ರಣ ಬಹುಮುಖ್ಯ. ಸಮಾಜವು ಕಾನೂನು, ಧರ್ಮ, ನೈತಿಕತೆ ಸೂಚನೆಗಳು ಆದರ್ಶಗಳು ಮುಂತಾದವುಗಳ ಮೂಲಕ ವ್ಯಕ್ತಿಗಳ ನಡತೆಯನ್ನು ನಿಯಂತ್ರಿಸುವುದರೊಂದಿಗೆ ಸಾಮಾಜಿಕ ಹಿತವನ್ನು ಸಾಧಿಸುವುದನ್ನೇ ಸಾಮಾಜಿಕ ನಿಯಂತ್ರಣ ಎನ್ನುವರು.

ಸಮಾಜಶಾಸ್ತ್ರೀಯ ಅಧ್ಯಯನಗಳಲ್ಲಿ ಮೊದಲ ಬಾರಿಗೆ ಸಾಮಾಜಿಕ ನಿಯಂತ್ರಣ ಎಂಬ ಪರಿಕಲ್ಪನೆ ಯನ್ನು ಬಳಕೆಗೆ ತಂದಂತಹ ಇ.ಎ.ರಾಸ್ ಎಂಬ ಸಮಾಜಶಾಸ್ತ್ರಜ್ಞನು ಹೀಗೆ ವ್ಯಾಖ್ಯಾನಿಸಿದ್ದಾನೆ:[91] "ಒಪ್ಪಿತವಾದ ವರ್ತನೆಯ ಪ್ರಮಾಣಕಗಳಿಗೆ ಅನುಸಾರವಾಗಿ ಸಮಾಜದ ಸದಸ್ಯರು ನಡೆದುಕೊಳ್ಳುವಂತೆ ಮಾಡುವ ತಂತ್ರ ಸಾಧನಗಳ ವ್ಯವಸ್ಥೆಯೇ ಸಾಮಾಜಿಕ ನಿಯಂತ್ರಣ". ಸಾಮಾಜಿಕ ನಿಯಂತ್ರಣವು ಸಾರ್ವತ್ರಿಕವಾದುದು.ಸಾಮಾಜಿಕ ನಿಯಂತ್ರಣದ ವಿಧಿ ವಿಧಾನಗಳು, ರೀತಿನೀತಿಗಳು ಸಮಾಜದಿಂದ ಸಮಾಜಕ್ಕೆ ಬೇರೆಬೇರೆಯಾಗಿರಬಹುದು ಆದರೆ ಸಮಾಜವಿದ್ದೆಡೆಯಲ್ಲೆಲ್ಲಾ ಸಾಮಾಜಿಕ ನಿಯಂತ್ರಣವು ಇದ್ದೇಇರುತ್ತದೆ.

ಸಾಮಾಜಿಕ ನಿಯಂತ್ರಣದ ಪರಮೋದ್ದೇಶ ಸಮಾಜದ ನಿರಂತರತೆಯನ್ನು ಸಂರಕ್ಷಿಸುವುದು. ಸಮಾಜವು ಏಕತೆಯನ್ನು ಸಾಧಿಸುವುದರ ಜೊತೆಗೆ ತನ್ನ ಅಸ್ತಿತ್ವದ ನಿರಂತರತೆಯ ಬಗ್ಗೆಯೂ ಸತತವಾಗಿ ಹೋರಾಟ ಮಾಡುತ್ತಲೇ ಇರುತ್ತದೆ. ಸಮಾಜವು ಸದೃಢವಾಗಿ ಹಾಗೂ ಸುಭದ್ರವಾಗಿರಬೇಕಾದರೆ ಅದರ ನಿರಂತರತೆಯೂ ಅವಿಚ್ಛಿನ್ನವಾಗಿರಬೇಕು. ಅನ್ಯ ಅನ್ಯ ಸಮೂಹಗಳ ಮತ್ತು ಅವುಗಳ ಸದಸ್ಯರ ವರ್ತನೆಯನ್ನು ನಿಂತ್ರಿಸುವುದರ ಮೂಲಕ ಸಮಾಜವು ತನ್ನ ನಿರಂತರತೆಯನ್ನು ಕಾಯ್ದುಕೊಳ್ಳುತ್ತದೆ. ಸಾಮಾಜಿಕ ನಿಯಂತ್ರಣದ ವಿವಿಧ ಸಾಧನಗಳು ಈ ಕಾರ್ಯವನ್ನು ನಿರಂತರವಾಗಿ ಮಾಡುತ್ತಲೇ ಇರುವುದರಿಂದ ಅವು ಕ್ರಮೇಣ ಸಂಸ್ಕೃತಿಯ ಭಾಗಗಳೇ ಆಗಿ ಪರಿಣಮಿಸುವುವು. ಸಂಸ್ಕೃತಿಯ ಅಂಗಗಳಾದ ಈ ಸಾಧನಗಳು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಸಂಚರಣೆಗೊಳ್ಳುತ್ತಾ ಬರುತ್ತವೆ. ಇದರಿಂದ ಸಮಾಜದ ಅವಿಚ್ಛನ್ನತೆಯು ಸಾಮಾಜಿಕ ನಿಂಯಂತ್ರಣದ ಸಹಾಯದಿಂದ ನಿರ್ವಿಘ್ನವಾಗಿ ಸಾಗುವುದು.

ಸಾಮಾಜಿಕ ನಿಯಂತ್ರಣವನ್ನು ಸ್ಥಾಪಿಸಲು ಅಂದರೆ, ಸಮಾಜದಲ್ಲಿ ನಿಯಮಗಳನ್ನು ಚಲಾವಣೆಗೆ ತರಲು, ಬಳಸುವ ಪ್ರತಿಫಲಗಳನ್ನು ಹಾಗೂ ಶಿಕ್ಷೆಗಳನ್ನು ನಿರ್ಬಂಧಗಳೆಂದು ಕರೆಯುತ್ತಾರೆ. ಹೀಗೆ ಸಾಮಾಜಿಕ ನಿಯಂತ್ರಣದಲ್ಲಿ ಸಹಕಾರಿಗಳಾದ ನಿರ್ಬಂಧಗಳಲ್ಲಿ ಎರಡು ಪ್ರಕಾರಗಳಿವೆ :

1. ಇತ್ಯಾತ್ಮಕ ನಿರ್ಬಂಧಗಳು
2. ನೇತ್ಯಾತ್ಮಕ ನಿರ್ಬಂಧಗಳು

ಇತ್ಯಾತ್ಮಕ ನಿರ್ಬಂಧಗಳು ಸಾಮಾಜಿಕ ನಿಯಮಗಳನ್ನು ಒಪ್ಪಿಕೊಂಡು ಅವುಗಳಿಗೆ ವಿಧೇಯವಾಗಿ ನಡೆದುಕೊಳ್ಳುವವರಿಗೆ ನೀಡಲಾಗುವ ಪ್ರತಿಫಲಗಳನ್ನು ಸೂಚಿಸುತ್ತವೆ. ಸಾಮಾಜಿಕ ಅನುವರ್ತನೆಗೆ ನೀಡಬಹುದಾದ ಪ್ರತಿಫಲಗಳನ್ನೇ ಇತ್ಯಾತ್ಮಕ ನಿರ್ಬಂಧಗಳು ಎಂದರೂ ಸಲ್ಲುವುದು. ಪ್ರಶಂಸೆ, ಬಿರುದು, ಬಹುಮಾನ, ಪ್ರಚಾರ ನಡೆಸುವುದು, ಸಂಬಳ ಹೆಚ್ಚು ಮಾಡುವುದು, ಪದವಿ ಪ್ರಶಸ್ತಿಗಳನ್ನು ನೀಡಿ ಗೌರವಿಸುವುದು, ಮುಂತಾದ ಭೌತಿಕ ಸಂಪತ್ತುಗಳ ನೀಡುವಿಕೆ ಇತ್ಯಾದಿ

ಸಾಮಾಜಿಕ ನಿಯಮಗಳನ್ನು ಉಲ್ಲಂಘಿಸಿದವರಿಗೆ ಅವುಗಳನ್ನು ಧಿಕ್ಕರಿಸುವವರಿಗೆ ಅಥವಾ ಅವುಗಳನ್ನು ಮುರಿಯುವವರಿಗೆ ನೀಡಲಾಗುವ ಶಿಕ್ಷೆಗಳನ್ನು ನೇತ್ಯಾತ್ಮಕ ನಿರ್ಬಂದಗಳು ಎಂದು ಕರೆಯುತ್ತೇವೆ. ಇವು ಸಾಮಾಜಿಕ ಅಪವರ್ತನೆಗೆ ನೀಡಲಾಗುವ ದಂಡನೆ ಎಂದರೂ ಸರಿಯೇ. ಬೆದರಿಕೆ, ಅಣಕ, ವ್ಯಂಗ್ಯ, ಅಪಹಾಸ್ಯ, ಆಜ್ಞೆ, ವಾಗ್ದಂಡನೆ, ದೇಹದಂಡನೆ, ಅಂಗಛೇದನ, ಇವೇ ಮುಂತಾದವುಗಳಲ್ಲದೆ ಮರಣದಂಡನೆಯು ಸಹ ಒಳಗೊಂಡಿರುವುದಾಗಿದೆ. ಉದಾಹರಣೆಗೆ –

➢ ಮಹಾಸಾಮಂತ ಮಾಚಯನಾಯಕನು ವಿಷ್ಣುವರ್ಧನನ ಆಳ್ವಿಕೆಯ ಕಾಲದಲ್ಲಿ ಮಹಾಸಾಮಂತ ಪದವಿಯಿಂದ ತುರುನಾಡನ್ನು ಆಳುತ್ತಿದ್ದನು. ವೈರಗಳೆಂಬ ಮದವೇರಿದ ಆನೆಗಳಿಗೆ ಉಗ್ರ ಭಯಂಕರನಾಗಿದ್ದನು. ಸುಳ್ಳುಹೇಳುವವರ ಮೂಗು ಕೊಯ್ದು ಬುದ್ಧಿಕಲಿಸುವಂತಹವನು ಈತ. ಸಮಾಜದಲ್ಲಿ ಸಹಕಾರ ಮಾತ್ರವಲ್ಲದೆ ಪೈಪೋಟಿ, ಮಾತ್ಸರ್ಯ, ದ್ವೇಷ, ದಂಗೆ ಸಂಘರ್ಷ ಮುಂತಾದ ಹಾನಿಕಾರಕ

ಅಂಶಗಳೂ ಆಗಾಗ್ಗೆ ಕಾಣಿಸಿಕೊಂಡು ಐಕ್ಯವನ್ನು ಅಲುಗಾಡಿಸುವುದುಂಟು ಮತ್ತು ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸುವುದುಂಟು. ಪ್ರತಿಯೊಂದು ಸಮಾಜವು ತನ್ನದೇ ಆದ ರೀತಿನೀತಿಗಳನ್ನು, ಕ್ರಮವಿಧಾನಗಳನ್ನು ಬೆಳೆಸಿಕೊಂಡಿದ್ದು ಅವುಗಳ ಮೂಲಕ ಜನರ ವರ್ತನೆಯನ್ನು ನಿಂತ್ರಿಸುವುದು. ಇಂತಹ ಸಾಧನಗಳ ವ್ಯವಸ್ಥೆಯನ್ನು 'ಸಾಮಾಜಿಕ ನಿಯಂತ್ರಣ' ಎಂದು ಕರೆಯಲಾಗುತ್ತದೆ. ಸಮಾಜವೊಂದರ ವಿಕಾಸದ ಹಂತದಲ್ಲಿ ಈ ಬಗೆಯ ಸಾಮಾಜಿಕ ನಿಯಂತ್ರಣವು ಅವಶ್ಯಕ ಸಾಧನವಾಗಿರುತ್ತದೆ. ಸಮಾಜದ ಸಂಕೀರ್ಣತೆಯ ಸ್ಥಿತಿಗತಿಗನುಸಾರವಾಗಿ ರೂಢಿ, ಸಂಪ್ರದಾಯ, ಲೋಕಾಚಾರ ನೈತಿಕ ನಿಯಮಗಳು, ಶಿಷ್ಟಾಚಾರ, ಧರ್ಮ, ಆಚರಣೆ ಮುಂತಾದ ಅನೌಪಚಾರಿಕ ಸಾಧನಗಳಿಂದ ಹಿಡಿದು ಕಾನೂನು, ಶಾಸನ, ನ್ಯಾಯಾಲಯ ಮುಂತಾದ ಅನೇಕ ಔಪಚಾರಿಕ ಸಾಧನಗಳು ಈ ಸಾಮಾಜಿಕ ನಿಯಂತ್ರಣದ ಕಾರ್ಯದಲ್ಲಿ ಬಳಸಲ್ಪಡುತ್ತವೆ. ಸಮಾಜದಲ್ಲಿ ಸ್ಥಿರತೆ, ಭದ್ರತೆ, ಐಕ್ಯತೆ ಮತ್ತು ಸುವ್ಯವಸ್ಥೆಗಳನ್ನು ಕಾಯ್ದುಕೊಳ್ಳುವುದರಲ್ಲಿ ಸಾಮಾಜಿಕ ನಿಯಂತ್ರಣಗಳ ಪಾತ್ರ ಹಿರಿದಾದುದಾಗಿದೆ.

**6.4..1 ಸ್ಥಳೀಯ ಸಮಾಜದಲ್ಲಿನ ನಿಯಂತ್ರಣ ಪ್ರಕ್ರಿಯೆ :** ಸಾಮಾಜಿಕ ಸ್ಥಾನಮಾನದ ವಿಷಯಕ್ಕೆ ಬಂದಾಗ ಸಮಾಜದ ವಿವಿಧ ರೀತಿಯ ನಾಗರಿಕರಿಗೆ ಅಂಕುಶವಾಗಿ ಕಾರ್ಯನಿರ್ವಹಿಸಿದ ಸಂಸ್ಥೆಗಳಲ್ಲಿ ದೇವಾಲಯಗಳು ವಿಶೇಷವಾಗಿವೆ. ದಂಡಗಳನ್ನು ಸರ್ಕಾರವು ವಿಧಿಸುತ್ತಿದ್ದಾಗ ರಾಜಕೀಯ ವಿಪ್ಲವಗಳು ಸಂಭವಿಸುವ ಸಾಧ್ಯತೆಗಳಿದ್ದವು. ಅದಕ್ಕಾಗಿ ದಂಡಗಳನ್ನು ವಿಧಿಸುವ ಕಾರ್ಯವನ್ನು ರಾಜಸ್ವವು ದೇವಾಲಯದಂತಹ ಸಂಸ್ಥೆಗಳಿಗೆ ನೀಡಿದ ಪರಿಣಾಮವಾಗಿ ಅದು ಧಾರ್ಮಿಕ ಸ್ವರೂಪವನ್ನು ಪಡೆದುಕೊಂಡವು. ಇದು ಸ್ಥಳೀಯ ಸಮಾಜದಲ್ಲಿನ ನಿಯಂತ್ರಣ ಪ್ರಕ್ರಿಯೆಯ ಬಹಳ ದೊಡ್ಡ ಸಾಧನೆಯಾಗಿದೆ. ಸಮಾಜದಲ್ಲಿ ಅನ್ಯಾಯ, ಅಕ್ರಮಗಳು ನಡೆದಾಗ ಎಚ್ಚೆತ್ತು ಸಮಾಜದ ಮೇಲೆ ದಂಡ ವಿಧಿಸುವ ಅಧಿಕಾರವನ್ನು ದೇಗುಲಗಳು ಹೊಂದಿದ್ದವು. ಸರ್ಕಾರವು ಯಾವ ಧಾರ್ಮಿಕ ವಿಷಯದಲ್ಲೂ ಹಸ್ತಕ್ಷೇಪ ಮಾಡಲು ಹೆದರುತ್ತಿದ್ದವೋ. ಅಷ್ಟೆ ದೇವಾಲಯಗಳು ಸ್ವತಂತ್ರವಾಗಿ ಜನರ ಸಾಮಾಜಿಕ ಆಚರಣೆಗಳಿಗೆ ಇಂಬು ನೀಡುತ್ತಿತ್ತು. ಇಂತಹ ಕೆಲವು ದಂಡ ಪ್ರಕರಣಗಳನ್ನು ಗಮನಿಸಬಹುದು. ಇದು ಹೊಯ್ಸಳಯುಗದ ಸಾಮಾಜಿಕ ನ್ಯಾಯಪದ್ಧತಿಯ ಮೇಲೆ ಹಾಗೂ ನಡೆಯಲಾಗುತ್ತಿದ್ದ ಅಪರಾಧ ಪ್ರಕರಣಗಳ ಮೇಲೆ ಹೊಸಬೆಳಕನ್ನು ಚೆಲ್ಲಲಿದೆ.

ಕೋಗಳಿಯ ಶಾಸನವು[92] ಚಾಳುಕ್ಯ ಅರಸ ಆಹವಮಲ್ಲದೇವನ ಕಾಲದಲ್ಲಿ ಕೋಗಳಿಯ ಸ್ಥಾನಾಧಿಪತಿ ಗಣಧರ ದೇವ ಭಟ್ಟಾರಕರೇ ಮೊದಲಾಗಿ ಅಲ್ಲಿಯ ಗಾವುಂಡ, ಸೆಟ್ಟಿ, ಬ್ರಾಹ್ಮಣರು ಸೇರಿ ಭೂದಾನ ನಡೆಸಿದ ವಿಷಯದಲ್ಲಿ ತೆರಿಗೆ ನೀಡದೇ ತಪ್ಪಿಸಿಕೊಳ್ಳುವವರಿಗೆ ಮತ್ತು ಹಾದರ ಮುಂತಾದ ಕೃತ್ಯಗಳಲ್ಲಿ ತೊಡಗಿರುವವರೆಗೆ ದಂಡವನ್ನು ವಿಧಿಸಲಾಗಿದೆ. ಹಾದರ ಮಾಡಿದವನ ಮೂಗನ್ನು ಕೊಯ್ಯುವುದು, ಹಾದರಿಗನಿಗೆ ಮರಣದಂಡನೆ ಶಿಕ್ಷೆ ಎಂದು ಹೇಳಿರುವುದು ವಿಶೇಷವಾಗಿದೆ. ಮನೆವಾರ್ತೆಗರ

ಮನೆ ಹೊಕ್ಕಡೆ 12 ಗದ್ಯಾಣ ದಂಡ, ಯಾರನ್ನಾದರೂ ಹೊಡೆದರೆ ಅವನಿಗೆ 8 ಹಣ, ಪ್ರಮಾಣವನ್ನು ಮೀರಿದವನಿಗೆ 12 ಹಣ ದಂಡ ನೀಡಬೇಕು ಎಂದು ವಿಧಿಸಲಾಗಿದೆ.

ಕರಡ್ಕಲ್ ಗ್ರಾಮದ ಕ್ರಿ.ಶ. 1079ರ ಶಾಸನವು[93] ಸೂಕ್ಷ್ಮಶಿವಭಟಾರ ಮತ್ತು ಪ್ರಮುಖ ತಪೋಧನರು ಸೇರಿ ದಾಸಿಸೆಟ್ಟಿಗೆ ಮತ್ತು ನರದರಿಗೆ ಕೆಲವು ಕಟ್ಟಳೆಗಳನ್ನು ವಿಧಿಸಿದಾಗ ನಡೆಮುಡಿಗೆ ಸಂಬಂಧಪಟ್ಟ ಒಂದು ಪ್ರಮುಖ ಸಂಗತಿಯನ್ನು ಈ ಶಾಸನವು ತಿಳಿಸುತ್ತದೆ. ಕೀಳು ಕುಲದವರು ತಮ್ಮ ಮದುವೆಯ ಬಂಡಿಯನ್ನು ಅಂಗಡಿ ಬೀದಿಯೊಳಕ್ಕೆ ತರಬಾರದೆಂದು ನಿಯಮ ಮಾಡಿ ಇದನ್ನು ಮೀರಿ ತಂದರೆ 12 ಗದ್ಯಾಣ ಹೊನ್ನನ್ನು ದಂಡವಾಗಿ ತೆರಬೇಕು ಎಂದಿದೆ. ಈ ವ್ಯಾಪಾರದ ಸಂದರ್ಭದಲ್ಲಿ ಬಡಿದವನಿಗೆ 12 ಹಣ ದಂಡ, ಎಂಜಲು ಉಗಿದರೆ, ಚಪ್ಪಲಿಯಲ್ಲಿ ಹೊಡೆದರೆ 6 ಹಣ ದಂಡ, ಇರಿದವನಿಗೆ 3 ಗದ್ಯಾಣ ದಂಡ ಎಂದು ನಿಷ್ಕರ್ಷೆ ಮಾಡಲಾಗಿದೆ. ಒಟ್ಟಿನಲ್ಲಿ ಸಮಾಜವೊಂದರ ನಿಯಂತ್ರಣವನ್ನು ಈ ರೀತಿಯ ಕಟ್ಟಳೆಗಳ ಮೂಲಕ ಹಾಗೂ ದಂಡಗಳ ಮೂಲಕ ಮಾಡಲಾಗುತ್ತಿತ್ತು. ಇವುಗಳ ಉಸ್ತುವಾರಿಯನ್ನು ದೇಗುಲಗಳಿಗೆ ವಹಿಸಲಾಗಿತ್ತು. ಸಾಮಾಜಿಕವಾಗಿ ನಿಯಂತ್ರಣ ಸಾಧಿಸುತ್ತಲೇ ಆರ್ಥಿಕವಾಗಿ ಸಬಲವಾಗುತ್ತಿದ್ದ ರಾಜಮಾರ್ಗವಿದು.

**6.4.2 ಸಾಮಾಜಿಕ ಅನುವರ್ತನೆ :** ಸಮಾಜವು ತನ್ನ ನಿಯಮಗಳ ವ್ಯವಸ್ಥೆಯ ಮೂಲಕ ಸಾಮಾಜಿಕ ಕ್ರಮವನ್ನು ಕಾಯ್ದುಕೊಳ್ಳುವುದು. ಸಮಾಜದಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ತಿಳಿಸುವ ನಿಯಮಗಳ ವ್ಯವಸ್ಥೆಗೆ ಸಾಮಾನ್ಯವಾಗಿ ಜನರು ಬದ್ಧವಾಗಿಯೇ ನಡೆಯುವರು. ಹೀಗೆ ಸಾಮಾಜಿಕ ನಿಯಮಗಳಿಗೆ ಅನುಸಾರವಾಗಿ ನಡೆಯುವುದೇ ಅನುವರ್ತನೆ. ಸಾಮಾಜಿಕ ನಿಯಮಗಳನ್ನು ಉಲ್ಲಂಘಿಸಿದವರನ್ನು ಅಪವರ್ತನೆ ಎಂದು ಕರೆಯುತ್ತಾರೆ. ಸಾಮಾಜಿಕ ನಿಯಮಗಳಿಗೆ ಅನುಸಾರವಾಗಿ ನಡೆದುಕೊಳ್ಳುವುದನ್ನು ಅನುವರ್ತನೆ ಎಂದು ಕರೆಯಲಾಗುತ್ತದೆ. ತೆರಿಗೆ ಕಟ್ಟುವುದು ಒಂದು ಸಾಮಾಜಿಕ ಅನುವರ್ತನೆ. ಹೊಯ್ಸಳ ಮಹಾಮಂಡಲೇಶ್ವರರು ತಮ್ಮ ಆಳರಸರ ಸುಭದ್ರ ರಾಜಕೀಯ ವ್ಯವಸ್ಥೆಯ ಸುಭಗತೆಗೆ ಬಹುಳ ಮುಖ್ಯವಾದ ಸಂಪತ್ತಿನ ಸಂಚಯನದಲ್ಲಿ ತೆರಿಗೆ ವ್ಯವಸ್ಥೆಯನ್ನು ಅತ್ಯಂತ ದಕ್ಷವಾಗಿ ನಿರ್ವಹಿಸುತ್ತಿದ್ದರು. ತೆರಿಗೆಗಳ ರೂಪುರೇಶೆ, ಅವುಗಳನ್ನು ನಿರ್ಧರಿಸುವ ಮಾನದಂಡಗಳೂ, ತೆರಿಗೆ ಹಣದ ಸದುಪಯೋಗ, ತೆರಿಗೆ ಮನ್ನಾ ಇತ್ಯಾದಿ ಗಳನ್ನು ಅತ್ಯಂತ ಆಸ್ಥೆಯಿಂದ ಮತ್ತು ದೂರಾಲೋಚನೆಗಳಿಂದ ನಿರ್ವಹಿಸುತ್ತದರು ಎಂಬುದಕ್ಕೆ ಅವರ ಶಾಸನಗಳು ದಾಖಲೆಯನ್ನೊದಗಿಸುತ್ತವೆ.

ಮಹಾಪಸಾಯತ ಕಳುವ ಸಾಯಣ್ಣನು 3ನೆಯ ಬಲ್ಲಾಳನ ಅಧಿಕಾರಿಯಾಗಿದ್ದನು. ವೀರಬಲ್ಲಾಳನ ಕಾಲದಿಂದ ಹಲವು ಅರಸರು ಆಸಂದಿನಾಡಿನಲ್ಲಿರುವ ಬ್ರಹ್ಮೇಶ್ವರ ದೇವರ ದೇವದಾನದ ಭೂಮಿಯಾದ ಬಾಣ ಊರನ್ನು ಭಂಢಾರವಾಗಿ ಕುತ್ತುವತ್ತಿಯಾಗಿ ಹಲವು ಕಾಲ ನಿರ್ವಹಿಸಿದ್ದರು. 3ನೆಯ ಬಲ್ಲಾಳನು ಅಧಿಕಾರಕ್ಕೆ ಬಂದ ಮೇಲೆ ಅದನ್ನು ಅಗ್ರಹಾರವನ್ನಾಗಿ ಮಾಡುವಂತೆ ಕಳುವ ಸಾಯಣ್ಣನವರಿಗೆ ದಾನವಿತ್ತನು. ಸಾಯಣ್ಣನವರಿಂದ ಅಗ್ರಹಾರದ ಮಹಾಜನಗಳು ತಮ್ಮ ಸ್ವಾಮ್ಯಕ್ಕೆಂದು 6 ವೃತ್ತಿಯನ್ನು

ದಾನವನ್ನಾಗಿ ಪಡೆದು ಅಗ್ರಹಾರವನ್ನಾಗಿ ಮಾಡಲು ಸಮ್ಮತಿಸಿದರು. ಆ ಊರನ್ನು ಸಾಯಣ್ಣನು ಅಗ್ರಹಾರವನ್ನಾಗಿ ಪರಿವರ್ತಿಸಿದನು. ಅದಕ್ಕೆ ಲಕ್ಷ್ಮಿಪುರವೆಂದು ನಾಮಕರಣ ಮಾಡಲಾಯಿತು. 21 ಗದ್ಯಾಣಗಳನ್ನು ಬಾಣ ಊರಿನ ಅಶೇಷ ಮಹಾಜನಗಳಿಂದ ಕುಳವಾಗಿ ಪಡೆದ ಬ್ರಹ್ಮೇಶ್ವರದ ಮಹಾಜನಗಳು ಅದನ್ನು ದೇವರ ಅಮೃತಪಡಿ ನೈವೇದ್ಯಕ್ಕೆ, ನಿತ್ಯ ಉಪಾಹಾರಕ್ಕೆ ಅಕ್ಕಿ ವೊಕ್ಕುಳ ನಂದಾದೀವಿಗೆಗೆ 2 ಹೂವು ಗಂಧ ಧೂಪ ನಿತ್ಯಾರತಿ ವೈಶಾಖ ಪೌರ್ಣಮಿ ಕಾರ್ತಿಕ ಪೌರ್ಣಮಿಯಲ್ಲಿ ತುಪ್ಪದ ಮಾಲೆ ದೀವಿಗೆಗೆಂದು ದಾನವಿತ್ತರು.[94]

**6.5 ಸಮಾಜದ ಪ್ರಭಾವಳಿ –ಸಂಸ್ಕೃತಿ ಪರಿಸೂಚಿ**

ಜಗತ್ತಿನ ಪ್ರತಿಯೊಂದು ಸಮಾಜವೂ ತನ್ನದೇ ಆದ ವಿಶಿಷ್ಟ ಸಂಸ್ಕೃತಿಯೊಂದನ್ನು ಹೊಂದಿರುವುದು. ಸಂಸ್ಕೃತಿಗಳೂ ವಿಭಿನ್ನವಾಗಿಯೂ ಅಸಮಾನವಾಗಿಯೂ ಇರುವುದು ಸ್ವಾಭಾವಿಕ. ಜಗತ್ತಿನ ಸಮಾಜಗಳಲ್ಲಿ ಕಾಣಬರುವ ಇಂತಹ ಸಾಂಸ್ಕೃತಿಕ ಭಿನ್ನತೆಗಳು ಹಾಗೂ ಅಸಮಾನತೆಗಳ ಹೊರತಾಗಿಯೂ ಅವುಗಳ ನಡುವೆ ನಾವು ಕೆಲವು ಸಾದೃಶ್ಯಗಳನ್ನು ಕಾಣಬಹುದು. ಉದಾ: ಬಹುತೇಕ ಸಮಾಜಗಳಲ್ಲಿ ಹಲವು ವೈವಿಧ್ಯಗಳ ನಡುವೆಯೂ ರೂಢಿ, ಪದ್ದತಿ, ಪರಂಪರೆ, ನಂಬಿಕೆ, ಮೌಲ್ಯಗಳು, ಆಚರಣೆಗಳು, ಸಂಸ್ಥೆಗಳು ಮುಂತಾದ ಅಭೌತ ವಸ್ತುಗಳಿರುವಂತೆ ಮನೆ, ಒಡವೆಗಳು, ಪೀಠೋಪಕರಣಗಳು, ಮೇಜು, ಕುರ್ಚಿ, ಮಂಚ, ಸೈಕಲ್, ಕಾರು ಮುಂತಾದ ಭೌತವಸ್ತುಗಳೂ ಇವೆ. ಹೀಗೆ ಸಮಾಜವೊಂದರ ಸಂಸ್ಕೃತಿಯು ಒಳಗೊಂಡಿರುವ ಭೌತ ಮತ್ತು ಅಭೌತ ವಸ್ತುಗಳ ಒಟ್ಟು ಸಮಷ್ಠಿಯನ್ನು ಸಂಸ್ಕೃತಿ ಪರಿಸೂಚಿ ಎಂದು ಕರೆಯಲಾಗಿದೆ.

ಸಂಸ್ಕೃತಿಯನ್ನು ಎರಡು ಪ್ರಕಾರಗಳಲ್ಲಿಯೂ ವಿಶ್ಲೇಷಿಸಲಾಗುತ್ತದೆ. ಒಂದು ಭೌತ ಸಂಸ್ಕೃತಿ; ಇನ್ನೊಂದು ಅಭೌತ ಸಂಸ್ಕೃತಿ. ಭೌತ ಸಂಸ್ಕೃತಿಯು ದೃಷ್ಟಿಗೆ ಗೋಚರವಾಗುವಂತಹ ಮತ್ತು ಮೂರ್ತಸ್ವರೂಪದ ಮಾನವ ಬಳಕೆಯ ಅನೇಕಾನೇಕ ವಸ್ತುಗಳನ್ನು ಪ್ರತಿಬಿಂಬಿಸುವುದು. ಉದಾ: ಕಟ್ಟಡಗಳು, ಉಪಕರಣಗಳು, ಸಾಧನಗಳು, ಸೇತುವೆಗಳು ಇತ್ಯಾದಿ. ಮಾನವನ ಜೀವನದ ಎಲ್ಲಾ ಬಗೆಯ ಉಪಕರಣಗಳನ್ನು ಪರಿಕರಗಳನ್ನು ಒಳಗೊಂಡಿರುವ ವ್ಯವಸ್ಥೆಯೇ ಸಂಸ್ಕೃತಿ ಎಂಬುದಾಗಿ ಮೆಕೈವರ್ ಮತ್ತು ಪೇಜ್ ಹೇಳುತ್ತಾನೆ. ಈ ಬಗೆಯನ್ನು ನಾಗರಿಕತೆ ಎಂತಲೂ ಕರೆಯುತ್ತಾರೆ. ಇದನ್ನು ಈ ಮುಂದಿನಂತೆ ವಿಶೇಷವಾದ ನೆಲೆಗಟ್ಟಿನಲ್ಲಿ ಮುನ್ನಲೆಗೆ ತರುತ್ತಿದ್ದೇನೆ–

**6.5.1 ಭೌತ ಸಂಸ್ಕೃತಿ –ಸಾಮಾಜಿಕ ಅಸ್ಮಿತೆ ಮತ್ತು ಸ್ಥಳೀಯ ಸಾಮುದಾಯಿಕ ನಿರ್ಮಿತಿಗಳು :** ಸಾಮಾಜಿಕವಾಗಿ ವ್ಯಕ್ತಿಯೊಬ್ಬ ತನ್ನ ಅಸ್ಮಿತೆಯನ್ನು ರೂಪಿಸಿಕೊಳ್ಳಬೇಕಾದರೆ ತನ್ನದೇ ಆದ ಅಧಿಕಾರ ವಲಯವೊಂದನ್ನು ಸೃಷ್ಟಿಸಿಕೊಳ್ಳಬೇಕಾದ ಅನಿವಾರ್ಯತೆ ಇದ್ದೇ ಇರುತ್ತದೆ. ಒಂದು ನಿಗಧಿತವಾದ ವ್ಯವಸ್ಥೆಯ ನೇತಾರರಾದವರು ಯಾವುದೇ ಸಂದರ್ಭದಲ್ಲೂ ಸುಲಭವಾಗಿ ಗುರುತಿಸಿಕೊಳ್ಳುತ್ತಾರೆ. ಹೀಗೆ ರೂಪುಗೊಳ್ಳುವುದರ ಮೂಲಕ ತನ್ನದೇ ಆದ ವಲಯವೊಂದನ್ನು ಹಿಗ್ಗಿಸಿಕೊಳ್ಳುವುದು ಹಾಗೂ ಆ

ಸಮುದಾಯದ ಅಭ್ಯುದಯಕ್ಕಾಗಿ ದುಡಿಯುವುದು ಸಾಮಾಜಿಕವಾಗಿ ಬಹಳ ಮುಖ್ಯವಾದ ಕಾಯಕವಾಗಿದೆ. ದೇವಾಲಯವೆನ್ನುವುದು ಕೂಡ ಒಂದು ವ್ಯವಸ್ಥೆ. ಸಮಾಜದ ಎಲ್ಲ ಸಮುದಾಯಗಳೂ ತಮ್ಮದೇ ಆದ ಆಸ್ತಿಕವಲಯವನ್ನು ಪೋಷಿಸಿಕೊಂಡು ಬಂದಿರುತ್ತದೆ. ಈಗಿರುವ ದೇವಾಲಯ ವ್ಯವಸ್ಥೆಗೆ ಏನಾದರೊಂದು ಸೇರ್ಪಡೆ ಮಾಡಬೇಕಾದರೆ ವ್ಯಕ್ತಿಗಳಿಗೆ ಯಾವ ಸ್ವಾತಂತ್ರ್ಯವೂ ಇರುವುದಿಲ್ಲ. ಈ ಸಂದರ್ಭದಲ್ಲಿ ಹಣವುಳ್ಳವರು ತಮ್ಮ ಹೆಸರಿನಲ್ಲಿಯೇ ದೇವಾಲಯಗಳನ್ನು ನಿರ್ಮಿಸಿ ಹೊಸ ವ್ಯವಸ್ಥೆಯೊಂದನ್ನು ನೆರವೇರಿಸಿಕೊಂಡಂತೆ ತೋರುತ್ತದೆ. ಅಂತಹ ಕೆಲವೇ ಕೆಲವು ಉದಾಹರಣೆಗಳನ್ನು ನಾವೀಗ ಗಮನಿಸಬಹುದು. ಹಾಗೆ ನೋಡಿದರೆ ದೇವಾಲಯ ವ್ಯವಸ್ಥೆ ರೂಪುಗೊಂಡಿದ್ದೇ ತಮ್ಮ ಪ್ರೀತಿಪಾತ್ರರ ಹೆಸರುಗಳನ್ನು ಅಜರಾಮರಗೊಳಿಸಲು ಅವರ ಸಮಾಧಿಗಳ ಮೇಲೆ ದೇಗುಲಗಳನ್ನು ನಿರ್ಮಿಸಲು ಆರಂಭಿಸುವುದರ ಮೂಲಕವಲ್ಲವೇ?

ಕ್ರಿ.ಶ. 1061ರಲ್ಲಿ ಹೊಯ್ಸಳದೊರೆ ವಿಷ್ಣುವರ್ಧನನ ಕಾಲದಲ್ಲಿ ಬಿಣ್ಣಾಂಡಿಯು ಮುದುಗೆರೆಯನ್ನು ಆಳುತ್ತಿದ್ದನು. ಇಲ್ಲಿ ತಮ್ಮ ಮುತ್ತೆಯ್ಯನು, ಮುತ್ತಬ್ಬೆಯು ಹಾಗೂ ತಮ್ಮ ತಾಯಿಯಾದ ಚಾನವ್ವೆಯು ಸ್ವರ್ಗಸ್ಥರಾದ ನೆನಪಿಗೆ ಗರಂಜೇಶ್ವರ ದೇವರನ್ನು ಸ್ಥಾಪಿಸಿದನು.[95] 1091ರಲ್ಲಿ ಚಾಳುಕ್ಯ ತ್ರಿಭುವನಮಲ್ಲದೇವನ ಪತ್ನಿ ಹಿರಿಯ ಕೇತಲದೇವಿಯು ಬಲ್ಲಕುಂದೆ 300, ಬಳಿಯ ತೆಕ್ಕೆಕಲ್ಲು 12ರನ್ನು ಆಳುತ್ತಿದ್ದಾಗ ಸಿರಿಗುಪ್ಪೆಯಲ್ಲಿ ತನ್ನ ಹೆಸರಿನಲ್ಲಿ ನಿರ್ಮಾಣವಾದ ಕೇತಲೇಶ್ವರಿಗೆ ದೇವರಿಗೆ ದಾನ ನೀಡಿದ್ದಾಳೆ.[96] ಕ್ರಿ.ಶ.1096ರಲ್ಲಿ ಬಳ್ಳಿವಿನಾಡ ನಾಡಗಾವುಂಡನಾದ ಭಾಸಗಾವುಂಡನು ರಣಕಿಯ ಕಟ್ಟದ ಊರನ್ನು ಮಾಡಿಸಿ, ಬಳ್ಳಿಗೆರೆಯನ್ನು ಕಟ್ಟಿಸಿದಾಗ ಬಾಚೇಶ್ವರ ದೇವಾಲಯವನ್ನು ನಿರ್ಮಿಸಿದನು.[97] ಕ್ರಿ.ಶ. 1106ರಲ್ಲಿ ತ್ರಿಭುವನಮಲ್ಲದೇವನ ಕಾಲದಲ್ಲಿ ನಿಟ್ಟರವೆ ಎಪ್ಪತ್ತನ್ನು ಆಳುತ್ತಿದ್ದ ಬಾಚರಸನ ಮಗನಾದ ಬೀಚಗಾವುಂಡನು ತನ್ನ ಹೆಸರಿನಲ್ಲಿ ಬೀಚೇಶ್ವರ ದೇವಾಲಯವನ್ನು ನಿರ್ಮಿಸಿದನು.[98] ಕ್ರಿ.ಶ.1123ರಲ್ಲಿ 6ನೇ ವಿಕ್ರಮಾದಿತ್ಯನ ದಂಡನಾಯಕನಾದ ನಿಂಬಣಯ್ಯನು ತನ್ನ ಹೆಸರಲ್ಲಿ ನಿಂಬೇಶ್ವರ ದೇವರನ್ನು ಪ್ರತಿಷ್ಠೆಗೈದನು.[99] ಕ್ರಿ.ಶ.1138ರಲ್ಲಿ ಎರಕ ಗಾವುಂಡನು ಎರಕೇಶ್ವರ ದೇವಾಲಯವನ್ನು ಸ್ಥಾಪಿಸಿದನು.[100] ಬೇಲೂರಿನ ಬಿಟ್ಟಿಬೋವನು ಬೇಲೂರಿನಲ್ಲಿ ಬಿಟ್ಟೇಶ್ವರ ದೇವಾಲಯವನ್ನು ನಿರ್ಮಾಣ ಮಾಡಿದನು.[101] ಹಳೇಬೀಡಿನಲ್ಲಿ ಹೊಯ್ಸಳೇಶ್ವರ ಹಾಗೂ ಶಾಂತಲೇಶ್ವರ ದೇವಾಲಯವನ್ನು ನಿರ್ಮಿಸಲಾಯಿತು.[102] 1206ರಲ್ಲಿ ಕುರುವತ್ತಿಯ ಶಾಸನವು ತಿಳಿಸುವಂತೆ ಅಹವಮಲ್ಲೇಶ್ವರ ದೇವಾಲಯವು ಅಹವಮಲ್ಲನ ನೆನಪಿನಲ್ಲಿ ನಿರ್ಮಾಣವಾಗಿತ್ತು.[103]

ಇದು ಕೇವಲ ಕೆಲವೇ ಕೆಲವು ಉದಾಹರಣೆಗಳಷ್ಟೆ ಆದರೆ ಈ ರೀತಿಯಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡವು. ಸಾಮಾಜಿಕವಾಗಿ ತಮ್ಮ ಪ್ರತಿಷ್ಠೆಯನ್ನು ಪ್ರದರ್ಶಿಸಿಕೊಳ್ಳಲು ಹಾಗೂ ತಮಗೂ ಒಂದು ಅನನ್ಯವಾದ ಅಸ್ಮಿತೆಯಿದೆಯೆಂಬ ಕಾರಣಕ್ಕೆ ಈ ರೀತಿಯ ದೇವಾಲಯಗಳನ್ನು ನಿರ್ಮಿಸುವ ಪರಂಪರೆ ಮುಂದುವರೆಯಿತು. ಈ ದೇವಾಲಯಗಳನ್ನು ಯಾರೇ ನಿರ್ಮಿಸಿದರೂ ಆಡಳಿತ ವ್ಯವಸ್ಥೆ ಮಾತ್ರ ಮಹಾಜನರ ಕೈಯಲ್ಲೇ ಇರುತ್ತಿತ್ತು ಅಥವಾ ಆ ಕಾಲದಲ್ಲಿ ದೇಗುಲಗಳ ಉಸ್ತುವಾರಿಯಲ್ಲಿ

ಅಸಾಧಾರಣವಾದ ಪ್ರತಿಭೆಯನ್ನು ಮೆರೆದು ಸಾಮಾಜಿಕ–ಸಾಂಸ್ಕೃತಿಕ ಮುನ್ನಡೆಗೆ ಕಾರಣರಾಗಿದ್ದ ಮಹಾಜನರನ್ನೇ ತಮ್ಮ ದೇವಾಲಯಗಳ ಮೇಲ್ವಿಚಾರಣೆಗಾಗಿ ನೇಮಿಸಿಕೊಳ್ಳಲಾಗುತ್ತಿತ್ತು. ತಮ್ಮ ದೇವಾಲಯಗಳ ಆಡಳಿತದಲ್ಲಿ ಹೀಗೆ ವೈಯಕ್ತಿಕ ದೇವಾಲಯಗಳನ್ನು ನಿರ್ಮಿಸಲು ಪ್ರೋತ್ಸಾಹಿಸಿದ ಆಡಳಿತ ಮಂಡಳಿಯು ಅನೇಕರನ್ನು ತಮ್ಮ ತಮ್ಮ ಹೆಸರಿನಲ್ಲಿಯೇ ದೇಗುಲ ನಿರ್ಮಿಸಲು ಕರೆಕೊಟ್ಟಿರಬೇಕು. ಇದರಿಂದ ಅನೇಕ ದಾನಗಳು ದೇಗುಲಗಳಿಗೆ ಸಂದಾಯವಾದವು. ಇನ್ನೂ ಎಷ್ಟೋ ಕಡೆ ಆ ದೇವಾಲಯಗಳಿಗೆ ಅದೇ ಹೆಸರುಗಳು ಮುಂದುವರೆದುಕೊಂಡು ಬಂದಿವೆ. ಇದರಿಂದ ಸಾಮಾಜಿಕವಾಗಿ ದೇಗುಲ ಸಂಸ್ಕೃತಿಯಲ್ಲಿ ಪ್ರತಿಷ್ಠೆಯಿಲ್ಲದ ವರ್ಗಗಳೆಲ್ಲಾ ಹೊಯ್ಸಳ ಮಹಾಮಂಡಳೇಶ್ವರರ ಅಧಿಕಾರದ ಅವಧಿಯಲ್ಲಿ ಮುನ್ನಲೆಗೆ ಬರಲಾಯಿತು.

**6.5.2 ಅಭೌತ ಸಂಸ್ಕೃತಿ:** ಅಭೌತ ಸಂಸ್ಕೃತಿಯು ಮಾನವನ ಅಮೂರ್ತ ಸ್ವರೂಪದ ಭಾಷೆ, ನಂಬಿಕೆ, ಆಚರಣೆ, ರೂಢಿ, ಸಂಪ್ರದಾಯಗಳು, ಲೋಕಾಚಾರ, ನೈತಿಕ ನಿಯಮಗಳು, ಮೌಲ್ಯಾದರ್ಶಗಳು, ಸಿದ್ಧಾಂತಗಳು, ಜೀವನದರ್ಶನ, ಕಲೆ, ಸಾಹಿತ್ಯ, ಸಂಗೀತ, ನೃತ್ಯ, ರಾಜಕೀಯ, ಆರ್ಥಿಕ, ಶೈಕ್ಷಣಿಕ ಸಂಸ್ಥೆಗಳು ಮುಂತಾದವು. ಮಹಾಮಂಡಳೇಶ್ವರರ ಹಲವು ಶಾಸನಗಳಲ್ಲಿ ಈ ಅಭೌತ ಸಂಸ್ಕೃತಿಯು ಇಡಿಕಿರಿದಿರುವುದು ತಿಳಿಯುತ್ತದೆ. ಉದಾಹರಣೆಗೆ–

- ಧರ್ಮ ಅರ್ಥ ಕಾಮಗಳೆಂಬ ಪುರುಷಾರ್ಥದ ಪರಿಕಲ್ಪನೆಗಳು ಪ್ರಯೋಗಗೊಂಡು ಅಂದಿನ ಸಾಮಾಜಿಕ ನಂಬಿಕೆಗಳಿಗೆ ಹಿಡಿದ ಕನ್ನಡಿಯಾಗಿವೆ.[104]
- ಹೊಯ್ಸಳ ಮಹಾಮಂಡಳೇಶ್ವರರ ಶಾಸನಗಳು ಮತ್ತು ಸಾಹಿತ್ಯಕ ಕೃತಿಗಳಲ್ಲಿ ಅಂದಿನ ಸಮಾಜದ ಪ್ರಾಪಂಚಿಕ ಮತ್ತು ಪಾರಮಾರ್ಥಿಕ ಮೌಲ್ಯಗಳು, ಜಾತ್ರೆ–ಮಹೋತ್ಸವಗಳು, ಜೈನ–ವೈಷ್ಣವ–ಶೈವ ಸಿದ್ಧಾಂತಗಳು, ಸತಿಪದ್ಧತಿ–ಗರುಡಪದ್ಧತಿ–ಸಲ್ಲೇಖನ ಪದ್ಧತಿಗಳು, ಧರ್ಮದ ಗುರುಗಳು ಆಚರಿಸುತ್ತಿದ್ದ ಸಂಪ್ರದಾಯಬದ್ಧ ನಡಾವಳಿಗಳು ಮತ್ತು ಮಹಾಮಂಡಳೇಶ್ವರರ ನಿರ್ಮಿತಿಗಳಾದ ದೇಗುಲಗಳಲ್ಲಿನ ಅಪಾರ ಪ್ರಮಾಣದಲ್ಲಿ ಕಂಡುಬರುವ ಕಲೆ–ವಾಸ್ತುಶಿಲ್ಪ–ಸಂಗೀತ–ನೃತ್ಯಸಂಬಂಧಿ ಅಂಶಗಳು ಅಂದಿನ ಸಮಾಜದಲ್ಲಿ ಬೇರೂರಿದ್ದ ಅಭೌತ ಸಂಸ್ಕೃತಿಯನ್ನು ನಿಚ್ಚಳಗೊಳಿಸುತ್ತವೆ.
- ಆಳರಸನಿಗೋ ಅಧಿಕಾರಿಗೋ ಒಳಿತಾಗಲಿ ಎಂದು ಹಾರೈಸಿ ಮಾಡಿದ ದಾನಪ್ರಕ್ರಿಯೆಗಳು ಇದಕ್ಕೆ ಒಳ್ಳೆಯ ಉದಾಹರಣೆಯಾಗಿವೆ. ಜೊತೆಗೆ ಸಮಕಾಲೀನ ಸಮಾಜದ ಜನಪದರಲ್ಲಿ ಆಳವಾಗಿ ಪರಂಪರಾಗತವಾಗಿ ಬೇರೂರಿದ್ದ ನಂಬಿಕೆಯ ದ್ಯೋತಕಗಳಾಗಿವೆ. ಉದಾಹರಣೆಗೆ : ರಾಮನಾಥನು ಆಳುತ್ತಿದ್ದಾಗ ಮಹಾಪ್ರಧಾನಿ ಚಿಕ್ಕದೇವದಂಡನಾಯಕ ಅಣ್ಣಾಮಲೈದೇವರು ಎಂದೆನಿಸಿದ್ದನು. ಈತನು ಅರಸನ ಆರೋಗ್ಯ ವೃದ್ಧಿಯಾಗಲೆಂದು ಅವನು ಹುಟ್ಟಿದ ನಕ್ಷತ್ರದಲ್ಲಿ ಕೈವಾರದ ಭೀಮೇಶ್ವರ ದೇವರಿಗೆ ಕೆಲವು ಭೂಮಿಯನ್ನು ಸರ್ವಮಾನ್ಯವಾಗಿ ಅಕರವಾಗಿ ದಾನವಿತ್ತನು.[105]

**6.5.3 ಭೌತ ಮತ್ತು ಅಭೌತ ಸಂಸ್ಕೃತಿಗಳ ಸಮ್ಮಿಲನ : ಮರಣಪದ್ದತಿಗಳು:** ಗ್ರಾಮದೇವತೆಗಳ ಗುಡಿಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಬಲಿದಾನ ಕಲ್ಲುಗಳು, ಜನಪದರ ಮನೆಗಳು ಮೊದಲಾದವು. ಇವುಗಳನ್ನು ಜನತೆಯ ಸ್ಮಾರಕಗಳೆಂದು ಧಾರಾಳವಾಗಿ ಕರೆಯಬಹುದು. ಹೊಯ್ಸಳರ ಕಾಲದಲ್ಲಿ ಗ್ರಾಮದೇವತೆಗಳ ಉಲ್ಲೇಖವು ಕಡಿಮೆಯಿದ್ದರೂ ಹಲವಾರು ಸಂದರ್ಭಗಳಲ್ಲಿ ಸಹ ಮಾಸ್ತಿಕಲ್ಲುಗಳಲ್ಲಿನ ಮಾಸ್ತಿಯೇ ಗ್ರಾಮದೇವತೆಯಾಗಿ ಪೂಜಿಸಲ್ಪಡುತ್ತಿದ್ದವು. ವೀರಗಲ್ಲುಗಳ ವೀರನ ಆರಾದನೆ ಸಹ ಆರಂಭಗೊಂಡು ಅವನು ಗ್ರಾಮದೇವರಾಗಿ ಪೂಜಿಸಲ್ಪಡುತ್ತಿದ್ದ. ಅವುಗಳಿಗೆ ಗುಡಿಗಳನ್ನು ಕಟ್ಟಿ ಅವುಗಳನ್ನು ಮಾಸ್ತಿಗುಡಿಗಳು, ವೀರಗಾರರ ಗುಡಿಗಳು ಎಂದು ಕರೆಯಲಾಗುತ್ತಿತ್ತು. ಸಾಮಾನ್ಯವಾಗಿ ಇವುಗಳನ್ನು ಮಣ್ಣಿನಿಂದ ನಿರ್ಮಿಸಿ ದ್ದಿರಬಹುದು. ಅಥವಾ ಕೇವಲ ನಾಲ್ಕು ಒದೆಗಲ್ಲುಗಳನ್ನಿಟ್ಟು ಗುಡಿಯಂತಹ ರಚನೆಯನ್ನೂ ಮಾಡಿರಲೂಬಹುದು. ಇಂತಹ ಎಲ್ಲಾ ಸ್ಮಾರಕಗಳು ಉಳಿದುಬಂದಿರುವ ಸಾಧ್ಯತೆ ಕಡಿಮೆ ಇರಬಹುದು ಆದರೆ ಇಂತಹ ಸಂಖ್ಯೆಯೇನೂ ಕಡಿಮೆಯಲ್ಲ. ಇನ್ನುಳಿದಂತೆ ಮೇಲೆ ಹೇಳಿದ ವೀರಸ್ಮಾರಕಗಳು ಬಹುಪಾಲು ಕಲ್ಲುಗಳೇ ಆಗಿರುವುದನ್ನು ಗಮನಿಸ ಬಹುದು. ಶಿಲೆಗಳು ವಿಶೇಷ ಮಹತ್ವವನ್ನು ಪಡೆದುಕೊಂಡಿರುವುದನ್ನು ಹಾಗೂ ಆರಾಧನೆಗೊಂಡಿರುವುದನ್ನು ಆರ್. ಶೇಷಶಾಸ್ತ್ರಿ ರವರ ಮಾತಿನಲ್ಲಿ ಹೇಳುವುದಾದರೆ[106] "ಭಾರತದ ಪ್ರತಿಯೊಂದು ಹಳ್ಳಿಗಳಲ್ಲಿಯೂ ಪೂಜೆಗೊಳಗಾದ ಒಂದಲ್ಲ ಒಂದು ಕಲ್ಲು ಇದ್ದೇ ಇರುತ್ತದೆ. ಆ ಕಲ್ಲನ್ನು ಆರಾಧಿಸುವ ಜನ ಅದಕ್ಕೆ ಯಾವ ಐತಿಹ್ಯವನ್ನು ಆರೋಪಿಸುತ್ತಾರೆಯೋ ಅದೇ ಆ ಕಲ್ಲಿನ ಐತಿಹ್ಯವಾಯಿತು. ಈ ಐತಿಹ್ಯಕ್ಕೆ ಕಲ್ಲು ಒಂದು ಸಂಕೇತ ಮಾತ್ರ. ಈ ತೆರನ ಸಂಕೇತಗಳು ದೇವತೆಗಳ, ಗ್ರಾಮದೇವತೆಗಳ, ಕ್ಷೇತ್ರಪಾಲಕರ, ಪೂರ್ವಜರ ಅಥವಾ ಕಾಲಗರ್ಭದಲ್ಲಿ ಅಡಗಿ ಹೋದ ಮೂಕಸಾಕ್ಷಿಯೂ ಆಗಿರಬಹುದು." ಒಂದು ಕಡೆ ಭೌತಿಕವಾಗಿ ಕಾಣುವ ಮರಣಹೊಂದಿದ ವೀರರ, ಸ್ತ್ರೀಯರ ಮೊದಲಾದವರ ಸ್ಮಾರಕಗಳು ಭೌತ ಸಂಸ್ಕೃತಿಗೆ ದ್ಯೋತಕವಾದರೆ ಅವುಗಳ ಹಿಂದಿರುವ ಆಶಯಗಳಲ್ಲಿ ಅಭೌತ ಸಂಸ್ಕೃತಿಯೇ ರಾರಾಜಿಸಿದೆ.

**6.5.3.1 ಮರಣ ಪದ್ಧತಿಗಳು:** ಕನ್ನಡ ನಾಡಿನ ಸಾಂಸ್ಕೃತಿಕ ಚರಿತ್ರೆಯಲ್ಲಿ ಹಲವು ಕಾಲಘಟ್ಟಗಳಲ್ಲಿ ವಿವಿಧ ಬಗೆಯ ಮರಣ ಪದ್ದತಿಗಳು ಅಸ್ತಿತ್ವದಲ್ಲಿದ್ದವು. ಹೊಯ್ಸಳರ ಆಳ್ವಿಕೆ ಅವಧಿಯಲ್ಲಿ ಕನ್ನಡ ನಾಡಿನಲ್ಲಿ ಸತಿ ಸಹಗಮನ, ವೀರರ ಬಲಿದಾನ, ಸಮಾಧಿಮರಣ – ಈ ಮೂರು ಪದ್ದತಿಗಳು ಕುತೂಹಲಕರ ಅಧ್ಯಯನಗಳಿಗೆ ಎಡೆಮಾಡಿಕೊಡುತ್ತವೆ. ಇವುಗಳನ್ನು ಗಮನಿಸಿದಾಗ ಮೊದಲು ನಮ್ಮ ಮನಸ್ಸಿಗೆ ಬರುವ ಅಂಶವೆಂದರೆ ಇವು ಯಾವುವೂ ಸಹಜ ಮರಣಗಳಲ್ಲ. ಅಂದಿನ ವ್ಯವಸ್ಥೆಯ ಭಯ, ಒತ್ತಡ, ದುರುದ್ದೇಶ ಪೂರಿತ ಆಮಿಷಗಳಿಗೆ ಬಲಿಯಾಗಿ ಜೀವನವನ್ನು ಅಸಹಜವಾಗಿ ಅಂತ್ಯಗೊಳಿಸಿಕೊಂಡಿರುವುದು. ಈ ಮೂರು ಬಗೆಯ ಮರಣ ಪದ್ದತಿಗಳಲ್ಲಿ ಧಾರ್ಮಿಕ ಪ್ರಭುತ್ವ, ರಾಜಪ್ರಭುತ್ವ, ಪುರುಷಪ್ರಭುತ್ವಗಳು ಮಾನವರನ್ನು ತಮ್ಮ ಕು–ಹಿತಾಸಕ್ತಿಗಳಿಗೆ ಬಳಸಿಕೊಂಡಿರುವುದು ದೃಢಪಡುತ್ತದೆ. ಈ ಮೂರು ಪ್ರಭುತ್ವಗಳ ಹಿನ್ನೆಲೆಯಿಂದ ಮತ್ತು ಅಸ್ತಿತ್ವಕ್ಕಾಗಿ ಈ ಮೂರು ಬಗೆಯ ಬಲಿದಾನಗಳನ್ನು ಮಾಡಲೇಬೇಕಾದ

ಅನಿವಾರ್ಯತೆಯನ್ನು ಸೃಷ್ಟಿಮಾಡಿ ಸಂಕೀರ್ಣವಾದ ಸಮಾಜದ ವ್ಯವಸ್ಥೆಯನ್ನು ರೂಪಿಸಲಾಗಿತ್ತು. ಇವುಗಳ ಚರ್ಚೆಯನ್ನು ಮಹಾಮಂಡಳೇಶ್ವರರ ಆಳ್ವಿಕೆಯ ಕಾಲಘಟ್ಟ ಮತ್ತು ಪ್ರಾದೇಶಿಕತೆಯ ಹಿನ್ನೆಲೆಯಿಂದಿ ಮುಂದಿನಂತೆ ಚರ್ಚಿಸೋಣ.

**ವೀರ ಪರಂಪರೆ:**

**ತುರುಗೋಳ್ –ಊರಳಿವು–ಪೆಣ್ಬುಯ್ಯಲ್**

ಯುದ್ದದಲ್ಲಿ ಹೋರಾಡಿ ಮಡಿಯುವುದನ್ನು ವೀರಮರಣ ಎನ್ನುವ ಹೆಸರಿನಿಂದ ಕರೆಯಲಾಗಿದೆ. ಈ ಹಿನ್ನೆಲೆಯಿಂದಲೆ ವೀರ, ವೀರಮರಣ, ವೀರಸ್ವರ್ಗ ಮುಂತಾದ ಕಲ್ಪನೆಗಳು ಹುಟ್ಟಿಕೊಂಡವು. ಇವು ವೀರರಿಂದ ನಿಷ್ಠೆ ಅಥವಾ ರಾಜಭಕ್ತಿ ಎಂಬ ಅಪೇಕ್ಷೆಗಳನ್ನು ಸಾರುವಂತಿದ್ದರೂ ಸಹ ಅವರ ಸಾಮಾನ್ಯ ಜೀವನದ ಗತಿಯನ್ನು ನಿರ್ಲಿಪ್ತವೂ ನಿರಾಶದಾಯಕವೂ ಆಗುವಂತೆ ಮಾಡಿದ್ದವು. ಅರಸನಿಗಾಗಿ ರಣರಂಗದಲ್ಲಿ ಹೋರಾಡಿದ, ಗೋವುಗಳನ್ನು ರಕ್ಷಿಸಿದ, ಹೆಂಗಸರ ಮಾನರಕ್ಷಣೆ ಮಾಡಿದ, ಊರನ್ನು ಉಳಿಸಿದ ಮುಂತಾದ ರಕ್ಷಣೆಯ ಉದ್ದೇಶಗಳಿಗಾಗಿ ವೀರರು ಹೋರಾಡುತ್ತಿದ್ದರು ಎನ್ನುವ ವಿವರ ಶಾಸನಗಳು ಮತ್ತು ಕಾವ್ಯಗಳಿಂದ ತಿಳಿದುಬರುತ್ತದೆ. ಗೋವುಗಳನ್ನು ಅಪಹರಿಸುವುದು ಯುದ್ಧ ಸಾರಿದ ಸಂಕೇತವಾಗಿರುತ್ತದೆ. ಗೋವುಗಳನ್ನು ಸಂಪತ್ತು ಎಂದು ಭಾವಿಸಿದುದರಿಂದ ಅವುಗಳನ್ನು ವಿನಿಮಯ ಪದ್ದತಿಯಲ್ಲಿ ಬಳಸುತ್ತಿದ್ದುದರಿಂದ ಗೋವುಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಇದ್ದಿತು. ಹಾಗಾಗಿ ಗೋಗ್ರಹಣ ಸಂದರ್ಭದಲ್ಲಿ ಸ್ಥಳೀಯ ಮಟ್ಟದಲ್ಲಿನ ವೀರರು ಪ್ರಾಣದ ಹಂಗು ತೊರೆದು ಹೋರಾಡುತ್ತಿದ್ದರು.ಯುದ್ದದಲ್ಲಿ ಹೋರಾಡಿ ಮಡಿದ ವೀರರ ಕುಟುಂಬದ ಜವಾಬ್ದಾರಿಯನ್ನು ಸರ್ಕಾರ ಮತ್ತು ಸಮಾಜವು ಹೊರುತ್ತಿತ್ತು. ಸಾಮಂತರು ಮತ್ತು ಮಹಾಮಂಡಳೇಶ್ವರರು ಈ ವೀರರ ಮನೆತನಗಳಿಗೆ ದಾನವನ್ನು ಕೊಟ್ಟು ಸಹಕರಿಸುತ್ತಿದ್ದರು. ವೀರರ ಸ್ಮಾರಕವಾಗಿ ವೀರಗಲ್ಲುಗಳನ್ನು ನೆಟ್ಟು ಶಾಸನಗಳನ್ನು ಹಾಕಿಸುತ್ತಿದ್ದರು. ಮಹಾಮಂಡಳೇಶ್ವರರೆ ಮರಣ ಹೊಂದಿದ ಸಂದರ್ಭದಲ್ಲಿ ಅವರ ಅಧೀನ ಅಧಿಕಾರಿಗಳು ಅವರ ಸ್ಮಾರಕವಾಗಿ ಆಲಯವನ್ನು ನಿರ್ಮಿಸಿ ದಾನದತ್ತಿಗಳನ್ನು ಕೊಡುತ್ತಿದ್ದರು. ವೀರಗಲ್ಲುಗಳಲ್ಲಿನ ಬರಹಗಳು, ಶಿಲ್ಪಗಳು, ಕೆತ್ತನೆಗಳು ಅಂದಿನ ಸಮಾಜದ ಅದ್ಯಯನಕ್ಕೆ ಸಹಕಾರಿಯಾಗಿವೆ. ಉದಾಹರಣೆಗೆ ತುರುಗೋಳ್ ಸಂಬಂಧಿಸಿದ ಹಲವು ಘಟನೆಗಳು ಮಹಾಮಂಡಳೇಶ್ವರರ ಆಳ್ವಿಕಯ ಪ್ರದೇಶಗಳಲ್ಲಿ ಘಟಿಸುತ್ತಿದ್ದವು.ಉದಾ :

- ಗೋವಿದೇವನ ಅಧೀನ ಅಧಿಕಾರಿಯಾಗಿದ್ದ ಏಚರಸನ ಮಗ ದೇಕರಸನ ವ್ಯಕ್ತಿತ್ವ ಹಾಗೂ ಅವನು ಮಾಡಿದ ಕಾಳಗಗಳ ಯುದ್ಧ ಚಿತ್ರಣವನ್ನು ಶಾಸನವೊಂದು ಬಣ್ಣಿಸಿರುವುದು ಇಂತಿದೆ :

**ತುಱುಪರಿಗವೆಂಬ ಪುಯ್ಯಲ**
**ನೆಱಿಯೊಲಿಸಿ ಕೇಳ್ದುದೇಕಭೂಪತಿ ಬೇಗಂ**
**ಪೊಱಮಟ್ಟು ಬನ್ದು ತಾಗಿದ**
**ನೆಱವಿನದೊರ್ವ್ವಳದೀ ಕಳರನಾಕ್ಷಣದಿಂದ**[107]

**ಕಲಿಯುಗಪಾರ್ಥಂ ದೇಕಂ**
**ಬಿಲ್ವೊಯ್ದಿರೆ ಕೊಲದೊಗೆಯ ಮಂಬಿನ ಕಿಡಿಯುಂ**
**ಪಲಿಕಲಿಸಿದ್ಧರ್ವ್ವಯರಿ ಬಂ**
**ಬಳಪೊಲಗೆಟ್ಟುದು ಪೆಣದ ಬ್ರಣದ ರಣಗತ್ತಲೆಯೊಳು**[108]

ದೇಕರಸನು ಅನ್ತು ಕಾದಿ ತನ್ನ ಸಾಮರ್ಥ್ಯ ಬಲದಿಂದ ಎದುರಾಳಿಯ ಬಲವನ್ನು ಸೋಲಿಸಿ ತುರುಗಳನ್ನು ಮರಳಿ ತರುತ್ತಿದ್ದನು. ಇಂತಹುದೇ ಒಂದು ತುರುಗಾಳಗದಲ್ಲಿ ದೇಕರಸನು ಮರಣಹೊಂದಿದನು.

**ಹೊತ್ತಗೆಯಟವಣೆಕೋಲ್ಗಳ**
**ಲೆತ್ತಿದ ತೆಱದನ್ತೆ ಸರದ ತನ್ದಲು ತನುವಂ**
**ತೆತ್ತಿ ಸಲ್ಕಮರಕಾಂತಾ**
**ಜತ್ತಕಿಯರುಯ್ಯೆ ದೇಕಂ ನಾಕಕ್ಕೋದ**[109]

▪ ವಕ್ಕಲಗೆರೆಯ ಮತ್ತೊಂದು ಶಾಸನವು,[110] ಮಹಾಮಂಡಲೇಶ್ವರ ಚಟ್ಟಯ್ಯನು ಮರಣ ಹೊಂದಿದಾಗ ಅವನ ಅಧೀನ ಅಧಿಕಾರಿ ಹೆಗ್ಗಡೆ ದೇವಣ್ಣ ಮತ್ತು ಕೆರೆಯಣ್ಣರು ವಕ್ಕಲಗೆರೆಯಲ್ಲಿ ಚಟ್ಟೇಶ್ವರ ದೇಗುಲವನ್ನು ನಿರ್ಮಿಸಿ ವೀರಚಟ್ಟೇಶ್ವರ ಎಂಬ ಲಿಂಗವನ್ನು ಪ್ರತಿಷ್ಠೆ ಮಾಡಿದರು. ಇವರು ಚಟ್ಟಯ್ಯನಾಯಕರಿಗೆ ಪರೋಕ್ಷವಿನಯವಾಗಿ ನಿರ್ಮಿಸಿದ ಆಲಯಕ್ಕೆ ಗಾಣದೆರೆ, ಮನೆದೆರೆಗಳನ್ನು, ಕೆಲವು ಭೂದಾನಗಳನ್ನು ದಾನ ನೀಡಿದರೆಂದು ತಿಳಿಸುತ್ತದೆ. ಈ ಶಾಸನದಲ್ಲಿ ಕೆರೆಯಣ್ಣನನ್ನು 'ಚಟ್ಟನಗಂಧವಾರಣ' ಎಂದು ಹೊಗಳಲಾಗಿದೆ.

▪ 1–3–1172ರ ದ್ವಾರಾವತೀ ಪುರವರಾಧೀಶ್ವರ ಎನೆಗರಾನೆ ಕೋಳಾಲನಾಡಾಳ್ವ, ಕೋಳಾಲದೇವಿಲಬ್ದವರಪ್ರಸಾದಂ ಕಾಡರ್ದ್ವರಗಾಳ ಚಲದಂಕರಾಮ ಚಲಕೆಮಲವ ಸಾಮಂತರ ತೊತ್ತಳದುಳಿವ ನಾದ ಹಿರಿಯಬೆಂಡೆಯ **ಬಿಲ್ಲಮೊತ್ತದ ಹೂವಿನಹಳ್ಳಿಯ ಬಮೆಯನಯಕ**ನು ಬಲ್ಲಾಳದೇವನ ಪರವಾಗಿ ನಡೆದ ನಿಂತು ಊರಳಿವನಲ್ಲಿ ಹೋರಾಡಿ ಸತ್ತನು. ಇವನು ಮಡದಿ ಮಾರವೆನಾಯಿಕಿತಿ. ಈದಂಪತಿಗಳ ಮಕ್ಕಳಾದ ಸೂರೆಯನಾಯಕ, ಮಾದೆಯನಾಯಕರು ಇವನಿಗೆ ಪರೋಕ್ಷವಿನಯವಾಗಿ ವೀರಗಲ್ಲನ್ನು ಹಾಕಿಸಿದರು.[111]

▪ಮಾಯಿನಾಡಾಳುವನಾದ? ಪದ್ಮನಾಭನ ಮಗನು ತನ್ನ ತಂದೆ ಮಡಿದಾಗ ಅವನಿಗೆ ಪರೋಕ್ಷವಿನಯವಾಗಿ ವೀರಗಲ್ಲನ್ನು ಹಾಕಿಸಿದನು.[112]

▪ ದುದ್ದ ಎಂಬ ಹೆಸರಿನ ಊರಿನ **ಚಟ್ಟಯನಾಯಕನ ಮೊಮ್ಮಗ ಕೂಸಕಾಳಿಯನು ಸ್ವಾಮಿಕಾರ್ಯಕ್ಕೆ** ತಲೆಗೊಟ್ಟು ಸತ್ತನು. ಚಟ್ಟವೆಯು ತನ್ನ ಮಗನಿಗೆ ನಿಲ್ಲಿಸಿದ ವೀರಗಲ್ಲು ಇದು.[113]

▪ ಕ್ರಿ.ಶ. 1274ರ ದೇವಗಳ್ಳಿ ಶಾಸನವು[114] ಮಹಾಪ್ರಧಾನ ಪೆರುಮಾಳೆದೇವಡಂನಾಯಕನು ದೇವನಹಳ್ಳಿಯನ್ನು (ಈಗಿನ ಮೈಸೂರು ಸಮೀಪದ ಊರು) ಮುತ್ತಿದಾಗ ಯುದ್ಧದಲ್ಲಿ ಹೋರಾಡಿ ಮಡಿದ

ಪೆರುಮಾಳೆದೇವ ದಂಡನಾಯಕನ ಪಡೆಯ ವೀರನ ವಿಚಾರವನ್ನು ತಿಳಿಸುತ್ತದೆ. ಆದರೆ ಈ ಯುದ್ಧದ ಕಾರ್ಯಕಾರಣ ಸಂಬಂಧವೇನೆಂಬುದು ಅಲಭ್ಯವಾಗಿದೆ.

- ಕ್ರಿ.ಶ. 1337ರ ಚಿಂತಾಮಣಿಯ ಶಾಸನವು[115] ಬಲ್ಲಪ್ಪದಂಡನಾಯಕನ ಬಾಹುಬಲದ ನೆರವಿನಿಂದ ವೀರಬಲ್ಲಾಳನು ವಿಜಯ ಸಾಧಿಸಿದ ಸಂದರ್ಭದಲ್ಲಿ, ವೀರಬಲ್ಲಾಳನೊಡಗೂಡಿ ಶತೃಗಳೊಂದಿಗೆ ಕಾದಿ ಮಡಿದ ವೀರಪಂಮಣನ ಹೆಸರಿನಲ್ಲಿ ಕೈವಾರನಾಡಿನ ನಿವಾಸಿಗಳು ಕೆಲವು ಭೂದಾನಗಳನ್ನು ನೀಡಿದ ವಿಚಾರವನ್ನು ಒಳಗೊಂಡಿದೆ.

ಯಾವುದೇ ಕಾಲದ ಅಮಾನವೀಯ ಸಂಗತಿಗಳಲ್ಲಿ ಮೊದಲು ಎದ್ದು ಕಾಣುವುದು ಹೆಣ್ಣನ್ನು ಕಾಮಿಸಿ ಹೇಗಾದರೂ ಬಲಾತ್ಕಾರ ಮಾಡಿ ಅವಳನ್ನು ವಶಪಡಿಸಿಕೊಳ್ಳಲು ಸಂಚು ಹೂಡುವುದು. ಕನ್ನಡ ಕಾವ್ಯಗಳಲ್ಲಿ ಇಂತಹ ಹೇರಳವಾದ ಪ್ರಸಂಗಗಳಿದ್ದು ಅವು ಹೆಣ್ಣನ್ನು ಕಾಮುಕ ದೃಷ್ಟಿಯಿಂದ ನೋಡುವವರ ಮನಸ್ಥಿತಿಯನ್ನು ತೋರಿಸುತ್ತದೆ. ಊರಳಿವಿನಲ್ಲಿ ಗೋಗ್ರಹಣದ ಸಂದರ್ಭದಲ್ಲಿ ತುರುಗಳನ್ನು ಕದಿಯಲು ಬಂದ ಕಳ್ಳರು ಕೆಲವೆಡೆ ಹೆಣ್ಣುಗಳ ಮಾನವನ್ನು ಅಪಹರಿಸಲು ಬರುವುದನ್ನು ಶಾಸನಗಳು ಪೆಣ್ಣೆರುಡೆಯುರ್ಚ, ಉಡೆ ಉರ್ಚ್ಚ ಮುಂತಾದ ಪದಗಳ ಮೂಲಕ ಬಣ್ಣಿಸಿವೆ. ಈ ಸಂದರ್ಭಗಳಲ್ಲಿ ಹೆಣ್ಣು ಮಕ್ಕಳು ಅತ್ಯಾಚಾರಿಗಳನ್ನು ಎದುರಿಸಲು ಸಾಧ್ಯವಾಗದೆ ಅನೇಕ ವೇಳೆ ಸಂತ್ರಸ್ತರಾಗಿದ್ದಾರೆ. ಎಲ್ಲೋ ಕೆಲವು ವೇಳೆ ಈ ವಿಷಯ ತಿಳಿದ ಊರಿನ ಯಾವುದಾದರೂ ವೀರನೊಬ್ಬ ಅಂಥವರ ವಿರುದ್ಧ ಹೋರಾಡಿ ಆ ಹೆಣ್ಣನ್ನು ಉಳಿಸುತ್ತಿದ್ದನೇ ಹೊರತು ಯಾವೊಂದು ವೀರಶಾಸನ ದಲ್ಲೂ ಹೆಣ್ಣೊಬ್ಬಳು ತನ್ನ ಮೇಲೆ ಅತ್ಯಾಚಾರವನ್ನು ಎಸಗಲು ಬಂದ ಪುಂಡನನ್ನು ಎದುರಿಸಿ ಅವನನ್ನು ಬಗ್ಗುಬಡಿದ ಸಂಗತಿಯನ್ನು ಎತ್ತಿ ಹೇಳಿಲ್ಲ. ಕೇವಲ ಇಲ್ಲಿನ ಹೆಂಗಸರು ಹುಯ್ಯಲು(ಕೂಗು, ಆಕ್ರಂದನ) ಹೊಯ್ದುಕೊಂಡಿದ್ದರಿಂದಲೇ ಈಕೆಯನ್ನು ಉಳಿಸಿದ ವೀರರಿಗೆ ವೀರಗಲ್ಲು ಹಾಕಿಸಿದ್ದನ್ನು ಪೆಣ್ಬುಯ್ಯಲ್ ಎಂದೇ ಗುರುತಿಸಲಾಗುತ್ತದೆ. ಇಂತಹ ಪ್ರಸಂಗಗಳು ಎಷ್ಟೇ ಸಾವಿರಾರಿದ್ದರೂ ಡಿ.ವಿ. ಪರಮ ಶಿವಮೂರ್ತಿಯವರು ತಮ್ಮ ಅಧ್ಯಯನದಲ್ಲಿ[116] ಇಂತಹ 46 ಶಾಸನಗಳು ಮಾತ್ರ ಕರ್ನಾಟಕದಲ್ಲಿ ಪೆಣ್ಬುಯ್ಯಲ್‌ಗೆ ಸಂಬಂಧಿಸಿದಂತೆ ದೊರೆತಿವೆ ಎಂದು ತಿಳಿಸಿದ್ದಾರೆ. ಇದು ಶಾಸನವಿರುವ ಕಲ್ಲಿನ ಸಂಖ್ಯೆಯಷ್ಟೆ. ಆದರೆ ಶಾಸನರಹಿತ ಪೆಣ್ಣುಯ್ಯಲ್ ಶಿಲ್ಪಗಳೂ ಇವೆ. ಅನೇಕ ಸಂದರ್ಭದಲ್ಲಿ ಈ ಪೆಣ್ಣುಯ್ಯಲ್ ಪ್ರಸಂಗಗಳು ಊರಿನ ಮೇಲೆ ದಾಳಿ ನಡೆದ ಸಂದರ್ಭದಲ್ಲಿಯೇ ಜರುಗುತ್ತಿದ್ದವು.

ಈ ಸಂದರ್ಭದಲ್ಲಿ ತಮ್ಮ ಮಾನ ರಕ್ಷಣೆಗೆ ಬೇಕಾಗುವಷ್ಟು ಅಂಗಸಾಮರ್ಥ್ಯ ಹೆಣ್ಣಿಗಿರಲಿಲ್ಲವೋ, ಅಥವಾ ಅನಿರೀಕ್ಷಿತ ದಾಳಿಯಿಂದ ವಿಚಲಿತಳಾದಳೋ ಅಥವಾ ಊರಿಗೆ ಊರೇ ಕೊಳ್ಳೆ ಹೋಗುವಾಗ ಏನು ಮಾಡಲಾಗದೇ ಹೋದಳೋ, ಯಾವುದೇ ಕಾರಣವಿರಲಿ ಇದು ಮಧ್ಯಕಾಲೀನ ಇತಿಹಾಸದ ದೊಡ್ಡ ಕಪ್ಪುಚುಕ್ಕೆಯೇ. ಇವರನ್ನು ಉಳಿಸಲು ಹೋರಾಡಿ, ಪ್ರಾಣ ತೆತ್ತವರನ್ನು ಗೌರವಿಸುವುದು ಉಚಿತವಾದರೂ ಒಂದೇ ಒಂದು ದಾಖಲೆಯಾದರೂ ತನ್ನ ಮಾನಕ್ಕಾಗಿ ಹೋರಾಡಿ ಉಳಿಸಿಕೊಂಡ ಹೆಣ್ಣಿನ ಚಿತ್ರವನ್ನು ನೀಡಿದ್ದರೆ ಇತಿಹಾಸಕ್ಕೆ ಕೊಡುಗೆಯಾಗುತ್ತಿತ್ತಲ್ಲವೆ. ಹೋರಾಡಿ ಮಡಿದ ವೀರರಿಗೆ ದಾನ ನೀಡಿರುವುದು

ಅವರ ಮನೆಯವರನ್ನು ಕಾಪಾಡಲಾದರೂ ಈ ರೀತಿ ಮಾನಭಂಗಕ್ಕೆ ಒಳಗಾಗಿ ತೊಂದರೆಗೊಳಪಟ್ಟ ಹೆಣ್ಣಿಗೆ ಯಾವುದೇ ರೀತಿಯ ದಾನಗಳು ಸಂದಾಯವಾಗಿರುವ ಉದಾಹರಣೆಗಳಿಲ್ಲ. ಇದು ಆ ಕಾಲಘಟ್ಟದಲ್ಲಿ ವೀರತನಕ್ಕೆ ಮಾತ್ರ ಪ್ರಾಶಸ್ತ್ಯವಿದ್ದ ಸಂಗತಿಯನ್ನು ಎತ್ತಿಹಿಡಿಯುತ್ತದೆ. ಒಂದು ವೇಳೆ ಹೆಣ್ಣು ಹೋರಾಟ ನಡೆಸಿ ಸತ್ತಿದ್ದರೆ ಮಾತ್ರ ಅವಳಿಗೆ ಆ ರೀತಿಯ ಗೌರವಗಳು ಸಿಗುತ್ತಿತ್ತೇ ಹೊರತು ಕೇವಲ ದಬ್ಬಾಳಿಕೆಗೆ ಒಳಗಾದಳು ಎಂಬ ಕಾರಣಕ್ಕೆ ಅಲ್ಲ ಎಂಬ ಸಂಗತಿಯನ್ನು ನಾವು ಗಮನಿಸಬೇಕಾಗಿದೆ.

ನನ್ನ ಈ ಮೇಲಿನ ಮಾತನ್ನು ಸಮರ್ಥಿಸಲು ನಾನಿಲ್ಲಿ ಹೋರಾಟದಲ್ಲಿ ಹೋರಾಡಿ ಮಡಿದ ಮಹಿಳೆಯರಿಗೂ ವೀರಗಲ್ಲುಗಳನ್ನು ನೆಡೆಸಿ ದಾನ ದತ್ತಿಗಳನ್ನು ನೀಡಿ, ಅವರುಗಳನ್ನು ಗೌರವಿಸುತ್ತಿದ್ದ ಸಂಗತಿಯೆಡೆಗೆ ಗಮನವನ್ನು ಸೆಳೆಯಲು ಪ್ರಯತ್ನಿಸುತ್ತೇನೆ. ಶ್ರವಣಬೆಳಗೊಳದ ಚಿಕ್ಕಬೆಟ್ಟದ ಮೇಲಿರುವ ಬಾಹುಬಲಿಯ ಬಸದಿಯ ಬಳಿ ಇರುವ ವೀರಗಾರ್ತಿ ಕಲ್ಲನ್ನು ಗಮನಿಸಬಹುದು.[117] ಸುಮಾರು 10ನೆಯ ಶತಮಾನದ್ದಾಗಿರಬಹುದಾದ ಈ ವೀರಗಾರ್ತಿ ಕಲ್ಲಿನ ಶಾಸನ ಪಾಠವು ಸಾವಿಯಬ್ಬೆ ಎಂಬ ವೀರಗಾರ್ತಿಯನ್ನು ಉಲ್ಲೇಖಿಸುತ್ತದೆ. ಈಕೆ ರಣಮೂರ್ಖ ನೃಪಾಮ್ನಾಯಕ್ಕೆ ಸೇರಿದ ಬಾಯಿಕ ಮತ್ತು ಜಾಬಯ್ಯೆ ಎಂಬುವವರ ಮಗಳು. ಈಕೆಯ ಸೋದರರು ಮಾದುವರ ಮತ್ತು ದೋಯಿಲಮ್ಮ, ಈಕೆಯ ಪತಿ ಧೋರನ ಮಗನಾದ ಲೋಕವಿದ್ಯಾಧರ. ನಮ್ಮ ದುರಾದೃಷ್ಟಕ್ಕೆ ಈ ಶಾಸನವು ಅತ್ಯಂತ ಸೊಗಸಾಗಿದ್ದರೂ ಈಕೆ ಯಾಕಾಗಿ ಹೋರಾಡಿ ಸತ್ತಳು ಎಂದು ಹೇಳುವ ಶಾಸನ ಭಾಗವು ತ್ರುಟಿತಗೊಂಡಿದೆ. ಈಕೆ ಬಗಿಯೂರಲ್ಲಿ ಸತ್ತ ಸಂಗತಿ ಮಾತ್ರ ಎದ್ದು ಕಾಣುತ್ತದೆ. ಈಕೆಯನ್ನು ಶಾಸನವು 'ಶ್ರಾವಕ ಧರ್ಮದೊಳ್ ದೊರೆಯೆನಲ್ ಪೇರರಿಲ್ಲನೆಲೆ ಸನಂತಾನೆ ಪೆಂಪಿನೊಳರಂಧುತಿ ತಾನೆ ಜಿನೇನದ್ರಿ ಭಕ್ತಿ ಸದ್ಭಾವದೆ ಸಾವಿಯಬ್ಬೆ ಜಿನಶಾಸನ ದೇವತೆ ತಾನೆ ಕಾಣಿರೇ" ಎಂದು ಹೊಗಳಿದೆ. ಶಾಸನ ಶಿಲ್ಪದಲ್ಲಿ ಕುದುರೆಯ ಮೇಲೆ ಕುಳಿತ ಸಾವಿಯಬ್ಬೆಯು ಆನೆಯ ಮೇಲೆ ಕುಳಿತ ವೀರನೊಂದಿಗೆ ಹೋರಾಡುತ್ತಿರುವುದನ್ನು ನೋಡಿದರೆ ಬಹುಶಃ ಈಕೆ ಯಾವುದೋ ಪ್ರಮುಖವಾದ ಸಾಮಂತನೋ, ಮಹಾದಂಡಕೇಶ್ವರನೊಡನೆಯೋ ಹೋರಾಡಿರುವಂತೆ ತೋರುತ್ತದೆ. ಡಾ. ಶೇಷಶಾಸ್ತ್ರಿಯವರು "ಜಿನಧರ್ಮ ಪರಳಾದ ಸಾವಿಯಬ್ಬೆಯು ಹೋರಾಟದಲ್ಲಿ ಭಾಗವಹಿಸಿ, ಯುದ್ಧರಂಗದಲ್ಲಿ ಗಾಯಗೊಂಡು ಹಿಂತಿರುಗಿದಳು. ಆ ಗಾಯದಿಂದ ತನ್ನ ಸಾವು ಖಚಿತ ಎಂಬುದನ್ನು ಅರಿತ ಆಕೆ ತನ್ನ ಧರ್ಮದ ಸಲ್ಲೇಖನ ವ್ರತಗಳನ್ನು ಸ್ವೀಕರಿಸಿ ಮಡಿದಿರಬಹುದು"[118] ಎಂದು ಊಹಿಸಿದ್ದಾರೆ.

ಗೋಗ್ರಹಣವೊಂದರಲ್ಲಿ ಹೋರಾಡಿ ತುರುಗಳನ್ನು ಹಿಂದಕ್ಕಟ್ಟಿ ಮಡಿದ ಲಕ್ಷ್ಮಮ್ಮ ಗಾವುಂಡಿಯ ಉಲ್ಲೇಖ ಬೆಂಗಳೂರು ಜಿಲ್ಲೆಯ ಹೊಸಕೋಟೆ ತಾಲ್ಲೂಕಿನ ಸಿದ್ಧನಹಳ್ಳಿಯಲ್ಲಿ ದೊರಕಿದೆ.[119] ಕ್ರಿ.ಶ. 1041ಕ್ಕೆ ಸೇರಿದ ಈ ಶಾಸನವು ಕಯ್ವಾರ ನಾಡಿನ ಸರಕ್ಕನೂರು ಲಕ್ಷ್ಮಮ್ಮ ಗಾವುಂಡಿಯು ತನ್ನ ತಂದೆಯಾದ ಮಾದ ಗಾವುಂಡನೊಂದಿಗೆ ತಮ್ಮ ಊರಿನ ಎಮ್ಮೆಗಳನ್ನು ಅಪಹರಿಸುತ್ತಿದ್ದ ದುಷ್ಟರೊಡನೆ ಹೋರಾಡಿ ಸತ್ತ ಸಂಗತಿಯನ್ನು ತಿಳಿಸುತ್ತದೆ. ಎಂ.ಎಂ. ಕಲಬುರ್ಗಿಯವರು ತಿಳಿಸುವಂತೆ "ಗೋಗ್ರಹಣ ಯುದ್ಧವನ್ನು ಎದುರಿಸಿ ವೀರಸ್ವರ್ಗವೇರಿದ ಉಲ್ಲೇಖವುಳ್ಳ ಏಕೈಕ ಸ್ತ್ರೀ ಲಕ್ಷ್ಮಮ್ಮ ಗಾವುಂಡಿ"[120]

ಆದರೆ ಗೋಗ್ರಹಣ ಅಥವಾ ತುರುಕಾಳಗದಲ್ಲಿ ಭಾಗವಹಿಸಿ ಗೆದ್ದು ಬದುಕುಳಿದ ಕೆಲವು ಹೆಂಗಸರ ಚಿತ್ರಣವೂ ನಮಗೆ ದೊರಕುತ್ತದೆ. ಹೊಯ್ಸಳ ಬಲ್ಲಾಳನ ರಾಣಿಯಾದ ಉಮಾದೇವಿಯು ಬೆಳಗವರ್ತಿಯ ಮಂಡಳೇಶ್ವರ ಮಲ್ಲದೇವರಸನೊಂದಿಗೆ ಒಂದು ವರ್ಷದಲ್ಲಿ ಮೂರು ಸಲ ದಂಡೆತ್ತಿ ಹೋದಳು. ಕೊನೆಯ ದಂಡಯಾತ್ರೆಯ ಸಂದರ್ಭದಲ್ಲಿ ಈಕೆ "ಕವುಡಿ ವೊಲೆಯಲ್ಲಿ ಬೀಡುಬಿಟ್ಟು ಬೆಳಗವತ್ತಿಗೆ ಬಂದು ಕಾದಿ ಕೆಟ್ಟು ಹೋಗುತ್ತ ಕತ್ತೆಗಿಯಲ್ಲಿದ್ದಟ್ಟಿ ದನವಂ ಕೊಣ್ಣು ಹೋದಾಗ" ಎದುರಿಸಲು ಬಂದ ವೀರನಾದ ಚೀಲಯನನ್ನು ಕೊಂದು ದನವನ್ನು ಸೆರೆಹಿಡಿದು ತನ್ನ ಸಾಹಸವನ್ನು ಮೆರೆದಿದ್ದಾಳೆ[121] ಎಂ. ಎಂ. ಕಲಬುರ್ಗಿಯವರು ಹೇರೂರು, ಅರಸಿಬೀದಿ, ಗೂಡೂರುಗಳಲ್ಲಿ ಸ್ತ್ರೀಯರು ಹೋರಾಟ ಮಾಡುತ್ತಿರುವ ಶಿಲ್ಪಗಳಿವೆ ಎಂದರೆ[122] ಶೇಷ ಶಾಸ್ತ್ರಿಗಳು ಇದನ್ನು ಅಲ್ಲಗಳೆಯುತ್ತಾರೆ[123]

ಹೊಯ್ಸಳ ದೊರೆ ಇಮ್ಮಡಿ ವೀರಬಲ್ಲಾಳನ ಕಾಲದಲ್ಲಿ (ಕ್ರಿ.ಶ. 1173–1220) ಅವನ ಪಿರಿಯರಸಿಯಾದ ಪಟ್ಟ ಮಹಾದೇವಿ ಚೋಳಮಹಾದೇವಿಯು ಕೆಂಬಾಳನ್ನು ಆಳುತ್ತಿದ್ದಳು. ಆಗ ಕೈದಾಳನಾಡನ್ನು ಬಲಿಯರ ಕುಲ ತಿಲಕನಾದ ಮಾಚಯ್ಯ ನಾಯಕನು ತನ್ನ ತಾಯಿಯಾದ ಆರಣಿ ನಾಯಕಿತ್ತಿಯ ಜೊತೆ ಆಳ್ವಿಕೆ ನಡೆಸುತ್ತಿದ್ದನು. ಚೋಳ ಮಹಾದೇವಿಯು ದುಷ್ಟಕಷ್ಟರ ಮಾತನ್ನು ಕೇಳಿ ಹಿಂದು ಮುಂದು ಯೋಚಿಸದೆ ಬೇವೂರಿನ ಮೇಲೆ ದಾಳಿ ಮಾಡಿ ತುರುಗಳನ್ನು ಅಪಹರಿಸಲು ಆಜ್ಞೆ ಮಾಡಿದಳು. ಇವಳ ಸೈನ್ಯವು ಹಾಗೆ ಮಾಡುವಾಗ ಮಾಚೆಯನಾಯಕನ ಸೈನ್ಯ ಹೊಯ್ಸಳ ಪಡೆಯೊಂದಿಗೆ ನಡೆಸಿದ ಯುದ್ಧದಲ್ಲಿ ಕೇತಮಲ್ಲ ನಾಯಕ ತೀರಿಕೊಂಡ ನಂತರ ಚೋಳ ಮಹಾದೇವಿಗೆ ನಿಜವಾದ ವಿಷಯ (?) ತಿಳಿಯಿತು ಆಗ ತುಂಬ ನೊಂದುಕೊಂಡ ರಾಣಿಯು ತೆಗೆದುಕೊಂಡ ತೀರ್ಮಾನ ನಿಜಕ್ಕೂ ಇತಿಹಾಸದಲ್ಲಿ ಎತ್ತಿ ಹೇಳಬೇಕಾದ ಪ್ರಸಂಗವಾಗಿದೆ[124]

"ಚೋಳ ಮಹಾದೇವಿಯರು ತಮ್ಮ ಭಂಡಾರಿ ರಾಯಣ್ಣ ನಾಚಣ್ಣ ಹೆಗ್ಗಡೆಗಳಂ ಕರೆದು ಯಮ್ಮ ಮಕ್ಕಳ ನಾವು ನೋಯಿಸಿದೆವು. ನೀವು ಹೋಗಿ ಎಮ್ಮ ಶ್ರೀವಚನದಲಭೆಯವಂ ಕೊಟ್ಟು ಕೆಂಬಾಳೂರಯಿವತ್ತೊಕ್ಕಲು ಮುಂತಾಗಿ ಕೇತಮಲ್ಲ ನಾಯಕನ ಮಗ ನಾರಸಿಂಹ ನಾಯಕನಂ ಕರೆದು ಸಂತವಿಟ್ಟುಡೆ ಕೊಟ್ಟು ಕೊಡಗಿಯ ಬಿಡಹೇಳಿ"ದಳು ಈತನಿಗೆ ನೀಡಿದ ಭೂಮಿ ಹಿರಿಯ ಕೆರೆಯ ತೂಬಿಗೆ ಮೊದಲಲ್ಲೇ ಇರುವ 2 ಸಲುಗೆ ಭೂಮಿ ಹಾಗೂ ಕರಡಿಗೆರೆಯೊಳಗಣ 200 ಕಮ್ಮ ಯೆರೆಯ ಕೈಯಿ ಅದರೂ ಈಕೆ ಆದ ಅಚಾತುರ್ಯಕ್ಕೆ ಮರುಗಿದ್ದು ಮಾತ್ರ ವಿಶೇಷವಾದದ್ದು. ಕನ್ನಡ ನಾಡಿನ ಶಾಸನಗಳಲ್ಲಿ ವೀರನೊಬ್ಬನ ಮರಣದ ನಂತರ ಅವರ ಪರಿವಾರಕ್ಕೆ ದಾನಕೊಟ್ಟ ಅಸಂಖ್ಯ ಉದಾಹರಣೆಗಳಿದ್ದರೂ ಹೀಗೆ ತಮ್ಮ ತಪ್ಪಿಗೆ ಮರುಗಿ ದಾನ ನೀಡಿದ ಉದಾಹರಣೆ ಅಪರೂಪವೆಂದು ನಮ್ಮ ಭಾವನೆ. ಇದೇ ರೀತಿ ಹೊಯ್ಸಳ ದೊರೆ ವೀರಬಲ್ಲಾಳನ ಕಾಲದ ಕ್ರಿ.ಶ. 1204ರ ಸಾತೇನಹಳ್ಳಿಯ ಶಾಸನವು ನಾಗರಖಂಡ 70ರಲ್ಲಿದ್ದ ಸಾತೆಯನ ಹಳ್ಳಿಯಲ್ಲಿದ್ದ ಬಣಂಗವಟ್ಟಣವನ್ನು ಸಲಹಿದ ವೆಣ್ಣಲಸೆಟ್ಟಿಕವ್ವೆ ಎಂಬ ವಿರಳ ಸೆಟ್ಟಿಕವ್ವೆ ಕುರಿತು ತಿಳಿಸುತ್ತದೆ. ಹೇಳಿ ಕೇಳಿ ಸಾತೆಯನಹಳ್ಳಿಯು ಅದು ವ್ಯಾಪಾರಿಗಳ ಪಟ್ಟಣವಾಗಿತ್ತು. "ಈ ವೆಣ್ಣಿಲ ಸೆಟ್ಟಿಕವ್ವೆಯು ಮೊರಬುಟ್ಟಿ, ಹುಟ್ಟು ಸಟ್ಟುಗ, ಬರಳು ಅಕ್ಕಿ ಎಂದು ಕೇವಲ ಅಡಿಗೆ ಮನೆಗೆ ಮೀಸಲಾಗದೆ

ಧರ್ಮ ಕಾರ್ಯದಲ್ಲಿಯೂ ವೀರತನದಲ್ಲಿಯೂ ಅಪ್ರತಿಮಳಾಗಿದ್ದಳು. ವರ್ತಕರಿದ್ದ ಕಡೆ ಕಳ್ಳಕಾಕರ ಹಾವಳಿ ಇರಲೇಬೇಕು. ಹಾಗಾಗಿ ಇಂತಹ ಖಳರನ್ನು ಕೊಂದು, ಇವಳ ಮೇಲೆ ಬಂದವರ ಕರುಳನ್ನು ತೆಗೆದು, ಮಾರ್ಮಲೆವರ ಮೂಳೆಯನ್ನು ಮುರಿದು ದುಷ್ಟರ ನಿಟ್ಟೇರಿವಂ ನಿಮಿರ್ಜಿ ಬಣಂಜು ಧರ್ಮವನ್ನು ಸೆಟ್ಟಿಕವ್ವೆಯು ಕಾಪಾಡುತ್ತಿದ್ದಳು. ಇದಕ್ಕಾಗಿಯೇ ಈಕೆ ಕೋಣವತ್ತಿಯಲ್ಲಿ ಅಧಿಪೋತ್ತಮೆಯಾಗಿ ಹುಟ್ಟಿದಳು ಎನ್ನುತ್ತದೆ ಶಾಸನ. ಈ ಶಾಸನದಲ್ಲಿ ಈಕೆಯನ್ನು ಕರೆದಿರುವ ಬಣಂಜು ಧರ್ಮವನೆ ಪಾಳಿಸಿ, ಬಣಂಜು ಸಮಯ ಪ್ರತಿಪಾಳನೆ ಎಂಬ ಮಾತುಗಳು ಈಕೆಯು ಈ ಧರ್ಮವನ್ನು ರಕ್ಷಿಸಿದ ಗಾಥೆಯನ್ನು ತಿಳಿಸುತ್ತದೆ. ಈ ಧರ್ಮವನ್ನು ಪರಿಪಾಲಿಸಲು ಈಕೆ 'ದುರ್ದ್ದರತರಮಪ್ಪ ಚಂಡಿಕೆ"ಯೇ ಆಗಿದ್ದಳು[125]

ಈ ಮುಂತಾದ ಹೋರಾಟಗಳಲ್ಲಿ ಹೆಣ್ಣು ತಾನು ಭಾಗವಹಿಸುವುದರ ಮೂಲಕ ತಾನೂ ಹೋರಾಟದಲ್ಲಿ ಏನೂ ಕಡಿಮೆಯಿಲ್ಲ ಎಂದು ತೋರಿಸಿದರೂ ಈ ರೀತಿಯ ಹೋರಾಟಗಳನ್ನು ನಡೆಸಿರುವುದು ಬಹುತೇಕ ಅಧಿಕಾರಸ್ಥ ಮಹಿಳೆಯರೇ ಎನ್ನುವುದು ವಿಶೇಷವಾದ ಸಂಗತಿಯಾಗಿದೆ. ಅವಳು ರಾಣಿಯಿರಬಹುದು, ಸಾಮಂತನ ಪತ್ನಿಯಿರಬಹುದು ಅಥವಾ ಊರ ಗಾವುಂಡನ ಹೆಂಡತಿಯಿರಬಹುದು ಒಟ್ಟಿನಲ್ಲಿ ಅಧಿಕಾರವನ್ನು ಹೊಂದಿರುವವಳು ಮಾತ್ರ ಜನಸಾಮಾನ್ಯ ಹೆಣ್ಣುಮಕ್ಕಳು ಹೀಗೆ ಹೋರಾಟಕ್ಕೆ ಇಳಿದ ಸಂಗತಿ ದಾಖಲಾಗಿಲ್ಲ.

ಈ ಕಾಲದ ಮಹಿಳೆಯರ ಬಗ್ಗೆ ದಾಖಲಿಸಬೇಕಾದ ಇನ್ನೊಂದು ವಿಶೇಷವಾದ ವಿಷಯವೆಂದರೆ ತನ್ನ ಗಂಡನೋ, ಮಾವನೋ, ಮಗನೋ ಹೀಗೆ ಯುದ್ಧರಂಗದಲ್ಲಿ ಮಡಿದಾಗ ಅಪಾರ ಸಂಕಟವನ್ನು ತನ್ನೊಡಲಲ್ಲಿ ತುಂಬಿಕೊಂಡಿದ್ದರೂ ಮುಂದೆ ನಿಂತು ಅವರ ಅಂತ್ಯಕ್ರಿಯೆಗಳನ್ನು ನಡೆಸಿ ಆ ಸಂದರ್ಭದಲ್ಲಿ ಆ ಕಾಲದ ಯುಗ ಧರ್ಮದಂತೆ ಅನೇಕ ದಾನ ದತ್ತಿಗಳನ್ನು ನೀಡಿ ತಮ್ಮ ವೀರರು ಅಜರಾಮರವಾಗಿರಲಿ ಎಂದು ವೀರಗಲ್ಲುಗಳನ್ನು ನಡೆಸುವಷ್ಟು ಆರ್ಥಿಕವಾಗಿ ಮಹಿಳೆ ಸ್ವತಂತ್ರವಾಗಿದ್ದಳು. ಕನ್ನಡ ನಾಡಿನ ಶಾಸನಗಳ ತುಂಬೆಲ್ಲ ಪುರುಷರೇ ಈ ಅಧಿಕಾರದ ವಾರಸುದಾರರಾಗಿದ್ದ ಸಂದರ್ಭದಲ್ಲಿ ಮಹಿಳೆಯರೂ ಹೀಗೆ ವೀರಗಲ್ಲುಗಳನ್ನು ನಡೆಸುವ ಮೂಲಕ ತಮ್ಮ ಸ್ಥಾನ ಮಾನವನ್ನು ಉಳಿಸಿಕೊಂಡಿದ್ದಾರೆ ಎಂದು ಬಗೆಯಲು ಅವಕಾಶವಿದೆ. ಅಂತಹ ಕೆಲವು ಉದಾಹರಣೆಗಳನ್ನು ಗಮನಿಸಬಹುದು. ಈ ತೊಂದರೆಯನ್ನು ಸಹಿಸಿಕೊಳ್ಳಲು ಸಾಧ್ಯವಾಗದೇ ಪತಿಯರೊಂದಿಗೆ ಸಹಗಮನ ನಡೆಸಿದವರೆಷ್ಟೋ ಮಂದಿ. ನಾನಿಲ್ಲಿ ಪ್ರಸ್ತಾಪಿಸಲು ಹೊರಟಿರುವ ಹೆಂಗಸರುಗಳು ತಮ್ಮ ಗಂಡನ ಹೆಸರು ಶಾಶ್ವತವಾಗಿರಲು ವೀರಗಲ್ಲುಗಳನ್ನು ನಡೆಸಿದ ಹೆಂಗಸರಾದರೂ ನಾನು ಗಂಡನೊಡನೆ ಸಹಗಮನವನ್ನು ಮಾಡದೇ ಅವನ ನಂತರವೂ ನನ್ನ ಅಸ್ತಿತ್ವವನ್ನು ಉಳಿಸಿಕೊಂಡೇ ತೀರುತ್ತೇನೆ ಎಂಬ ದಿಟ್ಟ ಹೆಂಗಸರು ಎಂದೇ ನಮ್ಮ ನಂಬಿಕೆ.

ತಗರೆನಾಡ ಆಲೂರಿನ ಮಾಚಿಗಾವುಂಡನು ಬಲ್ಲದ ಕತೆಯೂ ಕಡಿವೆಂದು ಕಾಳಗದಲ್ಲಿ ಸತ್ತಾಗ ಆತನ ಹೆಂಡತಿ ಚಟ್ಟಬ್ಬೆಯು ಕಲ್ಲನ್ನು ನಡೆಸಿದಳು[126] ಗೊವಬೆಟ್ಟದ ಮಡಿವಳ್ಳಿ ನಾಗಿಯಣ್ಣನು ಹಸುಗಳನ್ನು ಮರಳಿಸಿ ತುರುಗೋಳ್ ಯುದ್ಧದಲ್ಲಿ ಮಡಿದಾಗ ಆತನ ಹೆಂಡತಿ ಪುಳ್ಳಿಯಬ್ಬೆ[127] ಕಡುಗುಳ ಮೂವತ್ತರ ಬಟ್ಟವೆಗ್ಗಡೆಯ ಮಗ ಡಾಣವೆಗ್ಗಡೆ ಬಳುಹದ ಕೊಪ್ಪದಲ್ಲಿ ನಡೆದ ಯುದ್ಧದಲ್ಲಿ ತೀರಿಕೊಂಡಾಗ ಅವನ

ಹೆಗ್ಗಡತಿ ಮಾಚವ್ವೆ[128] ವೆಂಗಜಯನು ಮರಣಿಸಿದಾಗ ಆತನ ಮದವಳಿಗೆ (ಹೆಂಡತಿ) ಏಚಲೆ[129] ಪಸಾಯತ ಮಲ್ಲಿಸೆಟ್ಟಿಯರ ತಮ್ಮ ವೀರಸೆಟ್ಟಿ ಕಳ್ಳರೊಡನೆ ಹರಾಡಿ ಸತ್ತಾಗ ಆತನ ಮದವಳಿಗೆ ಕೇತವ್ವೆ[130] ಕಳ್ಳರೊಡನೆ ಹೋರಾಡಿ ಮಡಿದ ಹೋರಾಟದ ಸ್ಮರಣೆಗಾಗಿ ಅವನ ಪತ್ನಿ ಸೋಮವ್ವೆ [131] ಮಾರಗೌಡನ ಮಗ ಹಲವರನ್ನು ಕೊಂದು ಸ್ವರ್ಗಲೋಕಕ್ಕೆ ಹೋದಾಗ ಆತನ ಮದವಳಿಗೆ ಸೋಮವ್ವೆ ದೇವಿ[132] ಕೇವಲ ಕೆಲವೇ ಕೆಲವು ಉದಾಹರಣೆಗಳಷ್ಟೆ.

ತನಗೆ ವೀರಗಲ್ಲನ್ನು ಹಾಕಿಸಲು ಅವಕಾಶ ದೊರೆಯದಿದ್ದಾಗ ಈಗಾಗಲೇ ಹಲವು ಪ್ರಮುಖರು ಸೇರಿ ವೀರಗಲ್ಲನ್ನು ನೆಡೆಸಿದ ಸಂದರ್ಭದಲ್ಲಿ ವೀರನ ಹೆಂಡತಿಯೂ ಹಾಜರಿದ್ದು ಬೇರೆ ಬಗೆಯ ದಾನಗಳನ್ನು ನೀಡುತ್ತಿದ್ದುದೂ  ಸಹ ಉಂಟು. ಅಂತಹ ಒಂದು ಉದಾಹರಣೆಯೆಂದರೆ[133] ಕದಂಬ ದೊರೆ ವೀರಕಾವದೇವನು ನೀಡಿದ ನಿರೂಪದಂತೆ ಮಹಾಮಂಡಳಿಕ ವೀರಜಯನಿಯನಾಯಕನು ತನ್ನ ಅಧೀನರಿಗೆ ಯುದ್ಧದ ಕರೆ ನೀಡಿದನು. ಅದರಂತೆ ಬೋಳೆಯ ನಾಯಕನು ಮಾಯಿದೇವನ ರಾಜ್ಯದ ಮೇಲೆ ದಂಡೆತ್ತಿ ಹೋಗಿ ಪರಾಕ್ರಮದಿಂದ ಹೋರಾಡಿ ಜಯವನ್ನು ತಂದುಕೊಟ್ಟು ವೀರಮರಣವನ್ನಪ್ಪಿದ. ಆಗ ಎಲ್ಲ ಪ್ರಮುಖರು ಸೇರಿ ಬೋಳೆಯ ನಾಯಕನಿಗೆ ಕಂಬಳಿಕೊಪ್ಪದಲ್ಲಿ ವೀರಗಲ್ಲು ಹಾಕಿಸಿದಾಗ ಆತನ ಹೆಂಡತಿ ನಾಯಕಿತ್ತಿಯು ಗದ್ದೆಯೊಂದನ್ನು  ಊರಿನ  ರಾಮನಾಥದೇವರಿಗೆ ದಾನ ನೀಡಿ ಗೋದಾನವನ್ನು ಕೂಡ ನಡೆಸಿಕೊಟ್ಟಳು.

ಇಂತಹ ಅನೇಕ ಹೋರಾಟಗಳಲ್ಲಿ ಮಡಿದ ವೀರರಿಗಾಗಿ ಆತನ ಹೆಂಡತಿಯಿಲ್ಲವೆ, ತಂಗಿ, ಅಕ್ಕ. ತಾಯಿಯರೂ ವೀರಗಲ್ಲುಗಳನ್ನು ನೆಡೆಸುತ್ತಿದ್ದರು.  ಕೆಲವು ಹೋರಾಟಗಳಲ್ಲಂತೂ ವೀರನ ಹೆಣವೂ ಸಿಗದೆ ಅಥವಾ ಗುರುತಿಸಲು ಸಾಧ್ಯವಾಗದೆ ಅಥವಾ ಅನೇಕ ಜನ ತೀರಿಕೊಂಡಾಗ ಸಾಮೂಹಿಕವಾಗಿ ಅಗ್ನಿಸ್ಪರ್ಶ ನಡೆಸಿದಾಗ ವೀರನ ಹೆಣವಿಲ್ಲದ ಸಂದರ್ಭದಲ್ಲಿ ಪರೋಕ್ಷವಿನಯವಾಗಿ ಕೂಡ ವೀರಗಲ್ಲುಗಳನ್ನು ನೆಡೆಸಿ ಅನೇಕ ದಾನ ದತ್ತಿಗಳನ್ನು ಸ್ತ್ರೀಯರು ನೀಡಿದ್ದಾರೆ.  ಇದರಿಂದ ನಾವು ಗಮನಿಸಬಹುದಾದ ಸಂಗತಿಯೆಂದರೆ ಸ್ತ್ರೀಯರಿಗೂ ಸಹ ಈ ರೀತಿಯ ಚಟುವಟಿಕೆಗಳಲ್ಲಿ ಅಧಿಕಾರವಿತ್ತು. ಕೆಲವು ಮಾತ್ರ ದಾಖಲಾಗಿದ್ದರೆ ಅನೇಕ ಸಂಗತಿಗಳು ದಾಖಲಾಗದೇ ಹೋಗಿದೆಯಷ್ಟೇ. ಒಂದು ವೀರಗಲ್ಲನ್ನು ಹಾಕಿಸುವುದೆಂದರೆ ಅದು ನಿಜಕ್ಕೂ ಹಣ ವ್ಯಯವಾಗುವಂತಹ ಕೆಲಸ.  ಹಾಗಾಗಿ ಅನೇಕರು ಅದನ್ನು ಹಾಕಿಸದೇ ಕೂಡ ಇರಬಹುದು. ಕೆಲವರು ಅನೇಕ ವೀರಗಲ್ಲುಗಳನ್ನು ನೆಡೆಸುವಷ್ಟು ಆರ್ಥಿಕ ಭದ್ರತೆಯುಳ್ಳವರೂ ಆಗಿದ್ದರು.  ಉದಾಹರಣೆಗೆ ಹಿರಿಯಜಗರೆಯಲ್ಲಿ ನಡೆದ ತುರುಕಾಳಗದಲ್ಲಿ ಮಡಿದ ಮಲ್ಲಿಸೆಟ್ಟಿ, ಈತನ ಮಗ ಮಯಿಲಿಸೆಟ್ಟಿ ಅವರ ಭಾವ ಕಾಮಿಸೆಟ್ಟಿ, ಆತನ ತಮ್ಮ ಜೋತಿಸೆಟ್ಟಿ ಹೀಗೆ ನಾಲ್ವರಿಗೆ ಪರೋಕ್ಷವಿನಯವಾಗಿ ಬೋಕಿಯಬ್ಬೆಯ ಮಗಳು ಮಹಾದೇವಿ ವೀರಶಾಸನವನ್ನು ಹಾಕಿಸಿರುವಳು. ಒಂದೇ ಕುಟುಂಬದ ನಾಲ್ವರು ತೀರಿಕೊಂಡ ನಷ್ಟವನ್ನು ವರ್ಣಿಸುವುದಾದರೂ ಹೇಗೆ?

ಚೆನ್ನಕ್ಕ ಎಲಿಗಾರರು "ಎರೆವಸ ಒಡೆಯನ ಪರವಾಗಿ ನಿಂತು ಹೋರಾಡುವ ಕ್ರಿಯೆ. ಮಹಿಳೆಯರಿಗೆ ಇಂಥ ಅವಕಾಶ ಹೆಚ್ಚು ಸಿಕ್ಕ ಬಗ್ಗೆ ಶಾಸನೋಲ್ಲೇಖಗಳಿಲ್ಲದಿದ್ದರೂ ಕದಂಬ ಕಾಮದೇವ

ಮತ್ತು ಚಾಲುಕ್ಯ ಮಂಡಲೇಶ್ವರ ನಾಗವರ್ಮರಿಗೆ ನಡೆದ ಕಾಳಗದಲ್ಲಿ "ವೀರಭಟರನಿರಿದು ದೇವಲೋಕಕ್ಕೆ ಸಂದ" ಮಹಿಳೆ ಚನ್ದಯಬ್ಬೆ ಎಂಬುವವಳ ಉಲ್ಲೇಖ ಹಳದಿಪುರ ಶಾಸನದಲ್ಲಿದೆ" ಎಂದು ಹೇಳುವುದರ ಮೂಲಕ ಎರೆವಸದ ಯುದ್ಧದಲ್ಲಿಯೂ ಹೆಂಗಸರು ಭಾಗವಹಿಸಿದ್ದಕ್ಕೆ ಉದಾಹರಣೆಯನ್ನು ಹುಡುಕಿಕೊಟ್ಟಿದ್ದಾರೆ. ಹಾಗೆಯೇ "ಪ್ರಾಚೀನ ಕರ್ನಾಟಕದಲ್ಲಿ ಹಳ್ಳಿಹಳ್ಳಿಗಳ ಜಗಳ, ವೈರಿ ಅರಸರ ದಾಳಿ, ಕಳ್ಳರ ಸುಲಿಗೆಗಳಿಂದಾಗಿ ಗ್ರಾಮಗಳು ಹಾಳಾಗುವುದು ಸಾಮಾನ್ಯವಾಗಿತ್ತು. ಇಂತಹ ಪ್ರಸಂಗದಲ್ಲಿ ಗ್ರಾಮರಕ್ಷಣೆಯ ಜವಾಬ್ದಾರಿ ಅಲ್ಲಿಯ ಪುರುಷರ ಪಾಲಿಗೆ ಬರುತ್ತಿತ್ತು. ಹೀಗೆ ಹೋರಾಡಿ ಮಡಿದ ಪತ್ನಿಯರ ಉಲ್ಲೇಖಗಳೂ ಕರ್ನಾಟಕದಲ್ಲಿ ದೊರಕದೆ ಹೋದರೂ ತಾಳಗುಪ್ಪೆಯ ಶಾಸನವೊಂದರಲ್ಲಿ "ಮಾದರ ಕಾಳ ಬೇಡರ ಹುಯ್ಯಲಲಿ ಸ್ವರ್ಗವನ್ ಏರಿದನು ಆತನ ಮುರವಳಿ ಬೊಮ್ಮಬ್ಬೆ ಕಾದಿ ಪರಮಪದವ ಪಡೆದಳ್" ಎಂಬ ಉಲ್ಲೇಖ ಮಹಿಳೆ ಭಾಗವಹಿಸಿದುದನ್ನು ತಿಳಿಸುತ್ತದೆ" ಎಂದು ಕೂಡ ಹೇಳಿದ್ದಾರೆ.[134]

**ಬಲಿದಾನ ಮರಣ ಪದ್ಧತಿ ಮತ್ತು ವೀರಗಲ್ಲುಗಳು :**

ಬಲಿದಾನ ಮರಣದ ಬಗ್ಗೆ ತಿಳಿಸುವ ಅನೇಕ ಶಾಸನ ಮತ್ತು ಸಾಹಿತ್ಯಾಧಾರಗಳು ಸಿಗುತ್ತವೆ. ಅವುಗಳ ಆಧಾರದ ಮೇಲೆ ಧಾರ್ಮಿಕ ಬಲಿದಾನ ಮತ್ತು ಲೌಕಿಕ ಬಲಿದಾನ ಎಂಬ ಎರಡು ವಿಧಗಳನ್ನು ಗುರುತಿಸಬಹುದು. ಧರ್ಮದ ಕಟ್ಟುಕಟ್ಟಳೆಗಳನ್ನು ಜನರು ನಂಬಿ ಅದನ್ನು ತಮ್ಮ ಮೇಲೆ ಹೇರಿಕೊಂಡು ಅಲೌಕಿಕ ಪ್ರಪಂಚದತ್ತ ದೃಷ್ಟಿ ಹರಿಸುವ, ಲೌಕಿಕ ಪ್ರಪಂಚದಿಂದ ವಿದಾಯ ಹೇಳುವ ರೀತಿ ಧಾರ್ಮಿಕ ಬಲಿದಾನದ್ದು. ಈ ರೀತಿಯ ಬಲಿದಾನದ ಪ್ರಮುಖ ಸಂದರ್ಭಗಳೆಂದರೆ ಸೂರ್ಯಗ್ರಹಣದ ಸಂದರ್ಭದಲ್ಲಿ ಮರಣ ಹೊಂದುವುದು, ಪವಿತ್ರ ನದಿಗಳಲ್ಲಿ ಮುಳುಗುವುದು, ಬೆಟ್ಟ, ಮರ ದೇವಾಲಯ ಶಿಖರಗಳಿಂದ ಕೆಳಗೆ ಬೀಳುವುದು.

ಧಾರ್ಮಿಕ ಬಲಿದಾನದಂತೆಯೇ ಲೌಕಿಕ ಬಲಿದಾನಗಳು ಅಂದು ಪ್ರಚಲಿತದಲ್ಲಿದ್ದವು. ಇವುಗಳನ್ನು ಬೇರೆ ಬೆರೆ ಹೆಸರುಗಳಿಂದ ಕರೆಯಲಾಗಿದೆ. ವೇಳೆವಾಳಿ, ಜೋಳವಾಳಿ, ಸಹಗಮನ, ಅನುಗಮನ, ಗರುಡರು, ಲೆಂಕವಾಳಿ ಮುಂತಾದವು. ಅರಸನಿಗೋಸ್ಕರ ಸೇವಕರು ಪ್ರಾಣತ್ಯಾಗ ಮಾಡುವುದು ಕರ್ತವ್ಯ ಎಂದು ಭಾವಿಸಲಾಗಿತ್ತು. ವೇಳೆವಾಳಿ ಎಂದರೆ ರಾಜನ ಸಾವಿನ ಸಮಯದಲ್ಲಿ ತನ್ನ ಕರ್ತವ್ಯವನ್ನು ನಡೆಸುವವನು ಎಂದರ್ಥ. ವೇಳೆವಾಳಿಗೆ ಕೀಳ್ಗುಂಟೆಯೆಂದೂ ಸಹ ಚರಿತ್ರೆಯ ಬೇರೆ ಬೇರೆ ಅವಧಿಯಲ್ಲಿ ಕರೆಯಲಾಗಿದೆ. ಕೀಳ್ಗಂಟೆಯೆಂದರೆ ತನ್ನ ಒಡೆಯನ ಚಿತೆಯ ಕೆಳಗೆ ಅಥವಾ ಸಮಾಧಿಯ ಕೆಳಗೆ ಹೂಳಲ್ಪಟ್ಟವನು ಎಂದರ್ಥ. 11ನೆಯ ಶತಮಾನದ ಹೊತ್ತಿಗೆ ಲೆಂಕವಾಳಿ ಪದಗಳು ಶಾಸನೋಕ್ತವಾಗಿರುವುದು ಕಂಡುಬರುತ್ತದೆ. ಅರಸನ ಸೇವೆಗಾಗಿ ತನ್ನನ್ನು ಸಮರ್ಪಿಸಿಕೊಂಡವನು ಎಂದರ್ಥ. ಹೊಯ್ಸಳರ ಆಳ್ವಿಕೆ ಸಂದರ್ಭದಲ್ಲಿ ಇವರನ್ನು ಗರುಡರು ಎನ್ನುವ ಹೆಸರಿನಿಂದ ಕರೆಯಲಾಗಿದೆ. ಈ ಕುರಿತು ವಿದ್ವತ್ ವಲಯದಲ್ಲಿ ಅನೇಕ ವಾದ ವಿವಾದಗಳಿವೆ. ಈ ಎಲ್ಲ ಪದ್ಧತಿಗಳು ಅರಸ ನೊಂದಿಗಿನ

ವಿಶೇಷ ಬಾಂಧವ್ಯವನ್ನು ಸೂಚಿಸುತ್ತದೆಯಾದರೂ ಅದರ ಆಳದಲ್ಲಿರುವುದು ಊಳಿಗ ವ್ಯವಸ್ಥೆಯ ಪ್ರತಿಬಿಂಬ. ಒಟ್ಟಿನಲ್ಲಿ ಅರಸನಿಗಾಗಿ ಆತ್ಮಹತ್ಯೆ ಮಾಡಿಕೊಂಡ ವೇಳೆ–ಲೆಂಕ–ಗರುಡ ಮುಂತಾದ ಹೆಸರಿನಲ್ಲಿ ಕರೆಯಲ್ಪಡುವ ಜನರ ಸ್ಮಾರಕಗಳನ್ನು ಬಲಿದಾನ ಕಲ್ಲುಗಳೆಂದು ಕರೆಯಲಾಗಿದೆ.

**ಗರುಡಪದ್ದತಿ: ಕೆಲವು ಹೊಸ ಸಂಗತಿಗಳು**

ವಿಶೇಷವಾಗಿ ಕನ್ನಡ ನಾಡಿನಲ್ಲಿ ಅದರಲ್ಲೂ ಹೊಯ್ಸಳರ ಕಾಲದಲ್ಲಿ ರಾಜರಿಗೆ ನೆಚ್ಚಿನ ಬಂಟರಾಗಿ ಅವರಿಗಾಗಿ ಪ್ರಾಣವನ್ನೇ ಪಣವಾಗಿಟ್ಟು ಕಾದುತ್ತಿದ್ದು ಅವರು ಸತ್ತಾಗ ಆತ್ಮಾರ್ಪಣೆ ಮಾಡಿಕೊಳ್ಳುತ್ತಿದ್ದ ವಿಶಿಷ್ಟ ಅಂಗರಕ್ಷಕರೇ ಗರುಡರು. ಕರ್ನಾಟಕದ ಇತಿಹಾಸದ ವಿವಿಧ ಕಾಲಗಳಲ್ಲಿದ್ದ ಅಂಕಕಾರರು, ಲೆಂಕರು, ವೇಳೆಕಾರರು ಇವರು ಕೂಡ ಇದೇ ಬಗೆಯ ಯೋಧರು. ಕರ್ನಾಟಕದ ಹೊರಗಡೆಯೂ ರಾಜರು ಇಂಥ ನಿಷ್ಠಾವಂತ ಸೇವಕರನ್ನು ನೇಮಿಸಿಕೊಳ್ಳುವ ಪದ್ದತಿ ಇತ್ತು. ಕೇರಳದಲ್ಲಿ ಈ ಪದ್ಧತಿ ಇತ್ತೆಂಬುದನ್ನು ಮಾರ್ಕೋಪೋಲೋ ಬರೆವಣಿಗೆಗಳಿಂದ ಗೊತ್ತಾಗುತ್ತದೆ. ಆ ಕಾಲದಲ್ಲಿ ಈ ಪದ್ದತಿಗೆ ಧಾರ್ಮಿಕ ಬೆಂಬಲವೂ ಇತ್ತು. ಶ್ರದ್ದೆ ಮತ್ತು ನಿಷ್ಠೆಯಿಂದ ತಮ್ಮ ಪ್ರಮಾಣವಚನಕ್ಕೆ ಬದ್ದರಾಗಿ ಆತ್ಮಾರ್ಪಣೆ ಮಾಡಿಕೊಳ್ಳುವುದರಿಂದ ತಮಗೆ ವೀರಸ್ವರ್ಗ ಲಭಿಸುವುದೆಂದು ಗರುಡರು ನಂಬಿದ್ದರು ಗರುಡರ ಸ್ಮರಣಾರ್ಥವಾಗಿ ವೀರಗಲ್ಲುಗಳನ್ನು ನೆಡಿಸುತ್ತಿದ್ದದ್ದುಂಟು. ಗರುಡಗಂಬಗಳೆಂಬ ಹೆಸರು ಇವರಿಂದ ಬಂದಿರಬಹುದೆಂದು ಹೇಳಲಾಗಿದೆ.

ಗರುಡನ ಪರಾಕ್ರಮ, ಸಾಧನೆ ಮತ್ತು ಪ್ರಾಣಾತ್ಯಾಗಗಳಿಗೆ ಸಂಬಂಧಿಸಿದ ಅನೇಕ ಪ್ರಸಂಗಗಳು ಕನ್ನಡ ಶಾಸನಗಳಲ್ಲಿ ದೊರೆಯುತ್ತದೆ. ಉದಾ: ಕ್ರಿ.ಶ 865ರಲ್ಲಿ ನೀತಿಮಾರ್ಗ ಗಂಗರಾಜ ಮರಣಹೊಂದಿದಾಗ ಆತನ ಗರುಡನಾಗಿದ್ದ ರಾಸೇಯ ಮತ್ತು ಬೇಬಿಯಮ್ಮ(ಣ್ಣ) ರು ಪ್ರಾಣಾರ್ಪಣೆ ಮಾಡಿದರು. ರಾಷ್ಟ್ರಕೂಟ ಕಾಲದಲ್ಲೂ ಈಪದ್ದತಿಯಿತ್ತು ಹೊಯ್ಸಳ ಚಕ್ರವರ್ತಿ ಇಮ್ಮಡಿ ಬಲ್ಲಾಳನ ಅಂಗರಕ್ಷಕ ದಳದ ಅಧಿಪತಿಯಾಗಿದ್ದ ಕುವರಲಕ್ಷ್ಮನ ಹೆಸರು ಉಲ್ಲೇಖಾರ್ಹವಾದದ್ದು. ಕುವರಲಕ್ಷ್ಮನೂ ಇವನ ವೀರಪತ್ನಿ ಸುಗ್ಗಲದೇವಿಯೂ ಇವನ ಅಧೀನದಲ್ಲಿದ್ದ ಯೋಧರು ಗರುಡರಾಗಿದ್ದರು. ತಮ್ಮ ದೊರೆಗಾಗಿ ಬದುಕುವುದಾಗಿ, ಅವನಿಗಾಗಿ ಸಾಯುವುದಾಗಿ ಅವರು ಪ್ರತಿಜ್ಞೆ ಮಾಡಿದ್ದರು. ವೀರಲಕ್ಷ್ಮನಿಗೂ ಅವನ ಪ್ರಭುವಾದ ಬಲ್ಲಾಳ ದೊರೆಗೂ ನಡುವೆ ಯಾವ ಭಿನ್ನಭಾವವೂ ಇರಲಿಲ್ಲ. ದೊರೆ ಅವನನ್ನು ತನ್ನ ಮಗನಂತೆಯೇ ಸಾಕಿದನು. ತನ್ನಕೀರ್ತಿಯಲ್ಲೂ ದೊರೆತನದ ಮರ್ಯಾದೆಯಲ್ಲೂ ಅವನೂ ಪಾಲ್ಗೊಳ್ಳುವಂತೆ ಮಾಡಿದನು. ದೊರೆ 1220ರಲ್ಲಿ ಮರಣಹೊಂದಿದಾಗ ಕುವರಲಕ್ಷ್ಮನೂ ಅವನ ಪತ್ನಿಯೂ ಅವನ ಸಾವಿರ ಯೋಧರ ಪಡೆಯೊಡನೆ ಪ್ರಾಣಾರ್ಪಣೆ ಮಾಡಿದರೆಂಬುದು ಹಳೇಬೀಡಿನ ಶಾಸನದಿಂದ ತಿಳಿದುಬರುತ್ತದೆ. ಹೊಯ್ಸಳ ವೀರ ಸೋಮೇಶ್ವರನ ಮರಣದೊಡನೆ ಅವನ ಗರುಡನಾದ ಕಾಮೇಯನಾಯಕನು ಪ್ರಾಣಾರ್ಪಣೆ ಮಾಡಿಕೊಂಡನು

ಇಂಥ ಯೋಧ ಪಡೆಯಲ್ಲಿ ಅತ್ಯಂತ ಮುಖ್ಯ ಸ್ಥಾನವನ್ನು ಪಡೆದಿರುವ ಮುಗಿಲಕುಲದ ಗರುಡರ ಬಗ್ಗೆ ಕೆಲವು ವಿದ್ವಾಂಸರು ತಮ್ಮ ತಮ್ಮ ಅಧ್ಯಯನಗಳಲ್ಲಿ ಪ್ರಾಸಂಗಿಕವಾಗಿ ಹೇಳಿದ್ದಾರಷ್ಟೆ. ಅದನ್ನು ಮುಂದುವರೆಸಿ ಅತ್ಯಂತ ವಿಶಿಷ್ಠ ರೀತಿಯಲ್ಲಿ ಗರುಡರಾಗಿದ್ದ ಈ ಮುಗಿಲಕುಲದ ವ್ಯಕ್ತಿಗಳು ಸೇನಾಧಿಪತಿಗಳೂ ಸಾಮಂತರೂ ಮಹಾಸಾಮಂತರೂ ಪ್ರಮುಖ ವಣಿಕರೂ ಆಗಿ ನಾಡಿನ ಸ್ಥಳೀಯ ಸಾಂಸ್ಕೃತಿಕ ಚರಿತ್ರೆಯಲ್ಲಿ ಗಣ್ಯಸ್ಥಾನವನ್ನು ಗಳಿಸಿದ್ದುದನ್ನು ಮುನ್ನೆಲೆಗೆ ತರುವುದು ಈ ನನ್ನ ಮಹಾಪ್ರಬಂಧದ ಆಶಯವಾಗಿದೆ. ಜೊತೆಗೆ ಈ ಗರುಡರ ಮತ್ತು ಅರಸರ ನಡುವಿನ ರಾಜಕೀಯ ಸ್ವರೂಪದ ಸಂಬಂಧಕ್ಕಿಂತ ಅಂದಿನ ಸಮಾಜದ ಸಾಮಾಜಿಕ ಸ್ವರೂಪದೊಂದಿಗಿನ ಸಂಬಂಧದ ಸೂಕ್ಷ್ಮವನ್ನು ಗ್ರಹಿಸುವ ನನ್ನ ಪ್ರಯತ್ನ ಈ ಮುಂದಿನ ಬರವಣಿಗೆಯಲ್ಲಿ ಕಾಣಬಹುದು. ಹೊಯ್ಸಳ ರಾಜ್ಯಾಡಳಿತದಲ್ಲಿ ಗರುಡರು ಆಳುವ ಗಣ್ಯವರ್ಗದಿಂದ ಬಂದವರು. ಇಂತಹ ಗರುಡರ ಮುಗಿಲ ಕುಲದ ಅತ್ಯಂತ ಪ್ರಾಚೀನ ಸದಸ್ಯ ಗಂಡನಾರಾಯಣ ಸೆಟ್ಟಿ ; ಈತ ಕಬ್ಬಾಹುನಾಡಿನ ಮುಖ್ಯಸ್ಥ. ಅವನ ವಂಶಜರು ಹೊಯ್ಸಳರ ಕೈಕೆಳಗೆ ಮಹಾಸಾಮಂತರಾದರು. ಇಲ್ಲಿ ಸ್ವಾರಸ್ಯವೆಂದರೆ ಈ ಮನೆತನವು ವರ್ತಕ ವರ್ಗದೊಂದಿಗೆ ಇಟ್ಟುಕೊಂಡಿದ್ದ ಸಂಬಂಧ.

**ಗಣ್ಡನಾರಾಯಣಸೆಟ್ಟಿ ಹಾಗೂ ಹೊಯ್ಸಳಸೆಟ್ಟಿಯು ಗರುಡರಾದ ಬಗೆ:** ಗಣ್ಡನಾರಾಯಣಸೆಟ್ಟಿಯು ತನ್ನ ಮಡದಿ ಮಾರವ್ವೆ ನಾಯಕಿತಿ ಮತ್ತು ಐದು ಜನ ಲೆಂಕರೊಡಗೂಡಿ ಹೊಯ್ಸಳ ದೊರೆ ಎರೆಯಂಗನು ಮರಣಹೊಂದಿದಾಗ ಗರುಡನಾಗಿ ತನ್ನ ಪ್ರತಿಜ್ಞೆಯನ್ನು ಪೂರೈಸಿದನು.[135] ಹೊಯ್ಸಳಸೆಟ್ಟಿಯು ತನ್ನ ಮಡದಿ ಮಾಚವ್ವೆ ನಾಯಿಕಿತಿಯೊಡನೆ ಮತ್ತು ಐದುಜನ ಲೆಂಕರೊಡಗೂಡಿ ಬಿಟ್ಟಿದೇವರಸನು ಮರಣಹೊಂದಿದಾಗ ಪ್ರಾಣಾರ್ಪಣೆ ಮಾಡಿಕೊಂಡನು.[136] ಅಂತೆಯೇ ಇವನ ವಂಶದ ಅನೇಕ ವೀರರು ಗರುಡರಾಗಿ ಕನ್ನಡ ಸಾಂಸ್ಕೃತಿಕ ಚರಿತ್ರೆಯಲ್ಲಿ ಅಜರಾಮರರಾಗಿದ್ದಾರೆ.

**ಅಗ್ರಹಾರ ಬಾಚಹಳ್ಳಿಯ ಆತ್ಮಾಹುತಿ ಶಾಸನಶಿಲ್ಪಗಳು:** ಮೈಸೂರು ಜಿಲ್ಲೆಯ ಕೃಷ್ಣರಾಜಪೇಟೆ ತಾಲೂಕು ಕೇಂದ್ರ ಕೃಷ್ಣರಾಜಪೇಟೆಯಿಂದ 6 ಕಿ.ಮೀ ಈಶಾನ್ಯಕ್ಕೆ ಈ ಅಗ್ರಹಾರ ಬಾಚಹಳ್ಳಿ ಇದೆ. ಪ್ರಾಚೀನ ಶಾಸನಗಳಲ್ಲಿ ಬಾಚಿಯಹಳ್ಳಿ, ಬಾಚೆಯಹಳ್ಳಿ ಎಂದು ಉಲ್ಲೇಖಿತ ಗೊಂಡಿವೆ. ಇಲ್ಲಿನ ಹುಣಿಸೇಶ್ವರ ದೇವಾಲಯವು ಹೊಯ್ಸಳರ ರಚನೆ. ಈ ಆಲಯವು ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಊರ ನಡುವೆ ಎತ್ತರ ಸ್ಥಳದಲ್ಲಿರುವ ಈ ಗುಡಿಯ ಗರ್ಭಗೃಹದಲ್ಲಿ ಶಿವಲಿಂಗವಿದ್ದರೆ, ಅಂತರಾಳದಲ್ಲಿ ನಂದಿಶಿಲ್ಪವಿದೆ. ಗರ್ಭಗೃಹಕ್ಕೆ ದ್ರಾವಿಡ ಶಿಖರವಿದೆ. ಈ ಗುಡಿಯ ಎಡಭಾಗದಲ್ಲಿ ವೀರಗಲ್ಲೊಂದಿರುವ ಪುಟ್ಟ ಮಂಟಪವಿದೆ. ಈ ಮಂಟಪದ ಅನತಿ ದೂರದ ಮುಂಭಾಗದಲ್ಲಿಯೇ ಆಲಯದ ಆವರಣದಲ್ಲಿಯೇ ಸುಮಾರು 15ಅಡಿ ಎತ್ತರದ ಮೂರು ಅಪೂರ್ವ ಶಾಸನ ಸ್ತಂಭಗಳು ಒಂದನೆಯ ಬಲ್ಲಾಳನಿಂದ ಮುಮ್ಮಡಿ ನರಸಿಂಹನವರೆಗೆ ಹೊಯ್ಸಳ ಸಾಮ್ರಾಜ್ಯದ ಅಭ್ಯುದಯಕ್ಕಾಗಿ ದುಡಿದು ಅರಸರಿಗಾಗಿ ಆತ್ಮಾರ್ಪಣೆ ಮಾಡಿಕೊಂಡ ಅಚಲ ಸ್ವಾಮಿನಿಷ್ಠೆಯ ಮುಗಿಲಕುಲಕ್ಕೆ

ಸೇರಿದ ಸಾಮಂತ ಮನೆತನದ ಗರುಡರ ಆತ್ಮಾಹುತಿ ಶಾಸನ ಶಿಲ್ಪಗಳಿವೆ. ಏಳು ತಲೆಮಾರಿನ ಗರುಡರ ಆತ್ಮಾಹುತಿಯ ಚಾರಿತ್ರಿಕ ಘಟನೆಗಳನ್ನು ಸ್ಮರಿಸಿ, ಹಾಡಿ, ಹೊಗಳಿ ದಾಖಲಿಸಿರುವ ಅಪೂರ್ವ ದಾಖಲೆಗಳಾಗಿವೆ.

ಅಗ್ರಹಾರ ಬಾಚಹಳ್ಳಿಯ ಹುಣಿಸೇಶ್ವರ ದೇಗುಲದ ಆವರಣದಲ್ಲಿರುವ ಮೂರು ಗರುಡರ ಕಂಬಗಳು ಈ ಮುಗಿಲಕುಲದ ಗರುಡರು ಗರುಡರಾದ ಬಗೆಯನ್ನು ಅದ್ಭುತವಾಗಿ ಶಿಲ್ಪೀಕರಿಸಿದೆ. ಗಂಡನಾರಾಯಣ ಸೆಟ್ಟಿಯ ವಂಶೀಯರೆಲ್ಲರು ಸಹ ಈ ಭಾಗದಲ್ಲಿಯೇ ಆತ್ಮಬಲಿಯಾದುದಾದರು ಏಕೆ? ಮೂರು ಕಂಬಗಳನ್ನು ಒಂದೇ ಬಗೆಯಲ್ಲಿ ಶೈಲಿಯಲ್ಲಿ ನಿರ್ಮಾಣವಾದುದನ್ನು ಗಮನಿಸಿದರೆ, ಈ ಮೂವರು ಅನ್ವಯಾಗತವಾಗಿ ಇಲ್ಲಿಯೇ ಗರುಡರಾದ ಉದ್ದೇಶವಾದರೂ ಏನು? ಬಹುಶಃ ಈ ಅಗ್ರಹಾರ ಬಾಚಹಳ್ಳಿಯು ಈ ವಂಶೀಯರ  ಆಳ್ವಿಕೆಯ ಪ್ರದೇಶವಾದ ಕಬ್ಬಾಹುನಾಡಿನ ಪ್ರಧಾನ ಕೇಂದ್ರವೇನಾದರೂ ಆಗಿದ್ದಿರಬಹುದು. ಅಥವಾ ಈ ವಂಶೀಯರ ಸ್ವಸ್ಥಳವೇನಾದರು ಆಗಿದ್ದಿರಬಹುದು. ಈ ಎಲ್ಲ ಸಂಭವನೀಯ ಕಾರಣಗಳಿಂದ ಈ ದೇಗುಲದ ಪ್ರಾಕಾರದೊಳಗೆ  ಸ್ಮಾರಕವಾಗಿ ಈ ಕಂಬಗಳನ್ನು ನಿಲ್ಲಿಸಲಾಗಿರಬಹುದು! ಈ ಮೂರು ಸ್ತಂಭಗಳ ಮೇಲೆ ತಲಾ ಒಂದರಂತೆ ಬೃಹತ್ತಾದ ಗಜಗಳಿವೆ .ಅವುಗಳ ಮೇಲೆ ಆಸೀನರಾಗಿರುವ ಗರುಡನಾಯಕರು, ಅವರವರ ಮಡದಿಯರು, ಅವರವರ ಲೆಂಕ–ಲೆಂಕಿತಿಯರನ್ನು ಶಿಲ್ಪೀಕರಿಸಲಾಗಿದೆ. ಗಜಗಳ ಕಾಲಿನಿಂದ ಕೆಳಗಿನ ಪಟ್ಟಿಯಾಕಾರದ ಸುತ್ತಲಿನ ಭಾಗಗಳಲ್ಲಿ ಈ ಗರುಡರು ಹೋರಾಡಿದ ಯುದ್ದ ಪ್ರಸಂಗವನ್ನು ಸಂಕ್ಷಿಪ್ತವಾಗಿ ಕೆತ್ತಲಾಗಿದೆ. ಮೂರು ಆನೆಗಳ ಶಿಲ್ಪಗಳಲ್ಲೂ ಒಂದು ಬಗೆಯ ಚಲನಶೀಲತೆಯಿದೆ. ಅಂದರೆ ಈ ವೀರರು ಆತ್ಮಾರ್ಪಣೆ ಮಾಡಿಕೊಳ್ಳಲು ಹೋಗುತ್ತಿರುವ ಕ್ರಿಯೆಯನ್ನು ದೃಶ್ಯೀಕರಿಸುವ ಪ್ರಯತ್ನವನ್ನು ಶಿಲ್ಪಿ ಮಾಡಿದ್ದಾನೆ ಎನಿಸುತ್ತದೆ. ಆನೆಯ ಮಸ್ತಕದ ಮೇಲೆ ಗರುಡನ ಸೊಗಸಾದ ವೀರಾವೇಶಪೂರಿತವಾದ ಶಿಲ್ಪದಲ್ಲಿ ಗರುಡ  ತನ್ನ ಎರಡು ಕೈಗಳನ್ನು ಅಗಲಿಸಿ ಅಪ್ಪುವ ರೀತಿಯಲ್ಲಿದೆ. ಆನೆಯ ಬೆನ್ನಿನಮೇಲೆ ಕುಳಿತಿರುವವರ ಪೈಕಿ ಮುಂದೆ ಕುಳಿತಿರುವವನು ಈ ಗರುಡನ ಎಡಗೈಯನ್ನು ಹಿಡಿದು ಮುಂದಕ್ಕೆ ದಾಂಗುಡಿ ಇಡುತ್ತಿರುವ ಬಗೆ ಇದೆ. ಈ ಗರುಡರು ಹೇಗೆ ಆತ್ಮಾಹುತಿಯಾದರು ಎಂಬುದಕ್ಕೆ ಸ್ಪಷ್ಟವಾದ ಆಕರಗಳಿಲ್ಲ. ಅವರು ಉರಿಗೆ ಬಲಿಯಾದರೆ? ಶೂಲಕ್ಕೆ ಬಿದ್ದರೆ? ಶಿರಕತ್ತರಿಸಿಕೊಂಡರೆ? ಆನೆಯಿಂದಲೇ ತುಳಿಸಿಕೊಂಡು ಸತ್ತರೆ? ಎಂಬುದು ಇನ್ನು ಶೋದನೆಯಾಗಬೇಕಿದೆ. ಆದರೆ ಈ ಕುರಿತು ಸರಿಯಾದ ಆಕರಗಳಿಲ್ಲದೆ ವಿದ್ವತ್ ವಲಯವು ಮೌನವಹಿಸಿದೆ. ಆದರೆ–

**"ಗಜಮಸ್ತಕದಲ್ಲಿ ಆಱುಬಾರಿ ಗರುಡನನಪ್ಪಿ ಬಾಸೆಯಂ ಪೂರಯಿಸಿದನು"[137]**

**"ಗಜಮಸ್ತಕದ ಮೇಲೆ ಆಱುಬಾರಿ ಗರುಡನನಪ್ಪಿ ಬಾಸೆಯಂ ಪೂರೈಸಿದನು.[138]**

**"ಗಜಮಸ್ತಕದ ಮೇಲೆ ಆಱುಬಾರಿ ಗರುಡನನಪ್ಪಿ ಬಾಸೆಯಂ ಪೂರೈಸಿದನು.[139]**

ವಾಕ್ಯಪ್ರಯೋಗಗಳನ್ನು ಎಚ್ಚರಿಕೆಯಿಂದ ಗಮನಿಸಿ, ಸಮೀಪದ ಅರ್ಥವನ್ನಾದರೂ ಹುಡುಕಲು ಪ್ರಯತ್ನಿಸಿದ್ದೇನೆ.

'ಆಱು' ಎಂಬ ಪದಕ್ಕೆ ಒಣಗು, ಬತ್ತು, ಸಮರ್ಥವಾಗು, ಒಂದು ಸಂಖ್ಯೆ, ಸೈರಿಸು, ನೋವು, ತಣಿ, ಕ್ಷಯಿಸು ಎಂರ್ಥಗಳಿವೆ. 'ಬಾರಿ' ಎಂಬುದಕ್ಕೆ ಸರದಿ, ಬಲಿ, ಆಹುತಿ, ಬಾಯಿ, ದಾಳಿ, ವಶ, ಕಪಿಲೆ ಬಾವಿಯಿಂದ ಎತ್ತುಗಳು ಕೆಳಗೆ ಇಳಿಯುವುದಕ್ಕಾಗಿರುವ ಇಳಿಜಾರು ಪ್ರದೇಶ, ಕಾಮೋದ್ರೇಕ, ಕೂಟ, ಚರ್ಮದ ಹಗ್ಗ, ಆನೆಯನ್ನು ಹಿಡಿಯಲು ಮಾಡುವ ಉಪಾಯ ಎಂಬರ್ಥಗಳಿವೆ.[140] ಪ್ರಾಯಶಃ ಆನೆಯ ತಲೆಯ ಮೇಲೆ ನಿಂತು ಅತ್ಯಂತ ಆಳವಾಗಿರುವ ಒಣಗಿದ ಇಳಿಜಾರಿನ ಪ್ರದೇಶಕ್ಕೆ ಬಿದ್ದು ಪ್ರಾಣ ಕಳೆದುಕೊಂಡಿರಬಹುದು. ಆಗ ಈ ವಾಕ್ಯವೃಂದಕ್ಕೆ ಆನೆಯ ತಲೆಯ ಮೇಲೆ ನಿಂತು ಅತ್ಯಂತ ಕಡಿದಾದ ಇಳಿಜಾರಿನ ಪ್ರದೇಶದಲ್ಲಿ ಬಿದ್ದು ಗರುಡನೆಂಬ ಅಭಿದಾನಕ್ಕೆ ಪಾತ್ರರಾಗಿ ಹಿಂದೆ ತಾವು ಕೊಟ್ಟ ಭಾಷೆಯನ್ನು (ಪ್ರತಿಜ್ಞೆಯನ್ನು) ಪೂರೈಸಿದರು ಎಂದು ಅರ್ಥಹೇಳಬಹುದು. ಅಗ್ರಹಾರ ಬಾಚಹಳ್ಳಿಯ ಮೂರು ಸ್ತಂಭಗಳ ಮೇಲೆ ಕುಳಿತಿರುವ ಮೊದಲನೆಯ ವ್ಯಕ್ತಿಯ ಕೈ ಹಿಡಿದು ಒಂದಾದ ಮೇಲೊಂದರಂತೆ ಹೆಜ್ಜೆಗಳನ್ನು ಹಿಮ್ಮುಖವಾಗಿ ಇಟ್ಟು ಬೀಳುತ್ತಿರುವ ದೃಶ್ಯವಿರುವುದನ್ನು ಗಮನಿಸಿದರೆ ಒಬ್ಬೊಬ್ಬರಾಗಿ ಕೈಕೈಹಿಡಿದು ಒಮ್ಮೆಗೆ ಆನೆಯ ಮೇಲಿನಿಂದ ಕೆಳಗೆ ಬೀಳುತ್ತಿರುವದನ್ನು ಸೂಕ್ಷ್ಮಗ್ರಾಹಿಯಾಗಿ ಅರಿಯಬಹದು. ಹಿಂದಿರುವವರು ಲೆಂಕರು ಮುಂದೆ ಇರುವವನು ಗರುಡ ಎಂಬುದನ್ನು ಸೂಚಿಸುವುದಕ್ಕಾಗಿ ಮೂರು ಸ್ತಂಭಗಳ ಆನೆಗಳ ಶಿಲ್ಪದ ತಲೆಯ ಮೇಲೆ ಒಬ್ಬನೆ ಗರುಡನ ಶಿಲ್ಪವನ್ನು ಕಾಣಬಹುದು. ಒಟ್ಟಿನಲ್ಲಿ ಎರೆಯಂಗನ ಕಾಲದಿಂದ 3ನೆಯ ನರಸಿಂಹನ ಕಾಲದವರೆಗಿನ ದೀರ್ಘಕಾಲಘಟ್ಟದಲ್ಲಿ ಸೇನಾನಾಯಕರೂ, ಸಾಮಂತರೂ ಗರುಡರೂ ಆಗಿ ತಮ್ಮ ಹಿರಿಮೆಯನ್ನು ಅಚ್ಚೊತ್ತಿದ್ದಾರೆ. ಆ ಮೂಲಕ ಕಬ್ಬಾಹುನಾಡಿನ ಸ್ಥಳೀಯ ಸಾಂಸ್ಕೃತಿಕ ಚರಿತ್ರೆಯಲ್ಲಿ ಅತ್ಯಂತ ವಿಶಿಷ್ಟವಾದ ಅಸ್ಮಿತೆಯನ್ನು ಉಳಿಸಿಹೋಗಿದ್ದಾರೆ.

**ಕನ್ನಡಿಗಮನೆಯಾಳ್ತನ ಗೆಯ್ವರು–ಕರ್ನಾಟಕ ವಂಶ –ಕನ್ನಡ ಕುಲ : ಒಂದು ವಿಶೇಷ ಪರಿವೀಕ್ಷಣೆ**

ಕಂನಡಿಗಮಂನೆಯ ಎಂಬುದೊಂದು ಪದವಿ ಎಂದು ಅರ್ಥೈಸಬಹುದಾದರೂ ಶಾಸನದಲ್ಲಿ[141] ಬಲ್ಲೆಯನಾಯಕನು ಕಂನಡಿಗಮನೆಯಾಳ್ತನಂ ಗೆಯ್ವರಿಗೆ ಸೇನಾನಾಯಕ ನೆಂದಿರುವಾಗ ಅಂತಹ ಅಧಿಕಾರಿಗಳಿಗೆ ಈತ ಸೇನಾನಾಯಕ ಎಂದು ಹೇಳಬಹುದೆ? ಕನ್ನಡಿಗ ಯೋಧಮುಖ್ಯರ ಸೇನಾನಾಯಕನೆ? ಎಂದು ಹಿರಿಯ ವಿದ್ವಾಂಸರಾದ ಬಾ.ರಾ. ಗೋಪಾಲ್[142] ರವರು ಸಂಶಯ ವ್ಯಕ್ತಪಡಿಸಿದ್ದಾರೆ. ಈ ಸಂಶಯವನ್ನು ಕೊಂಚವಾದರೂ ನನ್ನ ಮಟ್ಟಿಗೆ ಪರಿಹರಿಸುವ ಒಂದು ಕಿರುಪ್ರಯತ್ನವನ್ನು ವಿನಯಪೂರ್ವಕವಾಗಿ ಮಾಡಬಯಸುತ್ತೇನೆ.

ಈ ಭಾಷಿಕ ಪರಿಭಾಷೆಯನ್ನು ಮತ್ತೂ ಸೂಕ್ಷ್ಮವಾಗಿ ಅವಲೋಕಿಸುವ ಸಾಧ್ಯತೆ ಇದೆ. ಕನ್ನಡಿಗ ಯೋಧರು ಎಂಬ ಮಾತು ತನ್ನ ಒಡಲಲ್ಲಿ ಬೇರೆ ಭಾಷಿಕ ಸಮುದಾಯದ ಯೋಧರು ಇದ್ದರು ಎಂಬುದನ್ನು ಧ್ವನಿಪೂರ್ಣಗೊಳಿಸುತ್ತದೆ ಅಲ್ಲವೆ?! ಆದ್ದರಿಂದ ಇದನ್ನು ಕನ್ನಡಿಗ ಯೋಧರು ಎಂದು ಸೀಮಿತ ಪರಿಧಿಯ ವಿವೇಚನೆಯಿಂದಾಚೆ ಹೋಗಿ ಯೋಚಿಸಬಹುದು! ಮಂನೆಯ ಎಂಬುದು ಮನ್ನೆಯ ಎಂಬ ರೂಪದಂತೆಯೂ ಭಾಸವಾಗುತ್ತದೆ. ಮಂನೆಯ ಅಥವಾ ಮನ್ನೆಯ ಎಂಬ ಪದಕ್ಕೆ ಗೌರವ, ಮಾನ್ಯ,

ಮನ್ನಣೆಗೆ ಯೋಗ್ಯನಾದವನು, ಮಾಂಡಲಿಕ, ನಾಯಕ, ದಾನವಾಗಿ ಕೊಡುವ ಭೂಮಿ, ನಾಡಿನ ಒಂದು ಭಾಗ ಎಂದು ಅರ್ಥಗಳಿವೆ.

ಹೇಳಿಕೇಳಿ ಈ ಮುಗಿಲ ಕುಲದ ಗರುಡರು ಸಾಮಂತರು; ಪ್ರಾಯಶಃ ಮನ್ನೆಯರಾದವರು ಈ ಸಾಮಂತರ ಅಧೀನರಾಗಿದ್ದು ಆ ಮನ್ನೆಯರನ್ನು ಒಳಗೊಂಡ ಸೈನ್ಯದ ತುಕಡಿಗೆ ಈ ಸಾಮಂತರು ನಾಯಕರಾಗಿದ್ದುದನ್ನು ಈ ಪದ ಸೂಚಿಸುತ್ತಿದೆಯೇ? ಇದನ್ನು ಒಪ್ಪಿಕೊಂಡ ಪಕ್ಷದಲ್ಲಿ 'ಕಂನಡಿಗ' ಎಂಬ ಪದಕ್ಕೆ ಏನೆಂದು ಅರ್ಥ ಯೋಚಿಸಬಹುದು? ಆದ್ದರಿಂದ ಈ ಪರಿಭಾಷೆಯನ್ನು ಕೇವಲ ರಾಜಕೀಯವಾಗಿ ನೋಡದೆ ಸ್ವಲ್ಪ ಸಾಮಾಜಿಕವಾಗಿ ನೋಡಬಹುದು. ಜನಾಂಗಿಕವಾಗಿ ಹೊಯ್ಸಳರು ಮೂಲತಃ ಮಲೆನಾಡಿನವರು. ಅವರ ಮನೆತನದ ಉತ್ತರೋತ್ತರ ಪರಂಪರೆಯನ್ನು ಹೊಯ್ಸಳ ಕರ್ನಾಟಕ ಮನೆತನದವರು ಎಂದು ಕರೆಯುವುದು ರೂಢಿಯಲ್ಲಿದೆ. ಹಾಗಾಗಿ ಇಲ್ಲಿ ಕಂನಡಿಗ ಎಂದರೆ ಹೊಯ್ಸಳ ಅರಸರನ್ನೇ ಈ ಪದ ಸೂಚಿಸುತ್ತಿದ್ದಿರಬೇಕು. "ಕಂನಡಿಗ ಮನೆಯಾಳ್ತನಗೆಯ್ವರ ಅಥವಾ ಮಂನೆಯಾಳ್ತನಗೆಯ್ವರ ಸೇನಾನಾಯಕ" ಎಂಬ ವಾಕ್ಯವೃಂದಕ್ಕೆ 'ಹೊಯ್ಸಳ ಅರಸರ ಅಧೀನದಲ್ಲಿಯೇ ಇದ್ದ ಮನ್ನೆಯರ ಪಡೆಯೊಂದರ ದಳಪತಿಗಳಿವರು' ಎಂಬುದಾಗಿ ಅರ್ಥ ಹೇಳಲು ಸಾಧ್ಯವಿದೆ. ಈ ಮುಗಿಲಕುಲದ ಗರುಡರ ವಂಶಾವಳಿಯಲ್ಲಿ ಸ್ವಾರಸ್ಯವಾದ ಅಂಶವೇನೆಂದರೆ ವಣಿಕ ಜಾತಿಯನ್ನು ಸೂಚಿಸುವ ಸೆಟ್ಟಿ ಎಂಬ ಪ್ರತ್ಯಯವನ್ನು ಕೈಬಿಟ್ಟು ಅದರ ಸ್ಥಾನದಲ್ಲಿ ಸೈನಿಕ ಸಂಬಂಧವಾದ ನಾಯಕ ಎಂಬ ಪ್ರತ್ಯಯವು ಸ್ಪಷ್ಟವಾಗಿ ಕಾಣಿಸಿಕೊಂಡಿರುವುದು. ಬಹುಶಃ ಒಂದು ವೃತ್ತಿಯಿಂದ ಸಂಪೂರ್ಣವಾಗಿ ಮತ್ತೊಂದು ವೃತ್ತಿಗೆ ಬದಲಾಯಿಸಿಕೊಂಡದ್ದು ಅಥವಾ ಒಂದರಿಂದ ಇನ್ನೊಂದಕ್ಕೆ ಬಡ್ತಿ ಇದಕ್ಕೆ ಕಾರಣವಾಗಿರಬಹುದು.

ಇಮ್ಮಡಿ ಬಲ್ಲಾಳನ ಪಟ್ಟಾಭಿಷೇಕ ಸಮಯದಲ್ಲಿ ಹುಟ್ಟಿದ ಮರ್ಕುಲಿ ಶಾಸನವು ಸಂಧಿವಿಗ್ರಹಿ ಬೂಚಿಮಯ್ಯನು ಆ ಗ್ರಾಮದಲ್ಲಿ ತ್ರಿಕೂಟ ಜಿನಾಲಯವನ್ನು ಕಟ್ಟಿಸಿ ದ್ರಮಿಳಸಂಘ ಮತ್ತು ಅರಂಗಳಾನ್ವಯಕ್ಕೆ ಸೇರಿದ ಶ್ರೀಪಾಳತ್ರೈವಿದ್ಯದೇವರ ಶಿಷ್ಯನಾದ ವಾಸುಪೂಜ್ಯಸಿದ್ಧಾಂತದೇವರ ಕಾಲಂಕರ್ಚ್ಚಿ ಸೀಗೆನಾಡಿನ ಮಱುಕುಲಿ ಗ್ರಾಮವನ್ನು ದಾನಮಾಡಿದನು. ಜೈನಮತವೊಲವುಳ್ಳ ಈತನನ್ನು ವಾಚಕವಾಚಸ್ಪತಿ, ಕಾವ್ಯದಲ್ಲಿ ರಸಾಭಿವ್ಯಕ್ತಿ ಪರಿಣತ, ಸಂಸ್ಕೃತ ಹಾಗೂ ಕನ್ನಡ ಕಾವ್ಯದ ರಚನೆಯಲ್ಲಿ ನಿಪುಣ ಎಂದು ಹೊಗಳಲಾಗಿದೆ. ಈತನು ಕನ್ನಡ ಕುಲಕ್ಕೆ ಸೇರಿದಾತನೆಂದು ಹೇಳಿದೆ. ಈತನ ಪತ್ನಿ ಶಾಂತಲೆ ಈಕೆಯ ತಂದೆ ಭರತ ಹಾಗೂ ದೊಡ್ಡಪ್ಪ ಮರಿಯಾನೆ. ಬೂಚಿರಾಜ ಮತ್ತು ಶಾಂತಲೆಯರ ಮಕ್ಕಳನ್ನೂ ಈ ಶಾಸನ ಉಲ್ಲೇಖಿಸುತ್ತದೆ.

**ಬಿಟ್ಟಿಯಗಾವುಂಡ** : ಈತನು 1ನೆಯ ನರಸಿಂಹ ಮತ್ತು 2 ನೆಯ ಬಲ್ಲಾಳನ ಅಧೀನ ಅಧಿಕಾರಿ. ಇವನು ಮಹಾಪ್ರಧಾನ, ದಂಡನಾಯಕ ಮತ್ತು ಸರ್ವಾಧಿಕಾರಿ ಪದವಿಗಳನ್ನು ಹೊಂದಿದ್ದನು. ಇವನು ಬಂಗಾಯ ನಾಯಕನ ಒಡಗೂಡಿ ಕುಮಾರಬೀಡಿನಲ್ಲಿದ್ದಂತಹ ಒಂದು ತೋಟವನ್ನು ಗೌಡನೊರ್ವನಿಗೆ ಕೊಡುಗೆಯಿತ್ತಿದ್ದನು.[143] ಈ ಬಿಟ್ಟಿಯಗಾವುಂಡನು ಬಿಟ್ಟಿಮಯ ದಂಡನಾಯಕನಿರಬಹುದು ಎಂಬ

ಶಂಕೆಯನ್ನು ಸಂಪುಟಕಾರರು  ಹೊಂದಿದ್ದಾರೆ. ಮೈಸೂರು ಪ್ರದೇಶದ ಇನ್ನಿತರ ಶಾಸನಗಳನ್ನು ಅವಲೋಕಿಸಿದರೆ ಇವರ ಸಂದೇಹ ದೃಢವಾಗುತ್ತದೆ.

ಕುಮಾರಬೀಡಿನಲ್ಲಿರುವ ಇನ್ನೊಂದು ತ್ರುಟಿತ ಶಾಸನವು ಇವನನ್ನು ಉಲ್ಲೇಖಿಸುತ್ತದೆಯಷ್ಟೆ.[144] ಈ ಶಾಸನವು ಸಹ ಈತನು ಮಹಾಪ್ರಧಾನ, ದಂಡನಾಯಕ ಮತ್ತು ಸರ್ವಾಧಿಕಾರಿ ಪದವಿಗಳನ್ನು ಹೊಂದಿದ್ದನೆಂದು ತಿಳಿಸುತ್ತದೆ. ಇದೇ ಕಾಲದ ಹರಳುಕೋಟೆಯ ಶಾಸನದಲ್ಲಿ ಈತನು ದಾನಿಗಳಲ್ಲಿ ಒಬ್ಬನಾಗಿ ಕಾಣಿಸಿಕೊಂಡಿದ್ದಾನೆ.[145] ಧರ್ಮಾಪುರದ ಶಾಸನವು[146] ಉಲ್ಲೇಖಿಸುವ ಕರ್ನಾಟವಂಶಕ್ಕೆ ಸೇರಿದ ದಂಡನಾಯಕ ಬಿಟ್ಟಿಮಯ್ಯನು ಅದೇ ಹೆಸರಿನ ಮರಿಯಾನೆ ದಂಡನಾಯಕನ ಮಗನೂ ಒಬ್ಬನೇ ಇರಬಹುದೇ ಎನ್ನುತ್ತಾರೆ ಕೊಎಲ್ಹೊ ಅವರು ಕೂಡ ಊಹಿಸಿದ್ದಾರೆ.

**ಮಹಾಸಾಮಂತ ನಾಗಯ್ಯ:** ಇವನು ವೀರಬಲ್ಲಾಳನ ಅಧಿನವರ್ತಿ; ಭಾಸೆಗೆತಪ್ಪುವಲೆಂಕರಗಂಡ, ಹುಲಿಯ ಜಂಗುಡಿಯ ಮೊತ್ತದ ಸೇನಾನಾಯಕ ಕಲಿದೇವರ ಪಾದಾರಾದಕ, ಕಮಳನಾಳಶೂತ್ರದಂನ್ತೆಡೆವಟಿಯದೆ ಅನುದಿನಂ ಬೆಸಕೆಯ್ವ,  ಭಕ್ತರ ಕಾರುಣ್ಯದ ಮಗ, ಶರಣರ ದಾಸ, ಎಂದು ಹೆಸರು ಗಳಿಸಿದ್ದನು. ಇವನು ವೀರಬಮ್ಮಯ್ಯನ ಮಗ. ಇವನು ಹಲವು ಪ್ರಭುಗೌಡರೊಡನೆ ಸೇರಿ ಕೇತನಹಟ್ಟಿಯನ್ನು ಶಿವಪುರವಾಗಿ ಹೆಸರಿಟ್ಟು ಶ್ರೀಕಲಿದೇವರಿಗೆ ದಾನವಿತ್ತನು. ಅನೇಕ ಶರಣರ ಹೆಸರುಗಳ ಉಲ್ಲೇಖಗಳಿವೆ.[147] ಹುಲಿಯಜಂಗುಳಿಯಮೊತ್ತದ ಸೇನಾನಾಯಕರು ಎಂಬುದು ಹೇಗೆ ಒಂದು ವೀರಪಡೆಯೋ ಹಾಗೆ ಕನ್ನಡಿಗ ಮನೆಯಾಳ್ತನಗೆಯ್ವರು ಸಹ ಒಂದು ವೀರಪಡೆ ಇರುವ ಸಾಧ್ಯತೆಯಿದೆ.

### 6.5.3.2 ಸತಿ ಸಹಗಮನ ಪದ್ದತಿ ಮತ್ತು ಮಾಸ್ತಿಕಲ್ಲುಗಳು :

ಸ್ತ್ರೀಯರ ಬದುಕನ್ನು ಅತ್ಯಂತ ಕ್ರೂರವಾಗಿ ಕಟ್ಟಿದ ಪದ್ದತಿ ಇದು. ಪತಿಯು ಸತ್ತಾಗ ಆತನ ಶವದ ಜೊತೆಯಲ್ಲಿಯೇ ಚಿತೆಯೇರುವುದು ಸಹಗಮನವಾದರೆ, ಪತಿಯು ಎಲ್ಲೋ ಊರಿನಲ್ಲಿ ಮಡಿದ ಸುದ್ದಿ ಕೇಳಿ ಪ್ರಾಣಬಿಡುವುದು ಅನುಗಮನ ಪದ್ದತಿ. ಇದರ ಇನ್ನೊಂದು ಹೆಸರು ಅನುಮರಣ. ಸಮಾಜ ನಿರ್ಮಿಸಿದ ಚೌಕಟ್ಟುಗಳ ನಡುವೆಯೇ ತನ್ನ ಬದುಕನ್ನು ಬಾಳಿದ ಸ್ತ್ರೀಗೆ ಸಾವಿನಲ್ಲೂ ಸ್ವಾತಂತ್ರ್ಯ ಇಲ್ಲದೇ ಹೋದುದು ಸಮಾಜದ  ಸಾಂಸ್ಕೃತಿಕ ವ್ಯಂಗ್ಯವೇ ಸರಿ.

ಸತಿಪದ್ದತಿಯ ಹಿಂದಿರುವ ಉದ್ದೇಶಗಳು ಹಲವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ, ವೈಯಕ್ತಿಕ ಪ್ರತಿಷ್ಠೆ, ಮಾನರಕ್ಷಣೇ, ವಿಧವೆಯ ನಿಕೃಷ್ಟ ಜೀವನ, ಪುರುಷನ ಸ್ವಾರ್ಥ, ಸಮಾಜದ ಪ್ರತಿಷ್ಠೆ, ಸಂಪತ್ತನ್ನು ಕಬಳಿಸುವ ಸಂಚು ಮುಂತಾದವರು. ಈ ಕಾರಣಗಳು ಎಷ್ಟೋ ವೇಳೆ ಸಾಮಾಜಿಕ ರಚನೆಯನ್ನು ಸೂಚಿಸುತ್ತವೆ. ರಾಜಕೇಂದ್ರಿತ ವ್ಯವಸ್ಥೆ, ಪಿತೃಪ್ರಧಾನ ಕೌಟುಂಬಿಕ ರಚನೆ, ಪುರುಷಪ್ರಧಾನ ಸಮಾಜ ಹಾಗೂ ಪುರೋಹಿತಶಾಹಿಯ ಪ್ರವೇಶ ಇವೆಲ್ಲವು ಒಂದಲ್ಲ ಒಂದು ರೀತಿಯಲ್ಲಿ ಸತಿಪದ್ದತಿಯನ್ನು ಪೋಷಿಸಿಕೊಂಡು ಬಂದ ವ್ಯವಸ್ಥೆಗಳೇ ಆಗಿವೆ. ಭಾವನಾತ್ಮಕವಾದ ಹಿಂಸೆಯನ್ನು ಸೃಷ್ಟಿಸಿ ಮಹಾಸತಿಯಾಗುವಂತೆ ಪ್ರಚೋದಿಸಿ ಹೆಣ್ಣಿನ ಸಾವನ್ನು ವೈಭವೀಕರಿಸ ಲಾಯಿತು. ಇಂತಹ ಅಮಾಯಕರೂ

ಮುಗ್ದರೂ ಆದ ಹೆಣ್ಣುಗಳ ಮಾರಣ ಹೋಮದ ನಂತರ ಅವರ ನೆನಪಿಗಾಗಿ ಮಾಸ್ತಿಕಲ್ಲುಗಳನ್ನು ನಿರ್ಮಿಸಲಾಯಿತು. ಈ ಬಗೆಯಲ್ಲಿ ಸತಿ ಹೋಗುವ ಸ್ತ್ರೀಯರು ಗೌಡರು, ಗೊಲ್ಲರು, ನಾಯಕರು, ಮುಂತಾದ ಸಮುದಾಯಗಳಿಗೆ ಸಮಾಜದ ಸಾಮಾನ್ಯ ವರ್ಗದ ಪ್ರಜೆಗಳ ಸೇರಿರುವುದನ್ನು ಗುರುತಿಸಬಹುದು. ಬದುಕಿದ್ದಾಗ ಗಂಡಿಗೆ ಸೋತು ಬಾಳ್ವೆ ಮಾಡಿದವಳು ಸತ್ತನಂತರ ಗಂಡಿಗಿಂತಲೂ ಶ್ರೇಷ್ಠವೆನಿಸಿ ದೇವತೆಯ ಸ್ಥಾನಕ್ಕೆ ಏರಿದುದು ಕುತೂಹಲಕರವಾಗಿದೆ. ಹೊಯ್ಸಳ ಮಹಾಮಂಡಳೇಶ್ವರರ ಕಾಲಘಟ್ಟದಲ್ಲಿ ಸ್ಥಳೀಯ ಮಹಿಳೆಯರಾರು ಸತಿಸಹಗಮನ ಪದ್ದತಿಗೆ ಒಳಗಾದ ಖಚಿತ ಆಧಾರಗಳು ಸದ್ಯಕ್ಕೆ ದೊರೆತಿಲ್ಲ.

ಭಾರತೀಯ ಸಮಾಜದಲ್ಲಿ ಗಂಡೊಬ್ಬನ ಸಾವಿನ ಅತ್ಯಂತ ಗರಿಷ್ಠ ಸಂತ್ರಸ್ಥೆಯೆಂದರೆ ಆತನ ಹೆಂಡತಿಯೇ. ಗಂಡನೊಡನಿರುವಾಗ ಸಕಲ ಸನ್ಮಂಗಳ ಕಾರ್ಯಗಳ ಪಾಲುದಾರಳಾದ ಈಕೆ ಅವನ ಅಂತ್ಯದೊಂದಿಗೆ ತನ್ನ ಸಾಮಾಜಿಕ ಗೌರವಗಳಿಂದಲೂ, ಧಾರ್ಮಿಕ ಅನುಷ್ಠಾನಗಳಿಂದಲೂ ವಂಚಿತಳಾಗುತ್ತಾಳೆ. ಬಹುಶ: ಈ ನೋವನ್ನು ಕಂಡ ಜನ ಗಂಡನ ಜೊತೆಗೆ ತಾವೂ ಈ ಲೋಕದಿಂದ ಹೊರನಡೆಯುವ ಪ್ರಯತ್ನವನ್ನು ಮಾಡಿದಂತೆ ತೋರುತ್ತದೆ. ಇದನ್ನೇ ಸಮಕಾಲೀನ ದಾಖಲೆಗಳು ಸಹಗಮನ ಎಂದು ದಾಖಲಿಸಿದೆ. ಈ ಸಹಗಮನವು ಕಡ್ಡಾಯವಾಗಿಯೇನೂ ಇರಲಿಲ್ಲ ಎಂಬುದು ಸಮಕಾಲೀನ ಕಾವ್ಯ–ಶಾಸನಗಳಿಂದ ತಿಳಿದುಬರುತ್ತದೆ. ಈ ಸಹಗಮನಕ್ಕೆ ಕನ್ನಡ ನಾಡಿನ ಮಟ್ಟಿಗಂತೂ ಬಲವಂತವಿರಲಿಲ್ಲ. ಬದಲಿಗೆ ಆಕೆಯು ಸತಿ ಹೋಗುವ ಕ್ರಮವನ್ನು ತಡೆಯಲು ಬಂಧು–ಬಾಂಧವರು ಪ್ರಯತ್ನಿಸಿರುವ ದಾಖಲೆಗಳಿವೆ.

ಗಂಡನೊಂದಿಗೆ ಸೇರಿ ಚಿತೆಯೇರಿ ಸಾಯುವ ಹಾಗೂ ಗಂಡನ ಶವ ದೊರೆಯದೇ ಅಗ್ನಿಗೆ ಹಾರಿಕೊಳ್ಳುವ ಸಂದರ್ಭಗಳಲ್ಲಿ ಸಹಗಮನ ಮಾಡುವ ಸ್ತ್ರೀಯನ್ನು ಸಾಮಾನ್ಯ ವರ್ಗಕ್ಕೆ ಸೇರಿಸದೆ ಮಹಾಸತಿ ಎಂದು ಕರೆಯಲಾಗಿದೆ. ಈ ಮಹಾಸತಿಯ ಸವೆದ ರೂಪವೇ ಮಾಸ್ತಿ ಆಗಿದೆ. ಹೀಗೆ ಮಾಸ್ತಿಯಾದವಳ ಸ್ಮರಣೆಗಾಗಿ ಅವಳ ಸ್ಮಾರಕವಾಗಿ ಮಾಸ್ತಿಗಲ್ಲುಗಳನ್ನು ಹಾಕಿಸುತ್ತಿದ್ದರು, ಇದರಲ್ಲಿ ಶಾಸನಪಾಠಗಳಿರುವ ಮಾಸ್ತಿಗಲ್ಲುಗಳಿಗಿಂತ ಶಾಸನರಹಿತವಾದ ಮಾಸ್ತಿಗಲ್ಲುಗಳೇ ಹೇರಳವಾಗಿವೆ ಎಂಬುದನ್ನು ಗಮನಿಸಬೇಕು. ಹಾಗಾಗಿ ಕಾಲಾಂತರದಲ್ಲಿ ಮಾಸ್ತಿಯಾದ ಹೆಣ್ಣು ಮಕ್ಕಳ ಹೆಸರು ಇತಿಹಾಸವಾಗಿದೆ. ಕೇವಲ ಶಾಸನಸ್ತ ಮಾಸ್ತಿಯರ ಬಗ್ಗೆ ನಮಗೆ ವಿಷಯಗಳು ತಿಳಿದುಬರುತ್ತದೆ. ಆದರೆ ಜನಪದದಲ್ಲಿ ಹೇರಳವಾದ ಉದಾಹರಣೆಗಳಿವೆ. ಒಟ್ಟಿನಲ್ಲಿ ಮಾಸ್ತಿಯಾಗುವುದು ಅತ್ಯಂತ ದೃಢಮನಸ್ಸಿನವರಿಗೆ ಮಾತ್ರ ಸಾಧ್ಯವಾಗುವ ಪ್ರಕ್ರಿಯೆ. ಯಾಕೆಂದರೆ ಸಹಜವಾದ ವ್ಯಕ್ತಿಯು ಬೆಂಕಿಯಲ್ಲಿ ಬೆಂದು ಸುಟ್ಟು ಕರಕಲಾಗುವುದಿದೆಯಲ್ಲ ಅದು ಪ್ರಯಾಸಕರ ಸಾವು. ಅದನ್ನು ಎದುರಿಸುವ ಎದೆಗಾರಿಕೆ ತುಂಬ ಮುಖ್ಯವಾದದ್ದು. ಕನ್ನಡ ನಾಡಿನಲ್ಲಿ ತನ್ನ ಸ್ವಂತ ತೀರ್ಮಾನದಿಂದ ಮಾಸ್ತಿಯಾದವರ ಸಂಖ್ಯೆಯೇ ಹೆಚ್ಚೆಂದು ತಿಳಿಯಬೇಕಾಗಿದೆ. ಗಂಡನ ಹೆಣದೊಂದಿಗೇ ತಾನೂ ಸಾಯುವುದನ್ನು ಸಹಗಮನವೆಂದೂ ಗಂಡನ ಸಾವಿನ ನಂತರ ತಾನು ಚಿತೆಗೇರುವುದನ್ನು ಅನುಗಮನವೆಂದು ವಿದ್ವಾಂಸರು ನಿರ್ಧರಿಸಿದ್ದಾರೆ.

ಸೊರಬ ತಾಲೂಕಿನ ಕ್ರಿ.ಶ.972ರ ಬೆನ್ನೂರಿನ ಶಾಸನವೇ ನಮಗೆ ದೊರೆಯುವ ಮಟ್ಟಿಗೆ ಸ್ಪಷ್ಟವಾಗಿ ಪತಿಯೊಡನೆ ಸಹಗಮನ ಮಾಡಿದ ಮೊದಲ ಉಲ್ಲೇಖವಾಗಿದೆ. ಕಕ್ಕಲದೇವನು ಪ್ರಿಥ್ವೀರಾಜ್ಯವನ್ನು ಮಾಡುತ್ತಿರಲು ಕೊನೆಗೌಡ ಬಿದಿಯಣ್ಣನು ಸತ್ತಾಗ ಜಕ್ಕಬ್ಬೆಯು ಆತನೊಡನೆ "ಒಡಸತ್ತು" ಸುರಲೋಕಕ್ಕೆ ಹೋದಳು. ಆಗ ಆಕೆಯ ತಂಗಿಯಾದ ಜಾಬೆಯು ಮಾಸ್ತಿಗಲ್ಲನ್ನು ನೆಡೆಸಿದಳು. ಜಕ್ಕಬ್ಬೆ ಸಹಗಮನ ಮಾಡಿದ್ದು ಅತ್ಯಂತ ಪ್ರಾಚೀನ ಉಲ್ಲೇಖವಾದರೆ ಜಾಬೆಯು ಮಾಸ್ತಿಗಲ್ಲನ್ನು ನೆಡೆಸಿದ್ದು ಕೂಡ ವಿಶೇಷವಾಗಿ ಸ್ಮರಿಸಲೇಬೇಕಾದ ಸಂಗತಿಯಾಗಿದೆ.[148] ಚಂಗಪೇಟೆಯ ಕ್ರಿ.ಶ. 1018ರ ತಮಿಳು ಶಾಸನವು[149] ಕುಲತ್ತೂರಿನ ಗಾವುಂಡ ಮುಕ್ಕೈಯಕ್ ಸತ್ತಾಗ ಆತನ ಮಡದಿ ಮಾಡುವ ಸಹಗಮನ ಹಾಗೂ ಕ್ರಿ.ಶ.1051ರಲ್ಲಿ ಉತ್ತರಾಣಿಯ ಶಾಸನ[150] ತಿಳಿಸುವ ಬೋಗಾರ ಕರಡಿಸೆಟ್ಟಿಯ ಮದವಳಿಗೆ ನಾಗಮ್ಮನ ಸಹಗಮನವು ಕ್ವಚಿತ್ತಾಗಿ ದಾಖಲಿಸಲಿದೆ.

ಇದಾದ ನಂತರ ನಮಗೆ ಕಂಡುಬರುವುದು ಪ್ರಸಿದ್ದವಾದ ದೇಕಬ್ಬೆಯ ಅನುಗಮನ.[151] ಮಾಸ್ತಿ ಪರಂಪರೆಯ ಉಜ್ವಲ ಹೆಣ್ಣು ಈಕೆ. ರಾಜೇಂದ್ರಚೋಳನ ಕಾಲದ 27.10.1057ರ ಬೆಳತೂರಿನ ಶಾಸನವು ನುಗುನಾಡ ಅಧೀನನಾದ ರವಿಗ ಹಾಗೂ ಪೊನ್ನಬ್ಬೆಯ ಮಗಳಾದ ದೇಕಬ್ಬೆಯನ್ನು ನವಿಲೆನಾಡಿನಲ್ಲಿದ್ದ ಕುರುತಂಡ ಕುಲದ ಪೆರ್ವಯಲಿನ ಏಚನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಚೋಳರಾಜನಿಂದ ತಲಕಾಡಿನಲ್ಲಿ ದೇಕಬ್ಬೆಯ ಪತಿಯಾದ ಏಚನ ಕೊಲೆಯಾಯಿತು. ತಕ್ಷಣ ದೇಕಬ್ಬೆಯು ತಾನೂ ಗಂಡನನ್ನು ಅನುಸರಿಸುವುದಾಗಿ ಘೋಷಿಸಿದಳು. ಆಗ ತಂದೆ–ತಾಯಿಗಳು–ಬಂಧುಗಳು ಎಲ್ಲರೂ ಇವಳ ಬಳಿ ಬಂದು ಈ ನಿರ್ಧಾರವನ್ನು ಕೈಬಿಡುವಂತೆ ಪರಿಪರಿಯಾಗಿ ಬೇಡಿಕೊಂಡರು. ಆದರೆ ದೇಕಬ್ಬೆಯ ನಿರ್ಧಾರ ಅಚಲವಾಗಿತ್ತು. ಆಗ ಅವಳು ಹೇಳಿದ ಮಾತು "ನುಗುನಾಡ ಅಧಿಪತಿ ರವಿಗನ ಮಗಳಾಗಿ ನವಿಲೆನಾಡಿನ ಅಧಿಪತಿಗೆ ನಾನು ಒಪ್ಪ ತಕ್ಕ ಸತಿಯಾಗಿ ಬಾಳುವೆ ಮಾಡಿ ಈಗ ಕೊಟ್ಟ ಕೊಂಡ ಮನೆಯ ಯಶಸ್ಸು ನಾಶವಾಗುವಂತೆ ಬದುಕಲು ನಾನು ಆಸೆ ಪಡುತ್ತೇನೆಯೇ?" ಎಂದು ಹಿರಿಯರ ಮಾತನ್ನು ಪರಿಚ್ಛೇದಿಸಿ ನಯವಾಗಿ ಅವರ ಬೇಡಿಕೆಯನ್ನು ತಿರಸ್ಕರಿಸಿದಳು. ತನ್ನ ಸಾವಿಗೆ ಮುಂಚೆ ಊರಿನ ಶಿವಾಲಯದ ನಂದಾದೀವಿಗೆಗೆ ಭೂದಾನವನ್ನು ಮಾಡಿದಳು. ತನ್ನಲ್ಲಿದ್ದ ಎಲ್ಲ ವಸ್ತು–ಒಡವೆಗಳನ್ನು ಎಲ್ಲರಿಗೂ ಹಂಚಿದಳು. ದೇವರಿಗೆ ಭಕ್ತಿಯಿಂದ ಕೈಮುಗಿದಳು. ಕೊಂಡಕ್ಕೆ ಹಾರಿ ದೇವಲೋಕಕ್ಕೆ ಹೋದಳು. ಈ ಶಾಸನದ ವಿಶೇಷವನ್ನು ಶೂದ್ರವಂಶದ ಹೆಣ್ಣೊಬ್ಬಳು ಸತಿಹೋದ ವಿಷಯವನ್ನು ದಾಖಲಿಸುವ ಪ್ರಪ್ರಥಮ ಶಾಸನ ಇದಾಗಿದೆ ಎಂದು ಕಿಟ್ಟೆಲ್‌ರವರು ದಾಖಲಿಸಿದ್ದಾರೆ. ಆದರೆ ಇದನ್ನು ಅತ್ಯಂತ ವೈಭವೋಪೇತವಾಗಿ ಬರೆದವನು ಮಾತ್ರ "ದ್ವಿಜರೋಳ್ ಮರುತರ ಚಕ್ರಂ" ಎಂದು ಹೆಸರಾದ ಬ್ರಾಹ್ಮಣ ಕವಿ ಮಲ್ಲ.

ದೇಕಬ್ಬೆಯ ಅನುಗಮನ ಮುಂದಿನ ಅನೇಕ ಶತಮಾನಗಳ ಕಾಲ ಈ ಪ್ರದೇಶದಲ್ಲಿ ಒಂದು ರೀತಿಯ ಸಂಚಲನವನ್ನು ಉಂಟುಮಾಡಿತು ಎಂದರೆ ತಪ್ಪಲ್ಲ. ಇಡೀ ನಾಡಿಗೆ ಆದರ್ಶಪ್ರಾಯವಾಗಿ ಈಕೆ ಪ್ರಭಾವ ಶಾಲಿಯಾಗಿದ್ದಳು ಎಂಬುದಕ್ಕೆ ದೇಕಬ್ಬೆಯು ಚಿತೆಯೇರುವುದನ್ನು ಬಹುಶ: ಕಂಡಿದ್ದ ತಪರೆಯಕ್ಕನು ಕ್ರಿ.ಶ.1088ರಲ್ಲಿ ದೇಕಬ್ಬೆಯ ಮಡಿದ ಹೆಬ್ಬಲಗುಪ್ಪೆಯಲ್ಲೇ ತಾನೂ ಕೂಡ ಕೊಂಡ ಹಾರಿ ಸಹಗಮನವನ್ನು

ಮಾಡಿದ ಸಂಗತಿಯಿಂದ ತಿಳಿಯಬಹುದಾಗಿದೆ. ಪೆರ್ವಯಲ (ಇಂದಿನ ಹೆಬ್ಬಲಗುಪ್ಪೆ) ಅರುಗಿಯ ಚೋಳನ ಮಗನಾದ ನವಲಾಕ್ಷಿರಾಜನು ಸತ್ತಾಗ ಆತನ ಹೆಂಡತಿಯಾದ ತಪರೆಯಕ್ಕನು ಕಮ್ಮಾರಿಹೊಯ್ದು ಸತ್ತಂತೆ ಈ ಶಾಸನದಲ್ಲಿ ದಾಖಲಾಗಿದೆ.[152]

ಪೊಂಬುಚ್ಚದ ಸಾನ್ತರದೇವನ ಕ್ರಿ.ಶ.1192ರ ಶಾಸನವು ಠಾಣಾಂತರನಾಗಿದ್ದ ಎಕ್ಕಲರಸನನ್ನು ಗಾಳಗೌಡನ ಕಡೆಯವರು ಮುತ್ತಿ ಕೊಂಡಾಗ ಆತನ ಹೆಂಡತಿ ಜಳಿಬಿಯತ್ತಿಯು ಆತನಿಗಾಗಿ ಕಲ್ಲನಿರಿಸಿ ತಾನು ಕೂಡ ಆತನನ್ನು ಕೂಡಿ ಸತ್ತಳು.[153] ವೀರಪ್ರತಾಪನ ಕಾಲದಲ್ಲಿ 1207ರಲ್ಲಿ ಆರಗದ 18 ಕಂಪಣದ ಮೇಲೆ ಬಿದ್ದು ದೇಶವನ್ನು ಇರಿದು ಸೆರೆಯನ್ನು ಕೊಂಡುಹೋಗುತ್ತಿದ್ದ ಬೋಳೆಯ ಮುಮ್ಮಯನಾಯಕನ ವಿರುದ್ದ ನಡೆದ ಹೋರಾಟದಲ್ಲಿ ತಿರಿಕಗೌಡನು ತಾನು ಕೊಟ್ಟ ಮಾತಿನಂತೆಯೇ ಅವನೊಡನೆ ಹೋರಾಡಿ ಶತ್ರುವನ್ನು ಹಿಮ್ಮೆಟ್ಟಿಸಿದನಾದರೂ ತಾನು ಉಳಿಯುವಲ್ಲಿ ವಿಫಲನಾದನು. ಆಗ ಆತನ ಹೆಂಡತಿ ಬೊಮ್ಮಯಕ್ಕನು ಅವನೊಡನೆ ಸಹಗಮನ ಮಾಡಿದಳು.[154] ಇದನ್ನು ಶಾಸನವು "ತಿರಿಕಗೌಡರ ಮದವಳಿಗೆ ಬೊಂಮಯಕ್ಕನು ಸಹಗಮನವನ್ನು ಮಾಡಿ ದಂಪತಿಗಳ ಸಹಿತ ಧ್ರುವಲೋಕ ಪ್ರಾಪ್ತರಾದರು" ಎಂದು ತಿಳಿಸುತ್ತದೆ. ಕ್ರಿ.ಶ.1238ರಲ್ಲಿ ದುಮ್ಮಸ್ತಲದ ಕಾರಚ್ಚೆಯು ಸತಿಯಾದಳು.[155]

ಸಾರಂಗನ ಸತಿ ಸೋಮಾಯಿಯ ಸಹಗಮನ, ಕೆಲವೂರಿನ ಬೊಮ್ಮದೇವನ ಹೆಂಡತಿ ಬೊಮ್ಮಕ್ಕ, ಚೆನ್ನಪ್ಪನ ಸತಿಯ ಸಹಗಮನಗಳು 13ನೆಯ ಶತಮಾನದ ಕೆಲವು ಶಾಸನಗಳು ಸಹಗಮನವನ್ನು ಮಾಡಿದವರನ್ನು ದಾಖಲಿಸುತ್ತದೆ.[156] ಕ್ರಿ.ಶ.1238ರಲ್ಲಿ ಕಾರಬ್ಬೆ, ನಾಕವ್ವೆ, ಬೊಮ್ಮಕ್ಕನ ಸಹಗಮನಗಳು ದಾಖಲಾಗಿವೆ. ಹೊಸಗುಂದರ ಬೊಮ್ಮರಸನು ಹುಯ್ಯಲಿ ಹರಿದು ತುರುವನ್ನು ಮಗುಳ್ಚಿ ಮರಣ ಹೊಂದಿದಾಗ ಅವನ ಸತಿ – ಬವೆನಾಯಕಿತ್ತಿಯು "ತೋಳು ಕೈಗೊಟ್ಟು ಸ್ವರ್ಗಸ್ಥೆಯಾದಳು" ಎಂಬ ಮಾತು ಆಗಾಗಲೇ ಮಾಸ್ತಿಗಲ್ಲುಗಳ ಸ್ವರೂಪವು ಪ್ರಸಿದ್ಧವಾಗಿದ್ದ ಸಂಗತಿಯನ್ನು ಚಿತ್ರಿಸುತ್ತದೆ.[157]

ಹೊಯ್ಸಳದೊರೆಯ ಕಾಲದಲ್ಲಿ ಯರಸಿನಗುಪ್ಪೆಯ ಹೆಮ್ಮಾಡಿಗೌಡನ ಮಗಳು ರಾಜಗೌಡನ ಮದವಳಿಗೆಯಾದ ಮಾಳಗೌಡಿಯು ಸತಿಯಾದಳು.[158] ಹೊಯ್ಸಳ ದೊರೆ ನರಸಿಂಹನ ಕಾಲದಲ್ಲಿ ದೇವನೂರ ಬೇಡಕಟ್ಟೆ ಇದ್ದಲ್ಲಿ ಬೇರೋಪನ ಸೊಸೆ ಮಹಾದೇವಿ ತನ್ನ ಗಂಡನ ಕರೆದುಕೊಂಡು ಸುರಲೋಕಕ್ಕೆ ಹೋದಳು[159] ಎಂಬ ಮಾತು ಬಹುಶ: ಆ ಕಾಲದ ಹೆಂಗಸರಿಗೆ ತಾನು ಜೊತೆಗೆ ಹೋದರೆ ಮಾತ್ರ ಗಂಡನನ್ನು ಸ್ವರ್ಗಕ್ಕೆ ಸೇರಿಸುತ್ತಾರೆ ಎಂಬ ನಂಬಿಕೆ ಇದ್ದಂತೆ ತೋರುತ್ತದೆ.

ಕನ್ನಡ ನಾಡಿನ ಅನೇಕ ಕಡೆ ಮಾಸ್ತಿಯರನ್ನು ಪೂಜಿಸುವ ಪರಿಪಾಠವಿದ್ದು ಅನೇಕ ಕಡೆ ಇದಕ್ಕೆ ದೇವಾಲಯಗಳನ್ನು ಕೂಡ ನಿರ್ಮಿಸಿದ್ದಾರೆ. ಸತಿಯ ತ್ಯಾಗ–ಬಲಿದಾನಗಳನ್ನು ಪರಂಪರಾಗತವಾಗಿ ಕಾಯ್ದುಕೊಂಡು ಕೆಲವು ಮಹಾಸತಿಯರನ್ನು ಆರಾಧನಾ ತೆಕ್ಕೆಗೆ ತೆಗೆದುಕೊಂಡು ಬಂದಿರುವುದೂ ಉಂಟು. "ಮಾಸ್ತಿ ಪ್ರಕ್ರಿಯೆಯನ್ನು ಶಾಸನಗಳು ಕೈಕೊಟ್ಟಳ್, ತೋಳ್ ಕೈಗೊಟ್ಟಳ್, ಕಿಚ್ಚುಹಾಯ್ದಳ್, ಚಿತ್ರಭಾನು ಪ್ರವೇಶಂಗೈದಳ್, ಕೂಡೆ ಹೋದಳ್, ನಿಜಾಧಿನಾಥನ ಆರಿಗು ಸತ್ತಳ್, ತನ್ನವರನೊಳು ಪ್ರತಿಪನ್ನದಿ ಸಂದಳ್, ಅಕ್ಷಯ ಸೊಗಮನಾನ್ತಳ್, ಸಹಾನುಭೂತಿ ಹೊಂದಿದಳ್, ಸಹಸಂಗತಿಯಿಡಿದಳ್, ಸಮಾಧಿ

ಪ್ರವೇಶಂಗೈದಳ್, ಕುಮ್ಮರಿ ಮುಯ್ದಳ್, ಅಗ್ನಿ ಪ್ರವೇಶಂ ಗೈದಳ್ ಎಂದಲ್ಲದೆ ಧ್ರುವಲೋಕ ವೀರಲೋಕ ಸಾರಿದರೆಂದು ಹತ್ತಾರು ಬಗೆಯಲ್ಲಿ ಉಲ್ಲೇಖಿಸಿದೆ" ಎಂಬ ಡಾ.ಚೆನ್ನಕ್ಕ ಎಲಿಗಾರ್ ಅವರ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬೇಕು.[160]

ಮಾಸ್ತಿಗಲ್ಲಿನ ಸ್ಮಾರಕ ಶಿಲ್ಪಗಳಲ್ಲಿ ಶಾಸನ ರಹಿತವಾಗಿ ದೊರೆತಿರುವ ದಾಖಲೆಗಳೇ ಅಧಿಕವಾಗಿವೆ. ಒಂದು ಕೈಯನ್ನು ಮುನ್ನೆಲೆಗೆ ತಂದಿರುವುದು ವಿವಿಧ ಹಂತಗಳಲ್ಲಿ ಮಾಸ್ತಿಯರ ಸಹಗಮನವನ್ನು ಎದ್ದು ಕಾಣುವಂತೆ ಶಿಲ್ಪಿಸಲಾಗಿರುತ್ತದೆ. ಒಂದು ಕೈ ತೋರಿದರೆ ಒಕ್ಕೈ ಮಾಸ್ತಿಯೆಂದೂ ಎರಡು ಕೈಬಿಡಿಸಿದರೆ ಇಕ್ಕೈ ಮಾಸ್ತಿಯೆಂದು ವಿದ್ವಾಂಸರು ಗುರುತಿಸಿದ್ದಾರೆ. ಕೆಲವು ಶಿಲ್ಪಗಳಲ್ಲಿ ಎರಡಕ್ಕೂ ಹೆಚ್ಚಿನ ಕೈಗಳಿರುವುದೂ ಉಂಟು. ಇನ್ನು ಪೂರ್ಣವಾಗಿ ವೀರನೊಡನೆ ಮಾಸ್ತಿಯು ನಿಂತಿರುವ ವೀರಮಾಸ್ತಿಗಲ್ಲುಗಳೂ ಇವೆ.

ಒಟ್ಟಿನಲ್ಲಿ ಹೇಳುವುದಾದರೆ ಕರ್ನಾಟಕದ ಸಹಗಮನದ ಇತಿಹಾಸದಲ್ಲಿ ಕ್ರಿ.ಶ.7 ರಿಂದ 13ನೆಯ ಶತಮಾನಗಳಲ್ಲಿ ಕಂಡಿರುವ ಮಾಸ್ತಿಶಿಲ್ಪ–ಶಾಸನಗಳು ಕಡಿಮೆಯೇ. ಈ ಕಾಲಘಟ್ಟದಲ್ಲಿ ಸಹಗಮನವಾಗಲೀ, ಅನುಗಮನವಾಗಲೀ ಆಯ್ಕೆಗಳಾಗಿದ್ದವೇ ಹೊರತು ಬಲವಂತವಾಗಿರಲಿಲ್ಲ. ಹಾಗೆ ನೋಡಿದರೆ ಕನ್ನಡ ನಾಡಿನಲ್ಲಿ ಯಾವತ್ತೂ ಇದು ಬಲವಂತವಾಗಿರಲಿಲ್ಲ. ಬದಲಿಗೆ ಅವರನ್ನು ಅನೇಕರು ತಡೆಗಟ್ಟಲು ವ್ಯರ್ಥ ಪ್ರಯತ್ನ ಮಾಡಿರುವುದುಂಟು. ಮಾಸ್ತಿಯರ ಈ ವಿಷಯದ ದೃಢ ನಿರ್ಧಾರಗಳು ಅಚಲವಾಗಿದ್ದವು. 13ನೆಯ ಶತಮಾನದ ನಂತರ ಮಾಸ್ತಿಯ ಉಲ್ಲೇಖಗಳೂ ಶಿಲ್ಪಗಳೂ ಅಧಿಕಗೊಂಡಿವೆ. ಅದಕ್ಕೆ ಬೇರೆಯೇ ಆದ ಕಾರಣಗಳಿವೆ.

ಸಹಗಮನವನ್ನು ಹೊರತುಪಡಿಸಿ ಇನ್ನಿತರ ಆತ್ಮಬಲಿದಾನಗಳು ಕೂಡ ಕರ್ನಾಟಕದಲ್ಲಿ ಪ್ರಚಲಿತದಲ್ಲಿತ್ತು. ಒಡೆಯನೊಬ್ಬ ಸತ್ತಾಗ ಅವನ ವೇಳೆವಾಳಿಯಾದ ಬಂಟನು ತಾನೂ ಅವನೊಡನೆ ಸಾಯುವ ಪದ್ದತಿಯಿತ್ತು. ಇದರಲ್ಲಿ ವೇಳೆವಾಳಿ, ಕೀಳ್ಗುಂಟೆ, ಲೆಂಕವಾಳಿ, ಗರುಡಪದ್ಧತಿ ಮುಂತಾದ ಕ್ರಮಗಳು ಒಂದಕ್ಕೊಂದು ಬೆಸೆದು ಕೊಂಡಿದ್ದವು. ಇಂತಹ ಸಂದರ್ಭದಲ್ಲಿ ಮರಣ ಹೊಂದಿದ ವೀರರ ಹೆಂಡತಿಯರ ಗಂಡನೊಡನೆ 'ಒಡಸತ್ತು' ಸ್ವರ್ಗ ಸೇರುತ್ತಿದ್ದರು. ಇದು ಪೂರ್ವ ನಿರ್ಧಾರಿತವಾಗಿರುತ್ತಿತ್ತು. ಇದರಲ್ಲಿ ಹೆಣ್ಣಿನ ಒಪ್ಪಿಗೆ ಅಗತ್ಯವಿತ್ತು. ಲೆಂಕನೊಬ್ಬ, ಬಂಟನೊಬ್ಬ ತಾನು ಗರುಡನಾಗುವೆನೆಂದು ತೀರ್ಮಾನಿಸಿದಾಗಲೇ ಆತನ ಸತಿಯೂ ಕೂಡ ಇದಕ್ಕೆ ಬದ್ಧಳಾಗಿರುತ್ತಿದ್ದಳು.

**6.5.3.3 ಸಮಾಧಿ ಮರಣ:**

ಜೈನರಲ್ಲಿ ಹೆಚ್ಚು ಪ್ರಚಾರದಲ್ಲಿದ್ದ ವ್ರತವೆಂದರೆ ಸಲ್ಲೇಖನ ವ್ರತ. ಈವ್ರತವನ್ನು ಆಚರಿಸಿ ಮರಣ ಹೊಂದು ವುದನ್ನು ಸಮಾಧಿಮರಣ ಎಂದು ಕರೆಯಲಾಗಿದೆ. ಜೈನ ಧರ್ಮ ಗ್ರಂಥಗಳಲ್ಲಿ ಸಲ್ಲೇಖನ ವ್ರತದ ಬಗ್ಗೆ ಸಾಕಷ್ಟು ವಿವರಣೆಗಳು ಸಿಗುತ್ತವೆ. ಸಲ್ಲೇಖನ ವ್ರತವನ್ನಾಚರಿಸಿ ಮರಣ ಹೊಂದಿದ ಅನೇಕ ಜೈನ ಅರಸರ, ರಾಣಿಯರ, ಅಧಿಕಾರಿಗಳ, ಮುನಿಗಳ, ಸಾಮಾನ್ಯ ವ್ಯಕ್ತಿಗಳ ಶಾಸನಗಳು ಸಿಗುತ್ತವೆ. ಈರೀತಿ ಮರಣ ಹೊಂದಿದವರ ನೆನಪಿಗಾಗಿ ನೆಡುವ ಕಲ್ಲುಗಳನ್ನು ನಿಷದಿಕಲ್ಲುಗಳೆಂದು ಕರೆಯಲಾಗಿದೆ.

ಶಾಸನಗಳಲ್ಲಿ ಈ ಪದವು ಬೇರೆ ಬೇರೆ ರೀತಿಯಲ್ಲಿ ಬಳಕೆಯಾಗಿದೆ. ನಿಶಿಧಿ, ನಿಷಿದಿ, ನಿಸದಿ, ನಿಶಿದಿ ಮುಂತಾದವು. ನಿಷಿಧಿ ಎಂಬ ಪದಕ್ಕೆ ದಹನ ಸ್ಥಳದಲ್ಲಿ ರಚಿಸಿದ ಸ್ಮಾರಕ ಎಂಬ ಅರ್ಥವನ್ನು ಹೇಳಲಾಗಿದೆ. ಹೆಚ್ಚಾಗಿ ಜೈನರ ಆರಾಧನಾ ಕೇಂದ್ರಗಳಲ್ಲಿ ಅಪಾರಸಂಖ್ಯೆಯ ನಿಷಿಧಿಕಲ್ಲುಗಳು ಕಾಣಸಿಗುತ್ತವೆ. ಸಲ್ಲೇಖನ ವ್ರತವನ್ನು ಜೈನ ಗುರುವಿನ ಮಾರ್ಗದರ್ಶನದಂತೆ ಕೈಗೊಳ್ಳಲಾಗುತ್ತಿತ್ತು. ವ್ರತ ಹಿಡಿದ ವ್ಯಕ್ತಿ ಯಾವ ಕಾರಣಕ್ಕೂ ವ್ರತವನ್ನು ಹಿಂತೆಗೆದುಕೊಳ್ಳಬಾರದೆನ್ನುವ ಕಾರಣಕ್ಕಾಗಿ ಧೈರ್ಯವನ್ನು ತುಂಬಿಸುವ ಕೆಲಸವನ್ನು ಗುರುಗಳು ಮಾಡುತ್ತಿದ್ದರು. ವಡ್ಡಾರಾಧನೆ ಕತೆಯಲ್ಲಿ ಇಂಥ ವಿವರಗಳು ಸಾಕಷ್ಟು ಸಿಗುತ್ತವೆ. ಮೋಕ್ಷ ಪ್ರಾಪ್ತವಾಗಬೇಕಾದರೆ ದೇಹಕ್ಕೆ ಇಂಥ ವಿವರಗಳು ಕಷ್ಟಪಟ್ಟು ದೇಹವನ್ನು ಕೃಶವನ್ನಾಗಿಸುವ ನಂಬಿಕೆ ಜೈನರದ್ದು. ಸಲ್ಲೇಖನ ವ್ರತವನ್ನಾಚರಿಸಿ ಮಡಿದ ಸ್ಥಳಗಳನ್ನು ಜಾಗೃತಸ್ಥಾನಗಳೆಂದು ಜೈನರು ಪೂಜಿಸುವುದನ್ನು ಇಂದಿಗೂ ಕಾಣಬಹುದಾಗಿದೆ. ಸಮಯ ಪರೀಕ್ಷೆ ವಡ್ಡಾರಾಧನೆ ಚಾವುಂಡರಾಯ ಪುರಾಣ ಮುಂತಾದ ಕೃತಿಗಳು ಈ ಜಾಗೃತಸ್ಥಾನಗಳ ಮಹತ್ವನ್ನು ವಣಿಸಿವೆ. ಹೀಗೆ ಸಲ್ಲೇಖನ ವ್ರತವನ್ನು ಆಚರಸಿ ಮರಣ ಹೊಂದಿದ ಅನೇಕ ಉಲ್ಲೇಖಗಳು ಶಾಸನೊಕ್ತವಾಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಗಮನಿಸಬಹುದು.

❖ ಲಕ್ಷ್ಮಿಯು ಗಂಗರಾಜನ ಮಡದಿ. ಲಕ್ಷ್ಮೀಮತಿಯು ಲಕ್ಕಲೆ, ಲಕ್ಕವ್ವೆ, ಲಕ್ಕವ್ವೆ ದಂಡನಾಯಕಿತಿ, ಲಕ್ಷ್ಮಲೆ, ಲಕ್ಷ್ಮ್ಯಂಬಿಕೆ ಎಂದು ಶಾಸನೋಕ್ತಳಾಗಿದ್ದಾಳೆ. ದಂಡನಾಯಿಕಿತಿ ಎಂಬ ಉಲ್ಲೇಖವು ಅವಳು ದಂಡನಾಯಕನ ಮಡದಿ ಎಂಬ ಕಾರಣಕ್ಕಾಗಿ ಅವಳ ಹೆಸರಿನೊಂದಿಗೆ ಸೇರಿದೆ ಎನಿಸುತ್ತದೆ. ಏಕೆಂದರೆ ಆಕೆ ದಂಡನಾಯಕಿತಿ ಪದವಿಯಿಂದ ಆಳಿದ ಖಚಿತ ಆಧಾರಗಳು ಸದ್ಯದವರೆಗೂ ದೊರೆತಿಲ್ಲ. ಸಿದ್ಧಾಂತದಲ್ಲಿ ಸಿದ್ಧನಂದಿಗಳಂತಿರುವ ಶುಭಚಂದ್ರರ ಪಾದಾರವಿಂದದಲ್ಲಿ ಭಾಗ್ಯಲಕ್ಷ್ಮಿಯಾಗಿ ಲಕ್ಷ್ಮಿಮತಿ ರಾರಾಜಿಸಿದಳು. ದಂಡನಾಯಕಿತಿ ಲಕ್ಕವೆಯು ಸಲ್ಲೇಖನ ವ್ರತವನ್ನು ಕೈಗೊಂಡು ಸಮಾಧಿಮರಣವನ್ನು ಪಡೆದು ಸ್ವರ್ಗಸ್ಥವಾದಳು. ಮಹಾದಂಡನಾಯಕ ಗಂಗರಾಜನು ಈಕೆಗೆ ಪರೋಕ್ಷವಿನಯವಾಗಿ ಈ ನಿಸಿದಿಗೆಯನ್ನು ಮಾಡಿಸಿ ಪ್ರತಿಷ್ಠಾಪಿಸಿ ಮಹಾದಾನ ಮತ್ತು ಮಹಾಪೂಜೆಗಳನ್ನು ನೆರವೇರಿಸಿದನು. ಗಂಗರಾಜನಂತಹ ಅಧಿಕಾರಿಯ ಹೆಂಡತಿಯಾಗಿದ್ದು ಭೋಗಜೀವನವನ್ನು ನಡೆಸುವುದನ್ನು ಬಿಟ್ಟು ತ್ಯಾಗಜೀವನವನ್ನು ನಡೆಸಿದ ಕಾರಣಕ್ಕೇ ಅವಳ ಕಾಲದಲ್ಲಿ ಅಷ್ಟೊಂದು ಜನಪ್ರಿಯತೆಗೆ ಕಾರಣಕರ್ತಳಾಗಿದ್ದಳು. ಬಹುಶಃ ಈಕೆಯ ತ್ಯಾಗ ಜೀವನಕ್ಕೆ ಬಹಳ ಮುಖ್ಯವಾದ ಕಾರಣವೆಂದರೆ ಬಹುಶಃ ಆಕೆಗೆ ಸಂತಾನವಿಲ್ಲದೇ ಇದ್ದಿರಬಹುದು ಎಂದೆನಿಸುತ್ತದೆ.[161]

ಬೆಳಗೊಳದ ಚಿಕ್ಕಬೆಟ್ಟದಲ್ಲಿ ಇಂದ್ರನ ಮಂಟಪದಿಂದ ದಕ್ಷಿಣಕ್ಕಿರುವ ಅವಳಿ ಮಂಟಪಗಳನ್ನು ಲಕ್ಷ್ಮೀ ದೇವಿಯ ಕುಟುಂಬದವರ ಸ್ಮಾರಕವೆಂದರೆ ಸರಿಯಾದೀತು. ಈ ಎರಡು ಮಂಟಪಗಳಲ್ಲಿ ಮೊದಲನೆಯ ಮಂಟಪ ದಲ್ಲಿ ಒಂದೇ ಒಂದು ನಿಷದಿಗೆಯಿದ್ದು ಇದು ಲಕ್ಷ್ಮೀಮತಿಯ ಸೋದರನಾದ ಬೂಚಣ್ಣನ ಸ್ಮಾರಕವಾಗಿದೆ.[162] ಈತನು ಕ್ರಿ.ಶ. 1123ರಲ್ಲಿ ಮರಣ ಹೊಂದಿದನು. ಇನ್ನೊಂದು ಮಂಟಪದಲ್ಲಿ

ಮೂರು ನಿಷಧಿಗೆಗಳಿವೆ. ಇದರಲ್ಲಿ ಮೊದಲನೆಯದು 1115ರಲ್ಲಿ ಮರಣ ಹೊಂದಿದ ಲಕ್ಷ್ಮೀಮತಿಯ ಗುರುಗಳಾಗಿದ್ದ ಮೇಘಚಂದ್ರ ತ್ರೈವಿದ್ಯ ದೇವರ ಸ್ಮಾರಕವಾದರೆ[163] ಇನ್ನೆರಡು ಇವರ ಶಿಷ್ಯರಾದ ಸ್ವತಃ ಲಕ್ಷ್ಮೀಮತಿ[164] ಹಾಗೂ ಅವಳ ಸೋದರಿ ದೇಮತಿಯ ನಿಷದಿಗೆಗಳು.[165] ವಿಚಿತ್ರವೆಂದರೆ ಇವರಿಬ್ಬರೂ ಒಂದೇ ವರ್ಷ 1120–21ರಲ್ಲಿ ಅಸುನೀಗಿದ್ದಾರೆ.

• ಹುಳ್ಳಮಯ್ಯನ ಅಧೀನ ಅಧಿಕಾರಿಯಾಗಿ ಸಚಿವನೂ, ಶ್ರೀಕರಣಾಧಿಪನೂ ಆಗಿದ್ದ ನಾಗದೇವನು ನಯಕೀರ್ತಿ ದೇವನ ನಿಶಿದಿಯನ್ನು ನಿಲ್ಲಿಸಿದನು.[166]

• ನಾಳ್ಪ್ರಭು ಸೋಮನು ಜಿನಧರ್ಮದ ಪ್ರಗತಿಗೆ ಕಾರಣನಾಗಿದ್ದನು ನಾಲ್ಕು ವರ್ಣದವರಿಗೂ ಮಿಗಿಲಾದ ದಾನಗಳನ್ನು ನೀಡುತ್ತಿದ್ದನು; ಮಹಿಮಾನ್ವಿತನೂ ಶ್ರೇಯಾಂಸಮುನಿಗಳ ಶಿಷ್ಯನಾಗಿದ್ದನು. ಚಲದಲ್ಲಿ ರಾಮನಾಗಿದ್ದನು[167]

ಸಲ್ಲೇಖನ ವ್ರತವನ್ನು ಮಾಡಿ ಮಡಿದವರ ಸ್ಮಾರಕ ಶೀಲೆಗಳನ್ನು ಅವರ ಸಂಬಂಧಿಕರು ಗುರುಗಳು ಅರಸರು ನಿಲ್ಲಿಸುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಏಕಕಾಲಕ್ಕೆ ಸಲ್ಲೇಖನ ವ್ರತದಿಂದ ಮಡಿದ ಒಂದೇ ಮನೆತನದವರ ನಿಷಿಧಿಯನ್ನು ಒಂದೇ ಕಲ್ಲಿನಲ್ಲಿ ಬರೆಯಲಾಗುತ್ತಿತ್ತು. ನಿಷಿದಿ ಶಿಲೆಗಳಲ್ಲಿ ಸಾಮಾನ್ಯವಾಗಿ ಬೋದಿಸುವ ಗುರು, ಶಿಷ್ಯ ಇಬ್ಬರ ಮಧ್ಯ ಪುಸ್ತಕ ಹೊತ್ತ ವ್ಯಾಸಪೀಠ ಇರುವ ಚಿತ್ರಗಳು ಇರುತ್ತವೆ. ಸಲ್ಲೇಖನ ವ್ರತವನ್ನು ಕೈಗೊಂಡು ಸಮಾಧಿಮರಣ ಹೊಂದುವಲ್ಲಿ ಜೈನ ಗುರುಗಳು ಬಹುಮುಖ್ಯ ಪಾತ್ರವಹಿಸುತ್ತಿದ್ದರು. ಮರಣ ಪರ್ಯಂತ ಉಪವಾಸವಿದ್ದು ಸ್ವಯಂ ಮರಣ ಹೊಂದುವ ಸಂಪ್ರದಾಯದ ಹಿಂದೆ ಮೋಕ್ಷದ ಕಲ್ಪನೆ ಬಲವಾಗಿತ್ತು ಎನ್ನುವುದು ಸ್ಪಷ್ಟ. ವೈದಿಕ ಸಂಸ್ಕೃತಿಯ ಧಾರ್ಮಿಕ ನೀತಿಯನ್ನು ವಿರೋದಿಸಿ ಹುಟ್ಟಿಕೊಂಡ ಜೈನಧರ್ಮವು ಕ್ರಮೇಣ ತನ್ನಲ್ಲೇ ಅಂಥದ್ದೊಂದು ನೀತಿಯನ್ನು ಹುಟ್ಟುಹಾಕಿಕೊಂಡಿತು. ಇವು ಅಂದಿನ ಜೈನ ಸಮಾಜದ ಜಿನಭಕ್ತಿಯನ್ನು ತೋರಿಸುತ್ತದೆ ಎಂದು ತೋರಿಸುತ್ತದೆ.

ಹೀಗೆ ಕನ್ನಡ ನಾಡಿನ ಶಾಸನಗಳಲ್ಲಿ ಹೊಯ್ಸಳರ ಅವಧಿಯಲ್ಲಿ ಅವರ ಮಹಾಮಂಡಳೇಶ್ವರರ ಪ್ರೇರಣೆಯಿಂದ ರೂಪುಗೊಂಡ ಸ್ಥಳೀಯ ಸಾಮಾಜಿಕ ಸಂಗತಿಗಳನ್ನು ಚರ್ಚಿಸಲಾಗಿದೆ. ಇದರಲ್ಲಿ ಅನೇಕ ಸಂಗತಿಗಳನ್ನು ಸಮಾಜಶಾಸ್ತ್ರೀಯ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಗ್ರಹಿಸಿರುವುದರಿಂದ ಪ್ರಸ್ತುತ ಅಧ್ಯಯನವು ಅಧ್ಯಯನ ಪ್ರಪಂಚಕ್ಕೆ ಹೊಸದಾದ ಆಯಾಮವನ್ನು ಪರಿಚಯಿಸಿದೆ ಎಂದೇ ಈ ಮಹಾಪ್ರಬಂಧದ ಅನಿಸಿಕೆಯಾಗಿದೆ. ಸಾಮಾಜಿಕವಾದ ಅಧ್ಯಯನಗಳೆಲ್ಲವೂ ಸಾಂಪ್ರದಾಯಿಕವಾದ ಶೈಲಿಯ ಬರವಣಿಗೆಯ ಕ್ರಮದಿಂದ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತಿರುವ ಈ ಹೊತ್ತಿನಲ್ಲಿ ಈ ರೀತಿಯ ಶೈಲೀಕರಣವ ಬಹಳ ಮುಖ್ಯವಾದ ಹಲವು ಪ್ರಶ್ನೆಗಳನ್ನು ಮುನ್ನೆಲೆಗೆ ಒಡ್ಡಿ ಉತ್ತರಗಳನ್ನು ಕಂಡುಕೊಳ್ಳುವ ಪ್ರಾಮಾಣಿಕವಾದ ಪ್ರಯತ್ನವನ್ನು ಮಾಡಬಹುದಾಗಿದೆ ಎಂದು ಇಲ್ಲಿ ನಂಬಲಾಗಿದೆ.

## ಕೊನೆಟಿಪ್ಪಣಿಗಳು ಮತ್ತು ಆಕರಸೂಚಿ

01. ಮಕೈವರ್ ಮತ್ತು ಪೇಜ್: 1949: ಸೊಸೈಟಿ ಆನ್ ಇನ್ಟ್ರಂಡಕ್ಟರಿ ಅನಾಲಿಸಿಸ್, ಪು 5
02. ಎಕ 10(ಪ): ಅಕೆ6
03. ಎಕ 9(ಪ): ಬೇ 225
04. ಎಕ 8(ಪ): ಹಾ 144
05. ಎಕ 11(ಪ): ಚಿಮ 87
06. ಎಕ 9(ಪ): ಬೇ 463
07. ಎಕ 12(ರೈ); ಗು 30
08. ಪಂಪಭಾರತ: ದಶಮಾಶ್ವಾಸ: 20ನೇ ಪದ್ಯ
09. ಕ.ವಿ.ಶಾ.ಸಂ 1: ಬಳ್ಳಾರಿ37: ಕುಡಿತಿನಿ
10. ಎಕ 9(ಪ): ಬೇ 278
11. ಎಕ 7(ಪ): ಮಂ 25
12. ಎಕ 7(ಪ): ಮಂ 25
13. ಎಕ 4(ಪ): ಯಳ 2
14. ಕವಿಶಾಸಂ 1: ಹರಪನಹಳ್ಳಿ 135
15. ಎಕ 7(ಪ): ಮ 98 ಹಾಗೂ 97
16. ಎಕ 6(ಪ): ಶ್ರೀಪ 113 ಮತ್ತು ಎಕ 3(ಪ): ಪಿಪ 28
17. ಎಕ 7(ಪ): ನಾಮಂ 98
18. ಎಕ 8(ಪ): ಅಗೂ 46
19. ಎಕ 9(ಪ): ಬೇ 240
20. ಕವಿಶಾಸಂ 1: ಹಡಗಲಿ 36
21. ಕವಿಶಾಸಂ 1: ಹಡಗಲಿ 37
22. ಅದೇ: ಹರಪನಹಳ್ಳಿ 218
23. ಎಕ 9(ಪ): ಬೇ 328
24. ಎಕ 12(ಪ): ಕ 70
25. ಎಕ 9(ಪ): ಬೇ 423
26. ಎಕ 10(ಪ) ಅಕೆ 72
27. ಎಕ8(ಪ): ಹೊನ 71
28. ವಿಲಿಯಂ ಎಫ್ ಆಗ್ ಬರ್ನ್: 2013: ಸೋಷಿಯಲ್ ಚೇಂಜ್ ವಿಥ್ ರೆಸ್ಪೆಕ್ಟ್ ಟು ಕಲ್ಚರ್ ಅಂಡ್ ಒರಿಜಿನಲ್ ನೇಚರ್: ಹಾರ್ಡ್‌ಪ್ರೆಸ್ ಲಿಮಿಟೆಡ್: ಅಮೇರಿಕಾ
29. ಎಕ 4(ರೈ): ಕೃಪೇ 12
30. ಎಕ 24(ಪ): ಚಿನಾ 95
31. ಅದೇ:
32. ಎಕ 24(ಪ): ಚಿನಾ 95
33. ಅದೇ: ಚಿನಾ 13
34. ಅದೇ: ಚಿನಾ 104
35. ಎಕ 10(ಪ): ಅಕೆ 97
36. ಎಕ 11(ಪ): ಮೂ 17
37. ಎಕ 5(ಪ): ತಿನ 43
38. ಕೆ.ವಿ.ರಮೇಶ್ ಮತ್ತು ಎಂ.ಜೆ.ಶರ್ಮಾ(ಸಂ): 1978: ತುಳುನಾಡಿನ ಶಾಸನಗಳು: ಮೈಸೂರು : ಶಾಸಂ 27
39. ಎಕ 5(ಪ): ತಿನ 43
40. ಕವಿಶಾಸಂ 10: ಇಂಡಿ 41
41. ಚಿದಾನಂದಮೂರ್ತಿ ಎಂ: 1966: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ಮೈಸೂರು
42. ಚನ್ನಕ್ಕ ಎಲಿಗಾರ್ : 1990: ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ: ಧಾರವಾಡ : ಪುಟ 55
43. ಎಕ 7(ಪ): ಮಂ 30

44. ಚನ್ನಕ್ಕ ಎಲಿಗಾರ್ : ಪೂರ್ವೋಕ್ತ
45. ಎಕ 9(ಪ): ಬೇ 298
46. ಎಕ 3(ಪ): ಗುಂ 12
47. ಎಕ 8(ಪ): ಆಲೂ 23
48. ಎಕ 9(ಪ): ಬೇ 298
49. ಅದೇ: ಬೇ 297
50. ಅದೇ: ಬೇ 293
51. ಎಕ 2(ಪ): ಶ್ರಬೆ 470
52. ಎಕ 9(ಪ): ಬೇ 298
53. ಎಕ 7(ಪ): ಮ 52
54. ಎಕ 7(ಪ): ಮವ 23
55. ಎಕ 9(ರೈ): ನೆಲ 12
56. ಎಕ 4(ಪ): ಚಾನ 300
57. ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್(ಇನ್ನು ಮುಂದೆ ಎಂ.ಎ.ಆರ್) 1931, ಪುಟ 105
58. ಎಂ.ಎ.ಆರ್ 1931, ಪುಟ 108
59. ಎಕ 9(ಪ): ಬೇ 170
60. ಎಕ 7(ಪ): ನಾಮಂ 74
61. ಎಕ 11(ರೈ): ಚಿದು 7
62. ಎಕ 5(ಪ): ತಿನ 238
63. ಎಕ 10(ರೈ): ಶ್ರೀಪು 36
64. ಎಕ 8(ಪ): ಹೊನ 119
65. ಶಾಂತಕುಮಾರಿ ಲೀಲಾ: 1986: ಹಿಸ್ಟರಿ ಆಫ್ ಅಗ್ರಹಾರಾಸ್ ಇನ್ ಕರ್ನಾಟಕ 400–1300 ಎಡಿ: ಮದರಾಸ್
66. ಎಕ 8(ರೈ): ಶಿಪು 123
67. ಕಾಮತ್ ಜ್ಯೋತ್ಸ್ನಾ: 1988: ಕರ್ನಾಟಕದ ಶಿಕ್ಷಣ ಪರಂಪರೆ: ಮುಂಬೈ ವಿಶ್ವವಿದ್ಯಾಲಯ: ಮುಂಬೈ
68. ಶೇಷಶಾಸ್ತ್ರಿ ಆರ್ ಮತ್ತು ಕೆ.ಆರ್.ಗಣೇಶ್: ಆಂಧ್ರಪ್ರದೇಶದ ಕನ್ನಡ ಶಾಸನಗಳು ಸಂಪುಟ 5: ಭಾಗ 1 ಅನಂತಪುರ ಜಿ, ಮಡಕಶಿರ ತಾ 102
69. ಎಕ 24(ಪ): ಚಿನಾ 37
70. ಎಕ 8(ಪ): ಹಾ 66, 67
71. ಎಕ 7(ಪ): ಮಂ 31
72. ಪಾರ್ಕ್ ಮತ್ತು ಬರ್ಗೆಸ್: 1969: ಇನ್ಟ್ರಡಕ್ಷನ್ ಟು ದ ಸೈನ್ಸ್ ಆಫ್ ಸೋಷಿಯಾಲಜಿ: ದ ಯೂನಿವರ್ಸಿಟಿ ಆಫ್ ಚಿಕಾಗೋ ಪ್ರೆಸ್: ಚಿಕಾಗೋ
73. ಎಕ 11(ಪ): ಚಿಮ 87
74. ಹಾರ್ಟನ್ ಪಿ.ಬಿ ಮತ್ತು ಸಿ.ಎಲ್.ಹಂಟ್ : 1964: ಸೋಶಿಯಾಲಜಿ: ಮೆಕ್ ಗ್ರಾ ಹಿಲ್ ಕಂಪನೀಸ್:
75. ಎಕ 8(ರೈ): ಸೊ 587
76. ಹಾರ್ಟನ್ ಪಿ.ಬಿ ಮತ್ತು ಹಂಟ್ ಸಿ.ಎಲ್: 1964: ಸೋಶಿಯಾಲಜಿ: ಮೆಕ್ ಗ್ರಾ ಹಿಲ್ ಕಂಪನೀಸ್:
77. ಎಕ 10(ರೈ) ಬಂ.ಪೇ 08,
78. ಎಕ 11 (ಪ): ಚಿಮ 87
79. ಎಕ 8(ಪ): ಹಾ11
80. ಕೆ.ಆರ್. ಗಣೇಶ್ ಮತ್ತು ಶೇಷಶಾಸ್ತ್ರಿ. ಆರ್. ಆಂಧ್ರಪ್ರದೇಶದ ಕನ್ನಡ ಶಾಸನಗಳು ಭಾಗ 1 ಸಂಪುಟ 5 ಅನಂತಪುರ ಜಿ, ಹಿಂದೂಪುರ ತಾ 47,
81. ಆಂಧ್ರಪ್ರದೇಶದ ಕನ್ನಡ ಶಾಸನಗಳು ಭಾಗ 1 ಸಂಪುಟ 5 ಅನಂತಪುರ ಜಿ, ಹಿಂದೂಪುರ ತಾ 48,
82. ಎಕ 8(ಪ) ಹಾ 95
83. ಎಕ 12(ರೈ) ತಿಪ 160
84. ಎಕ 7(ಪ): ನಾಮಂ 106
85. ಎಕ 8(ಪ): ಹೊನ 100
86. ಎಕ 9(ಪ): ಬೇ 221

87. ಎಕ 10(ರೈ): ಗೌಬಿ57
88. ಜಾನ್ ಲೆವಿಸ್ ಗಿಲಿನ್ ಮತ್ತು ಜಾನ್ ಫಿಲಿಪ್ ಗಿಲಿನ್: 1950: ಕಲ್ಚರಲ್ ಸೋಷಿಯಾಲಜಿ: ಮ್ಯಾಕ್ಮಿಲನ್ ಪಬ್ಲಿಕೇಷನ್ಸ್:
89. ವಿಲಿಯಂ ಫೀಲ್ಡಿಂಗ್ ಆಗಬರ್ನ್ ಮತ್ತು ಮೇಯರ್ ಎಫ್ ನಿಮ್ಕಾಫ್: 1940: ಸೋಷಿಯಾಲಜಿ: ಹೌಟನ್ ಮಿಫ್ಲಿನ್ ಕಂಪನಿ: ಬೋಸ್ಟನ್:1940: ಇ.ಎ.ರಾಸ್ ಎಂಬ ಸಮಾಜಶಾಸ್ತ್ರಜ್ಞನು
90. ಕವಿಶಾಸಂ 1: ಹಗರಿಬೊಮ್ಮನಹಳ್ಳಿ 17
91. ಕವಿಶಾಸಂ 7: ಲಿಂಗಸಗೂರು 6
92. ಎಕ 9(ಪ): ಬೇ 34
93. ಎಕ 7(ಪ): ನಾಮಂ 98
94. ಕವಿಶಾಸಂ 1: ಸಿರಗುಪ್ಪ 1
95. ಎಕ 9(ಪ): ಬೇ 484
96. ಕವಿಶಾಸಂ 7 : ಸಿಂಧನೂರು 7
97. ಅದೇ: ಮಾನ್ವಿ 43
98. ಎಕ 10(ಪ): ಅಕೆ 235
99. ಎಕ 9(ಪ): ಬೇ 108
100. ಅದೇ: ಬೇ244
101. ಕವಿಶಾಸಂ 1: ಹಡಗಲಿ 6
102. ಎಕ 7(ಪ): ಮಂ29, 30 ಹಾಗೂ ಎಕ 11(ಪ): ಚಿಮ 87
103. ಎಕ 10(ರೈ): ಚಿಂ 88
104. ಆರ್.ಶೇಷಶಾಸ್ತ್ರಿ: ಕರ್ನಾಟಕದ ವೀರಗಲ್ಲುಗಳು: ಕನ್ನಡ ಸಾಹಿತ್ಯ ಪರಿಷತ್ತು: ಬೆಂಗಳೂರು
105. ಎಕ 24(ಪ): ಚಿನಾ 32
106. ಅದೇ:
107. ಅದೇ:
108. ಎಕ 12(ಪ): ಕ 201
109. ಎಕ 8(ಪ): ಹೊನ 100
110. ಎಕ 11(ಪ): ಹೊನ142
111. ಎಕ 8(ಪ): ಹಾ 137
112. ಎಕ 5(ಪ): ಮೈ 204
113. ಎಕ 10(ರೈ): ಚಿಂ 53
114. ಪರಮ ಶಿವಮೂರ್ತಿ. ಡಿ.ವಿ : 1999: ಕನ್ನಡ ಶಾಸನ ಶಿಲ್ಪ : ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ಹಂಪಿ
115. ಎಕ 2(ಪ): ಶ್ರಬೆ 172
116. ಶೇಷಶಾಸ್ತ್ರಿ: 1982: ಕರ್ನಾಟಕದ ವೀರಗಲ್ಲುಗಳು: ಕನ್ನಡ ಸಾಹಿತ್ಯ ಪರಿಷತ್ತು: ಬೆಂಗಳೂರು
117. ಎಕ 9(ರೈ): ಹೊಸ 11
118. ಕಲಬುರ್ಗಿ ಎಂ. ಎಂ: 1980: ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳು: ಬೆಂಗಳೂರು
119. ಎಕ 7(ರೈ); ಹೊನ 28.
120. ಕಲಬುರ್ಗಿ : ಪೂರ್ವೋಕ್ತ: ಪುಟ 90
121. ಶೇಷಶಾಸ್ತ್ರಿ: ಪೂರ್ವೋಕ್ತ : ಪುಟ 314
122. ಎಕ 10(ಪ): ಚರಾ 72
123. ಅಣ್ಣಿಗೇರಿ ಎ. ಎಂ ಮತ್ತು ಮೇವುಂಡಿ ಮಲ್ಲಾರಿ : 1961: ಶಾಸನ ಸಾಹಿತ್ಯ ಸಂಚಯ: ಧಾರವಾಡ.
124. ಎಕ 9(ಪ): ಬೇ 549
125. ಎಕ 6(ಪ): ಕೃಪೇ 17
126. ಎಕ 11(ಪ): ಚಿಮ 187
127. ಎಕ 8(ಪ) ಸಪು 8
128. ಎಕ 10(ಪ): ಅಕೆ 11
129. ಎಕ 6(ಪ): ಪಾಮು 238
130. ಅದೇ: ಪಾಮು 241

131. ಎಕ 15(ಪ): ಶಿವ 56
132. ಚನ್ನಕ್ಕ ಎಲಿಗಾರ: 1990: ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ: ಧಾರವಾಡ : ಪುಟ 265
133. ಎಕ 6(ಪ): ಕೃಪೇ 84
134. ಅದೇ
135. ಎಕ 6(ಪ): ಕೃಪೇ 82
136. ಎಕ 6(ಪ): ಕೃಪೇ 84
137. ಎಕ 6(ಪ): ಕೃಪೇ 84
138. ಸಂಕ್ಷಿಪ್ತ ಕನ್ನಡ ನಿಘಂಟು: 2001: (ಪರಿಷ್ಕೃತ): ಕನ್ನಡ ಸಾಹಿತ್ಯ ಪರಿಷತ್ತು: ಬೆಂಗಳೂರು
139. ಎಕ 6(ಪ): ಕೃಪೇ 78
140. ಬಾ.ರಾ. ಗೋಪಾಲ್ ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ 6: ಪೀಠಿಕೆ
141. ಎಕ 5(ಪ): ಮೈ 206
142. ಎಕ 5(ಪ): ಮೈ 211
143. ಎಕ 4, ಚಾನ 222
144. ಅದೇ: ಹುಣ 24
145. ಎಕ 7(ಪ): ಮ 13
146. ಎಕ 8 (ರೈ): ಸೊ 457
147. ಎಂ.ಎ.ಆರ್. 1919: ಪುಟ 92
148. ಎಕ 8(ರೈ): ಶಿಪು 72
149. ಎಕ 3(ಪ): ಹೆಕೋ 60
150. ಅದೇ: ಹೆಕೋ 61
151. ಎಕ 8(ರೈ): ಶಿಪು 38
152. ಎಕ 15(ಪ): ಹೊನ 73
153. ಅದೇ: ಹೊನ 124
154. ಬಸವರಾಜ ಕಲ್ಗುಡಿ: 1985: ಮಹಾಸತಿ ಆಚರಣೆ ಒಂದು ಅಧ್ಯಯನ: ಬೆಂಗಳೂರು ವಿಶ್ವವಿದ್ಯಾಲಯ: ಬೆಂಗಳೂರು
155. ಎಕ 13(ಪ): ಶಿವ 108
156. ಎಕ 11(ಪ): ಚಿಮ 51
157. ಎಕ 10(ಪ): ಅಕೆ 35
158. ಚನ್ನಕ್ಕ ಎಲಿಗಾರ್: 1990: ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ: ಧಾರವಾಡ:
159. ಎಕ 2(ಪ): ಶ್ರಬೆ 157
160. ಅದೇ: ಶ್ರಬೆ 155
161. ಅದೇ: ಶ್ರಬೆ 156
162. ಅದೇ: ಶ್ರಬೆ 157
163. ಅದೇ: ಶ್ರಬೆ 158
164. ಎಕ 2(ಪ): ಶ್ರಬೆ 73
165. ಎಕ 11 (ಪ): ಚಿಮ 2

# ಅಧ್ಯಾಯ 7

## ಯುಗಪ್ರವರ್ತಕ ಸಾಂಸ್ಥಿಕ ಪರಿಷ್ಕರಣೆಗಳು ಮತ್ತು ಧಾರ್ಮಿಕ ಸಂವರ್ಧನೆ

ಭಾರತೀಯ ಹಾಗೂ ಕರ್ನಾಟಕದ ಇತಿಹಾಸದಲ್ಲಿ ಕ್ರಿ. ಶ. 1150– 1350ರ ಕಾಲಾವಧಿ ಒಂದು ವಿಶಿಷ್ಟ ಘಟ್ಟ. ಇದು ಹೊಯ್ಸಳರ ಆಡಳಿತದ ಕಾಲ. ಹೊಯ್ಸಳರು ಧಾರ್ಮಿಕ ಸಂವರ್ಧನೆಯನ್ನು ಮಾಡಲು ಹಲವು ಸವಾಲುಗಳನ್ನು ಒಳಗೊಂಡಿದ್ದ ಕಾಲ. ನಿರಂತರ ಸಂಘರ್ಷಗಳ ಕಾಲವಿದು. ಶೈವ ಪಂಥೀಯರಲ್ಲೂ ಹಲವಾರು ಪಂಗಡಗಳು ಢಾಳಾಗಿ ರೂಪುಗೊಂಡಿದ್ದು, ವೈಷ್ಣವ ಧರ್ಮದಲ್ಲೂ ಟಿಸಿಲುಗಳು ಒಡೆದದ್ದು, ಜೈನರಲ್ಲಿ ಏಕತೆಯು ಮೂಡಿದ ಯುಗ ಇದಾಗಿದೆ. ಸ್ವದೇಶದಲ್ಲಿ ರೂಪುಗೊಂಡ ಧರ್ಮಗಳು ಒಂದೆಡೆ ಪ್ರವರ್ಧಮಾನಕ್ಕೆ ಬರುತ್ತಿದ್ದರೆ ವಿದೇಶಿ ಧರ್ಮವಾದ ಇಸ್ಲಾಂ ಧರ್ಮ ಕೂಡ ನಿಧಾನವಾಗಿ ರಾಜಕೀಯದ ಮೂಲಕ ಆವರಿಸಿಕೊಳ್ಳಲು ಆರಂಭಿಸಿದ ಕಾಲವಿದು. ಒಳಜಗಳಗಳಲ್ಲಿ ಬೆಂಡಾದ ಹಿಂದೂ ರಾಜ್ಯಗಳು ನೂರೈವತ್ತು ವರ್ಷಗಳ ಹಿಂದೆ (ಕ್ರಿ,ಶ. 1000) ಘಜ್ನಿಯ ಆಕ್ರಮಣಕ್ಕೀಡಾಗಿ ನಂತರದಲ್ಲಿ ಕ್ರಿ.ಶ. 1176 ಇಸ್ಲಾಂ ಅಧಿಪತ್ಯಕ್ಕೆ ಪೂರ್ತಿ ಬಲಿಯಾದವು. ದಿಲ್ಲಿ ಸುಲ್ತಾನರ ಆಳ್ವಿಕೆ ಅಲ್ತಮಷನ ಕಾಲಕ್ಕೆ ಹಿಮಾಲಯದಿಂದ ವಿಂಧ್ಯಪರ್ವತದವರೆಗೂ ಹಬ್ಬಿ ಅಲ್ಲಿಂದೀಚೆಗೆ ವಿಸ್ತಾರಗೊಳ್ಳುವ ಸೂಚನೆ ಇತ್ತಿತ್ತು. ಆದರೆ ಮುಸ್ಲಿಮರ ನೇರಸಂಪರ್ಕಕ್ಕೆ ದಕ್ಷಿಣ ಭಾರತ ಒಳಗಾಗಲು ಅಲ್ಲಿಂದ ಒಂದು ಶತಮಾನ ಬೇಕಾಯಿತು. ದೇವಗಿರಿ, ಓರಂಗಲ್ಲು, ದೋರಸಮುದ್ರ, ಮಧುರೈ–ಕಾಂಚಿ ಮಲ್ಲಿಕ್‌ಕಾಫರನ ದಾಳಿಗೀಡಾಗಿ ಜೀವಕಳೆ ಕಳೆದುಕೊಂಡವು. ಅಲ್ಲದೇ ದಕ್ಷಿಣ ಹಾಗೂ ಕರ್ನಾಟಕದಲ್ಲಿ ಮುಸ್ಲಿಂ ಆಳ್ವಿಕೆಗೆ ಆ ದಾಳಿ ನಾಂದಿಯಾಯಿತು. ಅಂದರೆ, ಸುಮಾರು ಒಂದೂವರೆ ಶತಮಾನಾವಧಿಯಲ್ಲಿ ಉತ್ತರ ಭಾರತದಲ್ಲಿ ಸಂಭವಿಸಿದ ಘಟನೆಗಳ ಛಾಯೆಯನ್ನು ನಾವು ಕರ್ನಾಟಕ ಹಾಗೂ ದಕ್ಷಿಣ ಭಾರತದ ಇತಿಹಾಸದಲ್ಲಿ 14ನೆಯ ಶತಮಾನದಲ್ಲಿ ಕಾಣುವೆವು. ಆದರೆ ಈ 2 ಭೂಭಾಗಗಳಲ್ಲಿಯ ಒಂದು ವಿಶೇಷ ವೈವಿಧ್ಯತೆಯನ್ನು ಗಮನಿಸುವುದು ಅಗತ್ಯ. ಉತ್ತರ ಭಾರತವು ಮುಸ್ಲಿಮರ ಪೂರ್ಣ ಹತೋಟಿಗೆ ಒಳಗಾಯಿತು. ದಕ್ಷಿಣದಲ್ಲಿ ಹಿಂದೂ ಮನೆತನಗಳು ನೆರೆಯ ಮುಸ್ಲಿಂ ಅರಸು ಮನೆತನಗಳೊಡನೆ ಕಾದಾಡಿ ತಮ್ಮ ಅಸ್ಮಿತೆಯನ್ನು ಉಳಿಸಿಕೊಂಡೇ ಮುಂದುವರಿದವು.

ಕ್ರಿ.ಶ. 1150–70ರ ಕಾಲಘಟ್ಟದಲ್ಲಿನ ಇಡೀ ಕನ್ನಡ ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಇಡಿಯಾಗಿ ಗಮನಿಸಿದರೆ, ಒಂದು ಕಡೆ ಬಸವಣ್ಣನವರ ಆಂದೋಲನದ ಆರಂಭ, ಮತ್ತೊಂದೆಡೆ ರಾಮಾನುಜ ಪಂಥದ ಪ್ರಚುರತೆ ನಡೆಯುತ್ತಿತ್ತು. ಇವುಗಳ ನಡುವೆ ಅಥವಾ ಈ ಇಬ್ಬಗೆಯ ಕ್ರಾಂತಿಗಳಿಗೆ ಒಳಗಾಗಿ ಹಲವು ಮತಧರ್ಮಗಳೂ ಹಲವು ಧರ್ಮ ಶಾಖೆಗಳೂ (ಲಕುಲೀಶ–ಕಾಳಾಮುಖ) ಕ್ಷೀಣಿಸಿದುವಲ್ಲದೆ ಸಮಾಜದಲ್ಲಿ ಅನೇಕ ಬದಲಾವಣೆಗಳೂ ಆದವು. ಇವುಗಳಲ್ಲದೆ 13ನೆಯ ಶಮಾನದಲ್ಲಿ ದಕ್ಷಿಣ ಕರಾವಳಿ ಜಿಲ್ಲೆಯಲ್ಲಿ ಆರಂಭವಾದ ಮಧ್ವಮತವು ಕ್ರಮೇಣ ಪ್ರಸಾರಗೊಂಡು ಹಿಂದೂ ಧರ್ಮಕ್ಕೆ ಹೊಸ ತಿರುವು ಕೊಟ್ಟಿತು. ಈ ಬಗೆಯ ಶೈವ ಮತ್ತು ವೈಷ್ಣವ ಧರ್ಮಗಳ ಹರಡುವಿಕೆಯ ನಡುವೆ ಪರಿಪೂರ್ಣತೆಯನ್ನು

ಗಳಿಸಿಕೊಂಡದ್ದು ಮಾತ್ರ ಕನ್ನಡ ಸಾಹಿತ್ಯ ಎನ್ನುವುದು ವಿಶೇಷ. ಈ ಸಂದರ್ಭದಲ್ಲಿ ಹೊಯ್ಸಳ ಮಹಾಮಂಡಳೇಶ್ವರರಲ್ಲಿ ಅನೇಕರು ತಮ್ಮ ಆಡಳಿತ ಪರಿಧಿಯ ಪ್ರದೇಶಗಳಲ್ಲಿ ಮತ್ತು ತಾವು ಸಂದರ್ಭಾನುಸಾರ ಸಂದರ್ಶಿಸಿದ ಸ್ಥಳಗಳಲ್ಲಿ ತಾವು ಯಾವುದೇ ಧರ್ಮ ಅಥವಾ ಮತಪಂಥಗಳಿಗೆ ಸೇರಿರಲಿ ಮೊದಲು ಅದನ್ನು ಪುರಸ್ಕರಿಸುವ ಕೆಲಸವನ್ನು ಮಾಡಿದರು. ಅವರ ಕೈಕೆಳಗಿನ ಅಧಿಕಾರಿಗಳಿಗೂ ಅಂತಹ ಧರ್ಮಕಾರ್ಯಗಳಲ್ಲಿ ತೊಡಗಿಸಿಕೊಳ್ಳುವಂತೆ ಪ್ರೇರೇಪಿಸಿದರು. ಕೆಲವು ಸಂದರ್ಭಗಳಲ್ಲಿ ಅನ್ಯಮತ ಸಹಿಷ್ಣುತಾ ಧೋರಣೆಯಿಂದ ಅದ್ಭುತವಾದ ರೀತಿಯಲ್ಲಿ ಹಲವು ರೀತಿಯಲ್ಲಿ ಸ್ಥಳೀಯ ಧಾರ್ಮಿಕ ಸಂವರ್ಧನೆಗೆ ಕಾರಣೀಭೂತರಾದುದು ಲಕ್ಷ್ಯಾರ್ಹವಾದುದು. ಯಾವುದೇ ರೀತಿಯ ರಾಜಕೀಯ ಸಂಗತಿಗಳಿಂದ ಮುಕ್ತವಾಗಿ ಮಹಾಮಂಡಳೇಶ್ವರರು ಅವರ ಪತ್ನಿಯರು, ಮತ್ತು ಅಧಿಕಾರಿಗಳು ನೇರವಾಗಿ ಧಾರ್ಮಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡು ಧಾರ್ಮಿಕ ಸಂವರ್ಧನೆಯನ್ನು ಆಗುಮಾಡಿದರು. ಇವುಗಳಲ್ಲಿ ಪ್ರಸ್ತುತ ಅಧ್ಯಯನವು ಕಂಡುಕೊಂಡ ಸತ್ಯಗಳನ್ನು ನಾನು ಹಲವು ಉದಾಹರಣೆಗಳ ಮೂಲಕ ಪೃಥಕ್ಕರಿಸುತ್ತಿದ್ದೇನೆ

7.1 **ಬೌದ್ಧ ಧರ್ಮ** :

ಕರ್ನಾಟಕದ ಮೇಲಾದ ಬೌದ್ಧಧರ್ಮದ ಪ್ರಭಾವದ ಪ್ರಮಾಣವಿನ್ನೂ ಅನಿಶ್ಚಿತ. ಸನ್ನತಿ, ಚಂದ್ರವಳ್ಳಿ ಐಹೊಳೆ, ಕದರಿ, ಬಳ್ಳಿಗಾವೆ, ತೊರ್ಕೆ, ಕೋಳಿವಾಡಗಳಲ್ಲಿ ದೊರೆತ ಅವಶೇಷಗಳಿಂದ, ಅಶೋಕನ ಕಾಲದ ಬನವಾಸಿ ಬಳ್ಳಿಗಾವೆ, ಡಂಬಳ, ಬೆನ್ಕಂಡಿ, ಕೋಳಿವಾಡ ಮೊದಲಾದೆಡೆಯಲ್ಲಿ ದೊರೆತ ಶಾಸನಗಳಿಂದ ಹಲವೆಡೆಗಳಲ್ಲಿ ದೊರೆತ ತಾಮ್ರಪಟಗಳಿಂದ ಶಾಸನಗಳಲ್ಲಿ ಅಲ್ಲಲ್ಲಿ ಬರುವ ಚತುಸ್ಸಮಯ ಮುಂತಾದ ಶಬ್ದವನ್ನು ಅರ್ಥೈಸಿ, ದೀಪವಂಸ–ಮಹಾವಂಸ ಗ್ರಂಥಗಳನ್ನೂ ಹಾಗೂ ಹೂಯೆನ್‌ತ್ಸಾಂಗ್ ಮೊದಲಾದವರ ಪ್ರವಾಸವರದಿ ಗಳನ್ನು ಆಧರಿಸಿ ಕರ್ನಾಟಕದಲ್ಲಿ ಬೌದ್ಧಮತ ಪ್ರಸಾರದಲ್ಲಿತ್ತೆಂದು ತಿಳಿಯಬಹುದು. ಈ ಮತದ ವೈಶಿಷ್ಟ್ಯ ಹಾಗೂ ಪ್ರಭಾವ ಏನೇ ಇರಲಿ 1150ರ ಸುಮಾರಿಗೆ ಕರ್ನಾಟಕದಲ್ಲಿ ಇದು ತುಂಬಾ ಕ್ಷೀಣ ಸ್ಥಿತಿಯಲ್ಲಿದ್ದ ಬಗ್ಗೆ ಅನುಮಾನವಿಲ್ಲ. ಬಳ್ಳಿಗಾವೆ, ಡಂಬಳ, ಕೋಳಿವಾಡ, ಕದ್ರಿ ಮೊದಲಾದೆಡೆಯಲ್ಲಿ ವಜ್ರಯಾನ ಶಾಖೆಯ ಹಲವು ಬೌದ್ಧ ಅನುಯಾಯಿಗಳು ಉಳಿದುಕೊಂಡು ಬಂದಿದ್ದರು. ಆದರೆ ಈ ಕೇಂದ್ರಗಳು ಇರುವೆಡೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಬೌದ್ಧಧರ್ಮದ ಅಸ್ತಿತ್ವ ಮತ್ತು ಪ್ರಚಾರಕ್ಕೆ ಸಂಬಂಧಿಸಿದಂತೆ ಹೊಯ್ಸಳ ಮಹಾಮಂಡಳೇಶ್ವರರ ಅಥವಾ ಅವರ ಕಾಲಘಟ್ಟದ ಕೆಲವು ಶಾಸನಾಧಾರಗಳು ಅತ್ಯಂತ ಕ್ವಚಿತ್ತಾಗಿ ದೊರೆತಿರುವುದು ವಿಶೇಷ ಸಂಗತಿಯಾಗಿದೆ. ಬೌದ್ಧ ಧರ್ಮದ ಬೆಳವಣಿಗೆಗೆ ಸಹಾಯ ಹಸ್ತವನ್ನು ಚಾಚಿದ ಮಹಾಮಂಡಳೇಶ್ವರರು ಹಾಗೂ ಮಹಾಮಂಡಳೇಶ್ವರರ ದೆಸೆಯಿಂದ ಪೋಷಕರಾದ ಅರಸರು ಮತ್ತು ಅರಸಿಯರ ಬಗ್ಗೆ ತಿಳಿದುಕೊಳ್ಳಬಹುದು.

**ಮಹಾಮಂಡಳೇಶ್ವರ ಗೋವಿದೇವ:** ಮಹಾಮಂಡಳೇಶ್ವರ ಗೋವಿದೇವನೆಂದರೆ ನಮಗೆ ಆತನ ಜೈನಧರ್ಮದ ಪ್ರೀತಿ ನೆನಪಿಗೆ ಬರುತ್ತದೆ. ಜೊತೆಗೆ ಆತ ಬೌದ್ಧ ಧರ್ಮದ ಮೇಲೂ ಒಲವುಳ್ಳವನಾಗಿದ್ದನು ಎಂಬ ವಿಷಯವನ್ನು ತಿಳಿಸುತ್ತದೆ. ಹುಳಿಯಾರು, ತಂಡಗದ ಶಾಸನಗಳು[1] ಗೋವಿದೇವನು ಜೈನಧರ್ಮಕ್ಕೂ ನಿಷ್ಟನಾಗಿದ್ದು ಬೌದ್ಧ, ವೈಷ್ಣವ ಧರ್ಮಗಳ ಉನ್ನತಿಗೂ ಶ್ರಮಿಸಿದುದರ ಬಗ್ಗೆ ಸೂಚ್ಯವಾಗಿ ತಿಳಿಸುತ್ತವೆ. ಆದ್ದರಿಂದಲೇ ಇವನಿಗೆ "ಮಹೇಶ್ವರ ಬೌದ್ಧವೈಷ್ಣವಾರುಹತ ಚತುಸ್ಸಮಯ ಸಮುದ್ಧರಣ" ಎಂಬ ಬಿರುದು ಪ್ರಾಪ್ತವಾಗಿರುವುದನ್ನು ಎಚ್ಚರಿಕೆಯಿಂದ ಗಮನಿಸಿದರೆ 12ನೆಯ ಶತಮಾನದ ಕಾಲಘಟ್ಟದಲ್ಲಿ ಮಹಾಮಂಡಳೇಶ್ವರನಿಂದ ಪೋಷಣೆಗೊಳಗಾಗಿದ್ದುದು ಕರ್ನಾಟಕದ ಧಾರ್ಮಿಕ ಚರಿತ್ರೆಯಲ್ಲಿ ಮಹತ್ವದ ಸಂಗತಿ. ಇದು ಈ ಕಾಲಘಟ್ಟದಲ್ಲಿನ ಬೌದ್ಧಧರ್ಮದ ಅಸ್ಮಿತೆಯ ದೃಷ್ಟಿಯಿಂದ ಮಹತ್ವದ ವಿಚಾರ.

**ನಾಳ್ಪ್ರಭು ಸೋಮ:** ಇವನು ಜಿನಧರ್ಮದ ಪ್ರಗತಿಗೆ ಕಾರಣನಾಗಿದ್ದನು ಹಾಗಿದ್ದೂ ನಾಲ್ಕು ವರ್ಣದವರಿಗೂ ಮಿಗಿಲಾದ ದಾನಗಳನ್ನು ನೀಡುತ್ತಿದ್ದನು; ಮಹಿಮಾನ್ವಿತನೂ ಶ್ರೇಯಾಂಸಮುನಿಗಳ ಶಿಷ್ಯನಾಗಿದ್ದನು. ಚಲದಲ್ಲಿ ರಾಮನಾಗಿದ್ದನು ಅಂತಹ ಸೋಮನು ಸಮಾಧಿಮರಣವನ್ನು ಹೊಂದಿದಾಗ ಆತನ ಮಗ ನಿಶಿಧಿಯನ್ನು ಸ್ಥಾಪಿಸಿದನು[2] ಈ ಶಾಸನದ ಮಂಗಲಪದ್ಯವು ಅತ್ಯಂತ ಅಪೂರ್ವವಾಗಿದೆ. ಶಿವ, ಬ್ರಹ್ಮ, ವಿಷ್ಣು, ಬುದ್ಧ, ಜಿನರನ್ನು ಒಳಗೊಂಡ ದೇವತೆಯ ಪ್ರಾರ್ಥನೆ ಇಲ್ಲಿದೆ.

**ಜಿನಪತಿ ಕೂರ್ತು ಬೇಳ್ಪ ಸುಖಸಂಪದಮಂ ಹರನೊಲ್ದು ಕೀರ್ತಿಯಂ**
**ಕನಕಸರೋದ್ಭವಂ ವಿರಚಿರಾಯುವನಿಂಬಿನಲೀಗಳ ಅಚ್ಯುತಂ**
**ಮನಮೊಸೆದೊಪ್ಪುತಿರ್ಪ್ಪ ಸಿರಿಯಂ ವರಬುದ್ದಜಯಾಭಿವೃದ್ಧಿಯಂ**
**ಮನಸಿಜರೂಪ ಬಾಚಿ ನಿನಗೀಗೆಶಶಾಂಕಕುಳಾದ್ರಿಯುಳ್ಳಿನಂ**

ಜಿನ ಹರ ಬ್ರಹ್ಮ ಅಚ್ಯುತ ಮತ್ತು ಬುದ್ದ ಇವರೆಲ್ಲರಿಂದಲೂ ಅಂದರೆ ಜಿನಪತಿಯಿಂದ ಸುಖ, ಹರನಿಂದ ಕೀರ್ತಿ, ಬ್ರಹ್ಮನಿಂದ ದೀರ್ಘಾಯುಷ್ಯ, ಅಚ್ಯುತನಿಂದ ಸಂಪತ್ತು, ಬುದ್ಧನಿಂದ ಜಯ ಅಭಿವೃದ್ಧಿಯನ್ನು ಅದು ಪ್ರಾರ್ಥಿಸುತ್ತದೆ. ಇಲ್ಲಿ ಜಯವನ್ನು ಬುದ್ದನಿಂದ ಹೊಂದಬೇಕು ಎನ್ನುವ ಮಾತನ್ನು ಗಮನಿಸಿದರೆ ಬೌದ್ಧ ಧರ್ಮಕ್ಕೆ ಎಂತಹ ಪ್ರಾಮುಖ್ಯತೆಯನ್ನು ನೀಡಿದ್ದರು ಎಂದು ತಿಳಿದುಬರುತ್ತದೆ. ಸಾಮಂತ ಗೂಳಿಯ ಬಾಚಿಯು ಎಲ್ಲ ನಾಲ್ಕು ಧರ್ಮಗಳ ಅಭಿವೃದ್ಧಿಗೆ ಕಾರಣಕರ್ತನೆಂದು ವಿದ್ವಜ್ಜನರಿಗೆ ಕಲ್ಪವೃಕ್ಷವೆಂದು ಧರ್ಮಾವತಾರನೆಂದು ಖ್ಯಾತನಾಗಿದ್ದನು.[3]

**ಗೂಳಿಯ ಬಾಚಿದೇವ:** ಕೈದಾಳ ನಾಡಾಳ್ವನಾಗಿದ್ದ ಗೂಳಿಯ ಬಾಚಿದೇವನು ಮಹಾಮಂಡಲೇಶ್ವರ, ಮಹಾಸಾಮಂತ, ಸೇನಾಧಿಪತಿ ಪದವಿಗಳನ್ನು ಅಲಂಕರಿಸಿದ್ದನು. ಇವನ ಶಾಸನವು ಇವನನ್ನು "ಶಿವಾಯಧಾತ್ರೇ ಸುಗತಾಯ ವಿಷ್ಣುವೇ ಜಿನಾಯ ತಸ್ಮೈ ಸಕಲಾತ್ಮನೇ ನಮಃ" ಎಂಬ ಶ್ಲೋಕದಲ್ಲಿ ಶಿವ, ಸುಗತ(ಬುದ್ಧ), ವಿಷ್ಣು , ಜಿನ ಇವೆಲ್ಲಾ ಒಂದೇ ಆಗಿದ್ದು ಇವು ಪರಮಾತ್ಮನಿಗಿರುವ ಬೇರೆ ಬೇರೆ

ಹೆಸರುಗಳು ಎಂದು ಹೇಳಿದೆ.[4] ಇದನ್ನು ಗಮನಿಸಿದರೆ ಆಳರಸರ ಶಾಸನಗಳಿಗಿಂತ ಈ ಮಹಾಮಂಡಲೇಶ್ವರರ ಶಾಸನಗಳಲ್ಲಿ ಈ ಅಧಿಕಾರಿಗಳು ಬೌದ್ಧ ಧರ್ಮದ ಉಳಿವಿಗೆ ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿದ್ದಾರೆ ಎಂಬುದು ದೃಢಪಡುತ್ತದೆ.

**ಶಾಂತಲೆ:** ಈಕೆ ಮಹಾಮಂಡಳೇಶ್ವರನಾಗಿದ್ದ ಚಟ್ಟಯ್ಯನ ಮಡದಿ. ಶಾಂತಲೆಯ ಧಾರ್ಮಿಕ ಪ್ರವೃತ್ತಿ, ಪತಿನಿಷ್ಠೆಯನ್ನು ಶಾಸನದ ಈ ಸಾಲುಗಳು ವಿಶೇಷವಾಗಿ ಬಣ್ಣಿಸಿವೆ:

**ಸ್ಥಿರಗಂಭೀರ ಉದಾತ್ತಸದ್ಗುಣ ಸದಾಚಾರತ್ವಮೆಂಬೀ ಗುಣೋ**
**ನ್ನತಿಯಂ ತಾಳ್ದಿ ಮಹೇಶ್ವರಾಗಮ ಜಿನಶ್ರೀಧರ್ಮ್ಮ ಸದ್ವೈಷ್ಣವಾ**
**ಶ್ರಿತ ಚಾತುರ್ಯೆಗೆ ಕಾನ್ತೆ ಶಾನ್ತಲೆಗೆ ಪೇಳಾರುಂ ಸಮಂ ಬಪ್ಪರೇ.**

ಶೈವ, ಜೈನ, ವೈಷ್ಣವ, ಬೌದ್ಧ– ಈ ನಾಲ್ಕು ಧರ್ಮಗಳ ಬೆಳವಣಿಗೆಗೆ ಶ್ರಮಿಸಿದ ಶಾಂತಲೆಯು ಗಾಂಭೀರ್ಯ, ಉದಾತ್ತತೆ, ಸದ್ಗುಣ, ಸದಾಚಾರಗಳಲ್ಲಿ ಸದಾಕಾಲ ಸ್ಥಿರತೆಯನ್ನು ಶ್ರೇಷ್ಠತೆಯನ್ನು ಕಾಯ್ದುಕೊಂಡು ಬಂದವಳು. ಇಂತಹ ಶಾಂತಲೆಗೆ ಸರಿಸಮಾನರಾದವರು ಯಾರು ಎಂಬುದು ಈ ಶಾಸನ ಕವಿಯ ಪ್ರಶ್ನೆ.[5]

ಹೀಗೆ ಹೊಯ್ಸಳ ಮಹಾಮಂಡಳೇಶ್ವರರು ತಾವು ಇತರ ಧರ್ಮಗಳಿಗೆ ಸೇರಿದವರಾಗಿದ್ದರೂ ಆಡಳಿತದ ದೃಷ್ಟಿಯಿಂದ ಎಲ್ಲಾ ಧರ್ಮಗಳಿಗೂ ಸಹಕಾರವನ್ನು ನೀಡಿದವರೇ ಆಗಿದ್ದಾರೆ. ದೊರೆತಿರುವ ಕೆಲವೇ ಕೆಲವು ಉದಾಹರಣೆಗಳು ಕೂಡ ಇವರ ಕಾಲದಲ್ಲಿ ಬೌದ್ಧ ಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿ ಅಲ್ಲವಾದರೂ ಕ್ವಚಿತ್ತಾಗಿ ಬಳಕೆಯಲ್ಲಿತ್ತು ಎಂಬುದನ್ನು ತಿಳಿಸುತ್ತದೆ. ಬಹುಶಃ ಜನರಿಗೆ ಆ ಧರ್ಮದ ಅವಶ್ಯಕತೆ ಇದ್ದಿದ್ದೇ ಆದರೆ ಇವರೂ ಕೂಡ ವಿಶೇಷವಾದ ಪ್ರೋತ್ಸಾಹವನ್ನು ನೀಡಬಹುದಾಗಿತ್ತು. ಹಿಂದಿನಿಂದಲೂ ಬಂದಿದ್ದ ಶೈವಧರ್ಮವೂ ಕೂಡ ಕವಲೊಡೆದು ವಿಸ್ತೃತವಾಗುತ್ತಿದ್ದಾಗ, ಜೈನಧರ್ಮವು ಅರಸೊತ್ತಿಗೆಯೊಂದಿಗೆ ಮಿಳಿತವಾಗಿದ್ದ ಕಾರಣದಿಂದ, ಶ್ರೀವೈಷ್ಣವ ಧರ್ಮವು ತನ್ನ ವಿಸ್ತೃತತೆಯೊಂದಿಗೆ ಆಳರಸರ ಹಾಗೂ ಅಧಿಕಾರಿಗಳೇ ಕೈಹಿಡಿದಿದ್ದರಿಂದಲೂ ಬಹುಶಃ ಹೊಯ್ಸಳ ಮಹಾಮಂಡಳೇಶ್ವರರ ಕಾಲದಲ್ಲಿ ಬೌದ್ಧ ಧರ್ಮವು ಮುನ್ನೆಲೆಗೆ ಬರಲು ವಿಫಲವಾಗಿರಬಹುದು. ಇದಕ್ಕೆ ಕಾರಣವೂ ಉಂಟು ಬೌದ್ಧಧರ್ಮವು ಆಚರಣೆಯ ದೃಷ್ಟಿಯಿಂದ ಸಾಮಾಜಿಕರಿಗೆ ಕಡುಕಷ್ಟಕರವಾಗಿದ್ದವು ಎಂದು ತಿಳಿಯಬಹುದು. ಆದರೆ ಇದಕ್ಕೆ ಯಾವುದೇ ರೀತಿಯಲ್ಲೂ ಈ ಹೊಯ್ಸಳ ಮಹಾಮಂಡಳೇಶ್ವರರು ಕಾರಣರಲ್ಲ ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಇಲ್ಲಿ ಬೌದ್ಧಧರ್ಮವನ್ನು ಪಾಲಿಸುತ್ತಿದ್ದ ಜನರ ಸಂಖ್ಯೆಯೂ ತುಂಬಾ ಕಡಿಮೆಯಿದ್ದುದರಿಂದ ಉಲ್ಲೇಖಗಳೂ ಕೂಡ ಕಡಿಮೆಯಿರಬಹುದು ಎಂದೆನಿಸುತ್ತದೆ. ಆಳರಸರಿಗೆ ಹೋಲಿಸಿದರೆ ಬೌದ್ಧಧರ್ಮದ ಉಲ್ಲೇಖಗಳು ಮಹಾಮಂಡಳೇಶ್ವರರ ಶಾಸನಗಳಲ್ಲಿಯೇ ಹೆಚ್ಚಾಗಿ ಕಂಡುಬರುವುದು ವಿಶೇಷವಾದ ಸಂಗತಿಯಾಗಿದೆ.

**7.2. ಜೈನಧರ್ಮ:**

ಕರ್ನಾಟಕದಲ್ಲಿ ಅತ್ಯಂತ ಪುರಾತನ ಕಾಲದಿಂದಲೂ ಜೈನಧರ್ಮದ ಪಾತ್ರ ಹಾಗೂ ಪ್ರಭಾವ ಸುಸ್ಪಷ್ಟ. ಕರ್ನಾಟಕದಲ್ಲಿ ಆಳಿದ ಅರಸುಮನೆತನಗಳಾದ ಕದಂಬ, ಚಾಳುಕ್ಯ, ರಾಷ್ಟ್ರಕೂಟ, ಗಂಗ, ಮೊದಲಾದವರಲ್ಲದೆ ನಮ್ಮ ಅಭ್ಯಾಸದ ಕಾಲಾವಧಿಯಲ್ಲಾಳಿದ ಪ್ರಧಾನ ಅರಸುಮನೆತನವಾದ ಹೊಯ್ಸಳರು, ಅವರ ಸಾಮಂತವರ್ಗಕ್ಕೆ ಸೇರಿದ ರಟ್ಟರು ಹಾಗೂ ಸಾಂತರರೂ ಜೈನಮತಕ್ಕೆ ಒಂದಿಲ್ಲೊಂದು ಬಗೆಯಲ್ಲಿ ಪ್ರೋತ್ಸಾಹಕೊಟ್ಟು ರಕ್ಷಿಸಿ ಪೋಷಿಸಿಕೊಂಡು ಬಂದರು. ಅಂತೆಯೇ ಹೊಯ್ಸಳರ ಕಾಲದಲ್ಲಿ ವಿವಿಧ ಪ್ರದೇಶಗಳ ಆಡಳಿತದ ಅಧಿಕಾರ ಚುಕ್ಕಾಣಿ ಹಿಡಿದಿದ್ದ ಹೊಯ್ಸಳ ಮಹಾಮಂಡಳೇಶ್ವರರಲ್ಲಿ ಅನೇಕರು ಜೈನ ಧರ್ಮಕ್ಕೆ ವಿಶಿಷ್ಟವಾದ ಕೊಡುಗೆಗಳನ್ನು ನೀಡಿರುವುದನ್ನು ಅವರ ಶಾಸನಗಳು ಮತ್ತು ಅವರು ಪೋಷಿಸಿದ ಸಾಹಿತ್ಯ ಕೃತಿಗಳಿಂದ ಅರಿಯಬಹುದು. ಅಂತಹ ಹೊಯ್ಸಳ ಅಧಿಕಾರಿಗಳು ಮತ್ತು ಅವರು ಜೈನ ಧರ್ಮಕ್ಕೆ ನೀಡಿದ ಕೊಡುಗೆಗಳನ್ನು ಈ ಮುಂದಿನಂತೆ ಮಹಾಮಂಡಳೇಶ್ವರರ ಮೂಲಕವೇ ತಿಳಿದುಕೊಳ್ಳಬಹುದು.

**ಮಹಾಮಂಡಳೇಶ್ವರ ಗಂಗರಾಜ:**

'ಗೋತ್ರಪವಿತ್ರಂ', 'ಬುಧಜನಮಿತ್ರ,' 'ಶ್ರೀಜೈನಧರ್ಮಾಮೃತಾಂಬುಧಿ ಪ್ರವರ್ಧನಸುಧಾಕರಂ', 'ಸಮ್ಯುಕ್ತ್ವರತ್ನಾಕರಂ', 'ಆಹಾರಾಭಯಭೈಶಜ್ಯ ಶಾಸ್ತ್ರದಾನ ವಿನೋದಂ', 'ಭವ್ಯಜನ ಹೃದಯ ಪ್ರಮೋದಂ', ಎಂಬೀ ಬಿರುದುಗಳು ಗಂಗರಾಜನ ಜೈನಧಾರ್ಮಿಕ ಶ್ರದ್ಧೆಯನ್ನು ನಮಗೆ ಅರಹುತ್ತದೆ. ಗಂಗರಾಜನು ಹಂತಹಂತವಾಗಿ ಆಡಳಿತದಲ್ಲಿ ಪ್ರಬಲನಾಗಿ ರೂಪುಗೊಂಡ ಬಗೆಯನ್ನು ಕೂಡ ಈ ಬಿರುದುಗಳು ನಮಗೆ ತಿಳಿಸುತ್ತವೆ. ಕ್ರಮೇಣ ದಂಡನಾಯಕನಾಗಿದ್ದವನು ಮಹಾಪ್ರಚಂಡ ದಂಡನಾಯಕನಾಗಿ, ಮಹಾಸಾಮಂತಾಧಿ ಪತಿಯಾಗಿ ಕಂಗೊಳಿಸಿದುದನ್ನು ತಿಳಿಸುತ್ತವೆ. ಇದು ಗಂಗರಾಜನ ರಾಜಕೀಯ ಸಾಧನೆಗಳನ್ನು ತಿಳಿಸುವುದರ ಜೊತೆಗೆ ಅವನ ಜೈನಧರ್ಮ ನಿಷ್ಠೆಯನ್ನು ಅಪ್ರತಿಮವಾಗಿ ತೋರಿಸುತ್ತದೆ. ಆಹಾರ, ಅಭಯ, ಭೈಷಜ್ಯ, ಶಾಸ್ತ್ರ ದಾನಗಳನ್ನು ವಿನೋದದಿಂದ ಇವನು ಆಚರಿಸುತ್ತಿದ್ದನು ಎಂಬುದನ್ನು ಆತನು ಶ್ರವಣಬೆಳಗೊಳವನ್ನು ಅಭಿವೃದ್ಧಿಗೊಳಿಸಿದ ರೀತಿಯಿಂದ ನಾವು ತಿಳಿದುಕೊಳ್ಳಬಹುದು. ಗಂಗರಾಜನೇ ಹಾಕಿಸಿರುವ ಶಾಸನಗಳಲ್ಲಿ ರಾಜಕೀಯ ಪ್ರಾತಿನಿಧ್ಯಕ್ಕಿಂತ ಅವನ ಧಾರ್ಮಿಕ ಪ್ರಭಾವಗಳೇ ಹೆಚ್ಚು ವರ್ಣಿತವಾಗಿವೆ. ಇದು ಅವನ ಧಾರ್ಮಿಕ ಪ್ರಜ್ಞೆಯ ಮಹಾನ್ ದ್ಯೋತಕವಾಗಿವೆ

ಗಂಗರಾಜನು ಪರಮಜಿನಭಕ್ತನಾಗಿದ್ದನು. ಇವನ ಕಾಲದಲ್ಲಿ ಜೈನಧರ್ಮವು ಅತ್ಯಂತ ಉಚ್ಛ್ರಾಯ ಹಂತವನ್ನು ತಲುಪಲು ಇವನು ಮುಖ್ಯ ಕಾರಣಕರ್ತನಾದನು. ವಿಷ್ಣುವರ್ಧನನು ಜೈನಧರ್ಮದಿಂದ ವೈಷ್ಣವ ಧರ್ಮದತ್ತ ಆಕರ್ಷಿತನಾಗಿದ್ದರೂ ಜೈನಧರ್ಮವನ್ನು ಗೌರವಿಸಲು ಕಾರಣನೇ ಗಂಗರಾಜನೆಂದರೆ ತಪ್ಪಲ್ಲ. ಅನೇಕ ವೈಷ್ಣವ ದೇವಾಲಯಗಳು ಈ ಕಾಲದಲ್ಲಿ ನಿರ್ಮಾಣವಾಗುತ್ತಿದ್ದಾಗ ಜೈನಧರ್ಮವನ್ನು ಈ

ಪರಿಸರದಲ್ಲಿ ಪಸರಿಸಿದವನು ಗಂಗರಾಜನೇ. ನಾಡಿನೆಲ್ಲಡೆ ಇದ್ದ ಬಸದಿಗಳನ್ನು ಜೀರ್ಣೋದ್ಧಾರಗೊಳಿಸುವುದರ ಮೂಲಕ ಹಾಗೂ ಹೊಸದಾದ ಬಸದಿಗಳನ್ನು ನಿರ್ಮಿಸುವುದರ ಮೂಲಕ, ಬೆಳಗೊಳದ ಗೊಮ್ಮಟನ ಮೂರ್ತಿಗೆ ಸುತ್ತಾಲಯವನ್ನು ಮಾಡಿಸುವ ಮೂಲಕ, ಬೆಳಗೊಳ ಗ್ರಾಮವನ್ನು ಹಾಗೂ ಬೆಳಗೊಳದ ಸುತ್ತಲೂ ಅನೇಕ ಗ್ರಾಮಗಳನ್ನು ನೆಲೆಗೊಳಿಸಿ ಇಲ್ಲೆಲ್ಲಾ ಬಸದಿಗಳನ್ನು ನೆಲೆಗೊಳಿಸುವುದರ ಮೂಲಕ ಇವನು ಜೈನಧರ್ಮ, ಮತ, ವಾಸ್ತುಶಿಲ್ಪಕ್ಕೆ ಗುರುತರವಾದ ಕೊಡುಗೆಗಳನ್ನು ನೀಡಿದನು.

ಇಂದಿಗೆ ನಾವು ಶ್ರವಣಬೆಳಗೊಳದಲ್ಲಿ ಕಾಣುವ ಹಲವು ರಚನೆಗಳು ಗಂಗರಾಜನ ಕಾಲದಲ್ಲಿ ಅಸ್ತಿತ್ವದಲ್ಲಿಯೇ ಇರಲಿಲ್ಲ. ಇಡೀ ಬೆಳಗೊಳ ಪರಿಸರವನ್ನು ಒಮ್ಮೆ ಶುದ್ಧವಾಗಿ ಪ್ರಾಕೃತಿಕವಾಗಿ ಕಲ್ಪಿಸಿಕೊಳ್ಳೋಣ. ಎರಡು ನೈಸರ್ಗಿಕ ಬೆಟ್ಟಗಳ ನಡುವೆ ಒಂದು ಪರಿಶುದ್ಧವಾದ ಕೊಳವಿತ್ತು. ಇದಕ್ಕೆ ಯಾವುದೇ ಆವರಣವಿರಲಿಲ್ಲ. ಚಿಕ್ಕಬೆಟ್ಟವಾದ ಚಂದ್ರಗಿರಿಗೆ ಹಲವು ಶತಮಾನಗಳ ಧಾರ್ಮಿಕ ಇತಿಹಾಸದೊಂದಿಗೆ ರಾಜಕೀಯ ಇತಿಹಾಸವೂ ಇತ್ತು. ಅಲ್ಲಿ ಕೆಲವೇ ಕೆಲವು ಸ್ಮಾರಕಗಳು ಇದ್ದವು. ದೊಡ್ಡಬೆಟ್ಟವು ಏಕಶಿಲಾಬೆಟ್ಟವಾಗಿ ಅತ್ಯಂತ ಕಡಿದಾದುದಾಗಿದ್ದರಿಂದ ಅದಕ್ಕೆ ಯಾವುದೇ ವಿಶೇಷವಾದ ಸ್ಥಾನಮಾನಗಳು ಇರಲಿಲ್ಲವಾಗಿತ್ತು. ದೊಡ್ಡಬೆಟ್ಟಕ್ಕೆ ಪ್ರಾಶಸ್ತ್ಯ ಬಂದದ್ದೇ ಚಾವುಂಡರಾಯನು ಗೊಮ್ಮಟ ಮೂರ್ತಿಯನ್ನು ಮಾಡಿಸಿದ ಮೇಲೆ. ಚಾವುಂಡರಾಯನು ಇಂತಹ ಅದ್ಭುತವಾದ ಶಿಲ್ಪವನ್ನು ಮಾಡಿಸಿದ ಮೇಲೆಯೂ ಸುಮಾರು ಒಂದು ಶತಮಾನದವರೆಗೆ ಬೆಳಗೊಳಕ್ಕೆ ಅಂತಹ ಪ್ರಸಿದ್ದಿಯೇನೂ ಬರಲಿಲ್ಲ. ಇದನ್ನು ಮನಗಂಡು ಗಂಗರಾಜನು ಈ ಪರಿಸರವನ್ನು ಜನಪ್ರಿಯಗೊಳಿಸಿದನು. ತನ್ನ ಇಡೀ ಕುಟುಂಬವೇ ಬೆಳಗೊಳದ ಅಭ್ಯುದಯಕ್ಕೆ ದುಡಿಯಲು ಗಂಗರಾಜನೇ ಮುಖ್ಯಕಾರಣಕರ್ತನಾಗಿದ್ದಾನೆ. ಬಹುಶಃ ಗಂಗರಾಜನ ಕುಟುಂಬವು ಬೆಳಗೊಳದಲ್ಲಿಯೇ ವಾಸಿಸುತ್ತಿದ್ದಿತು ಎಂದು ಊಹಿಸಲೂಬಹುದು.

ಕೇವಲ ಇಷ್ಟೇ ಅಲ್ಲದೇ ತನ್ನ ಪ್ರಭಾವದಿಂದ ಹಲವಾರು ಜೈನಯತಿಗಳನ್ನೂ ಇಲ್ಲಿಗೆ ಕರೆತರೆಸಿ ಅವರೆಲ್ಲರಿಗೂ ದಾನಗಳನ್ನು ತಾನೇ ನೀಡಿ, ತನ್ನ ಬಂಧುಗಳಿಂದ ನೀಡಿಸಿ, ತನ್ನ ಸಹಚರರಾದ ಇನ್ನಿತರ ದಂಡನಾಯಕರಿಂದಲೂ, ಪಟ್ಟದ ರಾಣಿ ಶಾಂತಲೆ ಹಾಗೂ ವಿಷ್ಣುವರ್ಧನ ಮಹಾರಾಜನಿಂದಲೂ ಕೊಡಿಸಿ ಅವರನ್ನು ಇಲ್ಲಿ ನೆಲೆಗೊಳಿಸಿದನು. ಜೊತೆಗೆ ಅನೇಕ ವರ್ತಕರು, ಶ್ರೀಮಂತರನ್ನು ಒಡಂಬಡಿಸಿ ಇಲ್ಲಿನ ಮುನಿಶ್ರೇಷ್ಠರ ಜೀವನ ನಿರ್ವಹಣೆಯನ್ನು ಸುಗಮಗೊಳಿಸಿದನು. ಮುನಿಗಳಿಗೆ ಮಠಗಳನ್ನು ಕಟ್ಟಿಸಿಕೊಡುವುದರ ಜೊತೆಗೆ ಹಲವಾರು ಗ್ರಾಮಗಳನ್ನು ನಿರ್ಮಿಸಿ, ಜೈನ ಮತೀಯರನ್ನು ನೆಲೆಗೊಳಿಸಿ ಅವರೆಲ್ಲರ ಎಲ್ಲಾ ರೀತಿಯ ರಾಜಸ್ವಕ್ಕೆ ಕಟ್ಟಬೇಕಾಗಿದ್ದ ತೆರಿಗೆಗಳನ್ನು ಮಠಕ್ಕೆ ಕಟ್ಟುವಂತಹ ವ್ಯವಸ್ಥೆಯನ್ನು ಕೂಡ ಮಾಡಿದನು. ಇದರಿಂದ ಜೈನಮಠಕ್ಕೆ ಬಲ ಬಂದಂತಾಯಿತು. ನಾಡಿನ ಶ್ರೀಮಂತ ಮಠಗಳಲ್ಲಿ ಬೆಳಗೊಳದ ಮಠವೂ ಕೂಡ ಒಂದಾಗಲು ಗಂಗರಾಜನು ನೀಡಿದ ಒತ್ತಾಸೆಯೇ ಬಹುದೊಡ್ಡ ಕಾರಣವಾಗಿದೆ.

ಚಂದ್ರಗಿರಿ ಎಂಬ ಚಿಕ್ಕಬೆಟ್ಟದಲ್ಲಿ ಈಗಾಗಲೇ ಅನೇಕ ಮಹಾಮಹಿಮರು ಸಲ್ಲೇಖನವ್ರತವನ್ನು ತೆಗೆದುಕೊಂಡು ಮುಡಿಪಿದ್ದರು. ಕಟವಪ್ರ ಹಾಗೂ ಕಟ್ವಪ್ಪು ಬೆಟ್ಟವೆಂದು ಇದು ಪ್ರಸಿದ್ಧವಾಗಿತ್ತು. ಭದ್ರಬಾಹು ಮತ್ತು ಚಂದ್ರಗುಪ್ತರು ಬೆಳಗೊಳಕ್ಕೆ ಬಂದಿದ್ದ ಐತಿಹ್ಯವು ಆಗಾಗಲೇ ನೆಲೆಗೊಂಡಿತ್ತು. ಚಾವುಂಡರಾಯ ಬಸದಿ ಹಾಗೂ ಚಂದ್ರಗುಪ್ತ ಬಸದಿಗಳು ಚಿಕ್ಕಬೆಟ್ಟದಲ್ಲಿ ಅಸ್ತಿತ್ವದಲ್ಲಿದ್ದವು. ಇಂದಿಗೆ ಹಲವು ಜೀರ್ಣೋದ್ಧಾರಗಳನ್ನು ಕಂಡಿರುವ ಚಂದ್ರಪ್ರಭ ಬಸದಿಯು ಅಂದಿಗೆ ತನ್ನ ಮೂಲಸ್ವರೂಪದಲ್ಲಿ ಇದ್ದಿರಬಹುದು. ಇದನ್ನು ಗಂಗದೊರೆ ಶಿವಮಾರನು ಸುಮಾರು 780ರಲ್ಲಿ ನಿರ್ಮಿಸಿದ್ದನು. ಇದನ್ನು ಅಂದಿಗೆ ವಕ್ರಗಚ್ಛದ ಬಸದಿ ಎಂದು ಕರೆಯಲಾಗುತ್ತಿತ್ತು.

ಇಂದಿಗೆ ಎರಡುಕಟ್ಟೆ ಬಸದಿಯೆಂದು ಕರೆಯಲಾಗುವ ಬಸದಿಯು ಈಗಾಗಲೇ 8ನೆಯ ಶತಮಾನದಲ್ಲಿಯೇ ನಿರ್ಮಾಣಗೊಂಡಿತ್ತು. ಇದೇ ಸಮಯದಲ್ಲಿ ಆಜಿಗಣದವರು ನಿರ್ಮಿಸಿದ ಮಜ್ಜಿಗಣ್ಣ ಬಸದಿಯು ಕಂಗೊಳಿಸುತ್ತಿತ್ತು. ಇದರೊಂದಿಗೆ ಸುಪಾರ್ಶ್ವನಾಥ ಬಸದಿ, ತೇರಿನ ಬಸದಿಗಳಷ್ಟೇ ಅಂದಿನ ಧಾರ್ಮಿಕ ತಾಣಗಳಾಗಿದ್ದವು. ಇದರೊಂದಿಗೆ ರಾಷ್ಟ್ರಕೂಟ ದೊರೆ ನಾಲ್ಕನೆಯ ಇಂದ್ರನ ಸ್ಮಾರಕ ಹಾಗೂ ಕೂಗೆ ಬ್ರಹ್ಮದೇವರ ಸ್ತಂಭ ಎಂದು ಕರೆಯಲಾಗುವ ಮಾರಸಿಂಹನ ಮಾನಸ್ತಂಭಗಳು ರಾಜಕೀಯವಾಗಿ ತನ್ನನ್ನು ತಾನು ವಿಸ್ತರಿಸಿಕೊಳ್ಳುವುದರ ಜೊತೆಗೆ ಇಲ್ಲಿನ ಆಸ್ತಿಕ ಬಂಧುಗಳಿಗೆ ಇಂಬು ನೀಡುತ್ತಿತ್ತು. ದೊಡ್ಡಬೆಟ್ಟದಲ್ಲಿ ಗೊಮ್ಮಟ ಮೂರ್ತಿ ಹಾಗೂ ಅಖಂಡ ಬಾಗಿಲುಗಳನ್ನು ಹೊರತುಪಡಿಸಿ ಯಾವುದೇ ಸ್ಮಾರಕಗಳು ಅಸ್ತಿತ್ವದಲ್ಲಿ ಇರಲಿಲ್ಲ. ಇದನ್ನು ಮನಗಂಡ ಗಂಗರಾಜನು ಬಹುಶಃ ತನ್ನ ಜಾಗದಿಂದ ಬೆಳಗೊಳ ಪರಿಸರಕ್ಕೆ ಬಂದು ಇಲ್ಲೊಂದು ಸುಸಜ್ಜಿತವಾದ ಗ್ರಾಮವನ್ನು ರೂಪಿಸಿದನು. ಬಹುಶಃ ಇದೇ ಸಂದರ್ಭದಲ್ಲಿ ತನ್ನ ಪರಿವಾರವನ್ನು ಕೂಡ ಬೆಳಗೊಳದಲ್ಲಿ ನೆಲೆಗೊಳಿಸಿರಬೇಕು. ಅವರೆಲ್ಲರಿಂದಲೂ ಚಿಕ್ಕಬೆಟ್ಟದ ಮೇಲೆ ಹಲವಾರು ನಿರ್ಮಾಣಗಳು ಗಂಗರಾಜನ ಪ್ರೋತ್ಸಾಹದಿಂದ ನಿರ್ಮಾಣಗೊಂಡವು. ಗಂಗರಾಜನ ಸಾಧನೆಗಳಲ್ಲಿ ಅತ್ಯಂತ ಪ್ರಮುಖವಾದ ಸಂಗತಿಯನ್ನು ತಿಳಿಸುವ ಶಾಸನ ಪದ್ಯವೊಂದಿದೆ.[6] ಅದೆಂದರೆ–

**ಗಂಗವಾಡಿಯ ಬಸದಿಗಳೆನಿತೊಳವನಿತಂ ತಾನೆಯ್ದೆ ಪೊಸಯಿಸಿದಂ**
**ಗಂಗವಾಡಿಯ ಗೊಮ್ಮಟದೇವರ್ಗ್ಗೆ ಸುತ್ತಾಲಯಮನೆಯ್ದೆ ಮಾಡಿಸಿದಂ**
**ಗಂಗವಾಡಿಯ ತಿಗುಳರಂ ಬೆಂಕೊಣ್ಡು ವೀರಗಂಗಂಗೆ ನಿಮಿರ್ಚ್ಚಿಕೊಟ್ಟಂ**
**ಗಂಗರಾಜನಾ ಮುನ್ನಿನ ಗಂಗರ ರಾಯಂಗಂ ನೂರ್ಮ್ಮಡಿ ಧನ್ಯನಲ್ತೆ**

ಗಂಗವಾಡಿಯಲ್ಲಿ ಎಷ್ಟು ಜಿನಾಲಯಗಳಿವೆಯೋ ಅಷ್ಟನ್ನೂ ಈ ಗಂಗರಾಜನು ಜೀರ್ಣೋದ್ಧಾರ ಮಾಡಿಸಿದ್ದನು. ಗೊಮ್ಮಟಮೂರ್ತಿಗೆ ಸುತ್ತಾಲಯವನ್ನು ಮಾಡಿಸಿದನು. . . . .

**ಎತ್ತಿದನೆಲ್ಲಿಗಲ್ಲಿ ನೆಲೆವೀಡನೆ ಮಾಡಿದನೆಲ್ಲಿಗಲ್ಲಿ ಕ**
**ಣ್ಡತ್ತಿದುದೆಲ್ಲಿಗಲ್ಲಿ ಮನಮಾವೆಡೆಯೆಯ್ದಿದುದೆಲ್ಲಿಗಲ್ಲಿ**

**ಪತ್ತಿನ ಜೈನಗೇಹಮನೆ ಮಾಡಿಸೆ ದೇಶದೊಳಲ್ಲಿಗಲ್ಲಿಗೆ**

**ತ್ತೆತ್ತಲು ಮಾವಗಂ ಪಳೆಯ ಮಾಳ್ಕೆವೊಲಾದುದು ಗಂಗರಾಜನಿಂ** [7]

ಗಂಗರಾಜನು ಹೋದ ಕಡೆಯಲೆಲ್ಲ, ತಂಗಿದ್ದ ಕಡೆಯಲ್ಲೆಲ್ಲ, ದೃಷ್ಟಿಬಿದ್ದ ಕಡೆಯಲ್ಲೆಲ್ಲ, ಇವನ ಮನಸ್ಸು ಹರಿದ ಕಡೆಯಲ್ಲೆಲ್ಲ ಜಿನಾಲಯಗಳು ಉದ್ಭವಿಸಿದವು. ಇವರಿಂದ ಮತ್ತೆ ಜೈನಧರ್ಮದ ಗತವೈಭವವು ಮರುಕಳಿಸಿತು.

**ಜಿನಧರ್ಮಾಗ್ರಣಿಯತ್ತಿಮಬ್ಬರಸಿಯಂ ಲೋಕಂಗುಣಂಗೊಳ್ವುದೇ**

**ಕೆನೆ ಗೋದಾವರಿ ನಿಂದ ಕಾರಣದಿನೀಗಳ್ ಗಂಗದಂಡಾಧಿನಾ**

**ಥನುಮಂ ಕಾವೇರಿ ಪೆರ್ಚ್ಜಿ ಸುತ್ತಿ ಪಿರಿದುಂ ನೀರೊತ್ತಿಯುಂ ಮಟ್ಟಿತಿ**

**ಲ್ಲೆನೆ ಸಂಮ್ಯಕ್ತ್ವದ ಪೆಂಪನೇಂ ನೆಱಿಯೆ ಬಂಣಿಪ್ಪಂಣನೇವಂಣಿಪಂ**[8]

ಗಂಗಾದೇವಿಯು ಇಬ್ಭಾಗವಾಗಿ ದಾರಿ ಬಿಟ್ಟುದರಿಂದ ಅತ್ತಿಮಬ್ಬೆಯನ್ನು ಲೋಕ ಕೊಂಡಾಡುವುದು. ಅಂತೆಯೇ ಗಂಗರಾಜನನ್ನು ಕಂಡ ತುಂಬು ಪ್ರವಾಹದ ಕಾವೇರಿಯು ಅವನು ನದಿಯನ್ನು ದಾಟುವ ಸಂದರ್ಭದಲ್ಲಿ ಅವನನ್ನು ಸೋಕಲಿಲ್ಲ. ಈ ಸನ್ನಿವೇಶವು ಗಂಗರಾಜನ ಸಮ್ಯಕ್ತ್ವದ ಮಹತ್ವವಾಗಿದೆ ಎಂದು ಶಾಸನವೊಂದು ಆತನನ್ನು ಹೊಗಳಿದೆ. ಇದು ಗಂಗರಾಜನಿಗೆ ಅತ್ತಿಮಬ್ಬೆಯ ಜಿನಧರ್ಮ ಸೇವೆಯ ಪರಿಚಯವಿದ್ದ ಸಂಗತಿಯನ್ನು ತಿಳಿಸುತ್ತದೆ. ಬಹುಶಃ ಗಂಗರಾಜನು ಅತ್ತಿಮಬ್ಬೆಯ ಪ್ರಭಾವಕ್ಕೆ ಒಳಗಾಗಿರಬಹದು.

ಗಂಗರಾಜನ ಪ್ರೋತ್ಸಾಹದಿಂದ ಕ್ರಿ.ಶ. 1117ರಲ್ಲಿ ಬೆಳಗೊಳದ ಚಿಕ್ಕಬೆಟ್ಟದಲ್ಲಿ ರಾಜಶ್ರೇಷ್ಠಿಗಳಾದ ಪೊಯ್ಸಳಸೆಟ್ಟಿ, ನೇಮಿಸೆಟ್ಟಿಯರ ತಾಯಿಯರಾದ ಮಾಚಿಕಬ್ಬೆ ಹಾಗೂ ಶಾಂತಿಕಬ್ಬೆಯರು ತೇರಿನ ಬಸದಿಯನ್ನು ನಿರ್ಮಿಸಿದರು.[9] ಗಂಗರಾಜನ ಸಹಾಯವಿಲ್ಲದಿದ್ದರೆ ಬಹುಶಃ ಈ ಬಸದಿಯ ನಿರ್ಮಾಣವಾಗುವುದು ಕಷ್ಟಕರವಾಗಿದ್ದಿತು. ಅತ್ಯಂತ ವಿಶೇಷವೆಂದರೆ ಕರ್ನಾಟಕದಲ್ಲಿ ಬಾಹುಬಲಿಗೆಂದು ನಿರ್ಮಿಸಿದ ಕೆಲವೇ ಬಸದಿಗಳಲ್ಲಿ ಇದಕ್ಕೆ ವಿಶೇಷವಾದ ಸ್ಥಾನವಿದೆ.

ಗಂಗರಾಜನು ತನ್ನ ತಾಯಿಯಾದ ಪೋಚಿಕಬ್ಬೆಯ ಸ್ಮಾರಕವಾಗಿ ಬೆಳಗೊಳದ ಚಿಕ್ಕಬೆಟ್ಟದಲ್ಲಿ ಕ್ರಿ.ಶ. 1118ರಲ್ಲಿ ಕತ್ತಲೆ ಬಸದಿಯನ್ನು ನಿರ್ಮಿಸಿದನು.[10] ಇದೇ ಪೋಚಿಕಬ್ಬೆಯ ಸ್ಮೃತಿಗಾಗಿ ಕ್ರಿ. ಶ. 1120–23ರ ನಡುವೆ ಇಂದಿಗೆ ಗಂಗರಾಜ ಮಂಟಪವೆಂದು ಕರೆಯಲಾಗುವ ಮಂಟಪವನ್ನೂ ಕೂಡ ನಿರ್ಮಿಸಿದನು.[11] ಇಂತಹ ಗಂಗರಾಜನು ತನ್ನ ಗುರು ಶುಭಚಂದ್ರ ಸಿದ್ಧಾಂತದೇವರ ಕಾಲ್ತೊಳೆದು ಪರಮ ಗ್ರಾಮವನ್ನು 28–01–1118ರಲ್ಲಿ ದಾನವಿತ್ತನು.[12] ಪರಮ ಗ್ರಾಮವು ಮೂಡಣದಲ್ಲಿ ಕಲ್ಲಹಳ್ಳ, ಪಡುವಲಿನಲ್ಲಿ ಬೆಕ್ಕ ಮತ್ತು ಬೆಳಗೊಳವನ್ನು ಹೋಗುವ ದಾರಿವರೆಗೆ, ಬಡಗಣದಲ್ಲಿ ನೇಜಿಲಕೆರೆ, ತೆಂಕಣದಲ್ಲಿ ಹೊಸಗೆರೆ ಮತ್ತು ಅಯ್ಕನಕಟ್ಟದ ತಾಇವಳ್ಳದವರೆಗೂ ವಿಸ್ತರಿಸಿತ್ತು. ಇದು ಗಂಗರಾಜನು ನಗರೀಕರಣ ಪ್ರಕ್ರಿಯೆಗೆ ಹೇಗೆ ಇಂಬುಕೊಟ್ಟನು ಎಂಬುದನ್ನು ಕೂಡ ತಿಳಿಸುತ್ತದೆ. ಗಂಗರಾಜನ ಮಡದಿಯಾದ ಲಕ್ಷ್ಮೀಮತಿ ಹಾಗೂ

ತಾಯಿಯಾದ ಪೋಚಿಕಬ್ಬೆಯರು ಅಪರಿಮಿತ ಭಕ್ತಿಯಿಂದ ಕ್ರಿ.ಶ. 1118ರಲ್ಲಿ ಇಂದಿರಾಕುಲವೆಂಬ ಜಿನಾಲಯವನ್ನು ನಿರ್ಮಿಸಿದರು. ಇದು ಈಗಿನ ಚಿಕ್ಕಬೆಟ್ಟದಲ್ಲಿರುವ ಶಾಸನ ಬಸದಿಯಾಗಿದೆ.[13]

ಗಂಗರಾಜನು ಅರಸನಿಂದ ಗೋವಿಂದವಾಡಿಯನ್ನು ದಾನವಾಗಿ ಪಡೆದು ಅದನ್ನು ಗೊಮ್ಮಟದೇವರಿಗೆ ಮತ್ತು ಪಾರ್ಶ್ವದೇವರಿಗೆಂದು ಮೂಲಸಂಘದ ದೇಶಿಯಗಣದ ಪುಸ್ತಕಗಚ್ಛದ ಶ್ರೀ ಶುಭಚಂದ್ರಸಿದ್ಧಾಂತದೇವರಿಗೆ ದಾನವಾಗಿ ನೀಡಿದನು. ಗೊಮ್ಮಟಪುರದ ಪಟ್ಟಣಸ್ವಾಮಿಯಾದ ಮಲ್ಲಿಸೆಟ್ಟಿ, ಗಂಡನಾರಾಯಣಸೆಟ್ಟಿ ಮತ್ತು ಉಳಿದ ವ್ಯಾಪಾರಿಗಳೆಲ್ಲ ಸೇರಿ ಈ ಕರಾರನ್ನು ಮಾಡಿದರು.[14]

ಕೇವಲ ಬೆಳಗೊಳದಲ್ಲಿ ಮಾತ್ರವಲ್ಲದೇ ತನಗೆ ಸೇರಿದ್ದ ಅನೇಕ ತಾಣಗಳಲ್ಲಿ ಜೈನಧರ್ಮವನ್ನು ಉಳಿಸಿ ಬೆಳೆಸಿದ ಕೀರ್ತಿಯೂ ಗಂಗರಾಜನದ್ದೇ ಆಗಿದೆ. ತನಗೆ ಅರಸನು ನೀಡಿದ್ದ ಬಿಂಡಿಗನವಿಲೆ ವೃತ್ತಿಯನ್ನು ತನ್ನ ಗುರು ಮೂಲಸಂಘ ಪುಸ್ತಕಗಚ್ಛದ ಕೊಂಡಾಕುಂದಾನ್ವಯದ ಶುಭಚಂದ್ರ ಸಿದ್ಧಾಂತ ದೇವರಿಗೆ ದಾನವಿತ್ತನು.[15] ಗಂಗರಾಜನು ವಿಷ್ಣುವರ್ಧನನಿಂದ ಪಡೆದ ಗಾಜಲೂರು ನಾಡುಂಗೆಱೆಯೊಳಗಾದ ತಿಪ್ಪೂರ ವೃತ್ತಿಯನ್ನು ಗುರು ಮೂಲಸಂಘ ಕಾಣೂರ್ಗಣ ಮತ್ತು ತಿಂತ್ರೀಣಿ ಗಚ್ಛದ ಮೇಘಚಂದ್ರ ಸಿದ್ಧಾಂತ ದೇವರಿಗೆ ದಾನವಿತ್ತನು.[16]

**ಮತ್ತಿನ ಮಾತವಂತಿರಲಿ ಜೀರ್ಣ್ನ ಜಿನಾಶ್ರಯಕೋಟಿಯಂ ಕ್ರಮಂ**
**ಬೆತ್ತಿರೆ ಮುನ್ನಿನಂತಿರನಿತುರ್ಗ್ಗಳೊಳಂ ನಱಿಮಾಡಿಸುತ್ತಮ**
**ತ್ಯುತ್ತಮಪಾತ್ರದಾನದೊದವಂ ಮೆಱೆವುತ್ತಿರೆ ಗಂಗವಾಡಿತೊಂ**
**ಬತ್ತಱಿರುಸಾಸಿರಂ ಕೊಪಣಮಾದುದು ಗಂಗಣದಂಡನಾಥನಿಂ**

ಕೋಟಿಗಟ್ಟಲೆ ಜಿನಾಲಯಗಳನ್ನು ಗಂಗರಾಜನು ಜೀರ್ಣೋದ್ಧಾರ ಮಾಡುತ್ತಿರಲು ಮತ್ತು ಅತ್ಯುತ್ತಮ ಪಾತ್ರದಾನವನ್ನು ಇವನು ಮಾಡುತ್ತಿರಲು ಗಂಗವಾಡಿ ತೊಂಬತ್ತಾರುಸಾವಿರವೆಲ್ಲ ಕೊಪಣಾಚಲವಾಗಿ ಹೋಯಿತಲ್ಲ! ಎಂದು ಶಾಸನವೊಂದು ಮನದುಂಬಿ ಹೊಗಳುತ್ತದೆ.[17]

ಮೂಲಸಂಘದ ದೇಶಿಯಗಣದ ಪುಸ್ತಕಗಚ್ಛದ ಶ್ರೀ ಶುಭಚಂದ್ರಸಿದ್ಧಾಂತದೇವರ ಶಿಷ್ಯನಾದ ಗಂಗರಾಜನ ಅಣ್ಣ ಹೆಗ್ಗಡೆ ಬಮ್ಮಣಯ್ಯನ ಮಗ ಹಿರಿಯ ಏಚಿಮಯ್ಯನು ಶ್ರವಣಬೆಳಗೊಳದಲ್ಲಿ ಶಾಂತಿನಾಥ ದೇವರನ್ನು ಕ್ರಿ.ಶ. 1117ರಲ್ಲಿ ಪ್ರತಿಷ್ಠಾಪಿಸಿದನು ಮತ್ತು ಬಸದಿಯನ್ನು ನಿರ್ಮಿಸಿದನು.[18] ಗಂಗರಾಜನು ಪರಮ ಗ್ರಾಮದಲ್ಲಿ ಗಂಗಸಮುದ್ರವೆಂಬ ಕೆರೆಯನ್ನು ಕಟ್ಟಿಸಿ ಅದನ್ನು ದೇವರಿಗೆ ದಾನವಿತ್ತನು.[19] ತನ್ನ ಗುರುವಿನ ಮೇಲೆ ಅಪರಿಮಿತವಾದ ಗೌರವವಿದ್ದ ಹಿರಿಯ ದಂಡನಾಯಕನಾದ ಗಂಗರಾಜನು ತನ್ನ ಗುರುಗಳಾದ ಮೂಲಸಂಘದ ಪುಸ್ತಕಗಚ್ಛದ ಕೊಂಡಾಕುಂದಾನ್ವಯದ ಶುಭಚಂದ್ರ ಸಿದ್ಧಾಂತ ದೇವರಿಗಾಗಿ ಚಿಕ್ಕಬೆಟ್ಟದಲ್ಲಿ ಪಾರ್ಶ್ವನಾಥನ ದೇವಾಲಯವನ್ನು ನಿರ್ಮಿಸಿ ಪಾರ್ಶ್ವದೇವನ ಮೂರ್ತಿಯನ್ನು ಪ್ರತಿಷ್ಠಾಪಿಸಿದನು.[20]

ಗಂಗರಾಜನು ಜಯಂಗೊಂಡೇಶ್ವರ ದೇಗುಲಕ್ಕೆ ನೀಡಿದ ಭೂಮಿದಾನವನ್ನು ಶಾಸನವೊಂದು ದಾಖಲಿಸುತ್ತದೆ. ಇದು ಚೋಳರು ನಿರ್ಮಿಸಿದ ದೇಗುಲ. ಛತ್ರವೊಂದಕ್ಕೆ 30 ಪಣಗಳ ದಾನವೊಂದನ್ನು ಸಹ ಇದು ತಿಳಿಸುತ್ತದೆ. ಈ ಕಾಲದಲ್ಲಿ ಪಣವೆಂಬುದೆ ಒಂದು ಚಿನ್ನದ ನಾಣ್ಯವಾಗಿದ್ದು ಗದ್ಯಾಣದ 10ನೆಯ 1 ಭಾಗ ಮತ್ತು 4 ಹಾಗಗಳಿಗೆ ಸಮವಾಗಿತ್ತು. ರಾಜಾದಿತ್ಯನ ವ್ಯವಹಾರಗಣಿತದಲ್ಲಿ ಈ ನಾಣ್ಯದ ಉಲ್ಲೇಖವಿದೆ. ಹೊಯ್ಸಳ ಕಾಲದಲ್ಲಿ ಪಣದ ತೂಕವು 6.2 ಗ್ರೇನಗಳಾಗಿದ್ದವು. ಅರಸಿ ಶಾಂತಲದೇವಿ ಮತ್ತು ಹಿರಿಯ ದಂಡನಾಯಕ ಗಂಗಿಪಯ್ಯರ ಉಪಸ್ಥಿತಿಯಲ್ಲಿ ವಿಷ್ಣುವರ್ಧನನು ನೀಡಿದ ದಾನವನ್ನು ಇದು ತಿಳಿಸುತ್ತದೆ. ಅಂದರೆ ಚೋಳರಿಂದ ಗಂಗವಾಡಿಯನ್ನು ವಶಪಡಿಸಿಕೊಂಡ ನಂತರ ಅಲ್ಲಿನ ಆಸ್ತಿಕರನ್ನು ಅನಾಥರನ್ನಾಗಿಸದೇ ಅವರೆಲ್ಲರಿಗೂ ತಮ್ಮ ಧಾರ್ಮಿಕತೆಯನ್ನು ಮೆರೆಯಲು ಗಂಗರಾಜನು ಅವಕಾಶವನ್ನು ಮಾಡಿಕೊಟ್ಟನು.[21]

ವಿಷ್ಣುವರ್ಧನನು ಆಳುತ್ತಿದ್ದ ಕಾಲದಲ್ಲಿ ಮಹಾಪ್ರಧಾನಿ ಹಿರಿಯ ಮರಿಯಾನೆ ದಂಡನಾಯಕನ ಮಗ ಡಾಕರಸ ದಂಡನಾಯಕನ ಮಗನೂ, ದ್ರೋಹಘರಟ್ಟ ಗಂಗಪ್ಪಯ್ಯ ದಂಡನಾಯಕನೂ, ಬಾಚರಸ ದಂಡನಾಯಕನೂ, ಸೋವರಸ ದಂಡನಾಯಕನ ಅಳಿಯ ಮಹಾಪ್ರಧಾನ ಹಿರಿಯ ಭಂಡಾರಿ ಮರಿಯಾನೆ ದಂಡನಾಯಕನೂ, ಭರತಮಯ್ಯ ದಂಡನಾಯಕನೂ ತುಲಾಪುರುಷ ಮಹಾದಾನವನ್ನು ಮಾಡಿದುದಕ್ಕಾಗಿ ಸವಗೋನಹಳ್ಳಿಯನ್ನು ಅರಸನಿಂದ ಪಡೆದುಕೊಂಡರು, ಇವರು ತನ್ನ ಸ್ವಗ್ರಾಮವಾದ ಸಿಂದಗೆರೆಯಲ್ಲಿ ನಿರ್ಮಿಸಲಾಗಿದ್ದ ಜಿನಾಲಯಕ್ಕೆ ಈ ಗ್ರಾಮವನ್ನು ದಾನವಿತ್ತರು. ಇದಕ್ಕೆ ಮುಖ್ಯಕಾರಣವೆಂದರೆ ಗಂಗರಾಜನು ಬಹುತೇಕ ಜೈನ ಅಧಿಕಾರಿಗಳನ್ನು ಒಂದು ಮಾಡಿದ ವ್ಯಕ್ತಿ. ತಾನು ಬೆಳಗೊಳದಲ್ಲಿ ಕಾರ್ಯನಿರತನಾಗಿದ್ದ ಸಂದರ್ಭದಲ್ಲಿಯೇ ಇನ್ನಿತರ ಅಧಿಕಾರಿಗಳನ್ನು ಬೆಳಗೊಳಕ್ಕೆ ಕರೆಸಿ ಅವರಿಂದ ಕೆಲವು ದಾನಗಳು ಶ್ರೀಕ್ಷೇತ್ರಕ್ಕೆ ಸಂದಾಯವಾಗುವಂತೆ ಮಾಡಿದ್ದು ಇವನ ಜನಾನುರಾಗಿ ಧೋರಣೆಯ ಜೊತೆಗೆ ಇವನು ಎಷ್ಟು ಮಿತ್ರಪ್ರೇಮಿಯಾಗಿದ್ದನು ಎಂದು ನಮಗೆ ತಿಳಿಸುತ್ತದೆ.

**ಹೊಯ್ಸಳಮಂತ್ರಿ ಹುಳ್ಳಮಯ್ಯ :**

ವಾಜಿವಂಶ ಕುಲತಿಳಕನಾದ ಯಕ್ಷರಾಜ ಮತ್ತು ಲೋಕಾಂಬಿಕೆಯರ ಮಗನಾದ ಹುಳ್ಳಮಯ್ಯನು ಪರಮ ಶ್ರಾವಕನಾಗಿದ್ದನು. ಜಿನಧರ್ಮವನ್ನು ಸತತವಾಗಿ ಉದ್ಧರಿಸಿದವರಲ್ಲಿ ರಾಚಮಲ್ಲನ ಮಂತ್ರಿಯಾದ ಚಾವುಂಡರಾಯನು ಮೊದಲಿಗನು. ಬಳಿಕ ವಿದ್ವಜ್ಜನರೆಲ್ಲ ಹೊಗಳುತ್ತಿದ್ದ ವಿಷ್ಣುವರ್ಧನನ ಮಂತ್ರಿಯಾದ ಗಂಗರಾಜನು ಜಿನಧರ್ಮವನ್ನು ರಕ್ಷಿಸಿದನು. ಅವನ ಬಳಿಕವೆಂದು ಯೋಚಿಸಿದರೆ ನರಸಿಂಹನ ಮಂತ್ರಿ ಹುಳ್ಳನನ್ನು ಬಿಟ್ಟು ಬೇರಾವನನ್ನು ಹೇಳಲು ಸಾಧ್ಯ. ಈ ಹುಳ್ಳಮಯ್ಯನು ಜಿನಾಲಯಗಳನ್ನು ಜೀರ್ಣೋದ್ಧಾರ ಮಾಡುವುದು. ಜಿನಪೂಜೆಯ ಸಂಭ್ರಮದಲ್ಲಿ ಭಾಗಿಯಾಗುವುದು, ಜಿನಮುನಿಗಳಿಗೆ ದಾನ ಮಾಡುತ್ತಾ ನಿಷ್ಠೆಯಿಂದ ಜಿನಸ್ತುತಿಯನ್ನು ಮಾಡುವುದು, ಜಿನನ ಪುರಾಣಶ್ರವಣದಿಂದ ಸಂತೋಷವನ್ನು ತಾಳುತ್ತ ಹೊತ್ತು ಕಳೆಯುತಿದ್ದನೆಂದು ತಿಳಿಸಿದೆ.

ಸ್ಥಿರಚಿತ್ತನಾದ ಹುಳ್ಳಮಯ್ಯನು ಬಂಕಾಪುರದಲ್ಲಿ ಉಪ್ಪಟಾಯ್ತನು ಮಾಡಿಸಿದ ಮಹಾಜಿನಾಲಯವು ನಶಿಸಿದ್ದನ್ನು ಕಂಡು ಅದನ್ನು ಜೀರ್ಣೋದ್ಧಾರ ಮಾಡಿಸಿದನು. ಶೂರನೂ ವಿಟನೂ ಆಗಿದ್ದ ಕಲಿವಿಟನೆಂದು ಪ್ರಸಿದ್ಧನಾಗಿದ್ದವನು ಮಾಡಿಸಿದ ಜಿನಾಲಯವು ಜೀರ್ಣವಾಗಿದ್ದನ್ನು ಕಂಡು ದೃಢಮನಸ್ಸಿನವನೂ ದಾನ ನೀಡುವುದರಲ್ಲಿ ಪರಮ ಸುಖಪಡುತ್ತಾ ವಿಟನಾಗಿದ್ದ ಹುಳ್ಳನು ಕೈಲಾಸದಂತೆ ಉನ್ನತವಾದ ಬಸದಿಯಾಗಿ ಅದನ್ನು ನಿರ್ಮಿಸಿದನು[22] ಹುಳ್ಳ ಸೇನಾಪತಿಯು ಮಹಾತೀರ್ಥವಾಗಿದ್ದ ಕೊಪಣ ಕ್ಷೇತ್ರದಲ್ಲಿ ಬಹಳಷ್ಟು ಬಂಗಾರವನ್ನು ಅಲ್ಲಿಯ ಸ್ಥಾನಿಕರಿಗೆ ಕೊಟ್ಟು ಚತುರ್ವಿಂಶತಿ ಸಂಘಗಳ ಜಿನಮುನಿಗಳ ಸಂಘಕ್ಕೆ ಅಕ್ಷಯದಾನವು  ಸಲ್ಲುವಂತೆ ಏರ್ಪಾಟು ಮಾಡಿದನು. ಹುಳ್ಳನು ಮಾಡಿದ ಈ ಸತ್ಕಾರ್ಯಗಳನ್ನು ಲೋಕವೆಲ್ಲ ಕೊಂಡಾಡಿತು. ಹಿಂದೆ ಗಂಗರಿಂದ ನಿರ್ಮಿಸಿದ್ದ ಆದಿತೀರ್ಥ ಎನಿಸಿದ್ದ ಕೆಲ್ಲಂಗೆರೆಯಲ್ಲಿ ನಾಮಾವಶೇಷವಾಗಿ ನಶಿಸಿದ್ದ ಬಸದಿಯನ್ನು ಹುಳ್ಳನು ಅಧಿಷ್ಠಾನದಿಂದ ಕಳಸದವರೆಗೆ ಪುನರ್ ನಿರ್ಮಿಸಿ ಹೊಸದಾಗಿ ಮಾಡಿದನು. ಮೇರುಪರ್ವತದಂತೆ ಧೈರ್ಯನಿಧಿಯಾದ ಹುಳ್ಳಮಯ್ಯನು ಕೆಲ್ಲಂಗೆರೆಯಲ್ಲಿ ಪಂಚ ಬಸದಿಗಳನ್ನು ಮಾಡಿಸಿ ಪಂಚಕಲ್ಯಾಣವನ್ನು ಮಾಡಿಸಿದನು. ಹುಳ್ಳನ ಮಹತ್ವವನ್ನು ಶಾಸನಕವಿಯು ವಿಶೇಷವಾಗಿ ಬಣ್ಣಿಸುತ್ತ ಹುಳ್ಳಮಯ್ಯನು ಶ್ರೇಷ್ಠವಾದ ಬೆಳ್ಗಳತೀರ್ಥದಲ್ಲಿ ಚತುರ್ವಿಂಶತಿ ತೀರ್ಥಂಕರ ಜಿನಾಲಯವನ್ನು ಮಾಡಿಸಿದನು. ಭವ್ಯವಾದ ಚತುರ್ವಿಂಶತಿ ಜಿನಾಲಯವನ್ನು ನೃತ್ಯಮಂಟಪದ ಪಕ್ಕದಲ್ಲಿ ಎರಡೂ ಕಡೆ ಸ್ಥಿರವಾದ ಜಿನಾಲಯಗಳನ್ನು ಮಾಡಿಸಿದ್ದು ಸುಂದರವಾದ ವಿವಿಧ ಚಿತ್ತಾರದಿಂದ ಕೂಡಿದ ಪ್ರವೇಶದ್ವಾರವನ್ನು ಪ್ರಾಕಾರವನ್ನು ಮಾಡಿಸಿದನು. ಹುಳ್ಳಮಯ್ಯನ ಈ ಬಸದಿಯು ಗೊಮ್ಮಟಪುರಕ್ಕೆ ಭೂಷಣಪ್ರಾಯವಾಗಿತ್ತು. ಈ ಬಸದಿಗೆ ನಯಕೀರ್ತಿ ಸಿದ್ಧಾಂತದೇವರನ್ನು ಮಹಾಮಂಡಳಾಚಾರ್ಯರನ್ನಾಗಿ ನೇಮಿಸಿದನು. ಹುಳ್ಳಮಯ್ಯನು ನರಸಿಂಹದೇವನಿಂದ ತಾನು ಪಡೆದಿದ್ದ ಸವಣೇರು ಗ್ರಾಮವನ್ನು ದತ್ತಿಬಿಟ್ಟನು. ಈ ಊರಿನ ಆದಾಯದಿಂದ ಈ ಬಸದಿಯ ಆಚಾರ್ಯರು ಇಲ್ಲಿಯ ಬಸದಿಗಳ ಪೂಜಾಕಾರ್ಯಕ್ಕೆ ರಂಗಭೋಗ ಮತ್ತು ಬಸದಿಯಲ್ಲಿ ಕೆಲಸ ಮಾಡುವ ಜನರ ಮತ್ತು ಮುನಿಗಳ ಆಹಾರದಾನವನ್ನು ನಡೆಸಬೇಕೆಂದು ತಿಳಿಸಿದೆ. ಬಸದಿಯ ಖಂಡಸ್ಫುಟಿತ ಜೀರ್ಣೋದ್ಧಾರವು ಈ ಹಣದಿಂದಲೇ ಸಾಗುತ್ತಿತ್ತು.[23]

ಇಲ್ಲಿ ಭಾನುಕೀರ್ತಿ ಮುನೀಂದ್ರರು ತಮ್ಮ ಧವಳಕೀರ್ತಿಯಿಂದ ಬುಧಜನವಂದಿತರಾಗಿದ್ದರು. ಹುಳ್ಳ ಸೇನಾಪತಿಯೂ ಸವಣೆರು ಗ್ರಾಮವನ್ನು ಭಾನುಕೀರ್ತಿ ಮುನಿಗಳಿಗೆ ದಾನವಿತ್ತನು.[24] ಹುಳ್ಳಮಯ್ಯನು ಮತ್ತು ಹೆಗ್ಗಡೆ ಲಕ್ಕಯ್ಯನೂ ಸೇರಿ ಗೊಮ್ಮಟಪುರದ ತಿಪ್ಪೆಸುಂಕದಲ್ಲಿ ಅಡಕೆಯ ಹೇರಿಗೆ 200 ಅಡಕೆ, ಹಸುಂಬೆ ಫಲ 5, ಮೆಣಸು ಹೇರಿಗೆ 1 ಬಳ್ಳ, ಗಾಣದೆರೆ ಇವೆಲ್ಲವನ್ನು ಚತುರ್ವಿಂಶತಿ ತೀರ್ಥಂಕರರ ಪೂಜೆಗಾಗಿ ದಾನವಿತ್ತನು. 24 ಮನೆಗಳ ಮನೆದೆರೆ ಈ ಎಲ್ಲ ತೆರಿಗೆಗಳನ್ನು ನರಸಿಂಹದೇವನ ಕೈಯಲ್ಲಿ ಬೇಡಿಕೊಂಡು ದಾನವಿತ್ತನು.[25]

ಹುಳ್ಳಮಯ್ಯನು ಗೊಮ್ಮಟದೇವರ ಪೂಜೆಗೆ ಆಹಾರದಾನ ನಡೆಸಲೆಂದು ಉತ್ತಮರನ್ನು ಮುಖ್ಯರನ್ನಾಗಿ ಮಾಡಿಸಿ ವೀರಬಲ್ಲಾಳ ದೇವನಿಂದ ದಾನ ಬಿಡಿಸಿದನು. ಕಲಿಯುಗ ಗಣಧರನೆನಿಸಿದ್ದ ಮಲ್ಲಿಷೇಣ ಮಲಧಾರಿಗಳ ಅಗ್ರ ಶಿಷ್ಯರಾದ ವಾದಿರಾಜದೇವರು ತಮ್ಮ ಶಲ್ಯದ ಕುಂಬೆಯನಹಳ್ಳಿಯಲ್ಲಿ ತಮ್ಮ ಗುರುಗಳಿಗೆ ಪರೋಕ್ಷ ವಿನಯವಾಗಿ 'ಪರವಾದಿಮಲ್ಲ ಜಿನಾಲಯ' ಎಂಬ ಹೆಸರಿನಲ್ಲಿ ಕನ್ನೆವಸದಿಯನ್ನು ಮಾಡಿಸಿದರು. ಆ ದೇವರ ಅಷ್ಟವಿಧಾರ್ಚನೆಗೆ, ಆಹಾರದಾನಕ್ಕೆ ಹಿರಿಯ ಕೆರೆಯ ಗೌಡಿಯನಹಳ್ಳಿಯಲ್ಲಿ 2 ಸಲಗೆ, 10 ಕೊಳಗ ಗದ್ದೆಯನ್ನು ಅಲ್ಲಿಂದ ತೆಂಕಣದಲ್ಲಿ ಬಿಟ್ಟಿಸೆಟ್ಟಿಯ ಕೆರೆಯ ಬಳಿಯ ಬೆದ್ದಲೆ 2 ಸಲಗೆಯನ್ನು ಸರ್ವಭಾಧಾಪರಿಹಾರವಾಗಿ ದತ್ತಿಬಿಟ್ಟರು. ಮಹಾಪ್ರಧಾನಿ, ಸರ್ವಾಧಿಕಾರಿ, ಹಿರಿಯ ಭಂಡಾರಿ ಹುಳ್ಳಯ್ಯನ ಮೈದುನ ಅಶ್ವಾಧ್ಯಕ್ಷದ ಹೆಗ್ಗಡೆ ಹರಿಯಣ್ಣನು ಕುಂಬೆಯನಹಳ್ಳಿಯ ದೇವರನ್ನು ಮಾಡಿಸಿಕೊಟ್ಟನು.[26]

ಹುಳ್ಳಮಯ್ಯನು ಗೊಮ್ಮಟದೇವರು ಮೊದಲಾದ ದೇವರಿಗೆ ಸವಣೇರು ಗ್ರಾಮವನ್ನು ದಾನವಾಗಿ ನೀಡಿದನು.[27] ನಯಕೀರ್ತಿ ಸಿದ್ಧಾಂತದೇವರ ಶಿಷ್ಯನೂ ಹಿರಿಯ ಭಂಡಾರಿಯೂ ಆದ ಹುಳ್ಳಮಯ್ಯನು ವೀರಬಲ್ಲಾಳ ದೇವರ ಕೈಯಿಂದ ಗೊಮ್ಮಟದೇವರ, ಪಾರ್ಶ್ವನಾಥದೇವರ ಚತುರ್ವಿಂಶತಿ ದೇವರ ಅಷ್ಟವಿಧಾರ್ಚನೆ ಗೆಂದು ಮತ್ತು ಮುನಿಗಳ ಆಹಾರದಾನಕ್ಕೆಂದು ಸವಣೇರು, ಬೆಕ್ಕ ಮತ್ತು ಕಗ್ಗೆರೆ ಗ್ರಾಮಗಳನ್ನು ದತ್ತಿಯಾಗಿ ಬಿಡಿಸಿದನು.[28] ಮಹಾಪ್ರಧಾನಿಯೂ, ಹಿರಿಯ ಭಂಡಾರಿಯೂ ಆದ ಹುಳ್ಳಮಯ್ಯನು ವೀರಬಲ್ಲಾಳದೇವರ ಕೈಯಿಂದ ಗೊಮ್ಮಟದೇವರ, ಪಾರ್ಶ್ವನಾಥದೇವರ ಚತುರ್ವಿಂಶತಿ ದೇವರ ಅಷ್ಟವಿಧಾರ್ಚನೆಗೆಂದು ಮತ್ತು ಮುನಿಗಳ ಆಹಾರ ದಾನಕ್ಕೆಂದು ಸವಣೇರು ಗ್ರಾಮವನ್ನು ದತ್ತಿಯಾಗಿ ಬಿಡಿಸಿದನು.[29] ಸರ್ವಾಧಿಕಾರಿ, ಮಹಾಪ್ರಧಾನ ಪದವಿಗಳನ್ನಲಂಕಸಿದ್ದ ಹುಳ್ಳನು ಅಭಿನವ ಗಂಗರಾಜ ಎನಿಸಿದ್ದನು. ಇವನು ತಮ್ಮ ಗುರುಗಳಾದ ದೇವಕೀರ್ತಿ ಪಂಡಿತರಿಗೆ ಪರೋಕ್ಷವಿನಯವಾಗಿ ನಿಶಿದಿಯನ್ನು ನಿಲ್ಲಿಸಿದನು. ಇದೇ ಸಂದರ್ಭದಲ್ಲಿ ಮೂಲಸಂಘದ ದೇಶಿಯಗಣ ಪೊಸ್ತಕಗಚ್ಛದ ಕೊಲ್ಲಾಪುರದ ರೂಪನಾರಾಯಣದೇವರ ಬಸದಿಗೆ ಪ್ರತಿರೂವಾಗಿದ್ದ ಕೆಲ್ಲಂಗೆರೆಯ ಪ್ರತಾಪಪುರವನ್ನು ಜೀರ್ಣೋದ್ಧಾರ ಮಾಡಿಸಿದನು. ಇದಲ್ಲದೆ ಜಿನನಾಥಪುರದಲ್ಲಿ ಕಲ್ಲಿನಲ್ಲಿ ದಾನಶಾಲೆಯನ್ನು ಮಾಡಿಸಿದನು. ಮಹಾಮಂಡಲಾಚಾರ್ಯರಾಗಿದ್ದ ದೇವಕೀರ್ತಿಪಂಡಿತದೇವರಿಗೆ ಪರೋಕ್ಷ ವಿನಯಕ್ಕೆಂದು ಮಾಡಿಸಿದ ನಿಶಿದಿಯನ್ನು ಅವರ ಶಿಷ್ಯರಾಗಿದ್ದ ಲಖ್ಖಣಂದಿ ಮತ್ತು ಮಾಧವೇಂದು ಮುನಿಗಳು ತ್ರಿಭುವನ ದೇವರು ಮಹಾದಾನ, ಪೂಜೆ, ಅಭಿಷೇಕಗಳನ್ನು ಮಾಡಿ ನಿಶಿಧಿಯನ್ನು ಪ್ರತಿಷ್ಠೆ ಮಾಡಿದರು.[30]

**ಪುಣಿಸಮಯ್ಯ ದಂಡನಾಯಕ :**

ಇಮ್ಮಡಿ ಪುಣಿಸಚಮೂಪನು ಚಾಮರಾಜನಗರದಲ್ಲಿರುವ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದ್ದಲ್ಲದೆ ಗಂಗವಾಡಿ 96000ದಲ್ಲಿನ ಬಸದಿಗಳನ್ನು ಊರ್ಜಿತಗೊಳಿಸಿದ್ದನು. ಈತನ ಗುರು ದ್ರವಿಡಾನ್ವಯದ ಅಜಿತ ಮುನಿಪ.

**ಜಿನನಿಷ್ಟದೈವಮಜಿತಂ**

**ಮುನಿಪತಿ ಗುರು ಪೊಯ್ಸಳೇಸನಾಳ್ದನೆನಲ್ಸ**

**ದ್ವಿನುತಂ ಮಾಡಿಸಿದಂ ಶ್ರೀ**

**ಜಿನಗೃಹಮಂ ಪುಣಿಸರಾಜದಂಡಾಧಿಶಂ**[31]

ಇದಲ್ಲದೆ ಕೆಲವು ಭೂದಾನಗಳನ್ನು ಬಸದಿಗೆ ನೀಡಿದನು. ಪುಣಿಸಮಯ್ಯನು ಹೊಯ್ಸಳ ಯುಗದಲ್ಲಿ ಗಂಗರಾಜ ಹಾಗೂ ಹುಳ್ಳಮಯ್ಯನ ನಂತರ ಜೈನಮತಕ್ಕೆ ವಿಶೇಷವಾದ ಕಾಣಿಕೆಯನ್ನು ನೀಡಿದವನು. ಜೈನ ಧರ್ಮ ಇವನ ಕಾಲದಲ್ಲಿ ಹೆಚ್ಚು ಪ್ರವರ್ಧಮಾನಕ್ಕೆ ಬಂದಿತು.

**ಗೋವಿದೇವ:** ಗೋವಿದೇವನು ಜೈನಮತಕ್ಕೆ ಅಪರಿಮಿತವಾದ ಕೊಡುಗೆಗಳನ್ನು ನೀಡಿದ ಅಧಿಕಾರಿಯಾಗಿದ್ದನು. ಗೋವಿಯ ಮಡದಿ ಶ್ರಿಯಾದೇವಿ, ಮಹಾದೇವಿಯರು ಜೈನರಾಗಿದ್ದರು. ಚಾಂದ್ರಾಯಣ ಮುನಿಯ ಪ್ರತಿಮೆಯನ್ನು ಹುಳಿಯಾರಿನಲ್ಲಿ ಶ್ರಿಯಾದೇವಿಯು ಮಾಡಿಸಿದುದನ್ನು ತಿಳಿಸುವ ಶಾಸನದಲ್ಲಿ ಗೋವಿದೇವನನ್ನು "ಶ್ರೀಚಾನ್ದ್ರಾಯಣ ದೇವರಗುಡ್ಡ" ಎಂದು ಕರೆಯಲಾಗಿದೆ. ತನ್ನ ಸತಿ ಮಹಾದೇವಿಯು ಮರಣವನ್ನಪ್ಪಿದಾಗ ಅವಳಿಗೆ ಪರೋಕ್ಷ ವಿನಯವಾಗಿ ಗುಣಚಂದ್ರಸಿದ್ಧಾಂತದೇವರ ಶಿಷ್ಯರಾದ ಶ್ರೀಮಾಣಿಕನಂದಿ ಸಿದ್ಧಾಂತದೇವರಿಗೆ ಹೆಗ್ಗರೆಯಲ್ಲಿ ಚನ್ನಪಾರ್ಶ್ವದೇವರ ಬಸದಿಯನ್ನು ನಿರ್ಮಿಸಿದನು.[32] ಅಲ್ಲದೆ ಇವನ ಆಡಳಿತ ವ್ಯಾಪ್ತಿಯಾದಂತಹ ಮಗರೆನಾಡಿನಲ್ಲಿ ಮೊದಲಿನಿಂದಲೂ ಜೈನಧರ್ಮವು ಪ್ರವರ್ಧಮಾನದಲ್ಲಿದ್ದುದಕ್ಕೆ ಈ ನಾಡಿನ ಶಾಸನಗಳು, ಜೈನಬಸದಿಗಳು ಸಾಕ್ಷಿಯಾಗಿವೆ. ಹೀಗಿರುವಾಗ, ಇಲ್ಲೊಂದು ಪುಟ್ಟ ತೊಡಕು ಸೃಷ್ಟಿಯಾಗಿದೆ; ಅದೇನೆಂದರೆ, ಗೋವಿದೇವನಿಗಿರುವ "ಶ್ರೀ ಜೈನಮಾರ್ಗ ಸ್ಥಗಿತ ಗುಣಕಳಾಳಾಪನುದ್ಯತ್ಪ್ರತಾಪಂ" ಎಂಬ ಅಭಿದಾನವನ್ನು ಆತ ಜೈನಧರ್ಮದ ಬೆಳವಣಿಗೆಗೆ ತಡೆಹಾಕಿ ಶೈವಧರ್ಮ ಮೆರೆಯಲು ಅವಕಾಶ ಮಾಡಿಕೊಟ್ಟಿದ್ದರಿಂದ ಸಂದಿದೆ ಎಂದು ಕೆಲವು ವಿದ್ವಾಂಸರು ಅರ್ಥೈಸಿದ್ದಾರೆ.

ಆದರೆ ಗೋವಿದೇವನ ಕೌಟುಂಬಿಕ ಪರಿಸರ ಮತ್ತು ರಾಜಕೀಯ ಕ್ಷೇತ್ರಗಳೆರಡರಲ್ಲಿಯೂ ಧಾರ್ಮಿಕ ಸಮನ್ವಯತೆಗಳು ಕಂಡುಬಂದಿವೆಯೇ ಹೊರತು ಧಾರ್ಮಿಕ ಅಸಹಿಷ್ಣುತೆಯಲ್ಲ. ಹೀಗಾಗಿ ಅವನು 'ಜೈನಮಾರ್ಗವನ್ನು ಬೆಳವಣಿಗೆ ಹೊಂದಲು ತಡೆಹಾಕಿದ' ಎಂದು ಅರ್ಥೈಸಿರುವುದು ಸರಿಯಲ್ಲ. ಬದಲಿಗೆ "ಶ್ರೀಜೈನಮಾರ್ಗ ಸ್ಥಗಿತ ಗುಣಕಳಾಳಾಪ" ಎಂಬುದನ್ನು ತನ್ನ ಆಡಳಿತಾತ್ಮಕ ಪ್ರದೇಶದಲ್ಲಿ, ತನ್ನ ಆಳ್ವಿಕೆಯ ಸಂದರ್ಭದಲ್ಲಿ ಗೋವಿದೇವನು ಜೈನಧರ್ಮವನ್ನು 'ನಿಲ್ಲಿಸಿದ' ಅಂದರೆ ಅಳಿದುಹೋಗುತ್ತಿದ್ದ ಧರ್ಮವನ್ನು ಉಳಿಸಿದ; ಸ್ಥಾಪಿಸಿದ ಎಂದು ಅರ್ಥಾನ್ವಯ ಮಾಡುವುದು ಯುಕ್ತವೆಂದು ತೋರುತ್ತದೆ.

**ಬಿಟ್ಟಿದೇವ ಅಥವಾ ವಿಷ್ಣುದೇವ** : ಮಹಾಸಾಮಂತ ಚಟ್ಟಯ್ಯನಾಯಕ ಮತ್ತು ಶಾಂತಲೆ ದಂಪತಿಗಳ ಪುತ್ರನೀತ. ಕ್ರಿ.ಶ. 1161ರ ಚಿಕ್ಕನಾಯಕನಹಳ್ಳಿ ಬಳಿಯ ಹೆಗ್ಗೆರೆಯ ಶಾಸನವು[33] ಮಹಾಮಂಡಳೇಶ್ವರ ಬಿಟ್ಟಿದೇವನು 1ನೆಯ ನರಸಿಂಹನು ಗಜಬ್ರಯಕ್ಕೆಂದು ಹೆಣ್ಣಗೆರೆಯನ್ನು ನೀಡಿದ್ದ

ಸಂಗತಿಯನ್ನು ತಿಳಿಸುತ್ತದೆ. ಇದೇ ಹೆಗ್ಗೆರೆಯಲ್ಲಿ ಈ ಮೊದಲೇ ನಿರ್ಮಾಣಗೊಂಡಿದ್ದ ಜೈನಬಸದಿಯಲ್ಲಿ ಅಷ್ಟವಿಧಾರ್ಚನೆ, ರಿಷಿಯರಾಹಾರದಾನಗಳಿಗೆಂದು ಕೆಲವು ಭೂದಾನಗಳನ್ನು ಬಿಟ್ಟಿದೇವನು ಸಮರ್ಪಿಸಿದ್ದನು.

**ಸೋಮೆಯದಂಡನಾಯಕ:** ಕ್ರಿ.ಶ. 1265ರ ಹಳೆಯಬೀಡಿನ ಶಾಸನವು[34] ಮೂರನೆಯ ನರಸಿಂಹನು ಕಲುಕಣಿನಾಡ ಕಲ್ಲಂಗೇರಿಯೊಡನೆ ಕರಡಿಯಹಳ್ಳಿ, ಅರಿಯಹಳ್ಳಿ ಮೊದಲಾದ 14 ಹಳ್ಳಿಗಳನ್ನು ತ್ರಿಕೂಟ ರತ್ನತ್ರಯ ಶಾಂತಿನಾಥ ಜಿನಾಲಯದಲ್ಲಿ ಜಿನನ ಆರಾಧನೆಗಾಗಿ ಮತ್ತು ಜಿನಾಲಯದ ಜೀರ್ಣೋದ್ಧಾರಕ್ಕಾಗಿ ಶ್ರೀ ಮೂಲಸಂಘದ ಶ್ರೀಮಾಘನಂದಿ ಎಂಬ ಜೈನಗುರುವಿಗೆ ದಾನ ನೀಡಿದುದನ್ನೂ ಈ ಧರ್ಮಕಾರ್ಯವು ಸೋಮೆಯ ದಂಡನಾಯಕನಿಂದ ಸುಪ್ರತಿಷ್ಠಿತವಾಯಿತೆಂದೂ ತಿಳಿಸುತ್ತದೆ.

**ಬೈಚಯದಂಡನಾಯಕ :** ಹೊಯ್ಸಳಯುಗದ ಅನಂತರ ಬಂದರೂ ಹೊಯ್ಸಳಯುಗದ ಪ್ರತೀಕದಂತೆಯೇ ಕಂಗೊಳಿಸುವ ಬೈಚಯದಂಡನಾಯಕ ಹಾಗೂ ಇವನ ಮಗನಾದ ಇರುಗಪ್ಪ ದಂಡನಾಯಕನ ಬಗ್ಗೆಯೂ ಇಲ್ಲಿ ಹೇಳುವುದು ಅನುಚಿತವಾಗಲಾರದು. ಯಾಕೆಂದರೆ ಇವನ ವಂಶೀಯರು ಹೊಯ್ಸಳಯುಗದಲ್ಲಿಯೇ ಅಧಿಕಾರಕ್ಕೆ ಬಂದು ಹೊಯ್ಸಳೋತ್ತರ ಯುಗದಲ್ಲಿ ಮುಂದುವರೆದರು. ಬೈಚಯ ದಂಡನಾಯಕನ ಶಾಸನವು[35] ಮಹಾಪ್ರಧಾನ ಪದವಿಯಲ್ಲಿ ಬೈಚಯದಂಡನಾಯಕನಿದ್ದುದನ್ನು ಮತ್ತು ಸೋಮೇಶ್ವರ ದೇಗುಲದ ಮುಂದಿನ ಜೈನ ಬಸದಿಗೆ ಸಂದ ದಾನವನ್ನು ಅಸ್ಪಷ್ಟವಾಗಿ ತಿಳಿಸುತ್ತದೆ. ಕ್ರಿ.ಶ. 1359ರ ಸಖರಾಯಪಟ್ಟಣದ ಶಾಸನವು[36] ಬೈಚಯ ದಂಡನಾಯಕನು ತನ್ನ ಪರಿವಾರದವರೆಲ್ಲರನ್ನು ಕೂಡಿಕೊಂಡು ನಿಶಿಧಿಯಾದುದನ್ನು ದಾಖಲಿಸುತ್ತದೆ.

**ಇರುಗಪ್ಪದಂಡನಾಯಕ:** ಗಂಗಾವತಿಯ ಕ್ರಿ.ಶ. 1342ರ ಶಾಸನವು[37] ಇವನ ಬಗ್ಗೆ ಮೊದಲ ಬಾರಿಗೆ ಮಾಹಿತಿ ನೀಡುತ್ತದೆ. ಅದರ ಪ್ರಕಾರ ಇರುಗಪ್ಪನು ಆನೆಗೊಂದಿಯಲ್ಲಿ ಕಲ್ಲಿನಲ್ಲಿ ಬಸದಿಯನ್ನು ನಿರ್ಮಿಸುತ್ತಾನೆ. ಇದಕ್ಕೆ ಅವನ ತಂದೆ ಬೈಚಯ ದಂಡನಾಯಕನು ದಾನ ನೀಡುತ್ತಾನೆ. ಈ ಶಾಸನದಲ್ಲಿ ಇರುಗಪ್ಪನನ್ನು ಹೀಗೆ ಹೊಗಳಿದೆ:

**"ಹರಿಹರ ಧರಣೀತ್ರಿ ಪ್ರಾಜ್ಯಾಸಾಮ್ರಾಜ್ಯಾ ಲಕ್ಷ್ಮೀಕುವಲಯ**

**ಹಿಮಧಾಮಾಶೌರ್ಯಗಾಂಭೀರ್ಯ ಸಿಮಾ ಇರುಗಪ ಧರಣೀಶ"**

ತಿರುಪ್ಪರುತ್ತಿಕುನ್ರು ಎಂಬ ಊರಿನ ಶಾಸನದನ್ವಯ[38] ಇರುಗಪ್ಪ ದಂಡನಾಯಕನು ಮಾವಂದೂರನ್ನು ಕಂಚಿಯ ಜೈನದೇಗುಲಕ್ಕೆ ಎರಡನೇ ಬುಕ್ಕರಾಯನಿಗೆ ಒಳಿತಾಗಲಿ ಎಂದು ಪ್ರಾರ್ಥಿಸಿ ದಾನ ನೀಡಿದನು. ಹಿಂದೂಪುರದ ಚಿಲಮುತ್ತೂರಿನಲ್ಲಿ ಹೊಸದಾಗಿ ಕಲ್ಲುಮಂಚಿಗೆಯನ್ನು ಇರುಗಪ್ಪ ದಂಡನಾಯಕನು ಮಾಡಿಸಿದುದನ್ನು ಅದೇ ಊರಿನ ಶಾಸನ[39] ತಿಳಿಸುತ್ತದೆ. ಬೈಚಯ ದಂಡನಾಯಕನ ನಂತರ ಈತ ಮತ್ತೆ ಬಾರಕೂರು ರಾಜ್ಯದ ಅಧಿಕಾರಿಯಾಗಿ ಮುಂದುವರೆದಂತೆ ಕಂಡುಬರುತ್ತದೆ.

ಕ್ರಿ.ಶ. 1367ರ ವೇಳೆಗೆ ಇರುಗಪ್ಪ ದಂಡನಾಯಕ ಬಾರಕೂರು ರಾಜ್ಯದ ಪ್ರಾಂತ್ಯಾಧಿಕಾರಿಯಾಗಿ ನಿಯುಕ್ತಿಗೊಳ್ಳುತ್ತಾನೆ. ಇಲ್ಲಿ ಮಣೆಗಾರ ಕೇರಿಯ ಬಸದಿಗೆ ದಾನ ನೀಡುತ್ತಾನೆ.[40] ಅವನ ಜೈನಧರ್ಮಪರ ಉನ್ನತ ಅಭಿಮಾನ ಹಲವೆಡೆ ಅನೇಕ ಸ್ವಧರ್ಮ ರಕ್ಷಣೆಯ ಮತ್ತು ಪ್ರಚುರತೆಯ ಕಾರ್ಯ ಕೈಗೊಳ್ಳುವಂತೆ ಮಾಡುತ್ತದೆ. ಹಂಪಿಯಲ್ಲಿಯೂ ಈತ ಕಂತುಜಿನಾಲಯವನ್ನು ಶಿಲೆಯಲ್ಲಿ ನಿರ್ಮಿಸಿದನು. ಇವನನ್ನು ಈ ಶಾಸನ[41] ಮನದುಂಬಿ ಹೊಗಳಿದೆ:

**"ಆಸೀದಿರುಗ ದಂಡೇಶೋ ನಂದನೋ ಲೋಕನಂದನಃ।**
**ನ ಮೂರ್ತ್ತಾ ನಾಮೂರ್ತ್ತಾ ನಿಖಿಲಭುವನಾಭೋಗಿ॥**
**ಕಚಯಾ ಶರದ್ರಾಜದ್ರಾಕಾವಿಟ ನಿಟಿಲನೇತ್ರದ್ಯುತಿತಯಾ।**
**ಪ್ರಭೂತಾ ಕೀರ್ತ್ತಿಸ್ಸಾ ಚಿರಮಿರುಗದಂಡೇಶ ಕಥಯ॥**

**ತ್ಯಾನೇಕಾಂತಾತ್ಮಾತ್ವಮಿಹ ನ ಕಿಂಚಿನ್ಮತಮಿತಿ।**
**ಸದ್ವಂಶ ಜೋಽಪಿ ಗುಣ ವಾನಪಿ ಮಾರ್ಗಣಾನಾಮಾಧಾರ॥**
**ತಾಮಂಪಗ ತೋಽಪಿ ಚ ಯಸ್ಯ ಚಾವಡಿ। ನಮ್ರಃ ಪರಾನ್ವಿನ।**
**ಮಯನ್ನಿರುಗ ಕ್ಷಿತೀಶಸ್ಯೋಚ್ಚೈರ್ಜ್ಜನಾಯ ಖಲು ಸಿಕ್ಷಯತೀವ ನೀತಿಂ"**

ಕಂಚಿಯ ಮತ್ತೊಂದು ಶಾಸನವು ತಿರುಪ್ಪರುತ್ತಿಕುನ್ರು ಎಂಬ ಸ್ಥಳದಲ್ಲಿ (ಕಂಚಿಯ ಸಮೀಪ) ಮಂಟಪವನ್ನು ಪುಷ್ಪಸೇನ ಮುನಿಗಳ ಆಣತಿಯ ಮೇರೆಗೆ ನಿರ್ಮಿಸಿದನೆಂದು ತಿಳಿಸುತ್ತದೆ. ಕ್ರಿ.ಶ. 1389ರ ವೇಳೆಗೆ ಇರುಗಪ್ಪ ದಂಡನಾಯಕನು ಬಾರಕೂರು ಮುಂತಾದ ತುಳುರಾಜ್ಯವನ್ನು ಧರ್ಮದಿಂದ ಪ್ರತಿಪಾಲಿಸುತ್ತಿದ್ದುದನ್ನು ಆ ಕಾಲದಲ್ಲಿ ಅಜ್ಜಸಾಹು ಎಂಬಾತ ಜಲಯಾತ್ರಿಯಾಗಿ (ಸಮುದ್ರಮಾರ್ಗವಾಗಿ) ಬಂದು ತುಳುರಾಜ್ಯದಲ್ಲಿ ಜಮೀನನ್ನು ಖರೀದಿಸಿ ಹುಂಚದ ಪಾರ್ಶ್ವನಾಥ ದೇವರಿಗೆ ದತ್ತಿ ನೀಡಿದ್ದಾನೆ.[42]

ಹೀಗೆ ಜೈನಧರ್ಮವು ಹೊಯ್ಸಳ ಮಹಾಮಂಡಳೇಶ್ವರರ ಕಾಲದಲ್ಲಿ ಅತ್ಯಂತ ದೊಡ್ಡ ಧರ್ಮವಾಗಿ ರೂಪುಗೊಂಡು ಬಲಶಾಲಿಯಾಗುವುದಕ್ಕೆ ಹಲವು ಮಹಾಮಂಡಳೇಶ್ವರರು ತಾವೇ ಸ್ವತಃ ಜೈನ ಧರ್ಮೀಯರಾಗಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಜೈನಧರ್ಮಾವಲಂಬಿ ಸಾಮಾಜಿಕರು ಈ ಕಾಲದಲ್ಲಿ ತನ್ನ ಹಿಂದಿನ ಕಾಲಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಸೇರ್ಪಡೆಗೊಂಡರು. ಇವರ ಜನಸಂಖ್ಯೆಯೂ ಕೂಡ ಈ ಕಾಲದಲ್ಲಿ ಹೆಚ್ಚಾಗುವುದರಲ್ಲಿ ಈ ಅಧಿಕಾರಿಗಳ ಪ್ರೋತ್ಸಾಹವೂ ಕೂಡ ಮುಖ್ಯವಾದದ್ದಾಗಿದೆ. ಜೈನಮತೀಯರು ಜನಸಂಖ್ಯೆಯಲ್ಲಿ ಹೆಚ್ಚಳವಾಗುವುದರ ಜೊತೆಗೆ ಧಾರ್ಮಿಕ ಪ್ರಭುತ್ವವೂ ಇವರ ಪಾಲಾಯಿತು. ಜೈನ ಧರ್ಮವನ್ನು ರಾಜಪೋಷಕ ಧರ್ಮವನ್ನಾಗಿ ರೂಪಿಸಿದ್ದರಿಂದಲೇ ಅಧಿಕಾರಿಗಳನ್ನು ಜನಸಾಮಾನ್ಯರು ಕೂಡ ಬೆಂಬಲಿಸಿ ತಮ್ಮ ವ್ಯಾಪಾರ ವಹಿವಾಟುಗಳಲ್ಲಿ ರಾಜಾದಾಯಕ್ಕೆ ಸಹಕರಿಸುವಂತಾಯಿತು. ಜೈನಧರ್ಮದಲ್ಲಿ ಸಾಂಪ್ರದಾಯಿಕತೆಯೇ ಮೆರೆಯಿತು. ಧಾರ್ಮಿಕ ಪರಿಷ್ಕರಣೆಗಳ ಕಡೆ ಇವರ ಗಮನ ಹರಿದಂತಿಲ್ಲ. ಸಮಕಾಲೀನ ಕಾಲಘಟ್ಟದಲ್ಲಿ ಸ್ಥಳೀಯತೆಯೊಂದಿಗೆ ಯಾವುದೇ

ಸಂಘರ್ಷಕ್ಕೆ ಆಸ್ಪದವನ್ನು ನೀಡದೇ ಸಾಮರಸ್ಯವನ್ನು ಹೊರಡಿಸುತ್ತಿದ್ದವರಲ್ಲಿ ಜೈನರಿಗೇ ವಿಶೇಷವಾದ ಸ್ಥಾನವಿದೆ. ಹೊಯ್ಸಳ ಮಹಾಮಂಡಲೇಶ್ವರರ ಕಾಲಾವಧಿಯ ಉದ್ದಕ್ಕೂ ಪ್ರವರ್ಧಮಾನರಾಗಿದ್ದ ಜೈನಮತೀಯರು ಹೊಯ್ಸಳರ ಅವನತಿಯೊಂದಿಗೆ ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡರು ಎಂಬುದೇ ಈ ಕಾಲಘಟ್ಟದಲ್ಲಿ ಹೇಗೆ ಜೈನಧರ್ಮೀಯರು ಮುಖ್ಯರಾಗಿದ್ದರು ಎಂಬುದನ್ನು ತಿಳಿಯಬಹುದಾಗಿದೆ.

### 7.2.1 ಜೈನಧರ್ಮದ ಸಂವರ್ಧನೆಗೆ ಮಹಿಳೆಯರ ಕೊಡುಗೆಗಳು

ವೈದಿಕ ಧರ್ಮದ ಮಹಿಳೆಯರಿಗೆ ಹೋಲಿಸಿದರೆ ಕನ್ನಡ ನಾಡಿನಲ್ಲಿ ಜೈನಧರ್ಮದ ಮಹಿಳೆಯರಲ್ಲಿ ಹೆಚ್ಚಿನ ಸ್ವಾತಂತ್ರ್ಯ ಕಂಡುಬರುತ್ತದೆ. ಇವರ ನಡೆಯು ಉಳಿದ ಮಹಿಳೆಯರಿಗಿಂತ ಉನ್ನತವಾದ ಸ್ಥಾನದಲ್ಲಿದೆ. ಕೌಟುಂಬಿಕ ನೆಲೆಯಲ್ಲಿರಬಹುದು, ಧಾರ್ಮಿಕ ನೆಲೆಯಲ್ಲಿರಬಹುದು, ಸಾಮಾಜಿಕ ನೆಲೆಯಲ್ಲಿರಬಹುದು ಇವರಿಗೆ ಸಮಾಜದಲ್ಲಿ ಉನ್ನತವಾದ ಸ್ಥಾನಮಾನಗಳಿದ್ದವು. 6ನೆಯ ಶತಮಾನದಿಂದ ಕ್ರಮೇಣ ಇವರ ಸೇವಾಕಾರ್ಯಗಳು ಹಿರಿದಾಗುತ್ತಾ ಬಂದು 10ರಿಂದ 12ನೆಯ ಶತಮಾನಗಳಲ್ಲಿ ಅತ್ಯಂತ ಪ್ರವರ್ಧಮಾನಕ್ಕೆ ಬಂತು. ಇವರಲ್ಲಿ ಜೈನ ಬಸದಿಗಳನ್ನು ಕಟ್ಟಿದವರಿದ್ದಾರೆ. ಬಸದಿಗಳಿಗೆ ದಾನಧರ್ಮಗಳನ್ನು ಮಾಡಿದವರಿದ್ದಾರೆ. ಕಂತಿಯರಿದ್ದಾರೆ, ಶ್ರಾವಕಿಯರಿದ್ದಾರೆ, ಸಾಧಕಿಯರಿದ್ದಾರೆ, ನಿಷಿಧಿಯಾದವರು, ನಿಷಧಿಯನ್ನು ನಿಲ್ಲಿಸಿದವರಿಗೇನೂ ಕಡಿಮೆಯಿಲ್ಲ.

**ಮಹಿಳೆಯರಿಂದ ಬಸದಿಗಳ ನಿರ್ಮಾಣ ಹಾಗೂ ನಿರ್ವಹಣೆ:** ಜೈನ ಸನ್ಯಾಸಿಗಳು, ಕಂತಿಯರು ನಿರಂತರ ಸಂಚಾರಶೀಲರು. ಇವರು ಒಂದೆಡೆ ನೆಲೆ ನಿಂತ ತಾಣವೇ ವಸತಿ ಅಥವಾ ಬಸದಿ. ನಂತರ ಈ ಬಸದಿಗಳಲ್ಲೇ ತೀರ್ಥಂಕರರನ್ನು ಆರಾಧಿಸುವ ಪದ್ಧತಿ ಬೆಳೆಯಿತು. ಈ ರೀತಿಯ ಬಸದಿಗಳು ವೈಧಿಕ ಧರ್ಮದ ಪ್ರಭಾವದಿಂದಲೋ ಏನೋ ದೇವಾಲಯಗಳಂತೆಯೇ ವಿಸ್ತ್ರುತವಾಗುತ್ತಾ ಸಾಗಿತು. ಹಿಮ್ಮಾಡಿಸೆಟ್ಟಿಯ ಪುತ್ರನಾದ ಮಾದಿಸೆಟ್ಟಿಯ ಪರೋಕ್ಷವಿನಯವಾಗಿ ಪಾರ್ಶ್ವನಾಥ ಬಸದಿಯೊಂದನ್ನು ಇವನ ಮನೆಯವರು ನಿರ್ಮಿಸಿದರು. ಈ ಶಾಸನದ ವಿಶೇಷತೆಯಿರುವುದೆಂದರೆ ಈತನ ವಂಶವೃಕ್ಷವನ್ನು ಹೇಳುವಾಗ ತಂದೆಯ ಕಡೆಯ ವಂಶವೃಕ್ಷವನ್ನು ಹೇಳದೆ ತಾಯಿಯ ಕಡೆಯ ವಂಶವೃಕ್ಷ ಹೇಳಿರುವುದು ವಿಶೇಷವಾಗಿದೆ. **"**ನಿಡುಗೋಡ ವಿಜಯನಾರಾಯಣ ಶಾಂತಿಸೆಟ್ಟಿಯ ಪುತ್ರ ಬಾಸಿಸೆಟ್ಟಿಯರ ಅಕ್ಕ ಸಿರಿಯಬೆಸೆಟ್ಟಿತಿಯರ ಮಗಳು ನಾಗವ್ವೆಸೆಟ್ಟಿತಿಯರ ಮಗಳು ಸಿರಿಯಬೆಸೆಟ್ಟಿತಿಗೂ ಹಿಮ್ಮಾಡಿಸೆಟ್ಟಿಗೂ ಹುಟ್ಟಿದ ಸುಪುತ್ರನಾದ ಮಾರಿಸೆಟ್ಟಿಗೆ ಪರೋಕ್ಷ ವಿನಯವಾಗಿ ಪಾರ್ಶ್ವನಾಥ ಬಸದಿಯೊಂದನ್ನು ನಿರ್ಮಿಸಿದರು**"**. [43]

ಪಂಡಿತರಹಳ್ಳಿಯ ಶಾಸನವು[44] ಈಶ್ವರಚಮೂಪತಿಯ ಪತ್ನಿ ಮಾಚಿಯಕ್ಕ ನಾಡಿಗೆ ಮಿಗಿಲಾದ ಜಿನಮಂದಿರವನ್ನು ಮಾಡಿಸಿದಳು ಎನ್ನುತ್ತದೆ. ಈಕೆಯ ತಾಯಿಯಾದ ಚಂದವ್ವೆಯು ನಿರುಪಮ ಕೀರ್ತಿಯನ್ನು ಪಡೆದು ಪೆರ್ಮೆಗೆ ತಾಯ್ಮನೆಯಾಗಿ ಸತ್ಕಳಾಧರಮುಖಿಯೆಂದು ಹೆಸರಾಗಿದ್ದವಳು. ಈಕೆಯ

ಪೆರ್ಮಾಗಳಾದ ಮಾಚಿಯಕ್ಕನು ಅನೂನಗುಣರತ್ನ ಮಂಡನೆ, ಚಾತುರ್ವರ್ಣ ಸಮುದಯ ಶರಣೆ ಎಂದು ಹೆಸರಾಗಿದ್ದ ಪೆರ್ಗಡತಿ ಯಾಗಿದ್ದಳು. ಈಕೆ ಶ್ರೀಮಯ್ದುವೊಳಲ ದಿವ್ಯತೀರ್ಥದಲ್ಲಿ ಸದ್ಧರ್ಮಾಪೇಕ್ಷೆಯಿಂದ ನಾಡಿಗೆ ಮಿಗಿಲಾದ ಜಿನಮಂದಿರವನ್ನೂ, ಪದ್ಮಾವತಿಕೆರೆಯನ್ನೂ, ಹಿರಿಯಕೆರೆಯ ಕೆಳಗೆ 37 ಖಂಡುಗ ಭೂಮಿಯನ್ನು ದಾನವಿತ್ತಳು. ಇದು ಒಂದು ಸಂಕೀರ್ಣ ಶಾಸನವಾಗಿದ್ದು ಕ್ರಿ. ಶ ೧೧೫೫, ೧೧೭೪, ೧೧೭೬ ರ ವಿಷಯಗಳಿವೆ. ಮೊದಲ ಬಾಗ ಒಂದನೆಯ ನರಸಿಂಹನ ಆಳ್ವಿಕೆಯ ಕಾಳದಲ್ಲಿ ಹಿರಿಯ ಹಡವಳ ಚಾವಿಮಯ್ಯನ ಪತ್ನಿ  ಮತ್ತು ನಯಕೀರ್ತಿ ಸಿದ್ದಾಂತ ಚಕ್ರವರ್ತಿಯ ಶಿಷ್ಯೆಯಾದ ಜಕ್ಕವ್ವೆಯು ಹೆರಗಿನಲ್ಲಿ ಬಸದಿಯೊಂದನ್ನು ಕಟ್ಟಿಸಿ ಅದರಲ್ಲಿ ಚೆನ್ನಪಾರ್ಶ್ವನಾಥನ ಪ್ರತಿಮೆಯನ್ನು ಪ್ರತಿಷ್ಠೆ ಮಾಡಿದ ಸಂಗತಿಯನ್ನು ತಿಳಿಸುತ್ತದೆ. ಈಕೆ ಬಮ್ಮಯ್ಯ ಮತ್ತು ಆಚವ್ವೆಯರ ಪುತ್ರಿ. ಈಕೆಯ ಪತಿ ಬಿಟ್ಟಿದೇವ ಎಂದರೆ ವಿಷ್ಣುವರ್ಧನನ ಗರುಡನೆಂದು ವರ್ಣಿತನಾಗಿದ್ದಾನೆ. ಶಾಸನ ಕೊನೆಯಲ್ಲಿ ಅರಸ ನರಸಿಂಹನಿಗೆ ಮನವಿಮಾಡಿಕೊಂಡು ಆತನ ಅನುಮತಿ ಪಡೆದು ಭೂದಾನವನ್ನು ಮಾಡಿದಳು ಈಕೆಯ ಪತಿ ವಿಷ್ಣುವರ್ಧನನಿಗೆ ಗರುಡನಾಗಿದ್ದನಲ್ಲದೆ ಮಹಾಮಂಡಳೇಶ್ವರನಾಗಿದ್ದನು. ಈತ ಯುವರಾಜ ನರಸಿಂಹನೊಂದಿಗೆ ಸೌಹಾರ್ದಯುತ ಸಂಬಂಧವನ್ನು ಹೊಂದಿದ್ದನು.

ಬಸದಿಗಳ ರಚನೆಯಂತೆಯೇ ಇದರ ನಿರ್ವಹಣೆಯಲ್ಲೂ ಮಹಿಳೆಯರು ಉನ್ನತವಾದ ಸೇವೆಯನ್ನು ಸಲ್ಲಿಸಿದ್ದಾರೆ.  ಕೆಲವೇ ಕೆಲವು ಉದಾಹರಣೆಗಳನ್ನು ಗಮನ ಹರಿಸುವುದಾದರೆ, ಸೂರಸ್ತಗಣದ ಶ್ರೀ ವಜ್ರಪಾಣಿ ಪಂಡಿತರ ಶಿಷ್ಯೆಯಾದ ಜಾಕಿಯಬ್ಬೆಗನ್ತಿಯು ಸೊಸೆವೂರಿನಲ್ಲಿರುವ ಬಸದಿಗೆ ಕ್ರಿ.ಶ. 1054ರ ಮಾರ್ಚಿ 21ರಂದು ಆಲೂರಿನಲ್ಲಿ ಕೆಲವು ಭೂಮಿಯನ್ನು ಕೊಂಡುಕೊಂಡು ಮಕರ ಜಿನಾಲಯಕ್ಕೆ ದಾನವಾಗಿ ನೀಡಿದ್ದಾಳೆ.[45] ಮೂಲಸಂಘ ದೇಸಿಯ ಗಣದ ಪುಸ್ತಕ ಗಚ್ಛದ ಕೊಂಡಕುಂದಾನ್ವಯದ ಹಗರೆಯ ತೀರ್ಥದ ಪ್ರತಿಬದ್ಧದ ಭರತಪಂಡಿತರಿಗೆ ಜಕ್ಕಿಯಬ್ಬೆ ಮತ್ತು ಆಕೆಯ ಮಗಳು ದೇಗುಲ ನಿರ್ವಹಣೆಗೆ ಭೂದಾನವನ್ನು ನೀಡಿದ್ದಾಳೆ.[46] ಅರಸೀಕೆರೆಯ ಸಹಸ್ರಕೂಟ ಜಿನಾಲಯಕ್ಕೆ ಪುದುವಟ್ಟು ಸಂಗ್ರಹಿಸುವಾಗ ಸಾಗರಣಂದಿ ಸಿದ್ಧಾಂಥದೇವರ ಸಿಸಿತಿ (ಶಿಷ್ಯತಿ) ಮರುದೇವಿ ಅಜ್ಜಿ 10 ಗದ್ಯಾಣವನ್ನು ನೀಡಿದರೆ ಸುತಕೀರ್ತಿಭಟ್ಟಾರಕರ ಸಿಸಿತಿ ಜಯತಿಸಿರಿಯತ್ರಿಯು 9 ಗದ್ಯಾಣವನ್ನು ನೀಡಿದ್ದಾಳೆ.[4]

**ನಿಷಿಧಿಯಿಂದ ತಿಳಿದುಬರುವ ಸಂಗತಿಗಳು:**

ಮುನಿಗಳು, ಕಂತಿಯರು ಸ್ವರ್ಗಸ್ಥರಾದಾಗ ಮುನಿಗಳಿಗೆ ಶಿಷ್ಯರಾಗಿದ್ದ ಕಂತಿಯರು, ಕಂತಿಯರಿಗೆ, ಅವರ ಶಿಷ್ಯರೋ ಅಥವಾ ಬಂಧುಗಳೋ ನಿಷಿಧಿಗಲ್ಲುಗಳನ್ನು ಹಾಕಿಸುತ್ತಿದ್ದರು. ಪುರುಷರಷ್ಟೆ ಪ್ರಬಲವಾಗಿ ಅನೇಕ ಶಿಷ್ಯತಿಯರು ತಮ್ಮ ಗುರುಗಳು ಅಸ್ತಂಗತರಾದಾಗ ಅವರ ನೆನಪಿನಲ್ಲಿ ನಿಷಿಧಿಗಳನ್ನು ಹಾಕಿಸಿದ್ದಾರೆ ಹಾಗೂ ಅವರು ತಾವು ಸನ್ಯಾಸನವನ್ನು ಸ್ವೀಕರಿಸಿ ಅವರ ಶಿಷ್ಯತಿಯರಾಗಿದ್ದ ಸಂದರ್ಭದಲ್ಲೂ ಅವರ ನಿಷಿಧಿಗಳನ್ನು ಹಾಕಿಸಿದ್ದಾರೆ. ಸಿಸಿನ್ತಿಯರು, ಕೆಲವು ಗುಡ್ಡಿಯರು, ಸಿಸಿತಿಯರು, ಕಂತಿಯರು ಕೆಲವು ಸಂದರ್ಭದಲ್ಲಿ ಈ ಮುನಿಗಳ ತಪೋಸಾಧನೆಗಾಗಿಯೂ ಕೆಲವು ದಾನಗಳನ್ನು ನೀಡಿರುವುದು ಕಂಡುಬರುತ್ತದೆ. ಹಾಗಾಗಿ ಕಂತಿಯರಿಗೂ, ಇನ್ನುಳಿದ ಶ್ರಾವಕಿಯರಿಗೂ ಈ ದುಬಾರಿ ಬೆಲೆ ತೆತ್ತು

ನಿಷಿಧಿಕಲ್ಲುಗಳನ್ನು ಹಾಕಿಸುವುದಕ್ಕೂ, ಅದರ ಮೇಲಿನ ಶಾಸನಗಳನ್ನು ಕೆತ್ತಿಸುವುದಕ್ಕೂ, ಅದರಲ್ಲಿ ಸುಂದರವಾದ ಶಿಲ್ಪಗಳನ್ನು ಬಿಡಿಸುವುದರಲ್ಲಿಯೂ ಅತ್ಯುತ್ತಮವಾದ ಕಲಾಪ್ರಜ್ಞೆಯಿತ್ತು. ಜೊತೆಗೆ ಅಷ್ಟೇ ಪ್ರಬಲವಾಗಿ ಆರ್ಥಿಕ ಬೆಂಬಲವೂ ಇತ್ತು. ನೇರವಾಗಿ ಇಂತಿಂಥ ಶಿಷ್ಯೆಯರ ಇಂತಿಂಥ ಮುನಿಗಳಿಗಾಗಿ ನಿಷಿಧಿಯನ್ನು ಮಾಡಿದರು ಎಂದಾಗಲೂ ಅವರ ಸಾಮಾಜಿಕ ಮನಸ್ಥಿತಿ ಹಾಗೂ ಆರ್ಥಿಕ ಸಬಲತೆಯ ಕಡೆಗೆ ನಮ್ಮ ಗಮನ ಹರಿಸಬೇಕಾಗುತ್ತದೆ. ಹೊಯ್ಸಳರ ಕಾಲದ ನಿಷಿಧಿಗಳಂತೂ ಅತ್ಯುತ್ತಮ ಕಲಾಪರಿಪೂರ್ಣತೆಯನ್ನು ಹೊಂದಿದೆ. ರಾಜ ಸಂತತಿಯವರಲ್ಲದ ಅನೇಕರೂ ಈ ರೀತಿ ಮುಡಿಪಿದ್ದಾರೆ. ಅಂಥವರಲ್ಲಿ ಕೆಲವು ಪ್ರಮುಖರಿಗೆ ಮಾತ್ರ ನಿಷಿಧಿಯನ್ನು ಹಾಕಿಸಲಾಗಿದೆ. ಇದಕ್ಕೆ ಹೊಯ್ಸಳ ಮಹಾಮಂಡಳೇಶ್ವರರ ಪ್ರೋತ್ಸಾಹವೇ ಮುಖ್ಯ ಕಾರಣವಾಗಿದೆ.

ಅಷ್ಟೊಂದು ಹಣವನ್ನು ವ್ರತನಿರತರಾಗಿದ್ದ ಕಂತಿಯರು ಇಟ್ಟುಕೊಂಡಿರುತ್ತಿದ್ದರೇ? ಸನ್ಯಾಸನವನ್ನು ಸ್ವೀಕರಿಸಿದ ಮೇಲಾದರೂ ಅವರು ಹೇಗೆ ಹಣವನ್ನು ಇಟ್ಟುಕೊಳ್ಳುತ್ತಿದ್ದರು ಎಂಬ ಪ್ರಶ್ನೆ ಮೂಡುವುದು ಸಹಜವಾಗಿದೆ. ಕಠೋರ ವ್ರತಗಳಲ್ಲಿ ನಿರತರಾಗಿದ್ದುಕೊಂಡು ಸಲ್ಲೇಖನದಿಂದ ಬಾಳನ್ನು ಸಾರ್ಥಕಗೊಳಿಸಿಕೊಂಡ ಕಂತಿಯರು ಸಲ್ಲೇಖನ ವ್ರತಸ್ಥರಾದ, ಅನ್ನಾಹಾರಗಳನ್ನು ತ್ಯಜಿಸಿದ ಯತಿಗಳಿಗೆ, ಮುನಿಗಳಿಗೆ ದಾನಗಳನ್ನು ಮಾಡಬೇಕಾದ ಅನಿವಾರ್ಯತೆಯಾದರೂ ಏನಿರಬೇಕೆಂದು ಯೋಚಿಸಿದರೆ ಬಹುಶ: ಆರ್ಥಿಕವಾಗಿ ಹಿಂದೆಂದಿನಿಂದಲೂ ಸಬಲವಾಗಿದ್ದ ಇವರು ಎಲ್ಲವನ್ನೂ ತ್ಯಾಗ ಮಾಡಿ ತಪಸ್ಸಿಗೆ ನಡೆದಾಗ ಅವರ ಧನವನ್ನು ಅವರ ಮನೆಯವರು ಬಹುಶ: ಅವರ ಹೆಸರಿನಲ್ಲಿಯೇ ಈ ರೀತಿಯ ಧರ್ಮಗಳಲ್ಲಿ ವಿನಿಯೋಗಿಸುತ್ತಿದ್ದರು ಎಂದು ತೋರುತ್ತದೆ. ಅಥವಾ ದಾನ ನೀಡಿದ ಯಾರೇ ಆಗಲಿ ಇವರ ಮೇಲಿನ ಅಭಿಮಾನದಿಂದ ಅವರ ಹೆಸರನ್ನು ಮುನ್ನೆಲೆಗೆ ತರುತ್ತಿದ್ದರು ಎಂದೆನಿಸುತ್ತದೆ.

ಕೇತೆಯ ದಣ್ಣಾಯಕನ ಪತ್ನಿಯಾದ ಜಕ್ಕಿಯಬ್ಬೆಯು ಹೆಗ್ಗಡತಿಯಾಗಿದ್ದಳು ಈಕೆ ಎಲೆಗುಂದದಲ್ಲಿ ಶಾಂತಲೇಶ್ವರ ಬೊಪ್ಪೇಶ್ವರ ಎಂಬ ಎರಡು ದೇವಾಲಯಗಳನ್ನು ನಿರ್ಮಿಸಿದಳು. ಈ ಶಾಸನದಲ್ಲಿ ಈಕೆಯ ಮಗಳಾದ ಚಿಕ್ಕಶಾಂತಲೆಯನ್ನು ವಿಷ್ಣುವರ್ಧನನ ಪತ್ನಿ ಎಂದು ತಿಳಿಸುತ್ತದೆ. ಆದರೆ ಈಕೆ ಅತ್ಯಂತ ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡಳು. 19.10.1135ರ ಎಲೆಗುಂದದ ಶಾಸನವು ಚಿಕ್ಕಶಾಂತಲೆ ಹಾಗೂ ಆಕೆಯ ಮಗಳಾದ ಬೊಪ್ಪಲೆಯರಿಗೆ ಪರೋಕ್ಷ ವಿನಯವಾಗಿ ಈ ಮೇಲಿನ ದೇವಾಲಯಗಳನ್ನು ನಿರ್ಮಿಸಿದ ಸಂಗತಿ ಯನ್ನು ಗಮನಿಸಿದರೆ ಈಕೆ ವಿಷ್ಣುವರ್ಧನನೊಂದಿಗೆ ಹೆಚ್ಚುಕಾಲ ಬಾಳುವೆ ಮಾಡಿದಂತೆ ತೋರುವುದಿಲ್ಲ.[48]

ಹೀಗೆ ಹೊಯ್ಸಳ ಮಹಾಮಂಡಳೇಶ್ವರರ ಯುಗದಲ್ಲಿ ಅವರ ಪತ್ನಿಯರೂ ಸೇರಿ ಅನೇಕ ಸಾರ್ವಜನಿಕರೂ ಸೇರಿಕೊಂಡು ಜೈನಧರ್ಮದ ಬೆಳವಣಿಗೆಗೆ ಕಾರಣಕರ್ತರಾಗಿದ್ದರು. ಧಾರ್ಮಿಕತೆಯಲ್ಲಿಯೂ ಹಾಗೂ ಸಾಮಾಜಿಕತೆಯಲ್ಲಿಯೂ ಈ ಹೆಂಗಸರು ಅನೇಕ ಕೊಡುಗೆಗಳನ್ನು ನೀಡಿದ್ದಾರೆ.

**7.3. ಶೈವ ಧರ್ಮ:**

ಕರ್ನಾಟಕವೇ ಏಕೆ ಇಡೀ ಭಾರತದಲ್ಲಿಯೇ ಪ್ರಬಲವಾಗಿ ರೂಪುಗೊಂಡಿದ್ದ ಧರ್ಮವೆಂದರೆ ಶೈವಧರ್ಮ. ಬಹುಜನರ ಒಪ್ಪಿತ ಧರ್ಮವಾಗಿದ್ದ ಶೈವಧರ್ಮದಲ್ಲಿಯೂ ಕೂಡ ಕವಲುಗಳು ಒಡೆಯಲು ಸಾಧ್ಯವಾಗಿದ್ದರೂ ಅದು ಬಲವಾಗಿ ಬೆಳೆಯಲೂ ಹಾಗೂ ವಿಸ್ತೃತವಾಗಲು ಹೊಯ್ಸಳ ಅರಸರು ಮತ್ತು ಅವರ ಮಹಾಮಂಡಲೇಶ್ವರರು ನೀಡಿದ ಕೊಡುಗೆ ವಿಶೇಷವಾದದ್ದು. ಕಾಳಾಮುಖರು, ಕಾಪಾಲಿಕರು, ಇನ್ನಿತರರೊಂದಿಗೆ ಪ್ರಬಲರಾಗಿದ್ದೇ ಈ ಅವಧಿಯಲ್ಲಿ.

**7.3.1 ಪಾಶುಪತ–ಲಾಕುಳೀಶ ಪಂಥ :**

ಕರ್ನಾಟಕದಲ್ಲಿ ಪ್ರಾಚೀನಕಾಲದಲ್ಲಿ ಪ್ರಚಲಿತವಿದ್ದ ಶೈವಪಂಥಗಳಲ್ಲಿ ಪಾಶುಪತಪಂಥವೂ ಒಂದು. ಸುಮಾರು ಕ್ರಿ.ಶ. 7 ಮತ್ತು 8ನೆಯ ಶತಮಾನದವರೆಗೆ ಪ್ರಾಚೀನ ಕರ್ನಾಟಕದಲ್ಲಿ ಪಾಶುಪತ ಶೈವಧರ್ಮವು ಪ್ರಚಲಿತದಲ್ಲಿತ್ತೆಂದು ತಿಳಿದುಬರುತ್ತದೆ. ಆದರೆ ಮುಂದೆ ಪಾಶುಪತಮತವನ್ನು ಲಕುಲೀಶ ಎಂಬ ಯೋಗಿಯು ಪರಿಷ್ಕರಿಸಿ ಲಕುಲೀಶ ಮತವನ್ನಾಗಿ ಪ್ರಚುರಪಡಿಸಿದನು. ಲಕುಲೀಶನನ್ನು ಶಿವನ ಇಪ್ಪತ್ತೆಂಟನೆಯ ಅವತಾರವೆಂದು ಭಾವಿಸಲಾಗಿದೆ. ಲಕುಲೀಶ ಪರಂಪರೆಯಲ್ಲಿ ಹದಿನೆಂಟು ಜನ ಶ್ರೇಷ್ಠಯತಿಗಳು ಬಂದಿದ್ದು ಈ ಮತವನ್ನು ಎಲ್ಲೆಡೆ ಹರಡಿದರು. ಇವರಲ್ಲಿ ಕುಶಿಕ ಎಂಬುವವನು ಪಾಶುಪತ ಸೂತ್ರಗಳನ್ನು ಕ್ರೋಢಿಕರಿಸಿ ಈ ಪಂಥಕ್ಕೆ ನಿಶ್ಚಿತವಾದ ಆಯಾಮವನ್ನು ರೂಪಿಸಿದನೆಂದು ತಿಳಿದುಬರುತ್ತದೆ. ಹೀಗೆ ಪಾಶುಪತವೇ ಲಾಕುಲೀಶಮತವಾಗಿ ಬೆಳೆದುಬಂದದ್ದು ಖಚಿತವಾಗುತ್ತದೆ.

ಕರ್ನಾಟಕದಲ್ಲಿ 8–9 ನೆಯ ಶತಮಾನದ ನಂತರದ ಕಾಲಘಟ್ಟದಲ್ಲಿ ಅನೇಕ ಶಿವಾಲಯಗಳಲ್ಲಿ ಲಾಕುಳೀಶ ಯೋಗಿಗಳು ನೆಲೆಸಿದ್ದರು. ಕೋಲಾರದ ಆವನಿಯಲ್ಲಿದ್ದ ತ್ರಿಭುವನ ಕರ್ತಾರನೆಂಬ ಯತಿಗೆ ಕಲಿಯುಗ ರುದ್ರ ಎಂಬ ಬಿರುದಿತ್ತು. ಇವರಿದ್ದ ಪ್ರದೇಶವು ತಪೋರಾಜ್ಯವೆನಿಸಿತ್ತು. ಆವನಿಯ ಲಕ್ಷ್ಮಣೇಶ್ವರ ದೇವಾಲಯದ ಹೊರಭಿತ್ತಿಯಲ್ಲಿ ಈ ಮುನಿಯ ಉಬ್ಬುಶಿಲ್ಪವಿದೆ. ಅಂತೆಯೇ ಹೆಂಜೇರುವಿನ ಸ್ತಂಭ ಶಾಸನವು ಅಲ್ಲಿದ್ದ ಲಾಕುಳೀಶ ಮುನಿಯ ಬಗ್ಗೆ ತಿಳಿಸುತ್ತಾ "ಲಕುಲೀಶನ ಹೆಸರು ಮರೆತುಹೋದೀತೆಂಬ ಶಂಕೆಯಿಂದ ಧರ್ಮವನ್ನು ಉದ್ಧರಿಸಲು ಚಿಲ್ಲುಕಮುನಿಯು ಭೂಮಿಯಲ್ಲಿ ಅವತರಿಸಿದನು"ಎಂದು ತಿಳಿಸಿದೆ. ಹೆಂಜೇರುವಿನ ದೊಡ್ಡೇಶ್ವರ ದೇಗುಲದ ಶಾಸನವು ವರುಣಶಿವಭಟಾರನನ್ನು ಉಲ್ಲೇಖಿಸಿದೆ. ಶಿಕಾರಿಪುರದಲ್ಲಿ ಬಳ್ಳಿಗಾವೆಯ ಶಾಸನವು "ವೇದಗಳೆಂಬ ದಂಡವನ್ನು ಹಿಡಿದ ನಟನಾಗಿ ಅಳಿ ಧರ್ಮಗಳೆಂಬ ನಟಿಯನ್ನು ಶಿಕ್ಷಿಸುತ್ತಿರುವ ಮೂರು ಲೋಕಗಳಲ್ಲಿ ಮಂಗಳವನ್ನು ಮಾಡುತ್ತ ತನ್ನ ಭಕ್ತರಿಗೆ ದೃಷ್ಟಾದೃಷ್ಟ ಫಲವನ್ನು ನೀಡಬಲ್ಲ ಲಕುಳೀಶನ ಧರ್ಮವು ಜಯಿಸಲಿ" ಎಂದು ಆಶಿಸುತ್ತದೆ.[49] ಅರಸಿಯಕೆರೆಯ ನೊಳಂಬೇಶ್ವ ದೇವಾಲಯವು ಶ್ರೀಪರ್ವತದ ಅಗಸ್ತ್ಯೇಶ್ವರ ಸಂತತಿಯ ದಿವ್ಯಶಕ್ತಿ ಪಂಡಿತರ ಸ್ಥಾನವಾಗಿತ್ತೆಂದು ತಿಳಿಸಿದೆ. ಇದು ನೈಷ್ಠಿಕ ಸ್ಥಾನವಾಗಿದ್ದು ಇಲ್ಲಿದ್ದ ದಿವ್ಯಶಕ್ತಿ ವಾಮಶಕ್ತಿ ಪಂಡಿತರು ಲಾಕುಳಾಗಮದಂತೆ ಉತ್ತಮ ಆಚಾರ ಪುರುಷರಾಗಿದ್ದು ಪ್ರಸಿದ್ಧರಾಗಿದ್ದರು. ಕಡೂರಿನ ಚಿಕ್ಕಪಟ್ಟಣಗೆರೆಯ ಶಾಸನವು ಲಾಕುಳಾಗಮ ಪಾರವಾರ ಪಾರಗರಪ್ಪ

ಪಂಚಮಠದ ಸ್ಥಾನದಾಚಾರ್ಯರಪ್ಪ ಅಕ್ಷರಶಕ್ತಿ ದೇವರನ್ನು ಉಲ್ಲೇಖಿಸಿದೆ.[50] ಇದೇ ಜಿಲ್ಲೆಯ ತರೀಕೆರೆ ದ್ಯಾಂಪುರದ ಶಾಸನವು ಹಟ್ಟಣಗೆರೆ ಪಂಚಮಠದ ಸ್ಥಾನದಾಚಾರ್ಯರಾದ ಅನಂತಶಕ್ತಿ ದೇವರ ಪುತ್ರ ಕಲ್ಯಾಣಸಕ್ತಿದೇವ ಮತ್ತು ಈಶ್ವರ ದೇವರನ್ನು ಕುರಿತು ಮಾಹಿತಿ ನೀಡುತ್ತದೆ.[51] ಅರಸಿಯಕೆರೆಯ ಕಣಿಕಟ್ಟೆ ಶಾಸನವು ಲಾಕುಳಾಗಮ ಸಮಯ ಸಮುದ್ಧರಣರಪ್ಪ ಕೊಮಾರಸಿಂಗಿ ಪಂಡಿತರಿಗೆ ಬಿಟ್ಟ ದಾನವನ್ನು ದಾಖಲಿಸಿದೆ.[52] ಹೀಗೆ ಹೊಯ್ಸಳ ಮಹಾಮಂಡಲೇಶ್ವರರು ಆಳಿದ ಈ ಪ್ರದೇಶ ಮತ್ತು ಇದರಂತೆ ದಕ್ಷಿಣ ಕರ್ನಾಟಕದ ಹಲವು ಪ್ರದೇಶಗಳಲ್ಲಿದ್ದ ಶಿವದೇಗುಲಗಳಲ್ಲಿ ಲಾಕುಳ ಯತಿಗಳು ನೆಲೆಸಿದ್ದು ಲಕುಲೀಶ ಮತವೇ ಪ್ರಚಲಿತದಲ್ಲಿತ್ತೆಂಬುದು ದೃಢಪಡುತ್ತದೆ.

ಒಂದನೆಯ ನರಸಿಂಹನ ಆಳ್ವಿಕೆಯ ಕಾಳದಲ್ಲಿ ಪೆರ್ಗಡೆ ಎಱೆಯಮನು ತನ್ನ ಹೆಸರಿನಲ್ಲಿ ಎಱಿಂಗೇಶ್ವರ ದೇವಾಲಯವನ್ನು ಮುದುಗೆರೆಯಲ್ಲಿ ಕಟ್ಟಿಸಿ ಪ್ರತಿಷ್ಠಾಪನೆ ಮಾಡಿಸಿದ ವಿಷಯವನ್ನು ತಿಳಿಸುತ್ತದೆ. ಮುದುಗೆರೆ ಮುನಿಪ ಎಂದು ವರ್ಣಿತನಾದ ನಾಗರಾಶೀ ಪಂಡಿತದೇವನಿಗೆ ಆ ದೇವಾಳಯವನ್ನು ವಹಿಸಿಕೊಟ್ಟಂತೆ ತಿಳಿಸುತ್ತದೆ. ವಾಸ್ತವವಾಗಿ ಆತ ಅದೇ ಸ್ಥಳದವನಾಗಿರಬೇಕು. ಆತ ಲಾಕುಳ ಪಂಥಕ್ಕೆ ಸೇರಿದವನೆಂದು ತಿಳಿಸುತ್ತದೆ ಎಂದು ಹಾಸನ ೧೪೨ ಶಾಸನವು ತಿಳಿಸುತ್ತದೆ.

ಇಂತಹ ಪ್ರಸರಣಕ್ಕೆ ಹೊಯ್ಸಳ ಮಹಾಮಂಡಳೇಶ್ವರರು ಕೂಡ ಇಂಬುನೀಡಿ ಪ್ರೋತ್ಸಾಹಿಸುತ್ತಿದ್ದರು. ಸ್ವತಃ ಶೈವಧರ್ಮೀಯರಾಗಿದ್ದ ಮಹಾಮಂಡಳೇಶ್ವರರು ಲಾಕುಳಾಗಮ ಮತಕ್ಕೆ ಅನೇಕ ರೀತಿಯಲ್ಲಿ ಪರಿಷ್ಕಾರವನ್ನು ಮಾಡಲು ಮುಂದೆ ಬಂದಂತಹ ಶೈವಯತಿಗಳನ್ನು ಪ್ರೋತ್ಸಾಹಿಸುವ ಮೂಲಕ ನೂತನ ಯೋಚನೆಗಳಿಗೆ ಮನ್ನಣೆಯನ್ನು ನೀಡಿದರು.

### 7.3.2 ಕಾಪಾಲಿಕ ಪಂಥ :

ಲಾಕುಳೀಶ ಪಂಥವು ವಿಸ್ತೃತವಾಗಿ ಪಸರಿಸಿದ್ದುದರ ಪರಿಣಾಮವಾಗಿ ಕ್ರಮೇಣ ಕಾಪಾಲಿಕ ಮತ್ತು ಕಾಳಾಮುಖ ಎಂಬ ಎರಡು ಪ್ರಮುಖ ಶಾಖೆಗಳಾಗಿ ವಿಂಗಡಣೆಯಾಯಿತು. ಈ ಎರಡು ಪಂಥದವರು ಲಾಕುಳಾಗಮವನ್ನು ಅಭ್ಯಾಸ ಮಾಡುತ್ತಾರೆ. ಕಾಪಾಲಿಕ ಮತ ಧರ್ಮದ ಪ್ರಭಾವ ಕುಂದಿದರೂ ಅವರು ಕಲ್ಪಿಸಿದ ಶಿವರೂಪ ಮಾತ್ರ ಕರ್ನಾಟಕದ ಶೈವರಲ್ಲಿ ಪೂರ್ಣ ಅಳಿಸಲಿಲ್ಲ. 12–13ನೆಯ ಶತಮಾನದ ಅನೇಕ ಹೊಯ್ಸಳ ಮಹಾಮಂಡಳೇಶ್ವರರು ನಿರ್ಮಿಸಿದ ದೇವಾಲಯಗಳ ಹೊರಗೋಡೆಯ ಮೇಲೆ ಕಂಡುಬರುವ ಕಪಾಲ ಭೈರವ, ಕಪಾಲಭೈರವಿ, ಚಾಮುಂಡ ಮೊದಲಾದ ಉಬ್ಬುಚಿತ್ರಗಳು ಇದಕ್ಕೆ ಸಾಕ್ಷಿ. ಅಂದರೆ ಕಾಪಾಲಿಕರು ಕರ್ನಾಟಕದಲ್ಲಿ (ದಕ್ಷಿಣದಲ್ಲಿ) ತಮ್ಮ ಪ್ರಭಾವ ಕಳೆದುಕೊಳ್ಳುವ ಮುಂಚೆ ಶೈವ ಸಂಪ್ರದಾಯದಲ್ಲಿ ತಮ್ಮ ಸ್ಥಾನಗಳಿಸಿಕೊಂಡರು.

### 7.3.3 ಕಾಳಾಮುಖ ಪಂಥ :

ಮೂಲಶೈವ ಮತವನ್ನುಳಿದರೆ ವೀರಶೈವ ಪೂರ್ವ ಕರ್ನಾಟಕದಲ್ಲಿ ಕಾಳಾಮುಖರೇ ಅತ್ಯಂತ ಪ್ರಭಾವಶಾಲಿಗಳಾಗಿದ್ದಂತೆ ಕಂಡುಬರುವುದು. ಇದಕ್ಕೆ ನೂರಕ್ಕೂ ಹೆಚ್ಚು ಕಾಳಾಮುಖರ ಉಲ್ಲೇಖಗಳಿರುವ

ಶಾಸನಗಳು ದೊರೆತಿರುವುದು ಪ್ರಮುಖ ಆಧಾರವಾಗಿದೆ. ಈ ಶೈವ ಪಂಗಡದಲ್ಲಿ ಪ್ರಮುಖವಾಗಿ ಎರಡು ಶಾಖೆಗಳಿದ್ದವು ಒಂದು ಶಕ್ತಿ ಪರಿಷತ್ತು, ಮತ್ತೊಂದು ಸಿಂಹ ಪರಿಷತ್. ಇಂದಿನ ಧಾರವಾಡ ಹಾಗೂ ಶಿವಮೊಗ್ಗಾ ಜಿಲ್ಲೆಯಲ್ಲಿ ಶಕ್ತಿ ಪರಿಷತ್ ಹೆಚ್ಚು ಪ್ರಚಾರದಲ್ಲಿತ್ತು; ಇಂದಿನ ಬಳ್ಳಾರಿ, ಬಿಜಾಪುರ, ಗುಲಬರ್ಗಾ ಜಿಲ್ಲೆಯಲ್ಲಿ ಸಿಂಹ ಪರಿಷತ್ ಹೆಚ್ಚು ಪ್ರಚಾರದಲ್ಲಿದ್ದಂತೆ ಕಂಡುಬರುವುದು. ಶಕ್ತಿ ಮತ್ತು ಸಿಂಹ ಪರಿಷತ್ತುಗಳಿಗೆ ಸೇರಿದ ಬೆಳ್ಳಿ ಸಂತಾನ, ಭುಜಂಗಾವಳೀ ಮೊದಲಾದ ಉಪಶಾಖೆಗೆ ಸಂಬಂಧಪಟ್ಟ ಶಾಸನಗಳಿಂದ ಈ ಪಂಥವು ಕರ್ನಾಟಕದ ಯಾವ ಕೇಂದ್ರಗಳಲ್ಲಿ ಹೆಚ್ಚು ಪ್ರಚಾರದಲ್ಲಿದ್ದಿತೆಂಬುದನ್ನು ತಿಳಿಯಬಹದು.[53] ಕಲ್ಯಾಣದ ಚಾಳುಕ್ಯರು ಮತ್ತು ಕಲಚುರ್ಯರ ಕಾಲಘಟ್ಟದಲ್ಲಿ ಅರಸರು ಮತ್ತು ಅವರ ಸಾಮಂತರು ಹಾಗೂ ಅಧಿಕಾರಿವರ್ಗದವರು ಕಾಳಾಮುಖ ಶೈವ ಪಂಥಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು ಮುಂದೆ ಹೊಯ್ಸಳರು ಈ ಶೈವ ಶಾಖೆಗೆ ನೆರವು ನೀಡಿದರು. ಅವರ ರಾಜಧಾನಿಯಾದ ಹಳೆಯಬೀಡು ಶಕ್ತಿ ಪರಿಷತ್ತಿನ ಕೇಂದ್ರವಾಗಿತ್ತು. ರಾಜಧಾನಿಯ ಸುತ್ತುಮುತ್ತಲ ಹಾಗೂ ಸನಿಹದ ಕೇಂದ್ರಗಳಾದ ಅರಸಿಕೆರೆ, ಜಾಜೂರು, ಹಲ್ಲೂರು, ಕಣಿಕಟ್ಟೆ ಮತ್ತು ಸಿರಿಯೂರು (ಎಲ್ಲವೂ ಹಾಸನಜಿಲ್ಲೆಯಲ್ಲಿವೆ)ಗಳಲ್ಲಿ ಕಾಳಾಮುಖ ದೇವಾಲಯಗಳನ್ನು ಕಟ್ಟಿದರು. ಇವೆಲ್ಲವೂ 12ನೆಯ ಶತಮಾನದ ಉತ್ತರಾರ್ಧಕ್ಕೆ ಸೇರಿವೆ. 1150ಕ್ಕಿಂತ ಮುಂಚೆ ಚಿಕ್ಕಮಗಳೂರಿನಲ್ಲಿ ಒಂದೆರೆಡು ಕಾಳಾಮುಖ ಕೇಂದ್ರಗಳಿದ್ದವು. ಇಮ್ಮಡಿ ವೀರಬಲ್ಲಾಳನು ತನ್ನ ರಾಜ್ಯದ ಉತ್ತರದ ಗಡಿಯನ್ನು ವಿಸ್ತರಿಸಿಕೊಂಡಾಗ ಬಳ್ಳಿಗಾವೆಯಲ್ಲಲ್ಲದೇ ಧಾರವಾಡ, ಗದಗು, ಸಾತೇನಹಳ್ಳಿ ಮೊದಲಾದ ಕಾಳಾಮುಖ ಕೇಂದ್ರಗಳೊಡನೆ ಸಂಪರ್ಕ ಪಡೆದಿದ್ದನು. 1192 ಮತ್ತು 1199ರಲ್ಲಿ ಬಲ್ಲಾಳನು ಗದುಗಿನಲ್ಲಿ ದತ್ತಿಕೊಟ್ಟ. ಅವನ ಸಾಮಂತರೂ ಅಧಿಕಾರಿಗಳೂ ಬಳ್ಳಿಗಾವೆ, ಸಾತೇನಹಳ್ಳಿ, ರಾಮನಹಳ್ಳಿಯಲ್ಲಿರುವ ಕಾಳಾಮುಖ ದೇವಾಲಯಗಳನ್ನು ಕ್ರಿ. ಶ. 1192–1204ರ ಅವಧಿಯಲ್ಲಿ ಪೋಷಿಸಿದ್ದುದಕ್ಕೆ ಶಾಸನಾಧಾರಗಳಿವೆ.

ಹೊಯ್ಸಳ ರಾಜ್ಯದ ಕೇಂದ್ರ ವಿಭಾಗವಾದ ಇಂದಿನ ಹಾಸನ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಹಲವಾರು ಶಿವ ದೇವಾಲಯಗಳು 12ನೆಯ ಶಾತಮಾನದ ಆದಿಭಾಗದಲ್ಲಿ ಕಟ್ಟಲ್ಪಟ್ಟವು, ಅಲ್ಲದೆ ಶಿವಗಂಗೆ, ಹೆಗ್ಗುಂದ, ನಂದಿಬೆಳ್ಳೂರು ಮೊದಲಾದೆಡೆಗಳಲ್ಲಿದ್ದ ಪುರಾತನ ಶಿವಾಲಯಗಳು ಹೆಚ್ಚಿನ ಮಾನ್ಯತೆ ಪಡೆದು ಮುಂದುವರೆದವು. ಹೊಯ್ಸಳರ ಅಧಿಕಾರ ಹಬ್ಬಿದಂತೆ ಅವರ ಆಳ್ವಿಕೆಗೆ ಒಳಗಾದ ಸಾವಿರಾರು ಎಕರೆ ಕಾಡು ಪ್ರದೇಶವನ್ನು ಕೃಷಿ ಯೋಗ್ಯವಾಗಿ ಪರಿವರ್ತಿಸಿ ಅಲ್ಲಿ ಹೊಸದಾಗಿ ಕೆರೆ, ಕಟ್ಟೆ, ಬಾವಿ, ದೇವಾಲಯ, ಅಗ್ರಹಾರಗಳನ್ನು ಸ್ಥಾಪಿಸಲಾಯಿತು. ಇದರಿಂದ ಗಂಗವಾಡಿ ಪ್ರದೇಶದ ಮೇಲೆ ಆದ ಜನಸಂಖ್ಯಾ ಒತ್ತಡದ ಚಿತ್ರ ಸ್ಪಷ್ಟವಾಗಿ ತೋರಿಬರುವುದು. 12ನೆಯ ಶತಮಾನದಲ್ಲಿ ನಿರ್ಮಾಣಗೊಂಡ ಮನಗತೂರು, ಬನಕನಕಟ್ಟೆ, ಬೆಳುಗೆರೆ, ನಾಗರನವಿಲೆ, ಅರಹೆಟ್ಟ, ಬಾಳುಗಚ್ಚೆ, ಬೊಮ್ಮೇನಹಳ್ಳಿ ಮೊದಲಾದ ಗ್ರಾಮಗಳನ್ನು ಅಲ್ಲಿ ಕಟ್ಟಿದ ದೇವಾಲಯ ಹಾಗೂ ಕೆರೆಗಳನ್ನು ನಾವಿಲ್ಲಿ ನಿದರ್ಶಿಸಬಹುದು. ಇವೆಲ್ಲವೂ ರಾಜರಿಂದಲೇ ಆದ ಕಾರ್ಯಗಳಲ್ಲ. ಮಹಾಮಂಡಳೇಶ್ವರರು ಮತ್ತು ಅವರ ಕೈಕೆಳಗಿನ ಚಿಕ್ಕಪುಟ್ಟ ಅಧಿಕಾರಿಗಳಾದ ಗಾವುಂಡ ಹೆಗ್ಗಡೆ ಮೊದಲಾದವರಿಂದ ಆದವುಗಳು. ದೋರಸಮುದ್ರದ ಮಣಿಕಾರರು ಕೆಲ್ಲಂಗೆರೆಯ

ತೆಲ್ಲಗರು ಉಳಿದೆಡೆಗಳಲ್ಲಿದ್ದ ತೆಲ್ಲಿಗ, ಜಗತಿಕೊತ್ತಳಿ, ನಾನಾದೇಶಿ, ಗರುಡ, ವಡ್ಡವ್ಯವಹಾರಿ, ಕೊಯಿಲಾಳು, ಮೇಳಿಗ, ಗೊಜ್ಜ, ಗವರೆ ಮುಮ್ಮರಿದಂಡ ಮೊದಲಾದ ವೃತ್ತಿಗಳಿಗೆ ಸೇರಿದವರು ಅತ್ಯಂತ ಶ್ರದ್ಧಾವಂತ ಶೈವರಾಗಿದ್ದು ತಮ್ಮ ಮತದ ಪ್ರಚಾರಕ್ಕೆ ಅಮೂಲ್ಯ ಸೇವೆಯನ್ನು ಸಲ್ಲಿಸಿದರು. ಹೊಯ್ಸಳರ ಆಡಳಿತವು ಉತ್ತುಂಗಕ್ಕೇರಿದ್ದ ಸಂದರ್ಭದಲ್ಲಿ ಸುಮಾರು 50 ವರ್ಷಗಳಲ್ಲಿ ನೂರಕ್ಕಿಂತ ಹೆಚ್ಚು ಶಿವಾಲಯಗಳು ಗಂಗವಾಡಿಯ ವಿವಿಧ ಭಾಗಗಳಲ್ಲಿ ಸ್ಥಾಪನೆಗೊಂಡುವೆಂದು ಕಂಡುಬರುವುದು. ಇದನ್ನು ಸ್ಪಷ್ಟಗೊಳಿಸುವ ಶಾಸನಾಧಾರಗಳಿಂದ ಶೈವರ ಸಂಖ್ಯೆಯ ಹೆಚ್ಚಳ ಮತ್ತು ಅವರು ಸಮಾಜದಲ್ಲಿ ವಹಿಸಿದ ಪಾತ್ರದ ವೈಶಿಷ್ಟ ಹಾಗೂ ಮಹತ್ವವನ್ನು ಊಹಿಸಬಹುದಾಗಿದೆ.

12–13ನೆಯ ಶತಮಾನದಲ್ಲಿ ಅನೇಕ ಶೈವಮಠಗಳು ಉಳಿದುಕೊಂಡು ಬಂದುವಲ್ಲದೆ ಅವು ಸಮಾಜದಲ್ಲಿ ವಿಶಿಷ್ಟ ಪಾತ್ರವನ್ನು ವಹಿಸಿ ಬೆಳೆದುಕೊಂಡು ಬಂದವು. ಅರಸಿಯಕೆರೆಯ ನೈಷ್ಠಿಕಮಠ, ಮಚ್ಚೇರಿಯ ಶೈವಮಠ 12ನೆಯ ಶತಮಾನದ ಆದಿಭಾಗದಲ್ಲಾಗಲೇ ಪ್ರಸಿದ್ಧವಾಗಿದ್ದವು. ನರಸಿಂಹನ ಕಾಲದಲ್ಲಿದ್ದ ಹತ್ತಲಗೆರೆಯ ಲಕುಲೀಶರ ಪಂಚಮಠ, ಮಚ್ಚೇರಿಯ ಪಂಚಮಠ, ಕುಡತಿನಿಯ ಕಲ್ಲುಮಠಗಳು ವಿಶಿಷ್ಟ ಸ್ಥಾನ ಪಡೆದಂತೆ ಕಂಡುಬರುವುದು. ಆ ತರುವಾಯದ ಕಾಲದಲ್ಲಿ ಕಂಡುಬರುವ ಮಠಗಳಲ್ಲಿ ಖಂಡ್ಯೆಯಲ್ಲಿಯ ಅನುಷ್ಠಾನಮಠ, ತರಿಗಣಲೆ ಮತ್ತು ಮುಳುಗುಂದಗಳಲ್ಲಿಯ ಪಂಚಮಠಗಳು, ಸೋಮಪುರದ ಚಿಕ್ಕ ಭೇರುಂಡ ಮಠಗಳಲ್ಲದೆ ಹೊಯ್ಸಳ ಆಶ್ರಯ ಪಡೆದ ತಿರುವಣ್ಣೈಕೋವಿಲ್ ಬಳಿಯ ಸಂಗಮ ದೇವರ ಮಠ, ತಿರುಪತ್ತುರೈ ಬಳಿಯ ಕಕ್ಕನಾಯಕನ್ ಮಠ, ಶಿವಿಪಾದಶೇರಮ್‌ನಲ್ಲಿಯ ಎಲುಗುರ್ರುವಂತಿರ್ ಮಠ ಹಾಗೂ ಗೋಲಕಿಮಠಗಳನ್ನಿಲ್ಲಿ ನಿದರ್ಶಿಸಬಹದು. ವಿಶೇಷವಾಗಿ ಈ ಮಠಗಳಲ್ಲಿ ವಿದ್ಯಾದಾನಕ್ಕೆ ಪ್ರಾಮುಖ್ಯತೆಯನ್ನು ನೀಡಿದ್ದು ಸ್ಥಳೀಯ ಆಡಳಿತಾಧಿಕಾರಿಗಳಾದ ಮಹಾಮಂಡಳೇಸ್ವರರಿಂದ ಮನ್ನಣೆಯನ್ನು ಪಡೆದಿದ್ದು ಇಲ್ಲಿದ್ದ ಕಾಳಾಮುಖ ಯತಿಗಳು ಸ್ಥಳೀಯ ಧಾರ್ಮಿಕ ಚರಿತ್ರೆಯ ಜೊತೆಜೊತೆಗೆ ಸಮಾಜೋ–ಸಾಂಸ್ಕೃತಿಕ ಚರಿತ್ರೆಗೆ ವಿಶೇಷವಾದ ಕಾಣಿಕೆಯಿತ್ತಿದ್ದಾರೆ. ಇದರೊಂದಿಗೆ ಇದೇ ಕಾಲಾವಧಿಯಲ್ಲಿ ಅನೇಕ ಶಿವಪುರಿಗಳು ಸ್ಥಾಪಿತಗೊಂಡವು. ಅಲ್ಲದೆ ಉಳಿದ ನೂರಾರು ಅಗ್ರಹಾರಗಳಲ್ಲಿ ವೈಷ್ಣವರೊಡನೆ ಶೈವರೂ ಸ್ಥಾನ ಗಳಿಸಿಕೊಂಡರು. ದೋರಸಮುದ್ರ, ಬಸುರಾಳು, ಕೋರವಂಗಲ, ಹರಿಹರ ಮತ್ತು ಹಲವಾರು ಹಳ್ಳಿಪಟ್ಟಣಗಳು ಶೈವ ಕೇಂದ್ರಗಳಾದವು.

ಹೊಯ್ಸಳರ ಆಳ್ವಿಕೆಯ ಆರಂಭದಿಂದಲೂ, ಅನೇಕ ಸಾಮಂತರು ಶೈವರಾಗಿದ್ದರೆಂದು ತಿಳಿದುಬರುವುದು. ಮೊದಲ ನರಸಿಂಹನ ಕಾಲದಲ್ಲಿ ಚಾಳಿಕೆಯ ವೃತ್ತಿ, ಹುಳಿಯಾರ ವೃತ್ತಿಗಳ ಮತ್ತು ಮಗರೆನಾಡು ಆಸಂದಿನಾಡುಗಳ ನಾಯಕರು ಶೈವ ಮತದಲ್ಲಿ ವಿಶೇಷ ಆಸಕ್ತರಾಗಿದ್ದರು.

**ಗೋವಿದೇವ ಮತ್ತು ಅವನ ಅಧಿಕಾರಿಗಳು**

ಕಣಿಕಟ್ಟೆ ಹಾಗೂ ಹುಳಿಯೇರಿನ ಪ್ರಭು ಮಹಾಮಂಡಳೇಶ್ವರ ಗೋವಿದೇವನ ಪ್ರಾದೇಶಿಕ ಆಡಳಿತದಲ್ಲಿ ಅವನ ಅಧೀನ ಅಧಿಕಾರಿಗಳು ಅವನೊಂದಿಗೆ ಆಡಳಿತದಲ್ಲಿ ನೆರವು ನೀಡುತ್ತಿದ್ದರು. ಅವರಲ್ಲಿ ಒಬ್ಬೊಬ್ಬರ ಶೈವಧರ್ಮಪರ ಕೊಡುಗೆಗಳನ್ನು ಈ ಮುಂದಿನಂತೆ ಕಾಣಬಹುದು.

**ಪೆರ್ಗಡೆ ಕೇತಣ್ಣ** : ಈತ 'ಚಟ್ಟನಗಂಧವಾರಣ', 'ಗೋವಿಯ ಕಟ್ಟಿದಲಗು' ಎಂದು ಪ್ರಸಿದ್ಧನಾಗಿದ್ದ ಪೆರ್ಗಡೆ ಬಿಕ್ಕಿಮಯ್ಯನ ಮಗ. ಕೇತಣ್ಣನು ತನ್ನ ತಂದೆಯಂತೆ ವೀರಶ್ರೇಷ್ಠನೂ, ಅಸಹಾಯ ಶೂರನೂ ಆಗಿದ್ದನು. ಆದ್ದರಿಂದ ಅವನಿಗೆ 'ಮಹಾಸುಭಟ ಗುಣಸಂಪೂರ್ಣ' ಎಂಬ ಬಿರುದಿತ್ತು. ಈತನು ತನ್ನ ತಮ್ಮಂದಿರಾದ ಮಾರೆಯ, ದೇವಣ್ಣರೊಡಗೂಡಿ ಒಂದು ಶಿವದೇವಾಲಯವನ್ನು ನಿರ್ಮಿಸಿ, ಅದಕ್ಕೆ ಭೂದಾನಗಳನ್ನು ಕೊಡುತ್ತಾನೆ. ಇವನಿಂದ ಆಲಯ ನಿರ್ಮಿತ ಸ್ಥಳವಾದ ಮತ್ತೂರು ಇವನಿಗೆ ಹೇಗೆ ಕೊಡುಗೆಯಾಗಿ ಬಂತು ಎಂದು ಹೇಳುವಾಗ, ಸೊಗಸಾದ ಯುದ್ಧ ಚಿತ್ರದೊಂದಿಗೆ ಕೇತಣ್ಣನು ಆಳರಸನೊಂದಿಗೆ ವೈರಿಗಳೊಂದಿಗೆ ಹೋರಾಡಿದ ವಿಷಯವನ್ನು ಮತ್ತೂರಿನ ಈ ಶಾಸನ[54] ಹೀಗೆ ತಿಳಿಸುತ್ತದೆ

**"ಆಳ್ದನ ಅನುವರದೊಳಂ ಬಯಲುಗಾಳೆಗದೊಳಂ ಕೋಟೆ ಗಾಳಗದೊಳಂ**

**ಮಾಱಾಂತವೈರಿ ಗಳನಿಱಿದೋಡಿಸಿ ತನ್ನಿಱಿದ ತೊಡರಂ ಎತ್ತಿದಾನೆಯ**

**ಮೊಗವಡದಬಿರುದಂ ನೆಗರ್ತ್ತೆಯುಂ ಕೀರ್ತ್ತಿಯುಂ ಸಲಲು"**

ಅರಸನು ಮೆಚ್ಚಿ ಮತ್ತೂರನ್ನು ಇವನಿಗೆ ಕೊಡುಗೆಯಾಗಿ ಇತ್ತನು. ಈ ಊರಿನಲ್ಲಿ ಕೆರೆಯನ್ನು ಕಟ್ಟಿಸಿ, ತಮ್ಮ ತಂದೆ ಬಿಕ್ಕಿಮಯ್ಯನ ಹೆಸರಿನಲ್ಲಿ ಬಿಕ್ಕೇಶ್ವರ ದೇಗುಲವನ್ನು, ತನ್ನ ತಾಯಿಯ ಹೆಸರಿನಲ್ಲಿ ಆಂಡೇಶ್ವರ ದೇಗುಲವನ್ನು ನಿರ್ಮಿಸಿ, ಆ ದೇವರುಗಳ ಪೂಜಾದಿ ಸೇವೆಗಳಿಗೆಂದು ಗಂಗಣಿಕಬ್ಬೆಯ ಮಗ ಧರ್ಮರಾಶಿಪಂಡಿತರಿಗೆ ಭೂದಾನಗಳನ್ನು ನೀಡಿದನು.

**ದೊಡ್ಡಬಿದಿರೆಯ ಮಸಣಗೌಡ** : ಮಸಣಗೌಡನು ಗೋವಿದೇವನ ನಿಷ್ಠಾವಂತ ಸೇವಕನಾಗಿದ್ದನು. ಈತನು ತನ್ನ ತಮ್ಮಂದಿರೊಡಗೂಡಿ ಬಿದಿರೆಯ ಮೂಲಸ್ಥಾನದ ಕಲಿದೇವರಿಗೆಂದು ಕಾರ್ತ್ತಿಕದೇವರ ಮೊದಲಬಾಡವಾದ ಕೊಟ್ಟಿತಣೆಯ ಕಲ್ಲುಮಠದ ಮಲ್ಲಿಕಾರ್ಜುನ ಪಂಡಿತರ ಪುತ್ರರಾದ ಸಂಕರಾಶಿಪಂಡಿತ ಮತ್ತು ಸಂತರಾಶಿಪಂಡಿತರಿಗೆ ಭೂದಾನಗಳನ್ನು ನೀಡಿದನು.[55]

**ತಂಡಗದ ಮಾಚರಸ** : ತಂಡಗದ ಶಾಸನವು[56] ಇವನ ಅದ್ವಿತೀಯ ವ್ಯಕ್ತಿತ್ವವನ್ನು ಹಾಗೂ ಈ ವಂಶಿಯರ ಬಗ್ಗೆ ವಿಶೇಷವಾದ ಮಾಹಿತಿಯನ್ನು ನೀಡುತ್ತದೆ. ಗೋವಿಯ ರಾಜ್ಯಸಮುದ್ಧರಣಕ್ಕೆ ಮಾಚರಸನು ವೀರಲಕ್ಷ್ಮಿಯು ವಿಷ್ಣುವಿನ ಜೊತೆಗಿರುವಂತೆ ಸಹಾಯಕನಾಗಿದ್ದನು. ಗೋವಿಯು ಅವನನ್ನು ಪ್ರೀತಿಯಿಂದ ಪೊರೆದು ಮನ್ನಣೆಯಿತ್ತು ಮಂಡಳಿಕ ಪದವಿಗೇರಿಸಿದ್ದನು. ತನ್ನ ದಾನ, ಧರ್ಮ, ವಿಕ್ರಮಗಳ ಔನ್ನತ್ಯದಿಂದ ಮಾಚರಸನು ಗೋವಿಯ ಅಧೀನದಲ್ಲಿನ ಪ್ರದೇಶಗಳಲ್ಲಿ ಶಾಂತಿ–ಸುಭದ್ರತೆಗಳು ನೆಲೆಸುವಂತೆ

ಮಾಡಿದನು. ವಸುಧೆಗೆ ಶಾಶ್ವತವಾಗಿ ಶಿವಗೃಹಗಳನ್ನು ಮಾಚನು ನಿರ್ಮಿಸಿದ್ದನು. ತಂಡಗದಲ್ಲಿ ಏಚೇಶ್ವರ ಮತ್ತು ಮುದ್ದೇಶ್ವರ (ತನ್ನ ತಂದೆ ಮತ್ತು ಅಣ್ಣನ ನೆನಪಿಗಾಗಿ) ದೇವರುಗಳನ್ನು ಪ್ರತಿಷ್ಠೆ ಮಾಡಿ, ಆಲಯ ನಿರ್ಮಿಸಿ, ದೇಗುಲದ ನಿರ್ವಹಣೆಗೆಂದು ಹಿರಿಯಕೆರೆಯ ಹೊಲಗಳನ್ನು ದತ್ತಿಯಾಗಿ ಮೂಲಸ್ಥಾನದ ಅಮೃತರಾಶಿ ದೇವರಿಗೆ ನೀಡಿದನು.

**ಮನ್ನೆಯ ಮನಹರಸ** : ಈತ ಕಾಡನೂರು–70 ರಲ್ಲಿನ ಹೆಜ್ಜಾಜಿ 12ಕ್ಕೆ ಉತ್ತರಾಧಿಕಾರಿಯೇನೋ ಎಂಬಂತೆ ರಾಜೇಂದ್ರ ಚೋಳನ ಮೊಮ್ಮಗನಾಗಿ ಚಾಮದೇವನ ಮಗನಾಗಿ ಜನ್ಮವೆತ್ತಿದನು. ಇವನಿಗೆ ಮಾಚರಸ, ಬಮ್ಮರಸ, ಮಾರರಸರೆಂಬ ಮೂವರು ಸಹೋದರರಿದ್ದರು. ಮನಹರಸನ ಶೌರ್ಯ–ಪರಾಕ್ರಮ, ಧರ್ಮಗುಣೋನ್ನತಿಗಳನ್ನು ಶಾಸನಗಳು[57] ವಿಶೇಷವಾಗಿ ಬಣ್ಣಿಸಿವೆ. ಮನಹರಸನು ತನ್ನ ಗುರುಗಳಿಗೆ ಕೆಲವು ದಾನಗಳನ್ನು ಕೊಟ್ಟು ಅವರಿಗೆ ಗೌರವ – ಮನ್ನಣೆಗಳನ್ನು ನೀಡಿದ್ದನು. ತನ್ನ ಸಹೋದರರೊಡಗೂಡಿ ಕೋರಗೆರೆಯಲ್ಲಿ 4 ಖಂಡುಗ ಗದ್ದೆ. 1 ಮತ್ತರು ಹೊಲ, 1 ಕೊಳಗ ಗದ್ದೆಗಳನ್ನು ಶ್ರೀಪರ್ವತದ ಸಿದ್ಧಪಟ್ಟದಾಚಾರ್ಯ್ಯ ಗಂಗರಾಶಿದೇವರ ಶಿಷ್ಯಪರಂಪರೆಯಲ್ಲಿ ಬರುವ ಕೇಶವಶಕ್ತಿ ದೇವರಿಗೆ ದಾನವಾಗಿ ನೀಡಿದನು. ಕೇಶವಶಕ್ತಿದೇವರ ಗುರುಗಳಾದ ಶಿವಶಕ್ತಿದೇವರಿಗೆ ಡಿಂಕನಹಾಳದಲ್ಲಿ 2 ಖಂಡುಗ ಗದ್ದೆ, ಹಿರಿಯಕೆರೆಯ ಕೆಳಗೆ ಹುಣಸೆಯ ಗದ್ದೆ 10 ಕೊಳಗ, ಹಾಳ ಕೆಯಿ 3 ಮತ್ತರುಗಳನ್ನು ದಾನವಾಗಿ ಅರ್ಪಿಸಿದನು.

ಗೋವಿದೇವನು ಕಣಿಕಟ್ಟೆಯಲ್ಲಿದ್ದಾಗ ಅಲ್ಲಿನ ಶಿಷ್ಟಬ್ರಾಹ್ಮಣರಾದ ಆಳ್ವಿಭಟ್ಟರು ಅಲ್ಲಿ ಕಲಿಗೇಶ್ವರ ದೇವರನ್ನು ಪ್ರತಿಷ್ಠೆ ಮಾಡಲು ಅನುವು ಮಾಡಿಕೊಟ್ಟಿದ್ದನು.[58] ಅವರು ಕಟ್ಟಿಸಿದ ದೇವಾಲಯದ ನಿರ್ವಹಣೆಗೆಂದು ಹಿರಿಯ ಕೆರೆಯ ಚಿಕ್ಕತೂಬಿನ ಮೊದಲೇರಿಯ ಬಯಲಲ್ಲಿ 1 ಖಂಡುಗ ಗದ್ದೆ, ಅಡುವಗೆರೆಯ ಕೆರೆಯ ಬಳಿ 1 ಖಂಡುಗ ಗದ್ದೆಗಳನ್ನು ಗೋವಿದೇವನು ದತ್ತಿಯಾಗಿ ನೀಡಿದನು. ಕಣಿಕಟ್ಟೆಯ ಹೊಯ್ಸಳಗೌಡನ ಮೊಮ್ಮಗ ಸಾತೆಯನಾಯಕನು 1 ಖಂಡುಗ ಗದ್ದೆಯನ್ನು, ದೇಗುಲದ ಪಶ್ಚಿಮಕ್ಕೆ ಇದ್ದ ಬೆದ್ದಲು ಭೂಮಿಯನ್ನು ದೇವರಿಗೆ ನೀಡಿದ್ದನು.[59] ತನ್ನ ಕಾಲದಲ್ಲಿ ನಿರ್ಮಾಣಗೊಂಡ ದೇಗುಲಗಳು ದೀರ್ಘಕಾಲದವರೆಗೆ ಕ್ಷೇಮ ಸ್ಥಿತಿಯಲ್ಲಿರುವಂತೆ ತಾನು ಮತ್ತು ತನ್ನ ಅಧಿಕಾರಿವರ್ಗದವರು ನೋಡಿಕೊಂಡಿದ್ದನು.

ಮಹಾಮಂಡಲೇಶ್ವರ ಗೋವಿದೇವನ ಮಗ ಬಲ್ಲಿದೇವರಸನ ಅಧೀನವರ್ತಿಯಾದ ಮಾದಿಗೌಡನು ನೇರ್ಲಕೆರೆಯನ್ನು ಆಳುತ್ತಿದ್ದನು. ಇವನು ಮಕ್ಕಳಾದ ಸುಗ್ಗವ್ವೆ, ಕೇತಗೌಡ, ಮಾಚಿಯಬ್ಬೆ, ಹಿರಿಯಬೂಚಗೌಡ, ಚಿಕ್ಕಬೂಡಗೌಡ ಐವರು ಮಕ್ಕಳೊಂದಿಗೆ ನೇರ್ಲಕೆರೆಯ ಸುಗ್ಗೇಶ್ವರದೇವರಿಗೆ ನಂದಾದೀವಿಗೆ ಮೊದಲಾದ ಸೇವೆಗಳಿಗೆಂದು ಮಗರೆನಾಡಿನ ರಾಜಗುರು ಅಣುವಗೆರೆಯ ಜ್ಞಾನಶಕ್ತಿಯ ಅಮರಚಂದ್ರಭೂಷಣನ ಸುಪುತ್ರ ಗುರುಭಕ್ತನಿಗೆ ಅಪಾರ ಭೂಮಿ, ತೋಟ, ಗಾಣಗಳನ್ನು ದತ್ತಿಯಾಗಿ ನೀಡಿದನು.

ಬಲ್ಲಿದೇವರಸನ ಇನ್ನೊಬ್ಬ ಅಧಿಕಾರಿಯಾಗಿದ್ದ ಬೋಚಿಗೌಡನು ಮಯ್ದಗೌಡನೊಡಗೂಡಿ ಕೆಹೆಗನಡು (ಕೈನಡು) ಎಂಬಲ್ಲಿನ ಮಲ್ಲಿಕಾರ್ಜುನ ದೇವರ ಅಂಗಭೋಗ, ನೈವೇದ್ಯ, ತಪೋಧನರ ಆಹಾರದಾನಕ್ಕೆಂದು ಊರ ಬಡಗಣ ಹಿರಿಯಕೆರೆಯ ಕೆಳಗಿನ 2 ತೂಬಿನ ನಡುವಿನ 4 ಖಂಡುಗ ಗದ್ದೆ, ಊರ ಮುಂದಿನ ಕೆರೆವೊಳಗಿನ 2 ಮತ್ತರು ಬೆದ್ದಲೆ, ಕೆರೆಯ ಬಡಗಣ ಕೋಡಿಯಲ್ಲಿ 500 ಕಂಬ ಬೆದ್ದಲೆ, ಹಿರದಹಾಳದಲ್ಲಿ 100 ಕಂಬ ಬೆದ್ದಲೆ, ಕೆರೆಯ ಮೂಡಣ ಕೋಡಿಯ ಎರೆಯಮಣ್ಣಿನ, 50 ಕಂಬ ಗದ್ದೆ, ಊರ ಮೂಡಣ ಗೌಡಗೆರೆಯ ಕೆಳಗೆ ತೋಟಕ್ಕೆ ಬಿಟ್ಟ 100 ಕೈಕಂಬ ಗದ್ದೆ, 1 ಗಾಣ, ಇಷ್ಟೆಲ್ಲವನ್ನು ದೇವೇಂದ್ರಪಂಡಿತರ ಶಿಷ್ಯ ರುದ್ರಶಕ್ತಿ ಪಂಡಿತರಿಗೆ ದತ್ತಿಯಾಗಿ ನೀಡಿದನು. ಚಿಕ್ಕ ಬೂದಿಹಾಳದ ಮಾಚಿಗೌಡ[60] ಕೇತಗೌಡರು ಮಹಾದೇವರಸನ ಮಗ ತಿಪ್ಪಜೀಯದಂಮೇಶ್ವರ ದೇವರ ನೈವೇದ್ಯ ಅಂಗಭೋಗ, ತಪೋಧನರ ಆಹಾರದಾನಕ್ಕೆಂದು ಅಂಕಲಗೆರೆಯಲ್ಲಿ 2 ಸಲಗೆ ಗದ್ದೆ, 100 ಕಂಬ ಬೆದ್ದಲೆ, 200 ಕಂಬ ಹೊಲ, 1 ಕೈಗಾಣಗಳನ್ನು ದತ್ತಿಯಾಗಿ ನೀಡಿದನು.

ಇನ್ನೊರ್ವ ಅಧೀನವರ್ತಿಯಾದ ನಾಗಗೌಡನ ಮೂವರು ಮಕ್ಕಳು ಎಡೆಯಕಟ್ಟ (ಈಗಿನ ಯಾದಗಟ್ಟ)ದ ಕಲಿದೇವರ ಅಂಗಭೋಗ, ನೈವೇದ್ಯ, ಜೀರ್ಣೋದ್ಧಾರ, ತಪೋಧನರ ಆಹಾರದಾನಗಳಿಗೆಂದು ಹಿರಿಯಕೆರೆಯ ಕೆಳಗಿನ ಮೊದಲೇರಿಯಲ್ಲಿ 3 ಸಲಗೆ ಗದ್ದೆ, ದೇಗುಲದ ದಕ್ಷಿಣಕ್ಕೆ 340 ಕಂಬ ಗದ್ದೆ, ಊರಿನ ಉತ್ತರಕ್ಕೆ 120 ಕೈ ಕಂಬ ಗದ್ದೆ, ದೇಗುಲದ ದಕ್ಷಿಣಕ್ಕಿರುವ ಅರಳಿಮರದ ಬಳಿ ಕಂಬಳಕೆಯಿ ಮತ್ತು 480 ಕಂಬ ಗದ್ದೆ ಇಷ್ಟನ್ನು ಕಬ್ಬಳದ ಸಕಳೇಶ್ವರ ಗುರುಗಳ ಮೊಮ್ಮಗನಾದ ಬ್ರಹ್ಮಶಕ್ತಿಗುರುಗಳಿಗೆ ದತ್ತಿಯಾಗಿ ನೀಡಿದರು.

ಬಲ್ಲಿದೇವರಸನು ತಾನೇ ಸ್ವತಃ ದತ್ತಿ ನೀಡುವ ಮೂಲಕ ಹುಳಿಯೇರ ಪ್ರದೇಶದಲ್ಲಿ ಧಾರ್ಮಿಕವಾಗಿ ಸುಭಗ ವಾತಾವರಣವನ್ನು ಕಲ್ಪಿಸಿದ್ದನು. ಉದಾಹರಣೆಗೆ ಹುಳಿಯಾರಿನ ಶಾಸನವು[61] ಬಲ್ಲನ ಗುರುಪರಂಪರೆಯನ್ನು ತಿಳಿಸುತ್ತ ದತ್ತಿವಿಚಾರವೊಂದನ್ನು ನಮ್ಮ ಅವಗಾಹನೆಗೆ ತರುತ್ತದೆ :–

ಶ್ರೀಪರ್ವತದಅಗಸ್ತ್ಯೇಶ್ವರಮಠದ ಸದ್ಯೋಜಾತಾಚಾರ್ಯರು

।

ಕ್ರಿಯಾಶಕ್ತಿದೇವರು

।

ವಾಮಶಕ್ತಿದೇವರು

।

ಕ್ರಿಯಾಶಕ್ತಿಮುನೀಂದ್ರರು

ಕಡೆಯಲ್ಲಿ ಉಕ್ತವಾಗಿರುವ ಕ್ರಿಯಾಶಕ್ತಿಮುನೀಂದ್ರರಿಗೆ ಬಲ್ಲರಸನು ಭೀಮಸಮುದ್ರವನ್ನು ಹುಳಿಯೇರಿ ನಲ್ಲಿರುವ ಭೀಮೇಶ್ವರ ದೇವರ ಅಂಗಭೋಗ, ಆಹಾರದಾನ, ಪಾತ್ರಪಾವುಳಕ್ಕೆಂದು ದತ್ತಿಯಾಗಿ ಸಮರ್ಪಿಸಿದನು. ಮೇಲುನೋಟಕ್ಕೆ ಬಲ್ಲಿದೇವರಸನ ಶಾಸನಗಳಲ್ಲಿ ಶೈವಗುರುಗಳಿಗೆ, ಶಿವನ ಆಲಯಗಳಿಗೆ ದಾನದತ್ತಿ ಸಂದಿರುವುದರಿಂದ ಅವನೊಬ್ಬ ಶೈವಪಕ್ಷಪಾತಿಯಾದ ಆಡಳಿತಗಾರ ಎಂದೆನಿಸಿಬಿಡಬಹುದು. ಆದರೆ ಹೆಗ್ಗೆರೆಯ ಶಾಸನವು[62] ಬಲ್ಲಿದೇವರಸನು ಹೆಗ್ಗರೆಯ ಬಸದಿಗೆ ಸ್ಥಳವ್ರಿತ್ತಿಯಾಗಿ ಹಿರಿಯಕೆರೆಯ

ಕೆಳಗೆ 6 ಸಲಗೆ ಗದ್ದೆ, 1 ಮತ್ತರು ಬೆದ್ದಲೆಗಳನ್ನು ದತ್ತಿ ನೀಡಿದುದನ್ನು ತಿಳಿಸುತ್ತ ಅವನೊಬ್ಬ ಧರ್ಮಾಂಧತೆಯಿಂದ ವಿದೂರನಾದ ಧಾರ್ಮಿಕ ಸಹಿಷ್ಣುವಾದ, ಆ ಮೂಲಕ ಸಾಮಾಜಿಕ ಸಾಮರಸ್ಯಕ್ಕೆ ಆದರ್ಶ ಪ್ರಾಯನಾದ ಸಮರ್ಥ ಅಧಿಕಾರಿ ಎಂಬುದನ್ನು ಸುವೇದ್ಯಗೊಳಿಸುತ್ತದೆ.

ಬಲ್ಲಿದೇವರಸನ ಮಡದಿಯಾದ ಸೋವಲ ದೇವಿಯನ್ನು ಬೂದಿಹಾಳಿನ ಶಾಸನವು[63] ಹೀಗೆ ವರ್ಣಿಸಿದೆ "ಸದಾ ಶಿವನ ಧ್ಯಾನದಲ್ಲಿ ತಲ್ಲೀನಳಾಗಿ, ಶಿವಭಕ್ತರಿಗೆ ಮಿಗಿಲಾದ ಸೇವೆಗಳನ್ನು ಸಮರ್ಪಿಸುತ್ತ, ಅತ್ಯಂತ ಆನಂದಚಿತ್ತವುಳ್ಳವಳಾಗಿ ತನ್ನ ಸ್ವಧರ್ಮವನ್ನು ಪಾಲಿಸುತ್ತಿರುವ ಸೋವಲದೇವಿಯು ಮೃದುವಚನೆ, ಶ್ರೇಷ್ಠವಾದ ಗುಣವುಳ್ಳ ಸತಿ" ಎಂದು ಶಾಸನಕವಿ ಹೊಗಳಿದ್ದಾನೆ.

**ಕಪ್ಪಯ್ಯನಾಯಕ** : 22-11-1232ರ ಈ ಶಾಸನದನ್ವಯ[64] ಕಪ್ಪಯ್ಯನಾಯಕನು 'ಆಶ್ರಿತಜನ ಕಲ್ಪವೃಕ್ಷ', 'ಶರಣಾಗತ ವಜ್ರಪಂಜರ' ಎಂದು ಬಿರುದಾಂಕಿತನಾಗಿದ್ದು ಹುಳಿಯೆಱವನ್ನು ಆಳುತ್ತಿದ್ದನು. ಇವನ ಅಧೀನವರ್ತಿ ಯಾದ ನಾಡಪ್ರಭು ನಂಬಯ್ಯನು ಸಮಸ್ತಗೌಡ ಪ್ರಜೆಗಳೊಡಗೂಡಿ ಸೂಚಿನಹಳ್ಳಿಯನ್ನು ಹೆಗ್ಗೆರೆಯ ಕಲಿದೇವರು ಮತ್ತು ಗಳಗೇಶ್ವರದೇವರ ಆರಾಧನೆಗಳಿಗೆಂದು ಅಲ್ಲಿನ ಸ್ಥಾನಿಕ ಕಲಜೀಯರಿಗೆ ದತ್ತಿಯಾಗಿ ನೀಡಿದನು.

**ಲಕುಮಯ್ಯನಾಯಕ** : ಈತ ಕಪ್ಪಯ್ಯನಾಯಕರ ತಮ್ಮ "ಮಹಾಸಾಮಂತ ಕಪ್ಪಯ್ಯನಾಯಕರ ತಂಮ ಲಕುಮಯ್ಯ ನಾಯಕರು ಹುಳಿಯಱ ನೆಲೆವೀಡಿನಲ್ಲಿ ರಾಜ್ಯಗೆಯ್ಯುತ್ತಮಿರೆ" ಎಂಬ ಕ್ರಿ.ಶ. 1235ರ ಮೊಚೀಹಳ್ಳಿಯ ಶಾಸನೋಕ್ತ[65] ಕಪ್ಪಯ್ಯನ ತರುವಾಯ ಹುಳಿಯಱವು ಲಕುಮಯ್ಯನ ಸುಪರ್ದಿಗೆ ಬಂದಿತ್ತೆಂಬುದನ್ನು ತಿಳಿಸುತ್ತದೆ. ಈ ಶಾಸನವು ಮುಂದುವರಿದು ಮಗರೆಮುನ್ನೂರಿನ ಸಮಸ್ತನಾಡಪ್ರಭು ಮೋಟಗೌಡನು ತನ್ನ ತಂದೆ ಮಾಚಿಗೌಡನ ಹೆಸರಿನಲ್ಲಿ ಮಾಚೀಶ್ವರ ದೇಗುಲವನ್ನು ನಿರ್ಮಿಸಿ, ದೇವರ ಪೂಜಾದಿ ಸೇವೆಗಳಿಗೆಂದು ಕೆಲವು ಭೂದಾನಗಳನ್ನು ಬೇವಿನಹಾಳಿನ ಸ್ಥಾನಿಕ ಕೇತಜೀಯರಿಗೆ ನೀಡಿದನು. ಬಹುಶಃ ಈ ಶಾಸನ ದೊರೆತಿರುವ ಮೋಟಹಳ್ಳಿಗೆ ಈ ಹೆಸರು ಮೋಟಗೌಡನಿಂದಲೇ ಬಂದಿರಬೇಕು; ಅಂದರೆ ಮೋಟಗೌಡನು ಸ್ಥಳೀಯವಾಗಿ ಬಹಳ ಪ್ರಭಾವಿಯಾದ ಅಧಿಕಾರಿಯಾಗಿದ್ದಿರಬೇಕು.

ಲಕುಮಯ್ಯನಾಯಕನ ಅಧೀನ ಅಧಿಕಾರಿಯಾದ ಹಿರಿಯ ಚಂಡಿಯ ಮುದ್ದೆಯನಾಯಕನು ತನ್ನ ತಂದೆ ಜಕ್ಕೆಯನಾಯಕನ ನೆನಪಿಗಾಗಿ ಜಕ್ಕೇಶ್ವರ ದೇವರನ್ನು ಮುದ್ದೇನಹಳ್ಳಿಯಲ್ಲಿ ಪ್ರತಿಷ್ಠಾಪಿಸಿ, ಆಲಯ ನಿರ್ಮಿಸಿ ಭೂದಾನಗಳನ್ನು ಮಲ್ಲದೆಜೀಯ ಎಂಬುವವನಿಗೆ ನೀಡಿದನು. ಈ ಮುದ್ದೆಯನಾಯಕನ ಪ್ರಭಾವಳಿಯಿಂದ ಈ ಊರಿಗೆ ಮುದ್ದೇನಹಳ್ಳಿ ಎಂಬ ಹೆಸರು ಸಂದಿರಬಹುದು.

**ಕೆಚ್ಚನ ಮಾಚನಾಯಕ :** ಇವನು ಕಣಿಕಟ್ಟೆಯಲ್ಲಿ ಆಳುತ್ತಿದ್ದಾಗಲೇ ಚಟ್ಟಬೋವನೆಂಬಾತನು ಇಲ್ಲಿ ಒಂದು ನೀಲೇಶ್ವರ ದೇಗುಲವನ್ನು ನಿರ್ಮಿಸಿದನಲ್ಲದೆ ಕೆರೆಯನ್ನು ಕಟ್ಟಿಸಿದನು. ಈ ದೇವಾಲಯದ ನಿರ್ವಹಣೆಗೆ ಮತ್ತು ಅಂಗಭೋಗಾದಿ ಸೇವೆಗಳಿಗೆ ಕಣಿಕಟ್ಟೆಯ ಪ್ರಜೆಗಳು, ಜಗತಿಕೊತ್ತಳಿಗಳನ್ನು ಒಳಗೊಂಡಂತೆ ಚಟ್ಟಬೋವನು ನಿಡುಗಟ್ಟದ ಕೆರೆಯ ಪಶ್ಚಿಮ ಕೋಡಿಯ ಬಳಿ 3 ಸಲಗೆ ಗದ್ದೆಯನ್ನು

ಲಾಕುಳಾಗಮದ ಸಿಂಗಿಪಂಡಿತರಿಗೆ ದತ್ತಿ ನೀಡಿದನು. ಇದೇ ಆಲಯಕ್ಕೆ ಹೊಯ್ಸಳ ರಾಣಿ ಉಮಾದೇವಿಯು ಮೂರು ಸಲಗೆ ಗದ್ದೆ ಮತ್ತು 3 ಸಲಗೆ ಬೆದ್ದಲುಗಳನ್ನು ದಾನ ನೀಡಿದಳು.[66]

**ಮಹಾದೇವನಾಯಕ** : ಇವನು ಕೆಚ್ಚನ ಮಾಚಯನಾಯಕನ ಮಗ. ಇವನ ಆಳ್ವಿಕೆಯ ಕಾಲದಲ್ಲಿ ಬರ್ಮೋಜ ಮತ್ತು ಮಾಚೋಜರು ಕಮ್ಮಟೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿ, ಆಲಯ ನಿರ್ಮಿಸಿ ಅದರ ಉಸ್ತುವಾರಿಯನ್ನು ಜಗತೇಶ್ವರ ಪಂಡೀತರಿಗೆ ವಹಿಸಿದರು. ಈ ಆಲಯದಲ್ಲಿ ನಡೆಯುವ ದೇವರ ನೈವೇದ್ಯ, ನಂದಾದೀವಿಗೆಗೆ, ತಪೋಧನರ ಆಹಾರ ದಾನಗಳಿಗೆಂದು ಮಹಾದೇವನಾಯಕನು ಹಿರಿಯಕೆರೆಯ ಕೆಳಗಿನ ಮಾವಿನಕುಟಿಯಲ್ಲಿ 300 ಕಂಬ ಬೆದ್ದಲೆ, ಕಣಿಕಟ್ಟೆ ದಕ್ಷಿಣಕ್ಕಿರುವ ಕೆರೆಯ ಕೆಳಗಿನ ಮಾವಿನಕುಟಿಯಲ್ಲಿ 300 ಕಂಬ ಬೆದ್ದಲೆ, ಅದೇ ಊರಿನ ದಕ್ಷಿಣದ ದೊಡ್ಡ ಆಲದ ಮರದ ಪೂರ್ವಕ್ಕೆ ಮತ್ತರು ಭೂಮಿಯನ್ನು ದೇವರಿಗೆ ದಾನವಾಗಿ ಅರ್ಪಿಸಿದನು.[67]

**ಸಾಮಂತ ಮಾಚ** : ಸಾಮಂತ ಮಾಚನು ಸಾಮಂತ ಭೀಮ ಮತ್ತು ಚಟ್ಟಿಯಕ್ಕ ದಂಪತಿಗಳ ಹಿರಿಯಪುತ್ರ. ವಕ್ಕಲಗೆರೆಯ ಶಾಸನವು[68] ಸಾಮಂತ ಮಲ್ಲನಿಗೆ ಒದಿರಾಜ ಅಥವಾ ಉದಯಾದಿತ್ಯನೆಂಬ ಸೇನಾನಿಯಿದ್ದನೆಂಬುದನ್ನು ತಿಳಿಸುತ್ತದೆ. ಈ ಒದಿರಾಜನು ವಕ್ಕಲಗೆರೆಯಲ್ಲಿ ವದ್ದೇಶ್ವರ ದೇಗುಲವನ್ನು ಕಟ್ಟಿಸಿದ್ದನು. ಬಹುಶಃ ಒದಿರಾಜನಂತ ಇನ್ನು ಹಲವರು ಸೇನಾನಿಗಳು ಇವನ ಅಧೀನವರ್ತಿಗಳಾಗಿ ಇದ್ದಿರಬಹುದು. ಶಾಸನಗಳ ಲಭ್ಯತೆಯ ಕೊರತೆಯಿಂದ ಇವನ ಬಗ್ಗೆ ಹೆಚ್ಚಿನ ಮಾಹಿತಿಗಳು ಸದ್ಯಕ್ಕೆ ದೊರೆತಿಲ್ಲ.

**ಮಹಾಸಾಮಂತ ಚಟ್ಟಯ್ಯ** : ಹೊಯ್ಸಳ ಅರಸರಾದ ವಿನಯಾದಿತ್ಯ (ಕ್ರಿ.ಶ. 1047–1097), ಎರೆಯಂಗ (ಕ್ರಿ.ಶ.1098–1102), ಒಂದನೆಯ ಬಲ್ಲಾಳ (ಕ್ರಿ.ಶ 1102–1108), ವಿಷ್ಣುವರ್ಧನ (ಕ್ರಿ. ಶ 1108–1142) ಈ ನಾಲ್ವರ ಆಳ್ವಿಕೆಯಾವಧಿಯಲ್ಲಿ ಚಿಕ್ಕನಾಯಕನಹಳ್ಳಿಯ ಹುಳಿಯೇರು ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳನ್ನು ಹಾಗೂ ಕಡೂರಿನ ನೀರ್ಗುಂದ ಮತ್ತು ಅದರ ನೆರೆಯ ಪ್ರದೇಶಗಳನ್ನು ಮಹಾಸಾಮಂತ ಪದವಿಯಿಂದ ಚಟ್ಟಯ್ಯನು ಆಳಿದ್ದಾನೆ. ಕ್ರಿ.ಶ. 1087ರ ಚಿಕ್ಕನಾಯಕನಹಳ್ಳಿಯ ನಾಯಿಗೆರೆ ಗ್ರಾಮದಲ್ಲಿನ ಶಾಸನವು[69] ಇವನ ಆಳ್ವಿಕೆಯ ಕಾಲದಲ್ಲಿ ಮಾಯಣ ಮತ್ತು ಕೇತಣ್ಣರಿಬ್ಬರು ಹಂದರಕೆರೆಯ ಮಲ್ಲಿಕಾರ್ಜುನದೇವರಿಗೆ ಭೂದಾನಗಳನ್ನು ನೀಡಿದರು.

ಚಟ್ಟಯ್ಯನಿಗೆ ಆಡಳಿತದಲ್ಲಿ ನೆರವಾಗಲು ಅವನಿಗೆ ಅಧೀನನಾಗಿ ಅಧಿಕಾರವರ್ಗವಿದ್ದಿತು. ಜಕ್ಕಗೌಡನು ಚಟ್ಟಯ್ಯನ ಪಾದಪಯ್ಮೋಪಜೀವಿಯಾಗಿ ಕಬ್ಬಳ್ಳವನ್ನು ಆಳುತ್ತಿದ್ದನು.[70] ಯಾವುದೇ ಪ್ರಧಾನ ಕಾರ್ಯಗಳಿಗೆ ಜಟ್ಟಯ್ಯನ ಅನುಮತಿ ಪಡೆಯುವ ವಿಧೇಯ ಅಧಿಕಾರಿಯಾಗಿದ್ದನು. ಆದ್ದರಿಂದಲೇ ಚಕ್ಕಗೌಡನು ಕಬ್ಬಳ್ಳದಲ್ಲಿ ದೇಗುಲವನ್ನು ನಿರ್ಮಾಣ ಮಾಡುವ ಸಂದರ್ಭ ಒದಗಿದಾಗ ಚಟ್ಟಯ್ಯನ ಅನುಮತಿಯ ಮೇರೆಗೆ ದೇವಾಲಯವನ್ನು ರಚಿಸಿ, ಅದಕ್ಕೆ ದಾನದತ್ತಿಗಳನ್ನು ನೀಡಿದನು. ಅಂತೆಯೇ ಚಟ್ಟಯ್ಯನಾಳುತ್ತಿದ್ದ ನೀರ್ಗುಂದದ ವ್ಯಾಪ್ತಿಗೆ ಬರುವ 'ಪ್ರತ್ಯಕ್ಷಲಕ್ಷ್ಮಿಗೃಹ'ವೆನಿಸಿದ್ದ ಹಿರಿಯೂರಿನ ನಾಡಪ್ರಭು ಸಂಕಗೌಡನು ಅದೇ: ಕಡೂ 234 ಚಟ್ಟಯ್ಯನ ಒಪ್ಪಿಗೆಯನುಸಾರ ಸೋಮನಾಥದೇವರಿಗೆಂದು ಕೆಲವು ಭೂದಾನಗಳನ್ನು

ಹಂಪರಾಶಿಜೀಯರಿಗೆ ನೀಡಿದರೆ, ಅವನ ಮಗ ಬೊಪ್ಪಗೌಡನು ಇದೇ ಹಿರಿಯೂರಿನ ಸೋಮನಾಥನ ಆಲಯವನ್ನು ಪುನರುದ್ಧರಿಸಿ 2ನೆಯ ಬಲ್ಲಾಳನಿಂದ ತಾನು ಕೊಡುಗೆಯಾಗಿ ಪಡೆದಿದ್ದ ಆಲದಹಳ್ಳಿಯನ್ನು ಸೋಮನಾಥದೇವರಿಗೆ ದತ್ತಿಯಾಗಿ ಸಮರ್ಪಿಸಿದನು. ಈ ಸಂಕಗೌಡ ಮತ್ತು ಅವನ ಮಕ್ಕಳಾದ ಮಲ್ಲಗೌಡ, ಮಾದಿಗೌಡ, ಬೊಪ್ಪಗೌಡ, ಅಜಗೌಡ, ಚಟ್ಟಗೌಡ, ಮಾಕಗೌಡರು ಹಿರಿಯೂರಿನ ಮೂಲಸ್ಥಾನದ ಕಲಿದೇವರ ಆಲಯವನ್ನು ಪುನರುದ್ಧರಿಸಿ ದಾನದತ್ತಿಗಳನ್ನು ನೀಡಿದ್ದರು. ಮತ್ತೊಬ್ಬ ಅಧಿಕಾರಿಯಾದ ಕಡವೂರಿನ ಬಸವಗೌಡನ ಮಗ ಚೆಂದಗೌಡನು ಚಂದೇಶ್ವರ ದೇವಸ್ಥಾನವನ್ನು ನಿರ್ಮಿಸಿ ಅದಕ್ಕೆ 1ಮತ್ತರು ಗದ್ದೆ, 2ಮತ್ತರು ಹೊಲ, 1 ಗಾಣವನ್ನು ದಾನವಾಗಿ ಅರ್ಪಿಸಿದನು.[71]

ಚಟ್ಟಯ್ಯನ ಮರಣದ ತರುವಾಯ ಚಟ್ಟಯ್ಯನಿಗೆ ಪರೋಕ್ಷವಿನಯವಾಗಿ ಚಟ್ಟೇಶ್ವರದೇವರಿಗೆ ವಕ್ಕಲಗೆರೆಯ ಆದೆಯನಾಯಕ, ಬೀರಗೌಡ, ಶಾಂತಗೌಡರು ಹುಲ್ಲೆಯಕೆರೆಯಲ್ಲಿ 10 ಕೊಳಗ ಗದ್ದೆ, 500 ಕಂಬ ಹೊಲಗಳನ್ನು ದತ್ತಿಯಾಗಿ ಸಮರ್ಪಿಸಿದರು.[72] ಮರುವಂಜಿಯ ಮಲ್ಲೆಗೌಡನು ಅದೇ: ಕಡೂ 207 ಚಟ್ಟೆಯನಾಯಕರಿಗೆ ಪರೋಕ್ಷ ವಿನಯವಾಗಿ, ಚಟ್ಟೇಶ್ವರದೇವರಿಗೆ 500 ಕಂಬ ಹೊಲವನ್ನು, ಅಣುವಗೆರೆಯ ಮುಂದಗೌಡನು 500 ಕಂಬ ಹೊಲ, ಹೊನ್ನಯ್ಯ ಮತ್ತು ಹಸದಮಲ್ಲಯ್ಯ, ಕೇತೆಯನಾಯಕರು ಸಹ ತಲಾ 500 ಕಂಬ ಹೊಲಗಳನ್ನು ದತ್ತಿಯಾಗಿ ನೀಡಿದರು. ಇದೇ ಸಂದರ್ಭದಲ್ಲಿ ಹರಿಹರ ಮತ್ತು ಚಂದವ್ವೆ, ಕೆರೆಯಣ್ಣ ಮೊದಲಾದ ಸಮಸ್ತ ಪ್ರಜೆಗಳು ದುಡುಗೇತನಕೆರೆಯನ್ನು ಹರಿಹರದೇವರಿಗೆ ಅರ್ಪಿಸಿದರು.

**ಗೂಳಿಯ ಬಾಚಿದೇವ** : ಈತನು ಹಲವು ಶಿವಾಲಯಗಳನ್ನು ಮಾಡಿಸಿದ್ದನು. ಅವುಗಳಲ್ಲಿ ಕೈದಾಳದಲ್ಲಿ ತನ್ನ ತಂದೆ ಗಂಗಯ್ಯನಿಗೆ ಪರೋಕ್ಷವಿನಯವಾಗಿ ಗಂಗೇಶ್ವರ ದೇವಾಲಯವನ್ನು ಕೈಲಾಸಕ್ಕೆ ಸಮಾನವಾಗಿ ಮಾಡಿಸಿದನು. ತನ್ನ ಮುತ್ತಾತ ಸಾಮಂತನಾದ ಚಲವರಿವ ಎಂಬುವವನಿಗೆ ಪರೋಕ್ಷವಿನಯವಾಗಿ ಕಿತ್ತಗಳಿ ಎಂಬ ಪ್ರದೇಶದಲ್ಲಿ ಚಲವರೇಶ್ವರ ಎಂಬ ದೇಗುಲವನ್ನು ನಿರ್ಮಿಸಿದನು. ತನ್ನ ಮಗಳಾದ ಕುಮಾರಿ ಚನ್ನವ್ವೆನಾಯಿಕಿತಿಗೆ ಪರೋಕ್ಷವಿನಯವಾಗಿ ಶ್ರೀ ರಾಮೇಶ್ವರ ದೇಗುಲವನ್ನು ಹಿಮಾಲಯಕ್ಕೆ ಮಿಗಿಲಾಗಿ ಕಟ್ಟಿಸಿ ಈ ದೇವಾಲಯಕ್ಕೆ ಭೂಮಿ ಮತ್ತು ಎತ್ತುಗಾಣಗಳನ್ನು ದಾನವಿತ್ತನು.[73]

**ಜಯಗೊಂಡನಾಯಕ ಮತ್ತು ಮಾಚೆಯನಾಯಕ** : 2ನೆಯ ವೀರಬಲ್ಲಾಳನ ಅಧೀನ ಅಧಿಕಾರಿಗಳಾಗಿದ್ದರು. ಅರಸನು ಎರಬರಗೆಯ ನೆಲೆವೀಡಿನಲ್ಲಿ ಇದ್ದಾಗ, ನರಸಿಂಹದೇವನ ಮೊನೆಯನಾಯಕ ಜಯಗೊಂಡನಾಯಕ ಅವನ ಸತಿ ಮರವೆನಾಯಿಕಿತಿ ಇದ್ದರು. ಈ ದಂಪತಿಗಳ ಪುತ್ರ ಮಾಚೆಯನಾಯಕ, ಇವನಿಗೆ ಕೂಡಿಕೂಟಕ್ಕೆ ತುಪುವನಾಯಕರ ಗಂಡ, ತೊಡರ್ದ್ದರ ಗಾಳ ಬಿರುದ ಬಂಗಾರ, ಸಾಮಂತ ಘಸಣಿ ಎಂಬ ಬಿರುದುಗಳಿದ್ದವು, ಇವನ ಸತಿ ಗಂಗವ್ವೆ. ಈ ದಂಪತಿಗಳ ಪುತ್ರ ರಾಮೆಯನಾಯಕ,

ಹೊಯ್ಸಳ ವೀರಬಲ್ಲಾಳನ ಅಮರಾವತೀಕೊಟೆಯ ಹೆಗ್ಗಡೆ ಕೇತಯ್ಯನ ಸತ್ಕೀರ್ತಿಯೆಂದರೆ "ನೆಗಳ್ದೀ ಬಲ್ಲಾಳನ ಸನುಮಂತ್ರಿಗಳೆನಿಪ ಮಂತ್ರಿವರ್ಗ್ಗದೊಳಾರ್ಸ್ಸಜ್ಜನವಿನುತಂ ಘನಶೌರ್ಯ್ಯಂ

ಮನುಮಾರ್ಗ್ಗಂ ಕೇತಮಲ್ಲನೀ ವಸುಮತಿಯೊಳು" ಈ ಅಮರಾವತಿಕೋಟೆಯ ಸರ್ವಬಾಧಾಪರಿಹಾರವೆನಿಸಿದ್ದ ಹೊಳಲಕೆರೆಯ 66 ಮಹಾಜನಗಳು ಜಯಗೊಂಡನಾಯಕ, ಮಾಚೆಯನಾಯಕ, ಸಮಸ್ತ ಪ್ರಜೆ ಗೌಡುಗಳು ಉಪಸ್ಥಿತರಿದ್ದು ಮೂಲಸ್ಥಾನದ ದೇವರ ನಿತ್ಯ ನೈವೇದ್ಯ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಮಠಪತಿ ತಪೋಧನರ ಆಹಾರದಾನಕ್ಕೆ ಎಂದು ಲಾಕುಳಾಗಮ ಸಮಯ ಸಮುದ್ಧರಣನಾದ ಕರಿಯಜೀಯನ ಮಗ ಸೋಮರಾಶಿಯ ಮಗ ಬಮ್ಮರಾಶಿಗೆ ಹಲಕೆಲವು ಭೂಮಿಗಳನ್ನು ದತ್ತಿಯಾಗಿ ನೀಡಿದರು.[74]

**ನಾಳ್ಪ್ರಭು ಬಾಚಯನಾಯಕ :** ಬಾಚಯನಾಯಕನು ಚಿಕ್ಕಮುಗುಳಿಯ ನಾಳ್ಪ್ರಭುವಾಗಿದ್ದನು. ಕಲಿಯುಗದಲ್ಲಿ ವೀರಭದ್ರ ಮತ್ತು ಶಿವನ ಅವತಾರಿಯಂತೆ ಇದ್ದನು; ಶೈವಧರ್ಮವೆಂಬ ಮಹಾಸಾಗರಕ್ಕಿ ಚಂದ್ರನಂತಿದ್ದನು (ಇವನು ಶೈವಧರ್ಮದ ಪ್ರಚುರತೆಗೆ ಕಾರಣನಾಗಿದ್ದನು.) ಇವನು ಚಿಕ್ಕಮುಗಳಿಯಲ್ಲಿ ಸೋಮನಾಥ ಮತ್ತು ವೀರಭದ್ರ ದೇವರನ್ನು ಪ್ರತಿಷ್ಠಾಪಿಸಿ ಕೆಲವು ಭೂದಾನಗಳನ್ನು ನೀಡಿದ್ದನು. ದೇವರು ಗುರುಗಳ ಪಾದಕಮಲಗಳ ಪರಮ ಆರಾಧಕನಾಗಿದ್ದನು.

**ಮಹಾಪಸಾಯತ ಕೂಸಚಟ್ಟಯ್ಯ :** ಇವನು ಶಿವಾಲಯವನ್ನು ನಿರ್ಮಿಸಿ ಅಲ್ಲಿ ಚಟ್ಟೇಶ್ವರ ದೇವರನ್ನು ಪ್ರತಿಷ್ಠಾಪಿಸಿ ದೇವರ ವಿವಿಧ ಸೇವೆಗಳಿಗೆಂದು ನರಸಿಂಹನಿಂದ ಪಡೆದ ಚಟ್ಟಸಮುದ್ರವನ್ನು ಚಂದ್ರಶೇಖರಪಂಡಿತರಿಗೆ ದತಿಯಾಗಿ ನೀಡಿದನು.[75]

ಈ ಎಲ್ಲ ಮಾಹಿತಿಗಳನ್ನು ಅನುಲಕ್ಷಿಸಿದಾಗ, ಕೋಲಾರ, ಬೆಂಗಳೂರು, ಮೈಸೂರು, ತುಮಕೂರು, ಹಾಸನ, ಚಿತ್ರದುರ್ಗ, ಶಿವಮೊಗ್ಗ ಮತ್ತು ಇವುಗಳ ಸುತ್ತಮುತ್ತಲಿನ ಪರಿಸರದಲ್ಲಿ ಬಹುವಾಗಿ ಮೊದಮೊದಲು ಲಾಕುಳೀಶ ಪಂಥ ಮತ್ತು ಆನಂತರದಲ್ಲಿ ಇದರ ಮತ್ತೊಂದು ಉಪಶಾಖೆಯಾದ ಕಾಳಾಮುಖ ಪಂಥವೇ ಹೆಚ್ಚು ಪ್ರಬಲವಾಗಿತ್ತು ಎನ್ನಬಹುದು.ಈ ಒಟ್ಟು ಶೈವಧರ್ಮದ ಪ್ರಭಾವಳಿಯಲ್ಲಿ ಹೊಯ್ಸಳ ಮಹಾಮಂಡಳೇಶ್ವರರು ಸ್ಥಳೀಯ ಅಧಿಕಾರಿಗಳಾಗಿದ್ದುದರಿಂದ ಈ ಶೈವಧರ್ಮದ ಉಳಿವಿಗೆ ಮತ್ತು ಸಂವರ್ಧನೆಗೆ ಪ್ರಧಾನವಾದ ಕಾರಣಕರ್ತರಾಗಿದ್ದರೆಂಬುದು ಖಚಿತವಾಗುತ್ತದೆ.

**ಸೋಮೆಯ ದಂಡನಾಯಕ:** ಬಲ್ಲಪ್ಪದಂಡನಾಯಕನ ತಂದೆ ಸೋಮಯದಂಡನಾಯಕನು ಶೈವನಾಗಿದ್ದು, ಸೋಮನಾಥಲಿಂಗವನ್ನು ಸೋಮನಾಥಪುರದಲ್ಲಿ ಪ್ರತಿಷ್ಠಾಪಿಸುವ ಮೂಲಕ ಸೋಮನಾಥನ ಆರಾಧನಾ ಪಂಥವನ್ನು ದಕ್ಷಿಣದಲ್ಲಿ ಪ್ರಚುರಗೊಳಿಸಿದನು ಎಂಬ ಅಭಿಪ್ರಾಯವಿದೆ.[76] ಇವನ ಮೊಮ್ಮಗನಾದ ಇರುಗಿಸೆಟ್ಟಿಯು ಶಿವೈಕ್ಯನಾದ ವಿಚಾರ ಶಾಸನೋಕ್ತವೇ ಆಗಿದೆ. ಆದುದರಿಂದ ಬಲ್ಲಪ್ಪದಂಡನಾಯಕನ ವಂಶೀಯರು ಮೂಲತಃ ಶೈವರಾಗಿದ್ದರೆನ್ನಬಹುದು. ಆದರೂ ಆಳರಸರಂತೆ ಜೈನ, ಶೈವ, ವೈಷ್ಣವ ದೇಗುಲಗಳಿಗೆ ವಿಪುಲವಾಗಿ ದಾನಗಳನ್ನಿತ್ತಿರುವುದು ಅವರ ಧರ್ಮಸಹಿಷ್ಣುತಾ ಮನೋಭಾವವನ್ನು ಸುವ್ಯಕ್ತಗೊಳಿಸುತ್ತದೆ.

**ಬಲ್ಲಪ್ಪದಂಡನಾಯಕ:** ಬಲ್ಲಪ್ಪದಂಡನಾಯಕನ ಕ್ರಿ.ಶ. 1307ರ ವಿಭೂತಿಪುರದ ಶಾಸನದಲ್ಲಿ[77] ಮಹಾ ಪಸಾಯಿತನಾದ ನಿನ್ರಾನ್ (ಮಾಸಂದಿನಾಡಿನ ಪಶ್ಚಿಮಭಾಗದ ಅಧಿಕಾರಿ), ಸೆಂಬಿದೇವ, ವಿಲ್ಲಗಾಮುಂಡ ಮೊದಲಾದವರು ಪೆರುಎರಮೂರಿಗೆ ಹೊಂದಿಕೊಂಡಂತಿರುವ ಕಾಡನ್ನು ಕಡಿದು ಊರನ್ನು ಕಟ್ಟಿ, ಆ ಊರಿಗೆ 'ವಾಚ್ಚಿದೇವಪುರ' ಎಂದು ಹೆಸರಿಟ್ಟರು. ಆ ಊರಿಗೆ ಹೊಲಗದ್ದೆಗಳನ್ನು ವಾಚ್ಚಿದೇವರು ಎಂಬ ಮಠಪತಿಗೆ ಮಡಪುರದತ್ತಿಯಾಗಿ ನೀಡಿದರು. ಅದೇ(ವಾಚ್ಚಿದೇವಪುರವೇ ಈಗಿನ ವಿಭೂತಿಪುರ) ಈ ದತ್ತಿಯನ್ನು ಬಲ್ಲಾಳನ ಬಾಳಿಗೂ ತೋಳಿಗೂ ಜಯವಾಗಲಿ ಮತ್ತು ಬಲ್ಲಪ್ಪದಂಡನಾಯಕನಿಗೆ ಶುಭವಾಗಲಿ ಎಂದು ಹಾರೈಸಿ ನೀಡಿರುವುದು ಶಾಸನೋಕ್ತವಾಗಿದೆ.

ಶೃಂಗೇರಿಮಠದ ತಾಮ್ರಶಾಸನವೊಂದು[78] ಬಲ್ಲಪ್ಪದಂಡನಾಯಕನು ಮಾರಪ್ಪ ಒಡೆಯನೊಡಗೂಡಿ ಶೃಂಗೇರಿಗೆ ಬಂದು, ಭಾರತೀತೀರ್ಥ ಶ್ರೀಪಾದಂಗಳಿಗೆ ಹಾಗೂ ಅಲ್ಲಿನ ಪರಿಚಾರಕರಿಗೆ ಕೆಲವು ದಾನಗಳನ್ನು ಕೊಟ್ಟಿರುವುದನ್ನು ತಿಳಿಸುತ್ತದೆ. ಕ್ರಿ.ಶ. 1333ರ ತೇಕಲ್‌ನ ಮತ್ತೊಂದು ಶಾಸನವು[79] ಬಲ್ಲಪ್ಪ ದಂಡನಾಯಕನು ತೇಕಲ್‌ನ ಶಿಂಗೀಶ್ವರ–ಒಡೆಯ–ನಾಯನಾರ್ ದೇವರ ಅರ್ಚಕರಾದ ಪಾಲಭಟ್ಟರಿಗೆ ಇದೇ ದೇಗುಲದ ನಿತ್ಯೋಪಯೋಗಕ್ಕೆಂದು ಮತ್ತು ದುರಸ್ಥಿಗೆಂದು ಕೆಲವು ಹಳ್ಳಿಗಳನ್ನು ದೇವದಾನವಾಗಿ ನೀಡಿದುದನ್ನು ತಿಳಿಸುತ್ತದೆ.

**ಸಿಂಗಯದಂಡನಾಯಕ :** ಸಿಂಗಯದಂಡನಾಯಕನ ಹಿರಿಯ ಮಗನಾದ ಇರುಗಿಸೆಟ್ಟಿಗೆ ಸಂಬಂಧಿಸಿದ ಕ್ರಿ.ಶ. 1319ರ ಕೋಲಾರದ ಶಾಸನವು[80] ಇರುಗಿಸೆಟ್ಟಿಯನ್ನು ಕೋಳಾಲನಾಡಿನ ನಾಡಪ್ರಭು ಎಂಬಿತ್ಯಾದಿಯಾಗಿ ಕೀರ್ತಿಸಿದೆ. ಈತ ಕೊತ್ತನೂರಿನಲ್ಲಿ ಕೈಲಾಸನಾಥನ ದೇಗುಲವನ್ನು ನಿರ್ಮಿಸಿ, ಅಲ್ಲಿನ ಪೆರಿಯ ಕಱಪಕಭಟ್ಟರೇ ಮೊದಲಾದ ವಿಪ್ರರಿಗೆ ಭೂದಾನಗಳಿತ್ತುದುದನ್ನು ಪ್ರಕೃತ ಶಾಸನ ತಿಳಿಸುತ್ತದೆ. ಕ್ರಿ.ಶ. 1321ರ ತೇರುಹಳ್ಳಿಯ ಶಾಸನವು[81] ಇರುಗಿಸೆಟ್ಟಿಗೆ 'ಮಹೇಶ್ವರ ರಕ್ಷಕ' ಎಂಬ ಬಿರುದಿದ್ದಾಗಿಯೂ, ಆತ ಗಂಗಾಧರೇಶ್ವರ ದೇವರ ಉತ್ತಮ ಸೇವಾರ್ಥಿಯಾಗಿದ್ದುದನ್ನು ತಿಳಿಸುತ್ತದೆ. ಕ್ರಿ.ಶ.1330ರ ಕೋಲಾರದ ಶಾಸನವು[82] ಇರುಗಿಸೆಟ್ಟಿಯು ಶಿವೈಕ್ಯನಾದ ವಿಷಯವನ್ನು ತಿಳಿಸುತ್ತದೆ. ಇವನ ಹಿರಿಯ ಮಗನ ಹೆಸರು ಕೂಡ ಇರುಗಿಸೆಟ್ಟಿಯೆಂದೇ. ಕ್ರಿ.ಶ. 1346ರ ಕೋಲಾರದ ಶಾಸನದ ಪ್ರಕಾರ[83] ಮಹಾಮಂಡಲೇಶ್ವರನಾದ ವೀರಬಲಕ್ಕರಾಯನ ಮಂತ್ರಿ ಮಲ್ಲರಸನು ಕೋಳಾಲ ನಾಡಪ್ರಭುವಾದ ಈ ಇರುಗಿಸೆಟ್ಟಿಗೆ ನುಕ್ಕನಹಳ್ಳಿಯನ್ನು ಧಾರಾಪೂರ್ವಕವಾಗಿ ಕೊಡುಗೆಯಿತ್ತನು.

ಸಿಂಗಯದಂಡನಾಯಕನ ಕಿರಿಯ ಮಗನಾದ ಪೆಮ್ಮಿಸೆಟ್ಟಿಯು ಕ್ರಿ.ಶ. 1330ರಲ್ಲಿ[84] ಕೆಲವು ಶೈವಬ್ರಾಹ್ಮಣರಿಗೆ ಭೂದಾನಗಳನ್ನು ನೀಡಿದುದು ಉಲ್ಲೇಖಗೊಂಡಿದೆ. ಅಲ್ಲದೆ ಈತ ತನ್ನ ಅಣ್ಣ ಇರುಗಿಸೆಟ್ಟಿಯು ಶಿವೈಕ್ಯನಾಗಲು ಅವನ ಹೆಸರಿನಲ್ಲಿ ಇರುಗಸಮುದ್ರ ಎಂಬ ಕೆರೆಯನ್ನು ಮತ್ತು ಇರುಗೇಶ್ವರ ಎಂಬ ಶಿವದೇಗುಲವನ್ನು ನಿರ್ಮಿಸಿ, ಇರುಗೇಶ್ವರ ದೇವರ ಆರಾಧನೆಗಾಗಿ ಕೆಲವು ಭೂದಾನಗಳನ್ನು ನೀಡಿದ್ದಾನೆ.[85] ಸೋಮಯದಂಡನಾಯಕನ ಮತ್ತೊಬ್ಬ ಅಳಿಯನಾದ ದೊರಭಕ್ಕರೆ ದಂಡನಾಯಕನು

ಚಿಕ್ಕಗಂಗವಾಡಿಯಲ್ಲಿರುವ ಮದ್ದೂರಿನ ಸ್ವಯಂಭೂ ಶ್ರೀ ವೈದ್ಯನಾಥದೇವರಿಗೆ ದೇವದಾನವಾಗಿ ಹಲುಗೂರು ಬೋಡರಹಳ್ಳಿಯ ಎಲ್ಲ ತೆರಿಗೆಗಳನ್ನು ಸರ್ವಭಾದಾ ಪರಿಹಾರಾರ್ಥವಾಗಿ ನೀಡಿದನೆಂದು ಈ ಶಾಸನದಿಂದ ತಿಳಿದುಬರುತ್ತದೆ.

**ಮಾಧವದಂಡನಾಯಕ** : 23–07–1316 ಹರದನಹಳ್ಳಿಯ ಶಾಸನದ[86] ಪ್ರಕಾರ, ಮಾಧವದಂಡನಾಯಕನ ಅಧೀನ ಅಧಿಕಾರಿ ಪುರುಸಗೌಡನ ಮಗ ಮಾರಗೌಡನು ದಿವ್ಯಲಿಂಗೇಶ್ವರವೆಂಬ ಅಣಿಲೇಶ್ವರ ದೇವಾಲಯವನ್ನು ಕಟ್ಟಿಸಿ, ಆ ದೇವರ ಪೂಜಾದಿ ಸೇವೆಗಳಿಗೆಂದು ಅನೇಕ ದತ್ತಿಗಳನ್ನು ಬಿಟ್ಟನು. 10–01–1340ರ ಹರದನಹಳ್ಳಿಯ 4 ಶಾಸನಗಳು[87] ಮಾಧವದಂಡನಾಯಕನ ಜನ್ಮಸ್ಥಳವಾದ ಮಗ್ಗೆಯಲ್ಲಿರುವ ಅಣಿಲೇಶ್ವರ ದೇವರ ಗುಡಿಯ ರಂಗಮಂಟಪದಲ್ಲಿ ಅದೇ ಊರಿನ ಮಂಚಿಗೌಡ, ಹಿರೆಯಗೌಡ, ಮಾದಿಗೌಡ, ಮೋಟಗೌಡ ಎಂಬುವವರು ತಲಾ ಒಂದೊಂದು ಕಂಬಗಳನ್ನು ಮಾಡಿಸಿದರೆಂಬುದನ್ನು ತಿಳಿಸುತ್ತದೆ.

### 7.3.4 ಶಾಕ್ತಪಂಥ :

ಹೊಯ್ಸಳ ಮಹಾಮಂಡಳೇಶ್ವರರ ಕಾಲದಲ್ಲಿ ಶೈವಧರ್ಮಕ್ಕೆ ನೀಡಿದಂತೆಯೇ ಶಾಕ್ತಪಂಥಕ್ಕೂ ಹೆಚ್ಚಿನ ಪ್ರೋತ್ಸಾಹವನ್ನು ನೀಡಲಾಯಿತು. ಅನೇಕ ಶೈವದೇವಾಲಯಗಳಲ್ಲಿ ಸಪ್ತಮಾತೃಕೆಯರ ಶಿಲ್ಪಗಳನ್ನು ಇರಿಸಿ ಆರಾಧಿಸುವ ಸಂಪ್ರದಾಯವನ್ನು ಪ್ರಾರಂಭಿಸಲಾಯಿತು. ಮಹಿಷಮರ್ಧಿನಿಯ ಶಿಲ್ಪಗಳು ಹೊಯ್ಸಳರ ಕಾಲದಲ್ಲಿ ತನ್ನ ಹಿಂದಿನ ಕಾಲದ ಗಂಗ, ನೊಳಂಬರ ಕಾಲಕ್ಕಿಂತ ಹೆಚ್ಚು ವಿಜೃಂಭಣೆಯಾಗಿ ಆರಾಧಿಸಲ್ಪಡುವಂತಾಯಿತು. ಮಹಿಷಮರ್ಧಿನಿಯೊಂದಿಗೆ ಸರಸ್ವತಿಯ ಶಿಲ್ಪವನ್ನು ಅನುಸ್ಥಾಪಿಸಿ ಪೂಜಿಸುವ ಸಂಪ್ರದಾಯವೂ ವ್ಯಾಪಕವಾಯಿತು. ಇದರೊಂದಿಗೆ ಶಕ್ತಿಪೀಠವಾಗಿ ರೂಪುಗೊಂಡ ಬಹಳ ದೊಡ್ಡ ಧಾರ್ಮಿಕ ತಾಣವೆಂದರೆ ದೊಡ್ಡಗದ್ದವಳ್ಳಿಯಲ್ಲಿ ರೂಪುಗೊಂಡ ಮಹಾಲಕ್ಷ್ಮಿ ದೇವಾಲಯ. ಇದನ್ನು ಅಭಿನವ ಕೊಲ್ಲಾಪುರ ಎಂದು ಕೀರ್ತಿಸಲಾಗಿದೆ. ಮಂಡಳಿಕ ಸಾಹಣಿ, ಬಿಹಂಗಮಸಾಳಿವಂ ಅವಲಾಣ ಚಕ್ರವರ್ತಿಯಾದ ದಾಸಯಸಾಹಣಿಯರ ಸಾಹಣಿತಿ ಜಕ್ಕವ್ವೆಯು ಮಳಿಸೆಟ್ಟಿಯಕೆರೆಯಲ್ಲಿ 10ಕೊಳಗ ಗದ್ದೆಯನ್ನು ದಾನವಿತ್ತಳು.[88]

ನಿಲವಾರದ ಶಾಸನದನ್ವಯ, ಇರುಗಪ್ಪ ದಂಡನಾಯಕನ ಮನೆಯ ಅಧಿಕಾರಿಯಾಗಿದ್ದ ಬಯಿರಣ್ಣನು ದುರ್ಗಾಭಗವತಿ ದೇವಾಲಯವನ್ನು ಪುನರುದ್ಧಾರಗೊಳಿಸಿ ಅದಕ್ಕೆ ದಾನದತ್ತಿಗಳನ್ನು ನೀಡಿದನು. ಈ ಬಯಿರಣ್ಣನೇ ದುರ್ಗಾಭಗವತಿ ದೇವಾಲಯದ ವಿವಿಧ ಸೇವೆಗಳಿಗೆ, ಜೀರ್ಣೋದ್ಧಾರಕ್ಕೆ ದೇಗುಲದ ಸೇವಕರಿಗೆ ದಾನ ನೀಡಿದುದನ್ನು ಇದೇ ಊರಿನ ಮತ್ತೊಂದು ಶಾಸನವು ತಿಳಿಸುತ್ತದೆ. ಇಲ್ಲಿಯೇ ದೊರೆತ ಇನ್ನೊಂದು ತ್ರುಟಿತ ಶಾಸನವು ಈ ಬಯಿರಣ್ಣನು ಇರುಗಪ್ಪ ದಂಡನಾಯಕರಿಗೆ ಒಳಿತಾಗಲೆಂದು ಮತ್ತೆ ದುರ್ಗಾಭಗವತಿ ದೇಗುಲಕ್ಕೆ ದಾನ ನೀಡಿರುವನು.[89]

### 7.4 ವೈಷ್ಣವ ಧರ್ಮ:

ಮಹಾಮಂಡಳೇಶ್ವರರ ಆಳ್ವಿಕೆಯ ಅವಧಿಯಲ್ಲಿ ಶೈವಧರ್ಮಕ್ಕೆ ಹೋಲಿಸಿದರೆ ವೈಷ್ಣವಧರ್ಮದ ಪ್ರೋತ್ಸಾಹ ಕಡಿಮೆಯೆಂದೇ ಹೇಳಬೇಕು. ಹೊಯ್ಸಳರ ಮತ್ತು ಅವರ ಅಧೀನ ಅಧಿಕಾರಿಗಳಲ್ಲಿ ಅನೇಕರು ಶೈವ ಹಾಗೂ ಜೈನ ಧರ್ಮದ ಕಡೆಗೆ ಹೆಚ್ಚಿನ ಗಮನವನ್ನು ನೀಡುತ್ತಿದ್ದರು. ಹಾಗಾಗಿ ವೈಷ್ಣವ ಧರ್ಮವು ಕ್ವಚಿತ್ತಾಗಿ ಕಾಣಿಸಿಕೊಂಡಿತು. ಕ್ರಿ.ಶ. 1267ರ ತುರುವೇಕೆರೆಯ ಶಾಸನವು[90] ಸೋಮೆಯದಂಡನಾಯಕನು ಶ್ರೀ ಪ್ರಸನ್ನ ಚನ್ನಕೇಶವದೇವರ ದೇಗುಲಕ್ಕೆ ಉತ್ತರದಲ್ಲಿರುವ ಕೆಲವು ಪ್ರದೇಶಗಳನ್ನು ಅಲ್ಲಿನ ಮಹಾಜನರಿಗೆ ಧಾರೆಯೆರೆದನೆಂದು ತಿಳಿಸುತ್ತದೆ. ಕ್ರಿ.ಶ. 1276ರ ಸೋಮನಾಥಪುರದ ಶಾಸನದಲ್ಲಿ[91] ಸೋಮಯ ದಂಡನಾಯಕನನ್ನು ವೀರನರಸಿಂಹ (3ನೆಯ ನರಸಿಂಹ)ನ 'ಪ್ರಿಯಪುತ್ರ' ಎಂದು ಕರೆದಿದೆ. ಮನೆಮಗ ಎಂಬರ್ಥದಲ್ಲಿ ಈ ಪದ ಪ್ರಯೋಗವಾಗಿರುವಂತೆ ತೋರುತ್ತದೆ. ಪ್ರಧಾನವಾಗಿ ಪ್ರಸ್ತುತ ಶಾಸನವು ಸೋಮೆಯದಂಡನಾಯಕನು ಸೋಮನಾಥಪುರದಲ್ಲಿ ಪ್ರತಿಷ್ಠಾಪಿಸಿದ ಕೇಶವದೇವರೇ ಮೊದಲಾದ ದೇವರುಗಳಿಗೆ ಪೂಜಾ ಕೈಂಕರ್ಯಗಳಿಗೆಂದು ದೊರೆಯು 3,000 ಗದ್ಯಾಣದ ಕರವನ್ನು ದತ್ತಿ ಬಿಟ್ಟಿದ್ದನೆಂದೂ (ಈ ದತ್ತಿಯನ್ನು ಬಿಟ್ಟಕಾಲ ಕ್ರಿ.ಶ. 1269) ಈ ದತ್ತಿಯನ್ನು ಸೋಮೆಯ ದಂಡನಾಯಕನ ಅಳಿಯಂದಿರಾದ ಚಿಕ್ಕಕೇತಯ ದಂಡನಾಯಕ ಮತ್ತು ಮಲ್ಲಿದೇವ ದಂಡನಾಯಕರೀರ್ವರೂ ವಿಭಾಗಿಸಿ ದೇವರ ಅಮೃತಪಡಿಯೇ ಮೊದಲಾದ ಸೇವೆಗಳಿಗೂ ದೇಗುಲದ ನಿಯೋಗಿಗಳ ಜೀವನ ನಿರ್ವಹಣೆಗೂ ಹಂಚಿದುದನ್ನೂ ತಿಳಿಸುತ್ತದೆ. (ಹೀಗೆ ಹಂಚಿದುದು ಕ್ರಿ.ಶ. 1276ರಲ್ಲಿ ಈ ಎರಡು ಕಾಲಗಳ ಉಲ್ಲೇಖ ಶಾಸನದಲ್ಲಿ ಸ್ಪಷ್ಟವಾಗಿ ನಮೂದಾಗಿದೆ.)

ಕ್ರಿ.ಶ.1286ರ ಸೋಮನಾಥಪುರದ ಶಾಸನದಲ್ಲಿ[92] ಸೋಮಯ ದಂಡನಾಯಕನು ಕಟ್ಟಿಸಿದ ಶೈವ ದೇವಾಲಯಗಳಿಗೆ ತಾನು ದತ್ತಿ ಬಿಟ್ಟ 21 ವ್ರಿತ್ತಿಗಳಲ್ಲಿ 7 ವ್ರಿತ್ತಿಗಳನ್ನು, ಉಳಿದ 14 ವ್ರಿತ್ತಿಗಳನ್ನು ವೈಷ್ಣವ ದೇಗುಲಗಳಿಗೂ ಸಂದ ವಿವರವನ್ನು ತಿಳಿಸುತ್ತದೆ.

### 7.5 ರಾಮಾನುಜ ಪಂಥ ಅಥವಾ ಶ್ರೀವೈಷ್ಣವಮತ

ವಿಶಿಷ್ಟಾದ್ವೈತ ಸಿದ್ಧಾಂತದ ಪ್ರವರ್ತಕರಾದ ಶ್ರೀ ರಾಮಾನುಜಾಚಾರ್ಯರು ನಾಡಿನ ಧಾರ್ಮಿಕ ಚರಿತ್ರೆಯಲ್ಲಿ ವಿಶಿಷ್ಟವಾದ ಸ್ಥಾನವನ್ನು ಗಳಿಸಿದ್ದಾರೆ. ಸಾಂಪ್ರದಾಯಿಕ ಕಥೆಗಳ ಪ್ರಕಾರ ಶ್ರೀ ರಾಮಾನುಜಾ ಚಾರ್ಯರು ತಮಿಳುನಾಡಿನ ಚೋಳ ಅರಸನೊರ್ವನು ನೀಡಿದ ಪೀಡನೆಯನ್ನು ಸಹಿಸಲಾರದೆ, ಕರ್ನಾಟಕದಲ್ಲಿ 12 ಅಥವಾ 20 ವರ್ಷಗಳ ಕಾಲ ನೆಲೆಸಿದ್ದರೆಂದು ಪ್ರತೀತಿ. ಆಗ ಅವರು ಹೊಯ್ಸಳ ಅರಸನಾದ ಬಿಟ್ಟಿದೇವನನ್ನು ಶ್ರೀವೈಷ್ಣವ ಧರ್ಮಕ್ಕೆ ಮತಾಂತರಗೊಳಿಸಿದರೆಂದೂ ಮೇಲುಕೋಟೆಯಲ್ಲಿ ಚೆಲುವನಾರಾಯಣನನ್ನು ಪ್ರತಿಷ್ಠಾಪಿಸಿದರೆಂದು ಹೇಳಲಾಗಿದೆ. ಶ್ರೀವೈಷ್ಣವ ಧರ್ಮ ಮೈಸೂರು ಪ್ರದೇಶದ ಉದ್ದಗಲಗಳಲ್ಲಿ ವಿಸ್ತರಿಸಿ ಅಲ್ಲಿನ ಜನಪ್ರಿಯ ಧರ್ಮಗಳಲ್ಲೊಂದಾದದ್ದು ಈ ಕಾಲದಲ್ಲಿಯೇ.

ಶ್ರೀರಾಮಾನುಜರು ಕಾವೇರಿ ನದಿಯ ಗತಿಯನ್ನು ಅನುಸರಿಸಿ ವಹ್ನಿಪುಷ್ಕರಿಣಿ ಎಂದು ಕರೆಯಲ್ಪಡುವ ರಾಮನಾಥ ಪುರದವರೆಗೂ ಪಯಣಿಸಿದ್ದರು. ಅಲ್ಲಿಂದ ಮಿರ್ಲೆ ಮತ್ತು ಸಾಸಲುಗ್ರಾಮಗಳ ಮೂಲಕ ತೊಂಡನೂರಿಗೆ ಹೋದಂತೆ ತೋರುತ್ತದೆ. ಆಗ ತೊಂಡನೂರು ಹೊಯ್ಸಳ ಅರಸನಾದ ವಿಠಲದೇವರಾಯನ ರಾಜಧಾನಿಯೋ ನೆಲೆವೀಡೋ ಆಗಿತ್ತು. ಈ ಅರಸನ ಮಗಳನ್ನು ದುಷ್ಟ ಭೂತವೊಂದು ವಶಪಡಿಸಿಕೊಂಡು ಅದರಿಂದ ಮುಕ್ತವಾಗಲು ಮಾಡಿದ ಪ್ರಯತ್ನಗಳೆಲ್ಲಾ ವಿಫಲವಾಗಿದ್ದವು. ಅರಸನು ಮತ್ತು ಅವನ ಪರಿವಾರವು ಇದರಿಂದ ಚಿಂತಾಕ್ರಾಂತವಾಗಿತ್ತು. ರಾಣಿ ಶಾಂತಲೆಯ ಮೂಲಕ ಈ ದುಃಖ ಪರಿಸ್ಥಿತಿಯನ್ನು ಶ್ರೀರಾಮಾನುಜರ ಶಿಷ್ಯರಾದ ತೊಂಡನೂರ್ ನಂಬಿಯು ರಾಜ ದಂಪತಿಗಳಿಗೆ ಶ್ರೀರಾಮಾನುಜರು ವಿಶೇಷ ಶಕ್ತಿಯುಳ್ಳವರೆಂದೂ ನೀವು ಅವರನ್ನು ಭೇಟಿಮಾಡಬೇಕೆಂದೂ ಸಲಹೆಯಿತ್ತರು. ಅದರಂತೆ ಅರಸನು ಗುರುಗಳಿಗೆ ಅರಮನೆಗೆ ಬಂದು ರಾಜಕುಮಾರಿಗೆ ಒದಗಿದ ಸಂಕಷ್ಟವನ್ನು ಪರಿಹರಿಸಲು ಬಿನ್ನವಿಸಿ ಆಹ್ವಾನವನ್ನು ಇತ್ತನು. ಮೊದಮೊದಲು ಗುರುಗಳು ಸ್ವಲ್ಪ ಹಿಂಜರಿದರಾದರೂ ಕೊನೆಗೆ ಆಹ್ವಾನವನ್ನು ಮನ್ನಿಸಿ ಅರಮನೆಗೆ ಬಂದು ರಾಜಕುಮಾರಿಯನ್ನು ಆಕ್ರಮಿಸಿದ್ದ ಭೂತವನ್ನು ಉಚ್ಚಾಟಿಸಿ ಆಕೆಗೆ ಒದಗಿದ ಉಪದ್ರವವನ್ನು ಪರಿಹರಿಸಿದರು. ಇದರಿಂದ ಸಂತುಷ್ಟನಾದ ಅರಸನು ಶ್ರೀರಾಮಾನುಜರ ತತ್ವ ಸಿದ್ದಾಂತಗಳಿಗೂ ಮಾರುಹೋಗಿ ಅವರ ಶೀಷ್ಯನಾಗಿ ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿದನು. ಗುರುಗಳು ಅವನಿಗೆ ಮೊದಲಿದ್ದ ಬಿಟ್ಟಿದೇವ ಮತ್ತು ವಿಠಲರಾಯ ಎಂಬ ಹೆಸರನ್ನು ವಿಷ್ಣವರ್ಧನ ಎಂದು ಬದಲಾಯಿಸಿದರು. ವಿಷ್ಣುವರ್ಧನನು 790 ಬಸದಿಗಳನ್ನು ಹಾಳುಗೆಡವಿ ಪಂಚ ನಾರಾಯಣ ದೇವಾಲಯಗಳನ್ನು ನಿರ್ಮಿಸಿ ಅವುಗಳಿಗೆ ಪೂರ್ವದಲ್ಲಿ ನೀಡಿದ್ದ ದಾನಭೂಮಿಗಳನ್ನು ಪುನರ್ದತ್ತಿಯಾಗಿ ವೈಷ್ಣವದೇಗುಲಗಳಿಗೆ ನೀಡಿದನು. ತೊಂಡನೂರಿನಲ್ಲಿ ಕೆರೆಯೊಂದನ್ನು ಮತ್ತು ರಾಮಾನುಜಕೂಟವನ್ನು ಸ್ಥಾಪಿಸಿದನು ಎಂದು ಶ್ರವಣಬೆಳಗೊಳದ ಸ್ಥಳಪುರಾಣದಲ್ಲಿ ಹೇಳಿದೆ. ದೊಡ್ಡ ಗರುಡನಹಳ್ಳಿ ಗ್ರಾಮಕ್ಕೆ ಮೇಲುಕೋಟೆ ಮತ್ತು ತಿರುನಾರಾಯಣಪುರಗಳೆಂಬ ಹೆಸರನ್ನಿತ್ತು ಅಲ್ಲಿ ಹಲವಾರು ದೇವಾಲಯಗಳನ್ನು ಅರಮನೆಗಳನ್ನು ಕಟ್ಟಿಸಿ ಮೆಲುಕೋಟೆಯ ಬೆಟ್ಟಕ್ಕೆ ಮೆಟ್ಟಿಲುಗಳನ್ನು ಕಟ್ಟಿಸಿದನೆಂದೂ ಹೇಳಿದೆ

ಒಮ್ಮೆ ಶ್ರೀರಾಮಾನುಜಾಚಾರ್ಯರಿಗೆ ಬಿಳಿಯ ನಾಮಕ್ಕೆ ಬೇಕಾದ ತಿರುಮಣ್ಣಿನ ಅವಶ್ಯಕತೆ ಉಂಟಾಯಿತು. ಮೇಲುಕೋಟೆಯ ನಾರಾಯಣ ದೇವರು ಸ್ವಪ್ನದಲ್ಲಿ ಕಾಣಿಸಿಕೊಂಡು ಆಚಾರ್ಯರು ಯದುಗಿರಿಗೆ ಹೋಗಬೇಕೆಂದು ಅಲ್ಲಿ ಅವರಿಗೆ ತಿರುಮಣ್ಣಿನ ಸಂಗ್ರಹ ಹೇರಳವಾಗಿ ದೊರಕುವುದೆಂದೂ ಆದೇಶಿಸಿದರು. ಯತಿಶ್ರೇಷ್ಠರು ಅರಸನೊಡಗೂಡಿ ಅಲ್ಲಿಗೆ ಹೋದಾಗ ಜೊತೆಯಲ್ಲಿದ್ದ ಜನಸಮೂಹವು ಅವರು ತೋರಿಸಿದ ಮಾರ್ಗದಲ್ಲಿದ್ದ ಕಾಡುಗಳನ್ನು ಕಡಿಯುತ್ತ ಬಂದಿತ್ತು. ಬೆಟ್ಟವನ್ನೇರಿ ವೇದಪುಷ್ಕರಣಿ ಎಂಬ ಹೆಸರಿನ ಕೊಳವನ್ನು ತಲುಪಿದರು. ಅಲ್ಲಿ ಆಚಾರ್ಯರು ಸ್ನಾನಮಾಡಿ ಶ್ರೀರಂಗವನ್ನು ಬಿಡುವ ಮುನ್ನ ಕೂರೇಶರಿಂದ ಪಡೆದಿದ್ದ ಶ್ವೇತವಸ್ತ್ರಗಳನ್ನು ಕಳಚಿ ಮುನಿಗಳಿಗೆ ಉಚಿತವಾದ ಕಾಷಾಯ ವಸ್ತ್ರವನ್ನು ಧರಿಸಿದರು. ಅವರು ಯದುಗಿರಿಯ ಪ್ರವೇಶಮಾಡಿದುದು ಅವರಿಗೆ 82ವರ್ಷ ವಯಸ್ಸಾದಾಗ. ಒಂದು

ಚಂಪಕ ಮತ್ತು ವಕುಳ ವೃಕ್ಷಗಳ ನಡುವೆ ಬೆಳೆದಿದ್ದ ಹುತ್ತದಲ್ಲಿ ನಾರಾಯಣಸ್ವಾಮಿಯ ವಿಗ್ರಹ ಮುಚ್ಚಿಹೋಗಿದ್ದು ಇದು ಶ್ರೀರಾಮಾನುಜರ ದೃಷ್ಟಿಗೆ ಗೋಚರಿಸಿ ಆ ಹುತ್ತದ ಮಣ್ಣನ್ನು ಬೇರ್ಪಡಿಸಿದಾಗ ಒಳಗಿದ್ದ ನಾರಾಯಣರ ವಿಗ್ರಹ ಲಭಿಸಿತು. ಇದನ್ನು ಯತಿಗಳು ಪಾಂಚರಾತ್ರ ಆಗಮಗಳಲ್ಲಿ ಸೂಚಿಸಿದ ವಿಧಿಗಳಂತೆ ಸ್ವತಃ ಆರಾಧಿಸಿ ದೇವಾಲಯದಲ್ಲಿ ಪುನಃ ಪ್ರತಿಷ್ಠೆ ಮಾಡಿದರು. ಅವರಿಗೆ ಬಿಳಿಯ ಮಣ್ಣು ಹೇರಳವಾಗಿ ಲಭಿಸಿತು. ಬೆಟ್ಟದ ಮೇಲೆ ಬೀದಿಗಳನ್ನೂ ಒಳಗೊಂಡು ಒಂದು ಊರು ಅಸ್ತಿತ್ವಕ್ಕೆ ಬಂದು ಅಲ್ಲಿ ಒಂದು ದೇವಾಲಯವೂ ಕಟ್ಟಲ್ಪಟ್ಟಿತು. ನಿತ್ಯೋತ್ಸವ, ಮಾಸೋತ್ಸವ, ಸಂವತ್ಸರೋತ್ಸವಗಳು ಆಚರಣೆಗೆ ಬೇಕಾದ ಏರ್ಪಾಟುಗಳನ್ನು ಮಾಡಲಾಯಿತು. ರಾಮಾನುಜರು ರಾಮಪ್ರಿಯ ಎಂಬ ಉತ್ಸವ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ಯತಿರಾಜ ಮಂಟಪವನ್ನು ಮೇಲುಕೋಟೆಯಲ್ಲಿ ಸ್ಥಾಪಿಸಿದರು. ಇಲ್ಲಿ ಇನ್ನು ಮುಂದೆ ಸಂನ್ಯಾಸಿಯು ವಾಸವಿದ್ದು ದೇವಾಲಯದ ಆಡಳಿತವನ್ನು ನೋಡಿಕೊಳ್ಳುವ ಏರ್ಪಾಟನ್ನು ಮಾಡಲಾಯಿತು. ಇದೆಲ್ಲಾ ಜನಮಾನಸದಲ್ಲಿ ಹಬ್ಬಿರುವ ದಂತಕತೆಗಳು. ಇದರಲ್ಲಿರುವ ಸಂಗತಿಗಳು ಪೂರ್ಣಸತ್ಯವೆಂದಾಗಲೀ ಇವೆಲ್ಲಾ ನಡೆದ ಘಟನೆಗಳೆಂದಾಗಲೀ ಇಲ್ಲಿ ಪ್ರಸ್ತುತಪಡಿಸುತ್ತಿಲ್ಲ. ಬದಲಿಗೆ ಕರ್ನಾಟಕದಲ್ಲಿ ಶ್ರೀವೈಷ್ಣವ ಧರ್ಮವನ್ನು ಪ್ರಸರಿಸಿದ ರಾಮಾನುಜಾಚಾರ್ಯರು ಕರ್ನಾಟಕದ ಜನಮಾನಸದಲ್ಲಿ ಹೇಗೆ ದಂತಕತೆಯಾಗಿ ಮಾರ್ಪಟ್ಟಿದ್ದಾರೆ ಎಂದು ತಿಳಿಸುವುದಷ್ಟೇ ಆಗಿದೆ.

ಶ್ರೀ ರಾಮಾನುಜರು ಮತ್ತು ಮೇಲುಕೊಟೆಗೆ ಸಂಬಂಧಿಸಿದ ಇನ್ನೊಂದು ಜನಪ್ರಿಯ ಘಟನೆಯೆಂದರೆ ಪಂಚಮ ಅಥವಾ ಪರ್ಯೆಯರೆಂದು ಕರೆಯಲಾದ ಕೆಳಜಾತಿಯ ಹಿಂದುಗಳಿಗೆ ಪರಿಮಿತವಾಗಿ ನೀಡಲಾದ ದೇವಾಲಯ ಪ್ರವೇಶದ ಹಕ್ಕು. ಆಚಾರ್ಯರು ಇವರಿಗೆ ತಿರುಕ್ಕುಲತ್ತಾರ್ ಎಂಬ ಹೆಸರನ್ನು ನೀಡಿದ್ದರು. ಈ ಮೂಲಕ ಶ್ರೀ ರಾಮಾನುಜರು ಈ ಜನರಿಗೆ ಧಾರ್ಮಿಕ ಉಪದೇಶ ಪಡೆಯುವ ಮತ್ತು ಶ್ರೀವೈಷ್ಣವರಿಗೆ ವೀಶೇಷವಾದ ಪಂಚಸಂಸ್ಕಾರಗಳಂತಹ ಕೆಲವು ಕರ್ಮಗಳನ್ನು ಮಾಡುವ ಹಕ್ಕನ್ನು ಒದಗಿಸಿದರು. ಇದೇ ಮೇಲುಕೋಟೆಯಲ್ಲಿ 12ವರ್ಷಗಳ ಕಾಲ ನೆಲೆಸಿದ್ದರು.

ರಾಮಾನುಜರು ವಿಶಿಷ್ಟಾದ್ವೈತ ಸಿದ್ಧಾಂತದ ವಿಷ್ಣುತತ್ವವನ್ನು ಕರ್ನಾಟಕಕ್ಕೆಲ್ಲ ಪರಿಚಯಿಸಿ ಪ್ರಚುರಕ್ಕೆ ತಂದವರು. ಶ್ರೀ ರಾಮಾನುಜರು ಅವರೇ ರೂಪಿಸಿದ ನಿಯಮಗಳಿಗೆ ಅನುಸಾರವಾಗಿ ಕೆಲವು ಪೂಜೆ ಮತ್ತು ಕೈಂಕರ್ಯಗಳನ್ನು ಆಚರಣೆಗೆ ತಂದುದು ಸಹ ಅವರು ನೀಡಿದ ಸಿದ್ಧಾಂತದ ಒಂದು ಅಂಶವಾಗಿದೆ. ದೇವಾಲಯ ಪೂಜಾ ಕೈಂಕರ್ಯಗಳಲ್ಲಿ ಒಂದು ಭಾಗವಾಗಿ ತಿರುವಾಯ್ಮೊಳಿ ಹಾಗೂ ಆಳ್ವಾರರುಗಳ ಇತರ ಕೃತಿಗಳ ಪಠನಕ್ಕೆ ಮಹತ್ವವನ್ನು ನೀಡಿದುದು ಗಮನಾರ್ಹ. ವೈಷ್ಣವಧರ್ಮದಲ್ಲಿದ್ದ ಹಲವಾರು ಕೊರತೆಗಳನ್ನು ತುಂಬಿಕೊಟ್ಟು ಅನೇಕರಿಗೆ ದೇವಾಲಯಗಳಲ್ಲಿ ಸ್ಥಾನವನ್ನು ಒದಗಿಸಿಕೊಟ್ಟಿದ್ದು ಈ ಶ್ರೀವೈಷ್ಣವಧರ್ಮದ ಸಾಧನೆಯಾಗಿದೆ. ಹಾಗಾಗಿಯೇ ಈ ಧರ್ಮಕ್ಕೆ ಒಲಿದು ಬಂದವರು ಹೆಚ್ಚಿನ ಜನರಾಗಿದ್ದಾರೆ.

ಇಂತಹ ರಾಮಾನುಜ ಪಂಥಕ್ಕೆ ಮಹಾಮಂಡಳೇಶ್ವರರು ನೀಡಿದ್ದ ಕೊಡುಗೆಗಳನ್ನು ಈ ಮುಂದಿನಂತೆ ಕಾಣಬಹುದು. ಶ್ರೀವೈಷ್ಣವ ದೇವಾಲಯಗಳಿಗೆ ಯಥೇಚ್ಚವಾದ ದಾನ–ಧರ್ಮಗಳನ್ನು ಮಾಡುವುದು, ಈಗಾಗಲೇ ನಿರ್ಮಾಣವಾಗಿದ್ದ ದೇವಾಲಯಗಳನ್ನು ವಿಸ್ತರಿಸುವುದು, ಸರಿಯಾದ ರಿಪೇರಿಯಿರದ ದೇಗುಲಗಳನ್ನು ಸೂಕ್ತ ರೀತಿಯಲ್ಲಿ ಜೀರ್ಣೋದ್ದಾರಗೊಳಿಸುವುದು, ಆಚಾರ್ಯರಿಗೆ ಯತಿಭಿಕ್ಷೆಗಳನ್ನು ನಡೆಸಲು ಸೂಕ್ತವಾದ ಅನುಕೂಲಗಳನ್ನು ಮಾಡುವುದು, ಶ್ರೀಮಠಕ್ಕೆ ಸೂಕ್ತವಾದ ಭದ್ರತೆಯನ್ನು ಒದಗಿಸಿ ಇಲ್ಲಿ ನಿತ್ಯಾನುಸಂಧಾನ, ಪೂಜೆ ಪುನಸ್ಕಾರಗಳು, ನಿರಂತರವಾದ ನಂದಾದೀವಿಗೆಯ ವ್ಯವಸ್ಥೆ, ಇಲ್ಲಿ ತಂಗಿರುವ ಶ್ರೀವೈಷ್ಣವರಿಗೆ ಸರಿಯಾದ ಸಮಯದಲ್ಲಿ ಅನ್ನದಾನ ವ್ಯವಸ್ಥೆ ಮುಂತಾದ ಕೈಂಕರ್ಯಗಳಿಗೆ ಮಹಾಮಂಡಲೇಶ್ವರರು ಒದಗಿಸಿಕೊಟ್ಟ ವ್ಯವಸ್ಥೆಯನ್ನು ಈ ಪ್ರಬಂಧದಲ್ಲಿ ಮುನ್ನೆಲೆಗೆ ತರಲಾಗಿದೆ.

**ಮಹಾಪ್ರಧಾನ ನಾಗಣ್ಣ :** ಇವನು ಶ್ರೀಕರಣದ ಹೆಗ್ಗಡೆಯೂ ಸಹ ಆಗಿದ್ದನು, ತೊಣ್ಣೂರಿನ ಲಕ್ಷ್ಮೀನಾರಾಯಣ ದೇಗುಲದ ಎಡಗಡೆಯಲ್ಲಿ ಒಂದು ಮಂಟಪವನ್ನು ನಿರ್ಮಿಸಿದ್ದನು.[93]

**ಮಹಾಪ್ರಧಾನ ಎಱೆಯಣ್ಣ :** ಇವನು ಎರಡನೆಯ ಬಲ್ಲಾಳನ ಕೈಕೆಳಗೆ ಮಹಾಪಸಾಯತ, ಮಹಾಪ್ರಧಾನ, ಶ್ರೀಕರಣದ ಹೆಗ್ಗಡೆ, ಸರ್ವ್ವಾಧಿಕಾರಿ ಪದವಿಗಳಲ್ಲಿ ಕಾರ್ಯ ನಿರ್ವಹಿಸಿದ್ದನು. ಯಾದವಚತುರ್ವೇದಿಮಂಗಲದ ಶ್ರೀಕರಣದ ಕಲಿಯಣನು ಒಂಭತ್ತು ವ್ರಿತ್ತಿ ಭೂಮಿಯನ್ನು ಎಱೆಯಣ್ಣನಿಂದ ಕ್ರಯದಾನವಾಗಿ ಪಡೆದಿದ್ದನು. ಈ ಭೂಮಿಯನ್ನು ಕಲಿಯಣನು ಶ್ರೀಕಾಂಜಿಪುರದ ಅಲ್ಲಾಳು ಪೆರುಮಾಳುದೇವರಿಗೆ ದತ್ತಿಯಾಗಿ ನೀಡಿದನು.[94]

**ಅಚ್ಯುತಿಮಯ್ಯ ದಂಡನಾಯಕ :** ಅಚ್ಯುತಿಮಯ್ಯ ದಂಡನಾಯಕನು ಎರಡನೆಯ ಬಲ್ಲಾಳನ ಅಧೀನ ಅಧಿಕಾರಿಯಾಗಿದ್ದು ಈತನು ಮಹಾಪ್ರಧಾನ, ಸೇನಾಧಿಪತಿ, ಮಹಾಪಸಾಯತ, ಸರ್ವಾಧಿಕಾರಿ, ದಂಡನಾಯಕ ಪದವಿಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದನು. ಇವನು ಮತ್ತು ವೀರಯ್ಯಗಳು ಯಾದವಗಿರಿಯ ಕೋಟೆಯ ರಕ್ಷಾಪಾಳಕರಾಗಿದ್ದಾಗ ಕ್ರಮವಾಗಿ ಅವರ ಮಕ್ಕಳಾದ ನೀಲಯ್ಯ, ಚಾಮಯ್ಯಗಳು ತಮ್ಮ ಕೋಟೆಯ ಹೊಲಗಾಹುವಿತ್ತಿಯನ್ನು (ಕೋಟೆಯ ಪ್ರದೇಶ ಕಾಯಲು ನೀಡಲಾದ ವೃತ್ತಿ : ಸಂಪುಟಕಾರರು) ಆಳುತ್ತಿದ್ದು ತೊಂಡನೂರು ಅಗ್ರಹಾರದ ಗಡಿಯಲ್ಲಿದ್ದ ನಖರೇಶ್ವರ ದೇವರಿಗೆ ಭೂದಾನ ಮಾಡಿದರು. ಯಾದವಗಿರಿಯ ಕೋಟೆಗೆ ಇಬ್ಬರು ದಂಡನಾಯಕರು ರಕ್ಷಾಪಾಳಕರಾಗಿದ್ದರೆಂಬುದು ಕುತೂಹಲವಾದ ಅಂಶ.[95]

**ಮಹಾಪ್ರಧಾನ ಸುರಿಗೆಯ ನಾಗಯ್ಯ :** ಸುರಿಗೆಯ ನಾಗಯ್ಯನು ವಿಷ್ಣುವರ್ಧನನ ಅಧೀನನಾಗಿ ಮಹಾಪ್ರಧಾನ, ಮಹಾಪಸಾಯತ, ತಂತ್ರಾಧಿಷ್ಟಾಯಕ ಪದವಿಗಳನ್ನು ಅಲಂಕರಿಸಿದ್ದನು. ತೊಣ್ಣೂರಿನ ಲಕ್ಷ್ಮೀನಾರಾಯಣಸ್ವಾಮಿ ದೇವಾಲಯದಲ್ಲಿ ಅಮ್ಮನವರ ಗುಡಿಯ ನವರಂಗ ಮಂಟಪವನ್ನು(ಓಲಗ

ಶಾಲೆಯನ್ನು) ಸುರಿಗೆಯ ನಾಗಯ್ಯನು ನಿರ್ಮಿಸಿದನು.[96] ಸುರಿಗೆಯ ನಾಗಯ್ಯನು ಇಮ್ಮಡಿ ಬಲ್ಲಾಳನ ಕಾಲದಲ್ಲಿಯೂ ಅಧಿಕಾರದಲ್ಲಿ ಮುಂದುವರಿದಿದ್ದನು. ಇವನ ಆದೇಶದ ಮೇರೆಗೆ ನಾಯಕ ಹೆಗ್ಗಡೆ ಮಾರಣ್ಣನು ವೀಳೆಯದೆಲೆಯ ಮೇಲಿನ ಪನ್ನಾಯ ಎಂಬ ತೆರಿಗೆಯನ್ನು ಮಾನ್ಯ ಮಾಡಿದನು.[97]

**ಮಹಾಪ್ರಧಾನ ಮಾಚಮಯ್ಯ** : ಮಾಚಮಯ್ಯ ಅಥವಾ ಮಾಚಯ್ಯನು ಹೆಗ್ಗಡೆ ಕೇಸಿಯಣ್ಣ ಮತ್ತು ಹೆಗ್ಗಡೆ ಕೊಮ್ಮಣ್ಣನವರೊಡಗೂಡಿ ಯಾದವನಾರಾಯಣ ಚತುರ್ವೇದಿ ಮಂಗಲವಾದ ತೊಣ್ಣೂರಿನ ಲಕ್ಷ್ಮೀನಾರಾಯಣಸ್ವಾಮಿ ದೇವರಿಗೆ ಒಂದೆತ್ತಿನ ಗಾಣದ ಸುಂಕದ ತೆರಿಗೆಯನ್ನು ಮತ್ತು ಎಣ್ಣೆಯನ್ನು ದಾನಮಾಡಿದನು.[98] ಈ ಮೂವರನ್ನು ಶಾಸನದಲ್ಲಿ ಮಹಾಪ್ರಧಾನ, ಸರ್ವಾಧಿಕಾರಿಯ ಮಕ್ಕಳೆಂದು ಸೂಚಿಸಿದ್ದರು ಸಹ ಆ ಮೂವರ ತಂದೆಯ ಹೆಸರು ಹೇಳಿಲ್ಲ. ಮೂರು ವರ್ಷಗಳ ನಂತರ ಅದೇ ತೊಣ್ಣೂರು ಗ್ರಾಮದ ಇನ್ನೊಂದು ಶಾಸನದಲ್ಲಿ ಮಾಚಮಯ್ಯ, ಕೇಸಿಯಣ್ಣ, ಕೊಮ್ಮಣ್ಣರು ಹೆಗ್ಗಡೆ ಮಹದೇವಣ್ಣನೊಡಗೂಡಿ ದೇವದಾನವನ್ನು ಮಾಡಿದರು.[99]

**ಕುತ್ತಾಂಡಿದಂಡನಾಯಕ** : ಕುತ್ತಾಂಡಿದಂಡನಾಯಕನು ಒಂದನೆಯ ನರಸಿಂಹನ ಕೈಕೆಳಗೆ ದಂಡನಾಯಕನಾಗಿ ಕಾರ್ಯನಿರ್ವಹಿಸಿದ್ದನು. ಈತನು ಕಾರೈಕುಡಿಗೆ ಸೇರಿದವನು. ಹಾಗಾಗಿ ಇವನನ್ನು ಶಾಸನಗಳು ಕಾರಿಕುಡಿ ಕುತ್ತಾಂಡಿದಂಡನಾಯಕನೆಂದು ಕರೆದಿವೆ. ಈತನು ಯಾದವನಾರಾಯಣ ಚತುರ್ವೇದಿ ಮಂಗಲವೆನಿಸಿದ ತೊಣ್ಣೂರಿನಲ್ಲಿ ವೀಱಿರುನ್ದಪೆರುಮಾಳ್ ದೇವಾಲಯವನ್ನು (ತಿಲ್ಲೆಕೂತ್ತವಿಣ್ಣೆಗರ್) ಕಟ್ಟಿಸಿ ಆ ದೇವರಿಗೆ ಗ್ರಾಮಗಳನ್ನು, ಭೂಮಿಗಳನ್ನು ದಾನವಾಗಿ ನೀಡಿದನು.[100] ಈ ದೇವಾಲಯವು ಯಾದವನಾರಾಯಣ ಚತುರ್ವೇದಿ ಮಂಗಲ ಎಂದು ಹೆಸರಾದ ತೊಣ್ಣೂರಿನ ಮಧ್ಯದಲ್ಲಿದೆ (ತಿರುಮುಱ್ರಮ್) ಎಂದು ಹೇಳಲಾಗಿದೆ. ಅಂದರೆ ಕೃಷ್ಣ ದೇಗುಲವು ಇನ್ನಿತರ ಎರಡು ದೇವಾಲಯಗಳಾದ ಕೈಲಾಸೇಶ್ವರ ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳ ನಡುವೆ ಇರುವುದು ಸ್ಪಷ್ಟವಾಗುತ್ತದೆ. ಹಾಗಾಗಿ ಕೈಲಾಸೇಶ್ವರ ಮತ್ತು ಲಕ್ಷ್ಮೀನಾರಾಯಣ ದೇಗುಲಗಳು ಈ ಕೃಷ್ಣ ದೇಗುಲಕ್ಕಿಂತ ಮುಂಚೆಯೇ ಕಟ್ಟಲ್ಪಟ್ಟಿದ್ದವು ಎಂದು ಅರಿವಾಗುತ್ತದೆ ಆದರೆ ಈ ದೇವಾಲಯಗಳ ನಿರ್ಮಾಣ ಕಾಲವನ್ನು ತಿಳಿಸುವ ಶಾಸನ ಆಧಾರಗಳು ಸದ್ಯಕ್ಕೆ ಲಭ್ಯವಿಲ್ಲ ಎಂದು ಬಾ.ರಾ. ಗೋಪಾಲರವರು ಸ್ಪಷ್ಟೀಕರಿಸಿದ್ದಾರೆ.[101]

**ಬಲ್ಲಪ್ಪದಂಡನಾಯಕ** : ಕ್ರಿ. ಶ 1328ರ ತೇಕಲ್ಲಿನ 2 ಶಾಸನಗಳಲ್ಲಿ[102] ಬಲ್ಲಪ್ಪದಂಡನಾಯಕನು 3ನೆಯ ಬಲ್ಲಾಳನ ಬಾಳಿಗೂ ತೋಳಿಗೂ ಜಯವಾಗಲಿ ಎಂದು ಆಶಿಸುತ್ತಾ ಕೈವಾರನಾಡಿನ ಕಱುಪಳ್ಳಿ ಮತ್ತು ಕೊಡಮ್ಬುಲಿಯೂರಿನ ಪೂವೈಪಳ್ಳಿಯೊಳಗಣ ಸಕಲ ಸಂಪತ್ತನ್ನು ತೇಕಲ್ ವರದರಾಜಸ್ವಾಮಿಯ ವಿವಿಧ ಸೇವೆಗಳಿಗೆಂದು ದಾನವಾಗಿ ನೀಡಿದುದು ಉಲ್ಲೇಖಗೊಂಡಿದೆ.

**ಪೆರಿಯಪೆರುಮಾಳ ಸೆಟ್ಟಿ** : ಇವನು ಪೆಮ್ಮಿಸೆಟ್ಟಿಯ ಮಗ. ಬಲ್ಲಪ್ಪದಂಡನಾಯಕನ ಅಣ್ಣನಾದ ಸಿಂಗೆಯ ದಂಡನಾಯಕನ ಮಗ. 1379ರ ನೆಲವಾಗಲಹಳ್ಳಿಯ ಶಾಸನದನ್ವಯ[103] ಈ ಪೆರಿಯಪೆರುಮಾಳ

ಸೆಟ್ಟಿಯು ನೆಲವಾಗಲಹಳ್ಳಿಯಲ್ಲಿಯೇ ದೊಡ್ಡಕೆರೆಯನ್ನು ನಿರ್ಮಿಸಿದ್ದನು. ಈ ಕೆರೆಯ ಸಮೀಪದ ಭೂಮಿಯನ್ನು ಅಕರವಾಗಿ ಅಂಕಯನಾಯಕರೇ ಮೊದಲಾದವರು ನಂದಗುಡಿಯ ನಾರಾಯಣ ದೇಗುಲಕ್ಕೆ ನೀಡಿದರು.

**ಅಂಕೆಯದಂಡನಾಯಕ** : ಇವನು ಬಲ್ಲಪ್ಪದಂಡನಾಯಕನ ತಮ್ಮನಾದ ಚಿಕ್ಕಕೇತಯದಂಡನಾಯಕನ ಕಿರಿಯಮಗ. ಇವನು ಬರ್ಗವಳ್ಳಿಯನ್ನು ಲಕ್ಷ್ಮೀನರಸಿಂಹಪುರ ಎಂಬ ಅಗ್ರಹಾರವನ್ನಾಗಿಸಿ ಪಂಚಿಕೇಶ್ವರ ದೇಗುಲಕ್ಕೆ ಕೆಲವು ಭೂದಾನಗಳನ್ನು ನೀಡಿದನು.[104]

**ಮಾಧವದಂಡನಾಯಕ** : ತ್ರಯಂಬಕಪುರದ 1310ರ ಶಾಸನವು[105] ಮಾಧವದಂಡನಾಯಕನು ತೆರಕಣಾಂಬಿಯ ನೆಲೆವೀಡಿನಲ್ಲಿ ರಾಜ್ಯಭಾರ ಮಾಡುತ್ತ ಪದಿನಾಲ್ಕುನಾಡನ್ನು ಪಾಲಿಸುತ್ತಿದ್ದನು. ಈತ ತನ್ನ ತಂದೆಯ ಹೆಸರಿನಲ್ಲಿ ಪೆರುಮಾಳೆಪುರ ಎಂದು ತೆರಕಣಾಂಬಿಯ ಹಳ್ಳಿಯೊಂದಕ್ಕೆ ನಾಮಕರಣ ಮಾಡಿ ಅದನ್ನು ಕೆಲವು ಶ್ರೀವೈಷ್ಣವರಿಗೆ ದಾನಮಾಡಿದನು. ಮಾಧವದಂಡನಾಯಕನು ನೀಡಿದ ದಾನವನ್ನು ಮೇಲುಕೋಟೆಯ 1312ರ ಶಾಸನವು[106] ಅಸ್ಪಷ್ಟವಾಗಿ ತಿಳಿಸುತ್ತದೆ. 1314ರ ನಂಜನಗೂಡಿನ ಶಾಸನವು ಮಾಧವದಂಡನಾಯಕನ ಅಪ್ಪಣೆಯಂತೆ ಶ್ರೀಮನ್ಮಹಾವ್ಯವಹಾರಿ ಸಿಂಕಸೆಟ್ಟಿಯ ಮಗ ಸಿಂದಿಸೆಟ್ಟಿಯು ಶ್ರೀವೈಷ್ಣವರಿಗೆ ನೀಡಿದ ದಾನದ ಸಂಗತಿಯನ್ನು ತಿಳಿಸುತ್ತದೆ.[107] ಕಣ್ಣಾಗಾಲದ 1315ರ ಶಾಸನವು[108] ಶ್ರೀಮಾಧವದಂಡನಾಯಕನು ಗೋವರ್ಧನಗಿರಿ (ಹಿಮವತ್ ಗೋಫಾಲಸ್ವಾಮಿಬೆಟ್ಟ) ದಲ್ಲಿ ಶ್ರೀಗೋಪೀನಾಥ ದೇವರನ್ನು ಪ್ರತಿಷ್ಠಾಪಿಸಿದನು. ದೇವರ ಅಂಗಭೋಗ ರಂಗಭೋಗ ಸಮಸ್ತಪಡಿ ತಿರುವಳಿಯಾಟಕ್ಕಾಗಿ ಮೂರನೆಯ ಬಲ್ಲಾಳನು ಮಾಧವದಂಡನಾಯಕನಿಗೆ ಕುಡುಗು ನಾಡಿನೊಳಗಣ ಕಂಣ್ಣವಗಾಲವನ್ನು ಧಾರಾಪೂರ್ವಕವಾಗಿ ನೀಡಿದ್ದನು.

1316ರ ಬಸವಾಪಟ್ಟಣದ ಶಾಸನವು[109] ಮಾದವದಂಡನಾಯಕನು ವಿದ್ಯಾನಿಧಿ ಪ್ರಸನ್ನ ಕೇಶವಪುರ ಎಂಬ ಅಗ್ರಹಾರವನ್ನು ಸ್ಥಾಪಿಸಿದ್ದನು ಇದಕ್ಕೆ ಆಲೂರಿನ ಮಹಾಜನರು ಅನೇಕ ದಾನದತ್ತಿಗಳನ್ನು ನೀಡಿದ್ದರು. ಹರದನಹಳಿಯ 1316ರ ಶಾಸನದ ಪ್ರಕಾರ[110] ಮಾದವದಂಡನಾಯಕನ ಅಧೀನ ಅಧಿಕಾರಿ ಪುರುಷಗೌಡನ ಮಗ ಮಾರಗೌಡನು ದಿವ್ಯಲಿಂಗೇಶ್ವರವೆಂಬ ಅಣಿಲೇಶ್ವರ ದೇವಾಲಯವನ್ನು ಕಟ್ಟಿಸಿ ಆ ದೇವರ ಪೂಜಾದಿ ಸೇವೆಗಳಿಗೆಂದು ಅನೇಕ ದತ್ತಿಗಳನ್ನು ಬಿಟ್ಟನು. ಕಿಲಗೆರೆಯ ಶಾಸನವು ಚಾಮವ್ವೆದಂಡನಾಯಿಕಿತಿಯು ಗೋಪಿನಾಥ ದೇವರಿಗೆ ಕೆಲಗೆರೆ ಮತ್ತು ಅದರ ಉಪಗ್ರಾಮಗಳನ್ನು ಮಾಧವ ದಂಡನಾಯಕನಿಂದ ಕೊಂಡು ದತ್ತಿ ಬಿಟ್ಟಳು.[111]

1319ರ ಶಾಸನವು ಮಾಧವದಂಡನಾಯಕನು ತಿಂಮಣ ಪೆರುಮಾಳ್ ದೇವರಿಗೆ ಕೊಟ್ಟ ಭೂದಾನವನ್ನು ಉಲ್ಲೇಖಿಸುತ್ತದೆ.[112] 1321ರ ಸತ್ಯಾಗಾಲದ ಶಾಸನವು ಮಾದಜೀಯ ಎಂಬಾತನು ಮಾದವದಂಡನಾಯಕನಿಂದ ಕುರುನೂರು ಮತ್ತು ಅದರ ಉಪಗ್ರಾಮಗಳನ್ನು ಕೊಂಡುಕೊಂಡು

ಅವುಗಳನ್ನು ಪ್ರಸನ್ನ ಮಾಧವಪುರವೆನಿಸಿದ ಕುರುನೂರಿನ ಮಹಾಜನಗಳಿಗೆ ದಾನ ಮಾಡಿದನು.[113] ಕದಲಗೆರೆಯ ಶಾಸನವು ಮಾಧವದಂಡನಾಯಕನು ಕದಲಗೆರೆಯ ಲಕ್ಷ್ಮೀನಾರಾಯಣ ದೇವರಿಗೆ ನೀಡಿದ ಭೂದಾನವನ್ನು ಉಲ್ಲೇಖಿಸುತ್ತದೆ.[114] 14ನೆಯ ಶತಮಾನಕ್ಕೆ ಸೇರಿದ ಮತ್ತೊಂದು ಶಾಸನವು ಮಾಧವದಂಡನಾಯಕ ಮತ್ತು ಅವನ ಮಗ ಕೇತೆಯದಂಡನಾಯಕನು ಲಕ್ಷ್ಮಣದಾಸ ಎಂಬಾತನಿಗೆ ನೀಡಿದ ಭೂದಾನವನ್ನು ತಿಳಿಸುತ್ತದೆ.[115]

**ಪೆರುಮಾಳೆದೇವ ದಂಡನಾಯಕ** : ಇವನು ಮಾಧವದಂಡನಾಯಕನ ತಂದೆ. 3ನೆಯ ನರಸಿಂಹನ ಅಧೀನದಲ್ಲಿದ್ದ ಅತ್ಯಂತ ಪ್ರಸಿದ್ಧ ದಂಡನಾಯಕನೀತ. ಇವನಿಗೆ ಜವನಿಕೆ ನಾರಾಯಣ ಎಂಬ ವಿಶಿಷ್ಟವಾದ ಬಿರುದಿತ್ತು. 1284ರ ಬೆಳ್ಳೂರಿನ ಶಾಸನವು ತಿಳಿಸುವಂತೆ ಪೆರುಮಾಳೆದೇವ ದಂಡನಾಯಕನು 3ನೆಯ ನರಸಿಂಹನಿಂದ ಬೆಟ್ಟದಕೋಟೆ, ಬಿಲ್ಲಬೆಳಗುಂದ ತಿಪ್ಪೂರು ಎಂಬ 3 ಹಳ್ಳಿಗಳನ್ನು ದಾನವಾಗಿ ಪಡೆದನು. ಇದನ್ನು ಬೆಳ್ಳೂರಿನ ಮಹಾಜನರಿಗೆ ಪ್ರಸನ್ನಮಾಧವ, ರಾಮಕೃಷ್ಣ, ವರದ ಅಲ್ಲಾಳನಾಥದೇವರ ಅಂಗಭೋಗ, ರಂಗಭೋಗಾದಿ ಸೇವೆಗಳಿಗಾಗಿ ದಾನ ಮಾಡಿದನು.[116]

1266ರ ಕೆಲವತ್ತಿಯ ಶಾಸನವು ಪೆರುಮಾಳೆ ದಂಡನಾಯಕನು ಅಲ್ಲಾಳ ಪೆರುಮಾಳದೇವರನ್ನು ಪ್ರತಿಷ್ಠಾಪಿಸಿ ದೈವದ ಪೂಜಾದಿಸೇವೆಗಳಿಗೆಂದು ಭೂದಾನ ನೀಡಿದುದನ್ನು ತಿಳಿಸುತ್ತದೆ.[117] 1290ರ ಟಿ. ನರಸೀಪುರದ ಶಾಸನದ ಪ್ರಕಾರ, ಈ ದಂಡನಾಯಕನು ಆಲಂಗೋಡು (ಸರ್ವಜ್ಞಪ್ರಸನ್ನ ಕೇಶವಪುರ) ಸ್ಥಳದ ಕೇಶವದೇವರು ಮತ್ತು ರಂಗನಾಥದೇವರಿಗಾಗಿ ರಂಗಮಂಟಪಗಳನ್ನು ಕಟ್ಟಿಸಿದನು.[118]

13ನೆಯ ಶತಮಾನದ್ದೆನ್ನಲಾದ ಚನ್ನರಾಯಪಟ್ಟಣದ ಶಾಸನವು ವಿಜಯಮಾಧವಪುರವಾದ ಕುಂದೂರಲ್ಲಿ ಪಂಚಿಕೇಶ್ವರ ಧರ್ಮಕ್ಕೆಂದು ದಾನವನ್ನು ನೀಡಿದನು.[119] ಇದೇ ಕಾಲಮಾನದ ಚಾಮರಾಜನಗರ ಶಾಸನವು ನರಸಿಂಗಮಂಗಲದಲ್ಲಿ ಜನಾರ್ಧನದೇವರಿಗೆ ರಾಮಸಮುದ್ರದ ಬಳಿಯ ಕೆಲವು ಪ್ರದೇಶಗಳನ್ನು ದತ್ತಿಯಾಗಿ ನೀಡಿದನು.[120]

**ಬಸವಿಯಕ್ಕ:** ಪೆರುಮಾಳೆದೇವದಂಡನಾಯಕನ ತಂಗಿ ಈಕೆ. ಈಕೆಯು ಬೆಳ್ಳೂರಿನ ಪ್ರಸನ್ನ ಮಾಧವದೇವರ ನೈವೇದ್ಯ ಕ್ಕೆಂದು ಕೆಲವು ಭೂದಾನಗಳನ್ನು ನೀಡಿದ್ದಳು.[121]

**ಚಕ್ರವರ್ತಿದಂಡನಾಯಕ** ; ಇವನು ಪೆರುಮಾಳೆದೇವದಂಡಾನಾಯಕನ ಮಗ. ಇವನ 1305ರ ಬೆಂಗಳೂರಿನ ಶಾಸನವು ತಿಳಿಸುವಂತೆ ಈತನು ಗಂಗನಾರಾಯಣ ಚತುರ್ವೆದಿಮಂಗಲದ ಸಿಂಗಿನಾಯಕನಹಳ್ಳಿಯ ಸಮಸ್ತ ಕೆರೆಬಾವಿಗಳನ್ನು ಭೂಪ್ರದೇಶಗಳನ್ನು ಸರ್ವಮಾನ್ಯವಾಗಿ ಯಲಹಂಕನಾಡಿನ ನಿವಾಸಿಗಳ ಸಮಕ್ಷಮದಲ್ಲಿ ಗಂಗನಾರಾಯಣ ಪೆರುಮಾಳ್ ದೇವರಿಗೆ ದಾನವಿತ್ತನು.[122]

**ಮಂಚೆಯದಂಡನಾಯಕ :** ಇವನು ಪೆರುಮಾಳೆಯ ಇನ್ನೊಬ್ಬ ಮಗ. 1318ರ ಬೇಲೂರಿನ ಶಾಸನದಲ್ಲಿ[123] ಇವನು ನರಸಿಂಹದೇವರ ತಿರುವಧ್ಯಯನ ಮತ್ತು ಆರಾಧನೆಗಾಗಿ 3 ಗದ್ಯಾಣಗಳನ್ನು ದಾನವಿತ್ತನು.

**ರುದ್ರಣ್ಣ :** ಇವನು ಪೆರುಮಾಳೆಯ ಅಳಿಯ. 1277ರ ಶಾಸನದ ಪ್ರಕಾರ,[124] ಇವನು ಕಮಳನಾಭತೀರ್ಥರಿಗೆ 11ಗದ್ಯಾಣಗಳನ್ನು ಯತಿಭಿಕ್ಷೆಗಾಗಿ ದಾನ ನೀಡಿದನು. 1297ರ ಶಾಸನದ ಪ್ರಕಾರ ಬೇಲೂರಿನ ಇತರರೊಡಗೂಡಿ ರುದ್ರಣನು 15 ಗದ್ಯಾಣಗಳನ್ನು ಯತಿಭಿಕ್ಷೆಗೆಂದು ನೀಡಿದನು.[125]

**ಸಿಂಗೆಯದಂಡನಾಯಕ :** ಇವನು ಮಾಧವದಂಡನಾಯಕನ ಮಗ. 1338ರಿಂದ ಪ್ರವರ್ಧಮಾನಕ್ಕೆ ಬಂದ ಸಿಂಗೆಯದಂಡನಾಯಕನು ಶ್ರಿವೈಷ್ಣವ ಸಂಪ್ರದಾಯಕ್ಕೆ ಮಿಗಿಲಾದ ಪ್ರೋತ್ಸಾಹವನ್ನು ನೀಡಿದ್ದಾನೆ. ಕೆಳತಿರುಪತಿಯಲ್ಲಿ ಸಿತಕರಗಂಡನ್ ಮಠವೆಂಬ ಶ್ರೀವೈಷ್ಣವ ಮಠವು ಇವನ ಪ್ರಯತ್ನದ ಫಲವಾಗಿ ಸ್ಥಾಪನೆಯಾಯಿತು.

ಬಹುತೇಕ ಹೊಯ್ಸಳ ಮಹಾಮಂಡಳೇಶ್ವರರೆಲ್ಲರು ಸಹ ಎಲ್ಲಿಯೂ ಧಾರ್ಮಿಕ ಸಂಘರ್ಷಕ್ಕೆ ಎಡಕೊಡದೆ ಧಾರ್ಮಿಕ ಸಾಮರಸ್ಯಕ್ಕೆ ಮಹತ್ವ ನೀಡುತ್ತಾ ಬಂದಿದ್ದಾರೆ. ಇದು ಸಹ ಅವರ ಹೆಚ್ಚುಗಾರಿಕೆಯೇ ಸರಿ. ಇದು ಕೂಡ ಅವರ ಧಾರ್ಮಿಕದ ಜೊತೆಗೆ ಸಮಾಜಕ್ಕೆ ಆದರ್ಶಪ್ರಾಯವಾದುದು.ವಿಶೇಷ ಉದಾಹರಣೆಯನ್ನು ಇಲ್ಲಿ ಉಲ್ಲೇಖಿಸಬಯಸುತ್ತೇನೆ. ಮುಮ್ಮಡಿ ಬಲ್ಲಾಳನ ಕಾಲದೆಂದು ನಿರ್ಧರಿಸಿರುವ (ಯಳ 108, 13–14 ಶತ)ಶಾಸನದಲ್ಲಿ ಆರು 'ಸಮಯ'ಗಳ ಪ್ರಮುಖರೂ, ದಂಡನಾಯಕರೂ ಹಾಗೂ ಇತರರು ತಿರುವಿರಾಮೇಶ್ವರ ಉಡ್ಯೆಯನಾಯನಾರ್ಗೆ (ಶ್ರೀ ರಾಮೇಶ್ವರ ದೇವರಿಗೆ)ದತ್ತಿಯನ್ನು ಬಿಟ್ಟರು.

ಈ ಎಲ್ಲ ಹೊಯ್ಸಳರ ಆಡಳಿತಾಧಿಕಾರಿಗಳು ತಮ್ಮ ಕಾಲಘಟ್ಟದಲ್ಲಿ ಪ್ರಚಲಿತದಲ್ಲಿದ್ದ ಎಲ್ಲಾ ಧರ್ಮಗಳ ಪ್ರಚುರತೆಗೆ ಇಂಬು ನೀಡಿದ್ದನ್ನು ನನ್ನ ಈ ಅಧ್ಯಯನವು ಕೂಲಂಕುಷವಾಗಿ ಮತ್ತು ಸೂಕ್ಷ್ಮವಾಗಿ ಅಭಿವ್ಯಕ್ತಿಸಿದೆ. ಈ ಆಡಳಿತಾಧಿಕಾರಿಗಳು ದೇವಾಲಯಗಳನ್ನು ನಿರ್ಮಾಣಮಾಡಿರುವುದು, ದೇವಾಲಯಗಳ ವಿವಿಧ ಭಾಗಗಳನ್ನು ನಿರ್ಮಾಣ–ಪುನರ್ ನಿರ್ಮಾಣ–ಜೀರ್ಣೋದ್ದಾರ, ಅವುಗಳ ಪೂಜಾ ವಿಧಿಗಳಲ್ಲಿ ಹೊಸ ಕೈಂಕರ್ಯಗಳನ್ನು ಸೇರಿಸಿರುವುದು, ಇತರೆ ಪೂಜಾವಿಧಿಗಳನ್ನು ಸಹ ಕ್ರಮಬದ್ಧ ಗೊಳಿಸಿರುವುದು ಇವೇ ಮೊದಲಾದ ಚಟುವಟಿಕೆಗಳ ಮೂಲಕ ಧರ್ಮದ ಪ್ರಚಾರವನ್ನು ಮಾಡಿದುದರ ಬಗ್ಗೆ ಈ ಶಾಸನಗಳು ಹೆಚ್ಚಿನ ಅಂಶಗಳನ್ನು ಬೆಳಕಿಗೆ ತರುತ್ತವೆ. ಈ ಹೊಯ್ಸಳ ಕಾಲಘಟ್ಟದಲ್ಲಿ ಶಿಸ್ತುಬದ್ದವೂ ಭಕ್ತಿಪೂರ್ವಕವೂ ಆದ ಸಾಂಸ್ಕೃತಿಕ ಅನನ್ಯತೆಯನ್ನು ಈ ಆಡಳಿತಾಧಿಕಾರಿಗಳು ರೂಪುಗೊಳಿಸಿ ತಮ್ಮದೇ ಆದ ವಿಶಿಷ್ಠ ಅಸ್ಮಿತೆಯನ್ನು ಪಡೆದುಕೊಂಡಿದ್ದಾರೆ ಎಂದು ಈ ನನ್ನ ಅಧ್ಯಯನದಲ್ಲಿ ಖಚಿತವಾಗಿ ನಿರೂಪಿಸಿದ್ದೇನೆ.

**7.6 ಧಾರ್ಮಿಕ ಪ್ರಭುತ್ವ :**

ಧರ್ಮಕ್ಕೆ ಸಂಬಂಧಿಸಿದ ಪ್ರಮುಖ ವಿಚಾರಗಳಾದ ದೇವಾಲಯಗಳು, ದೇವಸೇವಕಿಯರು, ಗ್ರಾಮದೇವತೆಗಳನ್ನು ಕುರಿತೂ ಇಲ್ಲಿ ವಿಶ್ಲೇಷಿಸಲಾಗಿದೆ. ಇವು ಧರ್ಮದ ವಿಶ್ಲೇಷಣೆಯ ಜೊತೆಗೆ ಸಾಮಾಜಿಕ ವಿಶ್ಲೇಷಣೆಯೂ ಆಗುತ್ತದೆ. ಹೊಯ್ಸಳ ಮಹಾಮಂಡಳೇಶ್ವರರು ದೇವಾಲಯಗಳ ನಿರ್ಮಾಣ ಮತ್ತು ಅವುಗಳ ಪೋಷಣೆಗೆ ಪ್ರಥಮ ಆದ್ಯತೆಯನ್ನು ನೀಡಿದ್ದರು. ಅಪಾರ ಪ್ರಮಾಣದ ದಾನದತ್ತಿಗಳನ್ನು ನೀಡಿ ಅದನ್ನು ಸಂಸ್ಥೆಯಾಗಿ ಬೆಳೆಸಿದರು. ದೇವಾಲಯಗಳು ಜಾತಿಕಟ್ಟಳೆ ಮತ್ತು ಗ್ರಾಮಗಳ ಆಡಳಿತಗಳ ಉನ್ನತ ನ್ಯಾಯಾಲಯಗಳಾಗಿದ್ದವು. ದೇವಾಲಯದಲ್ಲಿನ ಪರಿಚಾರಕರು ತಮ್ಮ ತಮ್ಮ ಜಾತಿಯ ಹಿನ್ನೆಲೆಯಿಂದ ಗುರುತಿಸಿಕೊಂಡಿದ್ದರು. ಉದಾಹರಣೆಗೆ

- ಕ್ರಿ.ಶ. 1276ರ ಸೋಮನಾಥಪುರದ ಶಾಸನದಲ್ಲಿ[126] ದೇವರ ಅಮೃತಪಡಿಯೇ ಮೊದಲಾದ ಸೇವೆಗಳಿಗೂ ದೇಗುಲದ ನಿಯೋಗಿಗಳ ಜೀವನ ನಿರ್ವಹಣೆಗೂ ಹಂಚಿದುದನ್ನೂ ತಿಳಿಸುತ್ತದೆ.
- ಹರಿಹರದಂಡನಾಯಕನು ತನ್ನ ತಮ್ಮಂದಿರಾದ ಸಿಂಗೆಯನಾಯಕ ಮತ್ತು ಮಾರೆಯನಾಯಕರೊಡಗೂಡಿ ತನ್ನ ತಂದೆಯ ಹೆಸರಿನಲ್ಲಿ ಮಲ್ಲಿಕಾರ್ಜುನದೇವಾಲಯವನ್ನು ಕಟ್ಟಿಸಿ, ತಾಯಿಯ ಹೆಸರಿನಲ್ಲಿ ಕೆರೆಯನ್ನು ನಿರ್ಮಿಸಿ ರಾಜನಿಂದ ಭೂಮಿಯನ್ನು ಪಡೆದು ದತ್ತಿಯಾಗಿ ಬಿಟ್ಟನು. ಹರಿಹರದಂಡನಾಯಕನು ಬಸುರಿವಾಳಕ್ಕೆ ಸೇರಿದ ಬೇಬಿ ಮತ್ತು ತರಣಿ ಎಂಬ ಎರಡು ಉಪಗ್ರಾಮಗಳನ್ನು ಪೂಜಾರಿಗಳು, ಪರಿಚಾರಕರು, ಬಾಣಸಿಗ, ತೋಟಿಗ, ಮಾಲೆಗಾರ, ಮುಂತಾದ ನಿಯೋಗಿಗಳ ಜೀವಿತಕ್ಕಾಗಿ ದತ್ತಿಬಿಟ್ಟನು. ಮಲ್ಲಕಾರ್ಜುನ ದೇಗುಲವು ಕಂಗೊಳಿಸಿಸುತ್ತಿರುವ ಪರಿಯನ್ನು ಶಾಸನಪದ್ಯವು ಹೊಗಳುತ್ತಿರುವುದನ್ನು ನೋಡಿದರೆ ಅಲ್ಲಿನ ಧಾರ್ಮಿಕ ಪರಿಸ್ಥಿತಿಯನ್ನು ನಾವು ಅರ್ಥ ಮಾಡಿಕೊಳ್ಳಬಹುದು.

**ಮೊದಲಿಂದಂ ಕಳಶಂಬರಂ ಮೆರೆವ ನಾನಾ ಚಿತ್ರದ ತ್ರಂಗಳಿಂ**

**ಮುದಮಂ ಬೀರುವ ಭಾರತದಿ ಕಥೆಯಂ ಮೆಯ್ವೆತ್ತ ಕೂಟಂಗ**

**ಳಿದಿರು ಪಾಂಚಾಳಿಕೆ ತಳ್ತ ಮೇರು ಗಿರಿಯೋ ಪೇಳೆಂಬಿನಂವಿಭ್ರಮಾ**

**ಸ್ಪದಮಾಗಿಪ್ಪುದುಮಲ್ಲಿಕಾರ್ಜುನ ನಮ್ಮದೇ ಎಂದು ದೇವಾಲಯಮಂ** [127]

ದೇವಾಲಯಗಳು ಅನೇಕ ಮೂಲಗಳಿಂದ ಸಂಪತ್ತನ್ನು ಸಂಗ್ರಹಿಸಿಡುತ್ತಿದ್ದವು. ಅರಸರು, ಅಧಿಕಾರಿಗಳು ನೀಡುತ್ತಿದ್ದ ದಾನದತ್ತಿಗಳು ಮತ್ತು ವ್ಯಾಪಾರಸ್ಥರಿಂದ ಸಂಗ್ರಹಿಸುತ್ತಿದ್ದ ಕೊಡುಗೆಗಳು ಇವೇ ಆ ಮೂಲಗಳು. ಕ್ರಿ.ಶ. 1286ರ ಸೋಮನಾಥಪುರದ ಶಾಸನದಲ್ಲಿ[128] ಸೋಮಯ ದಂಡನಾಯಕನು ಕಟ್ಟಿಸಿದ ಶೈವದೇವಾಲಯಗಳಿಗೆ ತಾನು ದತ್ತಿ ಬಿಟ್ಟ 21 ವ್ರಿತ್ತಿಗಳಲ್ಲಿ 7 ವ್ರಿತ್ತಿಗಳನ್ನು ನೀಡಿ ಉಳಿದ 14 ವ್ರಿತ್ತಿಗಳನ್ನು ವೈಷ್ಣವ ದೇಗುಲಗಳಿಗೂ ಸಂದ ವಿವರವನ್ನು ತಿಳಿಸುತ್ತದೆ.

- ದೇವಾಲಯಗಳು ಹಲವು ಸಂದರ್ಭಗಳಲ್ಲಿ ಅತ್ಯಂತ ಜಾಣತನದಿಂದ ತಮ್ಮ ಮೇಲಿನ ತೆರಿಗೆಗಳನ್ನು ಮನ್ನಾ ಮಾಡಿಸಿಕೊಳ್ಳುತ್ತಿದ್ದವು. ಉದಾಹರಣೆಗೆ ಕ್ರಿ.ಶ. 1297ರ ಬನ್ನೇರುಘಟ್ಟದ ಶಾಸನವು[129] ಸಿಂಗಯದಂಡನಾಯಕನ ಸಮ್ಮುಖದಲ್ಲಿ ಪೊನ್ಮಂಡಿಗನಾಡಿ (ಹೊಮ್ಮಳಿಗೆ ನಾಡು) ನೊಳಗಣ ಪೆರಿಯನಾಡಿನ ನಿವಾಸಿಗಳು ದಾಮೋದರ ಪೆರಮಾಳ ದೇವರಿಗೆ ದತ್ತಿಯಾಗಿ ನೀಡಲ್ಪಟ್ಟ ಕೆಲವು ಹಳ್ಳಿಗಳ ಮೇಲಿನ ಎಲ್ಲ ತೆರಿಗೆಗಳನ್ನು ಮನ್ನಾ ಮಾಡಿದ ವಿಷಯವನ್ನು ತಿಳಿಸುತ್ತದೆ.
- ಹಳ್ಳಿಗಳು ಹೊಲಗದ್ದೆಗಳು, ಬಾವಿಗಳು ಚಿನ್ನ ಮತ್ತಿತರ ಆಭರಣಗಳು ಹಣ, ಗೋವು, ದವಸಧಾನ್ಯಗಳು ಮುಂತಾದವು ದೇವಾಲಯಗಳ ಮುಖ್ಯ ಸಂಪತ್ತಾಗಿದ್ದವು. ಉದಾಹರಣೆಗೆ: ಕ್ರಿ.ಶ. 1298ರ ಬೇಲೂರಿನ ಶಾಸನವು[130] ಸೋಮೆಯದಂಡನಾಯಕನು ಸೆಟ್ಟಿಹಳ್ಳಿಯ ಸಿದ್ದಾಯದಲ್ಲಿ 100 ಗದ್ಯಾಣಗಳನ್ನು ಬೇಲೂರಿನ ಚನ್ನಕೇಶವ ದೇವರ ವಿವಿಧ ಸೇವೆಗಳಿಗೆಂದು ಬಿಟ್ಟುಕೊಟ್ಟುದುದನ್ನು ತಿಳಿಸುತ್ತದೆ.
- ಕ್ರಿ.ಶ. 1278ರ ಯಲಿಯೂರು ಗ್ರಾಮದ ಶಾಸನವು[131] ಇವನನ್ನು ಮಹಾಪ್ರಧಾನ ಎಂದೇ ಸಂಬೋಧಿಸಿದೆ. ಈ ಸಂದರ್ಭದಲ್ಲಿಯೇ ಪೂರ್ವಾದಿರಾಯರ ಉನ್ನತಾಧಿಕಾರಿಗಳು ಹೊನ್ನಾವರ ದಲ್ಲಿದ್ದಾಗ, ಚೂಡನಾಥದೇವರಿಗೆ ಬೆಳ್ಳಿಯ ಹರಿವಾಣ, ಕಿರೀಟಗಳನ್ನು ಧಾರಣೆ ಮಾಡಿಸಿ ಚಿಕ್ಕಗಂಗವಾಡಿಯ ಬಾಣತಿಯಹಳ್ಳಿ ಮತ್ತು ಯಲಿಯೂರು ಗ್ರಾಮಗಳನ್ನು ಅಕರವಾಗಿ ದಾನ ಮಾಡಿದರು.
- ದೇವಾಲಯಗಳಿಗೆ ಕೆಲವು ಕೆರೆ ಬಾವಿಗಳನ್ನು ಸೀಮಿತವಾಗಿ ಬಿಡಲಾಗುತ್ತಿತ್ತು. ಅದೇ ರೀತಿ ಇಂತಹ ಕೆರೆಬಾವಿಗಳುಳ್ಳ ಸುತ್ತಲಿನ ಪ್ರದೇಶಗಳನ್ನು ಸಹ ದೇಗುಲಗಳಿಗೆ ದಾನವೀಯಲಾಗುತ್ತಿತ್ತು. ಉದಾಹರಣೆಗೆ, 17–11–1276ರ ಹೊಳೆನರಸೀಪುರದ ಶಾಸನವು[132] ಪೆರುಮಾಳೆದೇವ ದಂಡನಾಯಕನು ಪಂಚಿಕೇಶ್ವರ, ಆರಣಪೂಜೆ ಹಾಗೂ ಐಂದ್ರಪರ್ವ ಸೇವೆಗಳಿಗೆಂದು ಉದ್ಧೂರ ಮಹಾಜನಗಳಿಂದ ಭೂಮಿಯನ್ನು ಕೊಂಡು ದಾನ ನೀಡಿದ ಸಂಗತಿಯನ್ನು ಒಳಗೊಂಡಿದೆ.
- ಈ ಚಟುವಟಿಕೆಗಳಲ್ಲದೆ ವೈಷ್ಣವ ದೇವಾಲಯಗಳ ಸಂಪೂರ್ಣ ಜವಾಬ್ದಾರಿಯನ್ನು ಮಹಾಜನರು ಹೊತ್ತಿದ್ದರೆ, ಶೈವ ದೇಗುಲಗಳ ಸಂಪೂರ್ಣ ಹೊಣೆಗಾರಿಕೆಯನ್ನು ಸ್ಥಾನಾಚಾರ್ಯರು ಹೊರುತ್ತಿದ್ದರು. ಇವರು ದಾನ ಅಥವಾ ಕೊಡುಗೆ ರೂಪದಲ್ಲಿ ಬರುವ ಆದಾಯಗಳನ್ನು ದೇಗುಲದ ಮತ್ತು ಅದರೊಡನಿರುವ ಸಾಂಘಿಕ ವ್ಯಕ್ತಿಗಳ ನಿರ್ವಹಣೆಗಾಗಿ ಬಳಸುವ ಅಧಿಕಾರವನ್ನು ಪಡೆದಿದ್ದರು. ಉದಾಹರಣೆಗೆ, ಕ್ರಿ.ಶ. 1307ರ ವಿಭೂತಿಪುರದ ಶಾಸನದಲ್ಲಿ[133] ಮಹಾಪಸಾಯಿತನಾದ ನಿನ್ರಾನ್ (ಮಾಸಂದಿನಾಡಿನ ಪಶ್ಚಿಮಭಾಗದ ಅಧಿಕಾರಿ), ಸೆಂಬಿದೇವ, ವಿಲ್ಲಗಾಮುಂಡ ಮೊದಲಾದವರು ಪೆರುಎರಮೂರಿಗೆ ಹೊಂದಿಕೊಂಡಂತಿರುವ ಕಾಡನ್ನು ಕಡಿದು ಊರನ್ನು ಕಟ್ಟಿ, ಆ ಊರಿಗೆ 'ವಾಚ್ಚಿದೇವಪುರ' ಎಂದು ಹೆಸರಿಟ್ಟರು. ಆ ಊರಿನ ನಿರ್ವಹಣೆಗೆಂದು ಕೆಲವು ಹೊಲಗದ್ದೆಗಳನ್ನು

ವಾಚ್ಚಿದೇವರು ಎಂಬ ಮಠಪತಿಗೆ ಮಡ(=ಮಠ)ಪುರದತ್ತಿಯಾಗಿ ನೀಡಿದರು. ಸಾಮಾನ್ಯವಾಗಿ ಈ ಹೊಯ್ಸಳ ಮಹಾಮಂಡಳೇಶ್ವರರು ನಿರ್ಮಿಸಿದ ಊರೇ ಆಗಲಿ, ಅಥವಾ ನಗರವೇ ಆಗಲಿ ಅವುಗಳಿಗೆ ತಮ್ಮ ಅಧಿರಾಜನ ಮತ್ತು ದೈವದ ಹೆಸರುಗಳನ್ನು ಮೇಳೈಸಿಕೊಂಡು ನಾಮಕರಣಮಾಡುವುದನ್ನು ಪ್ರಕೃತ ಅಧ್ಯಯನದಲ್ಲಿ ಗಮನಿಸಿದ್ದೇವೆ. ಆದರೆ ಈ ಉದಾಹರಣೆಯಲ್ಲಿ ಊರೊಂದಕ್ಕೆ ವಾಚ್ಚಿದೇವರು ಎಂಬ ಶೈವಗುರುವಿನ ಹೆಸರನ್ನು ಇಟ್ಟಿರುವುದು ಸ್ಥಳೀಯವಾಗಿ ಈ ಶೈವಗುರುವು ಬಹಳ ಪ್ರಭಾವಿಯಾದ ವ್ಯಕ್ತಿಯಾಗಿದ್ದಿರಬೇಕು ಎನಿಸುತ್ತದೆ. ಈ ಶಾಸನವು ತಮಿಳು ಶಾಸನವಾಗಿದ್ದು ಮತ್ತು ಈತನ ಹೆಸರು ತಮಿಳಿನ ರೂಪದಲ್ಲಿರುವುದರಿಂದ ಈತ ತಮಿಳುನಾಡಿನಿಂದ ಇಲ್ಲಿಗೆ ವಲಸೆಬಂದು ತನ್ನ ಅಸ್ಮಿತೆಯನ್ನು ಕಂಡುಕೊಳ್ಳುತ್ತಿದ್ದು ಅತ್ಯಂತ ಪ್ರಧಾನನೂ ರಾಜಕೀಯ ಬೆಂಬಲ ಬಲಗಳನ್ನುಳ್ಳವನೂ ಆದ ಶೈವ ಕಾಳಾಮುಖ ಯತಿಯಾಗಿದ್ದಿರಬಹುದಾದ ಸಾಧ್ಯತೆ ಹೆಚ್ಚಿದೆ ಎನ್ನಬಹುದು.ಈ ಶೈವಯತಿಗೆ ದಾನವಿತ್ತಿರುವ ನಿನ್ರಾನ್, ಸೆಂಬಿದೇವ ಎಂಬ ಅಧಿಕಾರಿಗಳ ಹೆಸರು ಸಹ ತಮಿಳು ಭಾಷಿಕರೂಪದಲ್ಲಿರುವುದರಿಂದಲೂ, ಈ ಅಧಿಕಾರಿಗಳ ಹಲವು ಶಾಸನಗಳು ತಮಿಳಿನಲ್ಲಿಯೇ ಬೆಂಗಳೂರು ಹೊಸಕೋಟೆ, ನೆಲಮಂಗಲ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಮಾತ್ರ ಕಂಡುಬರುವುದರಿಂದಲೂ ಮಹಾಮಂಡಳೇಶ್ವರನಾದ ಬಲ್ಲಪ್ಪದಂಡನಾಯಕನು ಈ ಪ್ರಾಂತದಲ್ಲಿ ಬಲಾಢ್ಯನಾಗಿದ್ದು ತಮಿಳುನಾಡಿನಲ್ಲಿ 3ನೆಯ ಬಲ್ಲಾಳನು ಹೊಯ್ಸಳರ ಪ್ರಭಾವವನ್ನು ಸ್ಥಾಪಿಸುವ ನಿಟ್ಟಿನಲ್ಲಿ ಸಕ್ರಿಯವಾಗಿದ್ದಾಗ ತಮಿಳಿನಾಡಿನಿಂದ ಈ ಅಧಿಕಾರಿಗಳನ್ನು ಇಲ್ಲಿಗೆ ಕರೆತಂದು ನೆಲೆಗೊಳಿಸಿ ಅವರ ಸಾಮರ್ಥ್ಯಕ್ಕನುಗುಣವಾಗಿ ತನ್ನ ಅಧೀನದಲ್ಲಿನ ಕೆಲವು ಪ್ರದೇಶಗಳ ಉಸ್ತುವಾರಿಯನ್ನು ವಹಿಸಿದ್ದನೆಂಬುದು ಇವನ ತಮಿಳು ಕನ್ನಡ ಶಾಸನಗಳ ಆಂತರಿಕ ಆಧಾರಗಳ ಸೂಕ್ಷ್ಮ ಅವಗಾಹನೆಯಿಂದ ತಿಳಿಯಹುದು. ಈ ಅಧಿಕಾರಿಗಳೇ ವಾಚ್ಚಿದೇವರೆಂಬ ಶೈವಯತಿಯನ್ನು ಇಲ್ಲಿಗೆ ಕರೆಸಿಕೊಂಡು ಅವನು ಸ್ಥಳಿಯವಾಗಿ ಪ್ರಬಲನಾಗಲು ಬೇಕಾದ ಆರ್ಥಿಕ ಸೌಲಭ್ಯಗಳಿಗಾಗಿ ಈ ದತ್ತಿಯನ್ನು ನೀಡಿದ್ದಿರಬೇಕು.

- ಪೆರುಮಾಳೆದೇವ ದಂಡನಾಯಕನು 3ನೆಯ ನರಸಿಂಹನಿಂದ ಬೆಟ್ಟದಕೋಟೆ, ಬಿಲ್ಲಬೆಳಗುಂದ, ತಿಪ್ಪೂರು ಎಂಬ 3 ಹಳ್ಳಿಗಳನ್ನು ದಾನವಾಗಿ ಪಡೆದನು. ಇದನ್ನು ಬೆಳ್ಳೂರಿನ ಮಹಾಜನರಿಗೆ ಪ್ರಸನ್ನಮಾಧವ, ರಾಮಕೃಷ್ಣ, ವರದಅಲ್ಲಾಳನಾಥದೇವರ ಅಂಗಭೋಗ ರಂಗಭೋಗ ಮತ್ತು ಅಲ್ಲಿನ ವಿವಿಧ ಸೇವಾವರ್ಗ ದವರಿಗೆಂದು ದಾನನೀಡಿದನು. ನಂತರ ಈತನೇ ಆ ದತ್ತಿಯನ್ನು 96 ಮಹಾಜನರಿಗೆ ಹಂಚಿದನು.
- 6–5–1321ರ ಸತ್ಯಾಗಾಲದ ಶಾಸನದಿಂದ [134] ಮಾದಜೀಯ ಎಂಬಾತನು ಮಾಧವ ದಂಡನಾಯಕನಿಂದ ಕುರುನೂರು ಮತ್ತು ಅದರ ಉಪಗ್ರಾಮಗಳನ್ನು ಕೊಂಡುಕೊಂಡು ಅವುಗಳನ್ನು ಪ್ರಸನ್ನಮಾಧವಪುರ'ವೆನಿಸಿದ ಕುರುನೂರಿನ ಮಹಾಜನಗಳಿಗೆ ದಾನ ಮಾಡಿದುದು ತಿಳಿಯುತ್ತದೆ.

- ಗೋವಿದೇವನ ಅಧೀನ ಅಧಿಕಾರಿಯಾದ ಪೆರ್ಗಡೆ ಕೇತಣ್ಣನು ತಮ್ಮ ತಂದೆ ಬಿಕ್ಕಿಮಯ್ಯನ ಹೆಸರಿನಲ್ಲಿ ಬಿಕ್ಕೇಶ್ವರ ದೇಗುಲವನ್ನು, ತನ್ನ ತಾಯಿಯ ಹೆಸರಿನಲ್ಲಿ ಆಂಡೇಶ್ವರ ದೇಗುಲವನ್ನು ನಿರ್ಮಿಸಿ, ಆ ದೇವರುಗಳ ಪೂಜಾದಿ ಸೇವೆಗಳಿಗೆಂದು ಗಂಗಣಿಕಬ್ಬೆಯ ಮಗ ಧರ್ಮರಾಶಿಪಂಡಿತರಿಗೆ ಭೂದಾನಗಳನ್ನು ನೀಡಿದನು.
- ಮಹಾದೇವನಾಯಕನು ಕೆಚ್ಚನ ಮಾಚಯನಾಯಕನ ಮಗ. ಕಣಿಕಟ್ಟೆಯ ಶಾಸನವು[135] ಮಹಾದೇವನಾಯಕನು ಬಮ್ಮೋಜ ಮತ್ತು ಮಾಚೋಜರಿಂದ ಕಮ್ಮಟೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿ, ಆಲಯ ನಿರ್ಮಿಸಿ ಅದರ ಉಸ್ತುವಾರಿಯನ್ನು ಸ್ಥಾನಾಚಾರ್ಯನಾದ ಜಗತೇಶ್ವರ ಪಂಡಿತರಿಗೆ ವಹಿಸಿದನು. ಈ ಆಲಯದಲ್ಲಿ ನಡೆಯುವ ದೇವರ ನೈವೇದ್ಯ, ನಂದಾದೀವಿಗೆಗೆ, ತಪೋಧನರ ಆಹಾರ ದಾನಗಳಿಗೆಂದು ಮಹಾದೇವನಾಯಕನು ಹಿರಿಯಕೆರೆಯ ಕೆಳಗಿನ ಮಾವಿನಕುಟಿಯಲ್ಲಿ 300 ಕಂಬ ಬೆದ್ದಲೆ, ಊರಿನ(ಕಣಿಕಟ್ಟೆ) ದಕ್ಷಿಣಕ್ಕಿರುವ ಕೆರೆಯ ಕೆಳಗಿನ ಮಾವಿನಕುಟಿಯಲ್ಲಿ 300 ಕಂಬ ಬೆದ್ದಲೆ, ಅದೇ ಊರಿನ ದಕ್ಷಿಣದ ದೊಡ್ಡ ಆಲದ ಮರದ ಪೂರ್ವಕ್ಕೆ ಮತ್ತರು ಭೂಮಿಯನ್ನು ದೇವರಿಗೆ ದಾನವಾಗಿ ಅರ್ಪಿಸಿದನು.
- ವೀರಬಲ್ಲಾಳನಲ್ಲಿ ರಾಜಾಧ್ಯಕ್ಷನಾಗಿದ್ದ ದಾವಣ್ಣ ಮತ್ತು ಪೋಲಾಳ್ವ ದಂಡನಾಯಕರು ಹೊನ್ನವತ್ತಿಯ ಕೇಶವದೇವರಿಗೆ ನಂದಾದೀವಿಗೆಗೆಂದು 1 ಗಾಣವನ್ನು 1 ನಿವೇಶನವನ್ನು ದಾನವಿತ್ತರು.[136] ಒಟ್ಟಿನಲ್ಲಿ ದೇವಾಲಯಗಳು ಧಾರ್ಮಿಕ ಹಿನ್ನೆಲೆಯಿಂದ ಹುಟ್ಟಿಕೊಂಡರೂ ನಂಬಿಕೆಗಳು ಮತ್ತು ಭಕ್ತಿಗಳನ್ನು ಪ್ರಚುರಪಡಿಸುತ್ತಲೇ ಸ್ಥಳೀಯವಾದ ಪ್ರಭುತ್ವಗಾರಿಕೆಯನ್ನು ತೋರ್ಪಡಿಸುತ್ತಲೂ ಆರ್ಥಿಕ ಮತ್ತು ಸಾಮಾಜಿಕ ನಿಯಂತ್ರಣವನ್ನು ಹೊಂದಿದ್ದವು. ದೇವಾಲಯಗಳಿಗೆ ಹೇರಳವಾದ ದಾನದತ್ತಿಗಳನ್ನು ನೀಡುವ ಮೂಲಕ ಧಾರ್ಮಿಕ ಪರಿಸರವನ್ನು ರೂಪಿಸುವುದರ ಜೊತೆಗೆ ಹೊಯ್ಸಳ ಮಹಾಮಂಡಳೇಶ್ವರರೇ ಮೊದಲಾದ ಅಧಿಕಾರಿ ವರ್ಗವು ಆ ದೇವಾಲಯಗಳಿಗೆ ನಡೆದುಕೊಳ್ಳುತ್ತಿರುವ ಸಾಮಾಜಿಕರ ಮೇಲೆಯೂ ಅಧಿಕಾರಗಳನ್ನು ಹೊಂದುತ್ತಿದ್ದವು. ಆ ಮೂಲಕ ಅದೇ ಒಂದು ನಿರ್ದಿಷ್ಟ ಸಂಪ್ರದಾಯಿಗಳ ಆಡೊಂಬಲವಾಗುವಂತೆಯೂ ನೋಡಿಕೊಳ್ಳಲಾಗುತ್ತಿತ್ತು. ಜೊತೆಗೆ ತಮ್ಮದೇ ಆದ ದೇವಾಲಯ ವ್ಯವಸ್ಥೆಯನ್ನು ರೂಪಿಸಿಕೊಳ್ಳುವುದರ ಜೊತೆಗೆ ಸಮಕಾಲೀನ ಜಗತ್ತಿನ ಸ್ಪರ್ಧಾತ್ಮಕತೆಯನ್ನೂ ಕೂಡ ರೂಢಿಸಿಕೊಳ್ಳಲಾಗುತ್ತಿತ್ತು. ಅಧಿಕಾರಕೇಂದ್ರಗಳಿಗೆ ಪರ್ಯಾಯವಾಗಿ ಧಾರ್ಮಿಕ ಕೇಂದ್ರಗಳು ಕೂಡ ತೆರಿಗೆ ವ್ಯವಸ್ಥೆಯನ್ನು ಬಲಪಡಿಸುವಂತಾಯಿತು. ತೆರಿಗೆಯಲ್ಲಿ ಯಾರಿಗಾದರೂ ರಿಯಾಯಿತಿ ಬೇಕಾಗಿದ್ದಲ್ಲಿ ಈ ದೇವಾಲಯ ವ್ಯವಸ್ಥೆಗೆ ಹೊಂದಿಕೊಳ್ಳಬೇಕಾಗಿತ್ತು. ಈ ದೇವಾಲಯಗಳ ಆಡಳಿತ ಮಂಡಳಿಯಲ್ಲಿ ಹೊಂದಾಣಿಕೆ ಮಾಡಿಕೊಳ್ಳಬೇಕಾಗಿತ್ತು.

ಮಧ್ಯಕಾಲದಲ್ಲಿ ಧಾರ್ಮಿಕತೆಯನ್ನು ರೂಪಿಸಿದ್ದೇ ಧಾರ್ಮಿಕ ಪ್ರಭುತ್ವ. ಈ ಧಾರ್ಮಿಕ ಪ್ರಭುತ್ವದ ಬಹಳ ಮುಖ್ಯವಾದ ನೆಲೆಯೆಂದರೆ ದೇವಾಲಯ ವ್ಯವಸ್ಥೆ. ಈ ದೇವಾಲಯ ವ್ಯವಸ್ಥೆಯಲ್ಲಿ ಸಮಾಜದ ಬಹಳ ಮುಖ್ಯವಾದ ಹಾಗೂ ಪ್ರಭುತ್ವಕ್ಕೆ ಬಹಳ ಹತ್ತಿರವಿದ್ದ ಮುನ್ನೆಲೆಯ ವ್ಯಕ್ತಿಗಳು ಕಾರ್ಯನಿರ್ವಹಿಸಲು ವ್ಯಾಪಕವಾಗಿ ರೂಢಿಸಿಕೊಂಡಿದ್ದು ಕೂಡ ದ್ವಿತೀಯ ಸಹಸ್ರಮಾನದ ಬಹಳ ಮುಖ್ಯವಾದ ಒಂದು ಸಾಧನೆಯಾಗಿದೆ. ಹೊಯ್ಸಳ ಮಹಾಮಂಡಳೇಶ್ವರರ ಬೆಂಬಲವೂ ಕೂಡ ಈ ವ್ಯವಸ್ಥೆ ರೂಪುಗೊಳ್ಳುವುದಕ್ಕೆ ಮುಖ್ಯ ಕಾರಣವಾಗಿದೆ. ಇವರಿಂದ ಧರ್ಮ ಎನ್ನುವುದು ಕೂಡ ನಿಯಂತ್ರಣ ಘಟಕವಾಗಿತ್ತು. ಧರ್ಮವನ್ನು ನಿಯಂತ್ರಿಸುತ್ತಿದ್ದ ಹಾಗೂ ನಿರ್ಮಿಸುತ್ತಿದ್ದ ವ್ಯವಸ್ಥೆಯೆಂದರೆ ದೇವಾಲಯಗಳು. ದೇವಾಲಯಗಳು ತಮ್ಮನ್ನು ತಾನು ಗಟ್ಟಿಗೊಳಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಸಮಾಜದ ಧಾರ್ಮಿಕ ವ್ಯವಸ್ಥೆಯನ್ನು ಕೂಡ ಬಲಗೊಳಿಸಿತು. ಹಾಗಾಗಿ ಪ್ರಸ್ತುತ ಅಧ್ಯಯನವು ಧಾರ್ಮಿಕತೆಯನ್ನು ಪೋಷಿಸಿದ ಸಂಗತಿಗಳ ಕಡೆಗೆ ವಿಶೇಷವಾದ ಗಮನವನ್ನು ನೀಡುತ್ತವೆ.

ದೇವಾಲಯಗಳು ಆರಂಭದಲ್ಲಿ ಕೇವಲ ಧಾರ್ಮಿಕ ನೀತಿಗಳನ್ನು ಪೋಷಿಸಲೆಂದೇ ರೂಪುಗೊಂಡಿತಾದರೂ ಕ್ರಮೇಣ ಸಮಾಜದ ಎಲ್ಲ ರೀತಿಯ ಸಾಮಾಜಿಕ ಹಾಗೂ ಆರ್ಥಿಕ ವಲಯಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಅನಿವಾರ್ಯವಾದ ಪ್ರಭುಶಕ್ತಿಯಾಗಿ ಮೆರೆದು ರಾಜತ್ವವನ್ನು ಸಹ ತನ್ನ ತೆಕ್ಕೆಗೆ ತೆಗೆದುಕೊಳ್ಳುವಂತಾಗಿದ್ದು ವಿಶೇಷವಾದದ್ದು.

ಮೊದಲ ಸಹಸ್ರಮಾನದಲ್ಲಿ ಕೇವಲ ಯಾಗ–ಯಜ್ಞಗಳನ್ನು ಮಾಡುವುದು, ದೇವಾಲಯಗಳಲ್ಲಿ ಅಂಗಭೋಗದ ಚಟುವಟಿಕೆಗಳನ್ನು ನಡೆಸುವುದು, ಉತ್ಸವಗಳು, ಪೂಜೆ, ರಥೋತ್ಸವಗಳು ಇವುಗಳಲ್ಲಿ ಮಾತ್ರ ಸೀಮಿತವಾಗಿದ್ದ ದೇವಾಲಯಗಳು ದ್ವಿತೀಯ ಸಹಸ್ರಮಾನದ ಆರಂಭದಲ್ಲಿ ಸಮಾಜದಲ್ಲಿ ತೆರಿಗೆಯನ್ನು ಹೆಚ್ಚಿಸುವ ಶಕ್ತಿಯಾಗಿ ರಾಜಾದಾಯದ ಬಹುಪಾಲನ್ನು ನಿಯಂತ್ರಿಸುವ ಶಕ್ತಿಯಾಗಿ, ಸಾಮಾಜಿಕ ಕಟ್ಟಳೆಗಳನ್ನು ನಿಬಂಧಿಸುವ ಶಕ್ತಿಯಾಗಿ ಮಹತ್ತರವಾದ ಸ್ಥಾನವನ್ನು ಪಡೆಯಿತು.

ಧಾರ್ಮಿಕ ನಂಬಿಕೆಗಳ ಮೂಲಕ ಜನಸಾಮಾನ್ಯರ ಹತೋಟಿಯನ್ನು ಸಾಧಿಸಿದ ದೇವಾಲಯಗಳು, ಕ್ರಮೇಣ ರಾಜಸ್ವಕ್ಕೆ ಪರ್ಯಾಯವಾಗಿ ಅಧಿಕಾರ ಕೇಂದ್ರವಾಗುತ್ತ ಸಾಗಿ ಆಡಳಿತ ಮಂಡಳಿಗಳನ್ನು ಸ್ಥಾಪಿಸಿಕೊಂಡವು. ಕ್ರಮೇಣ ಇದಕ್ಕೆ ವ್ಯಾಪಾರಿಗಳ ಬೆಂಬಲ ದೊರೆತು ದೇವಾಲಯಗಳು ಅಧಿಕಾರ ಕೇಂದ್ರಗಳಾದವು. ವ್ಯಾಪಾರಿ ಸಂಘಟನೆಗಳು ತಮ್ಮೆಲ್ಲ ವ್ಯವಹಾರಗಳಿಗೆ ರಾಜಕೀಯ ಅಧಿಕಾರಿಗಳೊಂದಿಗೆ ಹೋರಾಡುತ್ತಾ ಸಾಗುವುದು ದುಸ್ತರವಾದಾಗ ದೇವಾಲಯಗಳಿಗೆ ಹೇರಳವಾದ ದಾನಗಳನ್ನು ನೀಡುವುದರ ಮೂಲಕ ದೇವಾಲಯಗಳನ್ನು ಬಲಿಷ್ಟಗೊಳಿಸಿದವು. ತನ್ಮೂಲಕ ವ್ಯಾಪಾರ–ವಹಿವಾಟುಗಳು ಇಮ್ಮಡಿಗೊಳ್ಳಲು ಸಾಮಾಜಿಕ ವ್ಯವಸ್ಥೆಯನ್ನು ಧಾರ್ಮಿಕ ಕಟ್ಟಳೆಗಳ ಮೂಲಕ ಬಲಿಷ್ಠಗೊಳಿಸಿದವು. ಹೀಗೆ ಯಾವಾಗ ದೇವಾಲಯಗಳು ಆರ್ಥಿಕ ಕೇಂದ್ರಗಳಾಗಲು ಆರಂಭಿಸಿತೋ ಆಗ ಪ್ರಭುತ್ವವು ಕೂಡ ದೇವಾಲಯಗಳ ಆಡಳಿತ ಮಂಡಳಿಗಳಿಗೆ ತೆರಿಗೆಗಳನ್ನು ಸಂಗ್ರಹಿಸುವ ಜವಾಬ್ದಾರಿಯನ್ನು ನೀಡಿತು. ಇದರಿಂದ ರಾಜಾದಾಯಕ್ಕೆ ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ಲಾಭ ದೊರೆಯುವಂತಾಯಿತು. ಕಾರಣ ಜನರನ್ನು

ಅಧಿಕಾರ ವ್ಯವಸ್ಥೆ ನಿಯಂತ್ರಿಸುವುದಕ್ಕೆ ಬದಲಾಗಿ ಧಾರ್ಮಿಕ ವ್ಯವಸ್ಥೆ ನಿಯಂತ್ರಿಸುವುದು ಭಾರತದಂತಹ ರಾಷ್ಟ್ರಗಳಲ್ಲಿ ಹೆಚ್ಚು ಸೌಲಭ್ಯವಾದ ಮಾರ್ಗವಾಗಿತ್ತು.

ಹಾಗಾಗಿ ಸಾಮಾನ್ಯವಾದ ದೇವಾಲಯದ ಗುರುವಾಗಿಯೋ, ಪೀಠಾಧಿಪತಿಯಾಗಿಯೋ ಇದ್ದ ಸ್ಥಾನಪತಿಗಳ ಜವಾಬ್ದಾರಿಯೂ ಹೆಚ್ಚಾಯಿತು. ದೇವಾಲಯ ವ್ಯವಸ್ಥೆಯಲ್ಲಿ ತೆರಿಗೆ ಸಂಗ್ರಹಿಸುವ, ದಂಡ ವಿಧಿಸುವ, ಸಾಮಾಜಿಕ ರೀತಿ–ನೀತಿಗಳನ್ನು ರೂಪಿಸುವ, ಆರ್ಥಿಕ ಸೋರಿಕೆಯನ್ನು ತಡೆಗಟ್ಟುವ ಕ್ರಮಗಳು ಜಾರಿಯಾಗಲು ಆರಂಭಗೊಂಡವು.

ದೇವಾಲಯಗಳಿಗೆ ನೀಡಲಾಗುತ್ತಿದ್ದ ಭೂದಾನಗಳು, ವಸ್ತುದಾನಗಳು ವಿಪರೀತವಾಗಿ ಕ್ರಮೇಣ ಗೇಣಿಪದ್ಧತಿ, ಬ್ಯಾಂಕಿಂಗ್ ವ್ಯವಸ್ಥೆ ರೂಪುಗೊಳ್ಳಲು ಸಹಕಾರಿಯಾಯಿತು. ದೇವಾಲಯದ ಆಡಳಿತ ಮಂಡಳಿಗಳು ಅನೇಕ ಬ್ರಾಹ್ಮಣರಿಗೆ ತಮ್ಮಲ್ಲಿದ್ದ ಭೂಮಿಯನ್ನು ಹಂಚಿ ಅದರಿಂದ ಆಡಳಿತದ ವಿಕೇಂದ್ರೀಕರಣಕ್ಕೂ ಹಾಗೂ ಸುಲಭವಾಗಿ ನಂಬಿಕಸ್ಥರಿಂದ ಹಣಸಂಚಯನಗೊಳಿಸುವ ವ್ಯವಸ್ಥೆಗೆ ಇದು ಇಂಬು ನೀಡಿತು.

ಆರ್ಥಿಕ ಮಾರುಕಟ್ಟೆಗಳನ್ನು ರೂಪಿಸುವುದು, ಆಮದು–ರಫ್ತುಗಳನ್ನು ಮಾಡುವುದು, ಹೊಸಹೊಸ ವ್ಯಾಪಾರಿಸಂಘಗಳನ್ನು ಹುಟ್ಟುಹಾಕುವುದು ಎಲ್ಲವೂ ಈ ಕಾಲದಲ್ಲಿ ಭರದಲ್ಲಿ ನಡೆಯಿತು. ಅನೇಕ ವ್ಯಾಪಾರಿಗಳು ತಮ್ಮ ತಮ್ಮಲ್ಲೇ ಸಂಘಟನೆಗಳನ್ನು ಮಾಡಿಕೊಂಡು ವ್ಯಾಪಾರೋದ್ಯಮವು ವಿಸ್ತರಿಸಲು ಕಾರಣಕರ್ತರಾದರು. ಜೊತೆಜೊತೆಗೆ ದೇವಾಲಯಗಳ ಆಡಳಿತ ಮಂಡಳಿಯಲ್ಲಿಯೂ ಸ್ಥಾನವನ್ನು ಗಿಟ್ಟಿಸಿಕೊಂಡು ಅನೇಕ ಸಾಮಾಜಿಕ ಸುಧಾರಣೆಗಳು ಮಾಡಲು ಇವರೂ ಕಾರಣಕರ್ತರಾದರು.

ದೇವಾಲಯಗಳು ಈ ಪರಿಯಲ್ಲಿ ತಮ್ಮ ಬಾಹುಗಳನ್ನು ವಿಸ್ತರಿಸಿಕೊಳ್ಳಲು ಮುಖ್ಯ ಕಾರಣವೆಂದರೆ ಮಹಾಜನರು. ಈ ಮಹಾಜನರು ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಸಂಖ್ಯೆಯಲ್ಲಿದ್ದು ಇವರು ದೇವಾಲಯಗಳ ಆಡಳಿತ ನಿಯಂತ್ರಣ ಮಂಡಳಿಯಾಗಿದ್ದರು. ದೇವಾಲಯಗಳ ಎಲ್ಲ ರೀತಿಯ ಬೆಳವಣಿಗೆಗೆ ಇವರ ಪಾತ್ರವು ಹಿರಿದಾದುದಾಗಿದೆ.

**7.6.1 ದೇಗುಲ ನಿರ್ಮಾಣ ಪ್ರಕ್ರಿಯೆಗಳು:**

ಹೊಯ್ಸಳ ಆಡಳಿತದ ಕಾಲಘಟ್ಟದಲ್ಲಿ ನಿರ್ಮಾಣಗೊಂಡ ದೇವಾಲಯಗಳ ಸಂಖ್ಯೆ ಹೆಚ್ಚಾಗಿದೆ. ಈ ದೇಗುಲ ನಿರ್ಮಾಣದ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳುವುದು ವಿಶೇಷವಾದ ವಿಷಯವೇ ಸರಿ. ಮೊದಲು ಉತ್ತಮ ವಾಸ್ತುಶಿಲ್ಪಿಯನ್ನು ಆರಿಸಿ ಆತನಿಗೆ ಆ ಕೆಲಸವನ್ನು ವಹಿಸಿಕೊಡುವುದರಿಂದ ಆರಂಭವಾಗಿ ದೇಗುಲ ನಿರ್ಮಾಣಕ್ಕೆ ಸೂಕ್ತವಾದ ಜಾಗವನ್ನು ಆಯ್ಕೆ ಮಾಡಿಕೊಂಡು, ಅದರ ನಿರ್ಮಾಣಕ್ಕೆ ಹತ್ತಿರದಲ್ಲೇ ಕೆರೆಯನ್ನು ನಿರ್ಮಿಸುವುದರ ಮೂಲಕ ಶಿಲ್ಪಿಗಳಿಗೆ ತಾತ್ಕಾಲಿಕ ವಸತಿಯನ್ನು, ಅಂದಂದಿನ ಆಹಾರವನ್ನು ಅವರಿಗೆ ಸಮಯೋಚಿತವಾಗಿ ಲಭಿಸಲೇಬೇಕಾದ ಅಗತ್ಯತೆಗಳನ್ನು, ಪರಿಕರಗಳನ್ನು ಒದಗಿಸಿಕೊಡುವುದು ಮುಂತಾದ ಕಾರ್ಯಬಾಹುಳ್ಯವನ್ನು ನಾವು ಅರಿಯಬೇಕಾಗಿದೆ. ದೇವಾಲಯ ನಿರ್ಮಾಣ ಮುಗಿದ ನಂತರ ದೇವರ ಪ್ರತಿಷ್ಠಾಪನೆ, ದೇವಾಲಯದ ನಿರ್ವಹಣೆ ಅದು ನಿರಂತರವಾಗಿ ಸಾಗಲು ಒಂದು ಆಡಳಿತ

ಮಂಡಳಿ, ಪೂಜೆಗಾಗಿ ಪುರೋಹಿತ ವರ್ಗ, ಸೇವೆಗಾಗಿ ಪರಿಚಾರಕವರ್ಗ, ಅದರ ನಿರ್ವಹಣೆ. ಇದು ನಿಜಕ್ಕೂ ವಿಪರೀತ ಖರ್ಚದಾಯಕ ಸಂಗತಿಗಳೇ. ಇಷ್ಟನ್ನು ಪುರುಷರಷ್ಟೆ ಸರಿಸಮವಾಗಿ ಮಹಿಳೆಯರು ಅದರಲ್ಲೂ ಜನಸಾಮಾನ್ಯ ಮಹಿಳೆಯರು ನಿರ್ವಹಿಸಿರುವುದು ವಿಶೇಷವಾಗಿದೆ.

2ನೇ ವೀರಬಲ್ಲಾಳನ ಕಾಲದಲ್ಲಿ ರಾಜ್ಯಾಧ್ಯಕ್ಷನಾದ ಕೇತಮಲ್ಲನ ಆಳ್ವಿಕೆಯಲ್ಲಿ ಮೊತ್ತಕಾರರೆಲ್ಲ (ಕೊಯ್ಲಾಳುಗಳು) ಸೇರಿ ಅರಸೀಕೆರೆಯಲ್ಲಿ ಕೊಯ್ಲಾಳೇಶ್ವರ ದೇವಾಲಯವನ್ನು ಸ್ಥಾಪಿಸಿದಾಗ ಮಾಲಿಯಸೆಟ್ಟಿಯ ಮಗನಾದ ಬರಮ ಹಾಗೂ ಆತನ ಸತಿ ಆಚವ್ವೆಯರು ಈ ದೇವಾಲಯದ ಆವರಣದಲ್ಲಿ ವಿಷ್ಣುವಿಗಾಗಿ ಒಂದು, ಗಣೇಶನಿಗೆ ಒಂದು ಉಪಭವನಗಳನ್ನು ನಿರ್ಮಿಸಿಕೊಟ್ಟರು.[137] ಹಳೇಬೀಡಿನ ಶಾಂತಿನಾಥ ದೇವರ ದೇವಾಲಯಕ್ಕೆ ನಯಕೀರ್ತಿ ಸಿದ್ಧಾಂತ ಚಂದ್ರಯತಿ ದೇವರಿಗೆ ಕವಡೆಯರ ಜಕ್ಕವ್ವೆಯು ಪಟ್ಟಶಾಲೆಯನ್ನು ಮಾಡಿಸಿಕೊಟ್ಟು ಅನೇಕ ದಾನಗಳನ್ನು ಸಹ ನೀಡಿದ್ದಾಳೆ.[138] ಹೀಗೆ ನಾನಾವರ್ಗದ ಸಾಮಾನ್ಯ ಸ್ತ್ರೀಯರೂ ಸಹ ದೇಗುಲಗಳ ನಿರ್ಮಾಣಕ್ಕೆ ಕೈಹಾಕಿರುವುದು ಅವರ ಧಾರ್ಮಿಕತೆಯ ಜೊತೆಗೆ ಅವರ ಆರ್ಥಿಕ ಸುಭದ್ರತೆಯನ್ನು ಎತ್ತಿ ತೋರಿಸುತ್ತದೆ.

### 7.6.2 ದೇಗುಲ ನಿರ್ವಹಣೆ:

ದೇವಾಲಯಗಳನ್ನು ನಿರ್ಮಿಸುವುದು ಒಂದು ಕಡೆಗಾದರೆ ಆ ದೇವಾಲಯದ ನಿರ್ವಹಣೆ ಅದಕ್ಕೂ ಮಿಗಿಲಾದದ್ದು. ಅದಕ್ಕಾಗಿ ದೇಗುಲಗಳಿಗೆ ಅನೇಕ ದಾನ–ದತ್ತಿಗಳನ್ನು ನೀಡಿ ಅದರ ಉತ್ಪನ್ನದಿಂದ ಪುರೋಹಿತವರ್ಗ, ಪರಿವಾರವರ್ಗದವರು ಜೀವನದ ಸುಲಭೋಪಾಯದ ಕಡೆಗೆ ಅವರನ್ನು ಕೊಂಡೊಯ್ದವರೆಷ್ಟೋ.

ಮೂಲಸಂಘದ ಕ್ರೌಣೂರ್ಗಣದ ಕುಮುದಚಂದ್ರ ಭಟ್ಟಾರಕದೇವರ ಕಾರಕಳದ ಎಲ್ಲ ಶಿಷ್ಯರೂ ಸೇರಿ ಶಾಂತಿನಾಥದೇವರ ಬಸದಿಯನ್ನು ನಿರ್ಮಿಸಿದಾಗ ಇದರ ನಿರ್ವಹಣೆಗೆ ಲೋಕನಾಥ ದೇವರಸರು, ಅವರ ತಾಯಿ ತಂದೆಯರಾದ ಸಿದ್ಧಲದೇವಿ ಹಾಗೂ ಬೊಮ್ಮಿದೇವರಸರೂ, ಅಕ್ಕಂದಿರಾದ ಬೊಮ್ಮಲದೇವಿ ಹಾಗೂ ಸೋವಲದೇವಿಯರು ಕುಕ್ಕುದೂರಲ್ಲಿ ಮೂವತ್ತು ಮೂಡೆ ಬಿತ್ತುವ ಹೊಲವನ್ನು ದಾನವಾಗಿ ನೀಡಿದರು.[139] ಅಗರದ ಶಾಸನದಿಂದ ತಿಳಿದುಬರುವ ಸಂಗತಿಯೆಂದರೆ ದುಗ್ಗಯ್ಯಾರ್ ಅಗ್ರಹಾರದ ಕುಂಜಿ ಪೆರುಮಾಳುವಿನ ಪತ್ನಿಯಾದ ಮಣ್ಣಿಯು ಈ ಊರಿನ ವರದರಾಜ ದೇವಾಲಯಕ್ಕೆ ಭೂದಾನವನ್ನು ನೀಡಿದ್ದಾಳೆ.[140] ಭೂದಾನ, ದ್ರವ್ಯದಾನಗಳಲ್ಲದೆ ಆಭರಣಗಳು, ಪಡಿಪದಾರ್ಥಗಳನ್ನೂ ಸಹ ದಾನವಾಗಿ ಸಲ್ಲಿಸುತ್ತಿದ್ದರು. ಅಂತಹ ಕೆಲವು ಉದಾಹರಣೆಗಳನ್ನು ನೋಡುವುದಾದರೆ ಅರಸಿಯಕೆರೆಯ ಚೆನ್ನಕೇಶವ ದೇವರ ದೇವಾಲಯಕ್ಕೆ ಕೆಲವು ಸ್ತ್ರೀಯರು ನೀಡಿರುವ ದಾನವೆಂದರೆ ದೇವಾಲಯದ ಹೂಸೇವೆಗಾಗಿ ಬಾಚಪ್ಪೆಯು 1 ಗದ್ಯಾಣ, ಎಣ್ಣೆಗೆ 1 ಗದ್ಯಾಣ, ಬಾಚಕಬ್ಬೆಯು ಎಣ್ಣೆಗೆಂದು 2 ಗದ್ಯಾಣ, ತಿಪ್ಪವ್ವೆಯು 5 ಪಣ, ರೇವವ್ವೆಯು ಎಣ್ಣೆಗೆಂದು 5 ಪಣ, ಹೊನ್ನತ್ತಿಯು 1 ಗದ್ಯಾಣ, ಚಂದುವವ್ವೆ ಮತ್ತು ಮಾಳಗೌಡನ

ಮದವಳಗೆ ಮಾಚಗೌಡಿಯು ಎಣ್ಣೆಗೆಂದು 2 ಗದ್ಯಾಣ. ಈ ಹಣದಿಂದ ಬರುವ ಬಡ್ಡಿಯಿಂದ ದೇವರಿಗೆ ಹಲವು ರೀತಿಯ ಸೇವೆಗಳು ಜರುಗಬೇಕು.[141]

ಬೇಲೂರಿನ ಚೆನ್ನಕೇಶವ ದೇವರಿಗೆ ಹೂಸೇವೆಯನ್ನು ಸಲ್ಲಿಸಲು, ದಂಡೆ, ವನಮಾಲೆಗಳನ್ನು ಅರ್ಪಿಸಲು ಕ್ರಿ.ಶ. 18.10.1297ರಲ್ಲಿ ಒಂದು ದೊಡ್ಡ ಪುದುವಟ್ಟನ್ನು ಇಡಲಾಯಿತು. ಅನೇಕ ಜನ ಸೇರಿ ಇಟ್ಟ ಪುದುವಟ್ಟಿನಲ್ಲಿ ಕೆಲವು ಹೆಂಗಸರೂ ಬೀಜವೊನ್ನನ್ನು ಇಟ್ಟರು. ಅದರಲ್ಲಿ ಪ್ರಧಾನಳಾದವಳೆಂದರೆ ಮಹಾಪಸಾಯಿತರಾದ ಗೋಪಾಳದೇವಣ್ಣನವರ ಹೆಂಡತಿ ಮಾಯಿದೇವಿ ಅಕ್ಕ. ಈಕೆ ಮೂರು ಗದ್ಯಾಣ ಹಣವನ್ನು ಬೀಜವೊನ್ನಾಗಿ ಇಟ್ಟು ಇದರಿಂದ ಬರುವ ತೋಡುಬಡ್ಡಿಯಲ್ಲಿ ಪ್ರತಿನಿತ್ಯ ಕೇಶವನಾಥನಿಗೆ ಮೂರು ವನಮಾಲೆಯನ್ನು ಆಚಂದ್ರಾರ್ಕಸ್ಥಾಯಿಯಾಗಿ ನಡೆಸಲು ವೈಷ್ಣವ ಮಹಾಜನಂಗಳ ಕೈಯಲ್ಲಿ ಪುದುವಟ್ಟನ್ನು ಅರ್ಪಿಸಿದಳು.[142] ಹಳೇಬೀಡಿನ ಹೊಯ್ಸಳೇಶ್ವರ ದೇವರಿಗೆ ಪಾತ್ರದ ಮಣಿಗಾರ ಮಾರವ್ವೆಯು ಪಟ್ಟ, ಹೂವು ಎರಡೂ ಸಹಿತ ಹರಳು, ಎರಡಲ್ಲಿದ ಮಿಸುನಿ ಲೊಕ್ಕಿಯ ಮೂವತ್ತು ಗದ್ಯಾಣ ತೂಕದ ವಸ್ತುಗಳನ್ನು ದಾನವಾಗಿ ನೀಡಿದಳು.

**7.6.3 ಸ್ಮಾರಕಗಳ ಮೂಲಕ ಸ್ಥಳೀಯ ಸಂವರ್ಧನೆ:**

ಸಂಸ್ಕೃತಿ ಅಧ್ಯಯನದಲ್ಲಿ ಸ್ಮಾರಕಗಳಿಗೆ ಸಂಬಂಧಿಸಿದಂತೆ ಕಾಡುವ ಪ್ರಶ್ನೆಯೆಂದರೆ ಸ್ಮಾರಕಗಳು ಯಾರ ಅಥವಾ ಯಾವ ಸಂಸ್ಕೃತಿಯನ್ನ ಪ್ರತಿನಿಧಿಸುತ್ತವೆ ಎಂಬುದು. ಅಧಿಕಾರ ಮತ್ತು ಸವಲತ್ತುಗಳನ್ನು ಅನುಭವಿಸಿದ ಅಧಿಕಾರಿ ವರ್ಗಗಳ ವೈಭವದ ಬದುಕನ್ನು ಸಾರಿ ಹೇಳುವ ಸ್ಮಾರಕಗಳ ನಿರ್ಮಾಣದ ಹಿಂದೆ ದುಡಿಯುವ ವರ್ಗಗಳ ಶ್ರಮ ಇದೆ ಎಂಬುದನ್ನು ಲಕ್ಷಿಸಬೇಕು. ಅರಸರು ಮತ್ತು ಅಧಿಕಾರಿಗಳು ನಿರ್ಮಿಸಿದ ಸ್ಮಾರಕಗಳನ್ನು ಕಟ್ಟಿಸಿದವರ ಹಿನ್ನೆಲೆಯಿಂದ ನೋಡುವುದರ ಜೊತೆಗೆ ಕಟ್ಟಿದವರ ಹಿನ್ನೆಲೆಯಿಂದಲೂ ನೋಡುವುದು ಅವಶ್ಯಕವಾಗಿವೆ.

ಹೊಯ್ಸಳರ ಅವಧಿಯಲ್ಲಿ ಬೇಲೂರು, ಹಳೇಬೀಡು, ಸೋಮನಾಥಪುರ, ತಲಕಾಡು, ಅರಸೀಕೆರೆ, ಕಣ್ಣನೂರು, ಮೂಡಿಗೆರೆ, ನುಗ್ಗೇಹಳ್ಳಿ, ಜಾವಗಲ್, ದೊಡ್ಡಗದ್ದವಳ್ಳಿ, ಅಮೃತಾಪುರ, ಬಗ್ಗವಳ್ಳಿ, ಕಿಕ್ಕೇರಿ, ಶ್ರವಣಬೆಳಗೊಳ, ಬಳ್ಳಿಗಾವೆ, ಗೋವಿಂದನಹಳ್ಳಿ, ಮಿರ್ಲೆ, ಬಸರಾಳು, ತೊಣ್ಣೂರು, ಮುಂತಾದ ಪ್ರದೇಶಗಳಲ್ಲಿ ಹಲವು ಸ್ಮಾರಕಗಳನ್ನು ಇಂದಿಗೂ ಕಾಣಬಹುದಾಗಿದೆ.[143] ಇವುಗಳಲ್ಲಿ ಅನೇಕವು ಮಹಾಮಂಡಳೇಶ್ವರರಿಂದಲೂ ನಿರ್ಮಿತವಾಗಿವೆ. ದೇವಾಲಯಗಳು, ಕೋಟೆಕೊತ್ತಲಗಳು, ಇತ್ಯಾದಿ ಪ್ರಮುಖವಾದವು. ಕಲೆ ವಾಸ್ತುಶಿಲ್ಪ ಕ್ಷೇತ್ರಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆತಿತ್ತು ಎನ್ನುವುದಕ್ಕೆ ಅಪಾರ ಸಂಖ್ಯೆಯಲ್ಲಿ ಸಿಗುವ ಸ್ಮಾರಕಗಳೇ ಆಧಾರಗಳಾಗಿವೆ. ಇಲ್ಲಿನ ನಿರ್ಮಾಣ ಪ್ರಕ್ರಿಯೆಯ ಹಿಂದೆ ಕನ್ನಡ ವಾಸ್ತುಶೈಲಿಯೊಂದು ಜಗಜ್ಜಾಹೀರಾಗಿದೆ ಎಂದರೆ ತಪ್ಪಲ್ಲ. ಅನೇಕ ದೇಸಿ ಸಂಗತಿಗಳು, ಸ್ಥಳೀಯ ಸಂಗತಿಗಳನ್ನು ಈ ದೇವಾಲಯಗಳ ಮೂಲಕ ಪ್ರಚುರಪಡಿಸಲಾಯಿತು. ಈ ದೇವಾಲಯಗಳ ಮೂಲಕ

ಕನ್ನಡಿಗರಿಗೆ ಪರಿಚಿತವಾಗಿದ್ದ ರಾಮಾಯಣ, ಮಹಾಭಾರತ, ಭಾಗವತ, ಪಂಚತಂತ್ರ ಕಥೆಗಳನ್ನು ನಾವು ಅಧ್ಯಯನ ಮಾಡಬಹುದಾಗಿದೆ. ಧರ್ಮವನ್ನು ಕುರಿತ ಕಥಾನಕಗಳನ್ನು ವಿಸ್ತೃತವಾಗಿ ಕನ್ನಡಿಗರಿಗೆ ಪರಿಚಯ ಮಾಡಿದ್ದು ಕೂಡ ಹೊಯ್ಸಳ ವಾಸ್ತುಶಿಲ್ಪದ ಮಹಾಸಾಧನೆಯೇ.

ಭಿನ್ನ ಭಿನ್ನ ಪ್ರದೇಶಗಳಲ್ಲಿ ಸ್ಥಳೀಯವಾಗಿ ಪ್ರಾಬಲ್ಯಗಳಿಸಿದ್ದ ಹಾಗೂ ಪ್ರಾದೇಶಿಕ ಪ್ರಗತಿಗೆ ತಮ್ಮದೇ ಆದ ಕೊಡುಗೆಗಳನ್ನು ಕೊಟ್ಟಂತಹ ಹೊಯ್ಸಳ ಮಹಾಮಂಡಳೇಶ್ವರರು ನಿಜವಾಗಿಯೂ ಸ್ಥಳೀಯ ಹಂತದ ಪ್ರಭುಗಳೆಂದರೆ ತಪ್ಪಾಗಲಾರದು. ಹಾಗಾಗಿ ಹೊಯ್ಸಳರಂತೆಯೇ ಅವರ ಅಧಿಕಾರಿಗಳಾದ ಹೊಯ್ಸಳ ಮಹಾಮಂಡಲೇಶ್ವರರು ಸಹ ಸ್ಮಾರಕಗಳನ್ನು ನಿರ್ಮಿಸುವ ಸಂದರ್ಭಗಳಲ್ಲಿ ಕಲ್ಯಾಣ ಚಾಲುಕ್ಯ ವಾಸ್ತುಶಿಲ್ಪ ಶೈಲಿಯನ್ನು ಮುಂದುವರಿಸಿಕೊಂಡು ಹೋಗಿ ಅದರ ವಿಕಾಸಕ್ಕೆ ಕಾರಣರಾದರು. ಹಾಗಾಗಿ ಈ ಮಹಾಮಂಡಳೇಶ್ವರರು ಹೊಯ್ಸಳ ವಾಸ್ತುಶಿಲ್ಪ ಶೈಲಿಯು ರೂಪುಗೊಳ್ಳುತ್ತ ಸಾಗುವಲ್ಲಿಯೂ ಕೂಡ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಹಾಗೆ ನೋಡಿದರೆ ಹೊಯ್ಸಳರ ಮೇರು ವಾಸ್ತುಕೃತಿಗಳೆಲ್ಲವನ್ನೂ ನಿರ್ಮಿಸಿದವರು ಯಾವ ಚಕ್ರವರ್ತಿಗಳೂ ಅಲ್ಲ. ಬದಲಿಗೆ ಅವರ ಮಹಾಮಂಡಳೇಶ್ವರರೇ ಎಂದರೆ ಅದರಲ್ಲಿ ಯಾವುದೇ ಅತಿಶಯೋಕ್ತಿಯಿಲ್ಲ. ಇವರ ಆಳ್ವಿಕೆಯ ಪ್ರದೇಶಗಳಲ್ಲಿ  ಮಹಾಜನರಿಗೆ ಮತ್ತು ಸ್ಥಾನಾಚಾರ್ಯರಿಗೆ ಆ ಮೂಲಕ ದೇವಾಲಯಗಳಿಗೆ ಇನ್ನಿತರ ಅಧಿಕಾರಿಗಳಿಗೆ ಭೂಮಿಗಳನ್ನು ದಾನ ನೀಡುವ ವ್ಯವಸ್ಥೆಯು ಹೆಚ್ಚಿದಂತೆಲ್ಲಾ ದೇವಾಲಯ ಮತ್ತು ಬಸದಿಗಳ ನಿರ್ಮಾಣವೂ ಬಹುವಾಗಿ ನಡೆಯಿತು. ಇದರ ಜೊತೆಗೆ ಮುಖ್ಯವಾಗಿ ಲಕ್ಷಿಸಬೇಕಾದ ಮತ್ತೊಂದು ಅಂಶವೆಂದರೆ, ಕೋಟೆಗಳಂತಹ ಬೃಹತ್ ನಿರ್ಮಾಣಗಳಿಗೆ ಮಹಾಮಂಡಳೇಶ್ವರರು ಕಾರಣಕರ್ತರಾಗಿದ್ದರು. ಉದಾಹರಣೆಗೆ,

- ಮಾಲೂರಿನ ಶಾಸನದಲ್ಲಿ[144] ಮತ್ತೊಂದು ಗಮನಾರ್ಹ ವಿಚಾರ ಉಲ್ಲೇಖಗೊಂಡಿದೆ. ಸಾಳ್ವ ತಿಪ್ಪರಾಜನ ಮಗ ಗೋಪರಾಜನು ಬಲ್ಲಪ್ಪದಂಡನಾಯಕ ಮತ್ತು ಅವನ ಸೋದರ ಸಿಂಗೆಯದಂಡನಾಯಕರು ತೇಕಲಿನಲ್ಲಿ ಕಟ್ಟಿಸಿದ ಕಲ್ಲಿನಕೋಟೆಯನ್ನು ಪುನಃ ಪ್ರತಿಷ್ಠೆ ಮಾಡಲು ತೀರ್ಮಾನಿಸುತ್ತಾನೆ. ಇದರಿಂದ ಬಲ್ಲಪ್ಪ ದಂಡನಾಯಕನು ಈ ಭಾಗದ ರಕ್ಷಣೆಯ ದೃಷ್ಟಿಯಿಂದ ಕಲ್ಲಿನಕೋಟೆಯನ್ನು ನಿರ್ಮಿಸಿದ್ದನೆಂಬುದು ವೇದ್ಯವಾಗುತ್ತದೆ. ಜೊತೆಗೆ ದಂಡನಾಯಕನೋರ್ವ ಕೋಟೆಯನ್ನು ಕಟ್ಟಿಸಿರುವುದು ರಾಜ್ಯಾಡಳಿತದಲ್ಲಿ ಆತನಿಗಿದ್ದ ವರಿಷ್ಠ ಸ್ಥಾನವನ್ನು ತಿಳಿಸುತ್ತದೆ.[145]
- **ಹೆಗ್ಗಡೆದೇವ :** ಈತ ಪೆರುಮಾಳೆದೇವದಂಡನಾಯಕನ ಇನ್ನೋರ್ವ ಮಗ. ಇವನ ಶಾಸನಗಳಿಂದ[146] ಈತನ ಕಾರ್ಯಭಾರಗಳು ಮೈಸೂರಿನ ಹೆಗ್ಗಡನದೇವನ ಕೋಟೆಯಲ್ಲಿದ್ದಂತೆ ಇದೆ. ಇವನಿಂದಲೇ ಈ ಪ್ರದೇಶಕ್ಕೆ ಹೆಗ್ಗಡದೇವನಕೋಟೆ ಎಂದು ಹೆಸರು ಬಂದಿರಬಹದೆಂದು ತೋರುತ್ತದೆ.

ದೇವಾಲಯಗಳು, ಬಸದಿಗಳು ಸ್ಮಾರಕಗಳ ಸಾಲಿಗೆ ಬರುತ್ತವಾದರೂ ಅವುಗಳನ್ನು ಕುರಿತು ಈಗಾಗಲೇ ಈ ಹೊಯ್ಸಳ ಮಹಾಮಂಡಳೇಶ್ವರರ ಜೈನ, ಶೈವ, ವೈಷ್ಣವ ಧರ್ಮಗಳಿಗೆ ನೀಡಿದ

ಕೊಡುಗೆಗಳ ಮೇಲಿನ ಭಾಗದಲ್ಲಿ ವಿಸ್ತೃತವಾಗಿ ಹೇಳಿರುವುದರಿಂದ ಇಲ್ಲಿ ಆ ಸ್ಮಾರಕಗಳ ವಿಚಾರವನ್ನು ಕೈಬಿಡಲಾಗಿದೆ.

ಹೀಗೆ ನೋಡಿದಾಗ ಸ್ಮಾರಕಗಳನ್ನು ನೋಡಿದರೆ ಎರಡು ಮುಖಗಳು ಗೋಚರಿಸುತ್ತವೆ: ಒಂದು ಅದರ ವೈಭವದ ಮುಖ; ಇನ್ನೊಂದು ಅದರ ಪೋಷಣೆಯ ಮುಖ. ವೈಭವದ ಮುಖವನ್ನು ಹಲವು ಚರಿತ್ರೆಕಾರರು ಹಾಡಿ ಹೊಗಳಿದ್ದಾರೆ ನಿಜ. ಆದರೆ ಅವುಗಳ ನಿರ್ಮಾಣ ಕಾರ್ಯದ ವೇಳೆ ದುಡಿಯುವ ನೂರಾರು ವರ್ಗದ ಸಮಾಜವೇ ತಮ್ಮ ಬದುಕನ್ನು ತೇಯುತಲಿತ್ತು. ಅದ್ಭುತ ನೈಪುಣ್ಯವುಳ್ಳ ಕಲಾವಿದರು ತಮ್ಮ ಪ್ರತಿಭೆಯನ್ನು  ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದರು. ಶಿಲ್ಪಿಗಳು ಮತ್ತು ಅವರ ಸಹವರ್ತಿಗಳೆಲ್ಲರೂ ಸಹ ತಮ್ಮ ಕಲಾನೈಪುಣ್ಯತೆಯ ಸಾರ್ಥಕ್ಯವನ್ನು ದೇವಾಲಯಗಳ ನಿರ್ಮಾಣದಲ್ಲಿ ಕಂಡುಕೊಂಡದ್ದು ಸಹ ವಿಪರ್ಯಾಸ. ಬಡಗಿ. ಕಂಚುಗಾರ, ಅಕ್ಕಸಾಲಿಗ, ಶಿಲ್ಪಿ, ಕಮ್ಮಾರ, ಓಜ, ಬೋಯಿ, ವಡ್ಡರು ಮೊದಲಾದ ಕಾರ್ಮಿಕ ವರ್ಗದವರು ಸ್ಮಾರಕಗಳ ರೂವಾರಿಗಳೂ. ಇವರು ಸ್ಮಾರಕಗಳನ್ನು ಕಟ್ಟಲು ಮರ, ಕಲ್ಲು, ಇಟ್ಟಿಗೆ, ಕಬ್ಬಿಣ ಮುಂತಾದ ಮೂಲವಸ್ತುಗಳನ್ನು ಬಳಸಿ ದೇವಾಲಯಗಳನ್ನು ಕೋಟೆಗಳನ್ನು ಕೆರೆ ಮೊದಲಾದ ಸ್ಮಾರಕಗಳನ್ನು ನಿರ್ಮಿಸುತಿದ್ದರು. ಇದು ಕುಶಲಕರ್ಮಿಗಳಿಗೆ ಉದ್ಯೋಗಾವಕಾಶಗಳನ್ನು ಒದಗಿಸುತ್ತಿತ್ತು ದಾನಗಳನ್ನು ನೀಡಿ ಗೌರವಿಸಲಾಗುತ್ತಿತ್ತು. ಮಹಾಮಂಡಳೇಶ್ವರರಂತಹ ಬಹುದೊಡ್ಡ ಅಧಿಕಾರಿಗಳು ದೇವಾಲಯ ನಿರ್ಮಾಣದಂತಹ ಪರಿಸ್ಥಿತಿಯಲ್ಲಿ ನಿರತರಾಗಿದ್ದ ಈ ಮೇಲಿನ ಕುಶಲಕರ್ಮಿಗಳ ಕುಟುಂಬ ಪೋಷಣೆಯನ್ನು ಮಾಡುತ್ತಾ ಇಂತಹ ಕುಶಲಕರ್ಮಿಗಳು ನಿರಂತರವಾಗಿ ನಿರಾತಂಕವಾಗಿ ತಮ್ಮ ಕೆಲಸಗಳಲ್ಲಿ ಮಗ್ನರಾಗುವಂತೆ ನೋಡಿಕೊಳ್ಳುತ್ತಿದ್ದರು. ಕುಟುಂಬ ಪೋಷಣೆಗಳಿಗೆಂದೇ ಹಲವಾರು ಶಾಸನಗಳಲ್ಲಿ ದತ್ತಿಗಳನ್ನು ನೀಡಿರುವುದನ್ನು ನಾವು ಈ ಹಿನ್ನೆಲೆಯಲ್ಲಿಯೇ ಗಮನಿಸಬೇಕು.

ಒಮ್ಮೊಮ್ಮೆ ಶಾಸನಗಳು ಮತ್ತು ಸಾಹಿತ್ಯ ಕೃತಿಗಳು ಈ ರೀತಿಯ ಸ್ಮಾರಕಗಳ ನಿರ್ಮಾಣ ಕಾರ್‍ಯಗಳನ್ನು ಅತಿಶಯವಾಗಿ ಬಣ್ಣಿಸುವುದ್ನು ನೋಡಿದರೆ ಸ್ಮಾರಕಗಳ ನಿರ್ಮಾಣ ಕಾರ್ಯಕ್ಕೆ ಎಷ್ಟೊಂದು ದೊಡ್ಡ ಮಟ್ಟದಲ್ಲಿ ಪ್ರೋತ್ಸಾಹ ಮತ್ತು ಸಹಾಯ ಸಹಕಾರಗಳು ದೊರೆಯುತ್ತಿತ್ತು ಎಂಬುದು ಅರಿವಾಗದಿರದು. ಇಂತಹ ಸಹಾಯದ ಬಹುಪಾಲು ನಮ್ಮ ಹೊಯ್ಸಳ ಮಹಾಮಂಡಲೇಶ್ವರರಿಂದಲೇ ಸಿಕ್ಕಿರುವುದನ್ನು ಈ ಅಧ್ಯಯನವು ಸಾಬೀತುಗೊಳಿಸಿದೆ.

## ಕೊನೆಟಿಪ್ಪಣಿಗಳು ಮತ್ತು ಆಕರಸೂಚಿ

01. ಎಕ 24(ಪ): ಚಿನಾ 32, 101
02. ಎಕ 11(ಪ) ಚಿಮ 2
03. ಎಕ 12 (ರೈ): ತುಮ 9
04. ಎಕ 24(ಪ), ತುಮ 11
05. ಎಕ 24(ಪ): ಚಿನಾ 104
06. ಎಕ 2(ಪ): ಶ್ರಬೆ 82
07. ಎಕ 2(ಪ): ಶ್ರಬೆ 82
08. ಅದೇ: ಶ್ರಬೆ 82
09. ಎಕ 2(ಪ), ಶ್ರಬೆ 170
10. ಎಕ 2(ಪ), ಶ್ರಬೆ 69
11. ಎಕ 2(ಪ), ಶ್ರಬೆ 136
12. ಎಕ 2(ಪ), ಶ್ರಬೆ 69
13. ಎಕ 2(ಪ), ಶ್ರಬೆ 84
14. ಎಕ 2(ಪ), ಶ್ರಬೆ 547
15. ಎಕ 7(ಪ), ನಾಮಂ 33
16. ಎಕ 7 (ಪ): ಮ 54
17. ಎಕ 2(ಪ), ಶ್ರಬೆ 156
18. ಎಕ 2(ಪ), ಶ್ರಬೆ 179
19. ಎಕ 2(ಪ), ಶ್ರಬೆ 558
20. ಎಕ 2(ಪ), ಶ್ರಬೆ 397
21. ಎಕ 10(ಪ): ಚಪ 99
22. ಈ ಕಲಿವಿಟನು ರಾಷ್ಟ್ರಕೂಟ ಮುಮ್ಮಡಿಕೃಷ್ಣನ ಅಧೀನನಾಗಿ ಬನವಾಸಿ ಪ್ರಾಂತವನ್ನಾಳುತ್ತಿದ್ದ ಚೆಲ್ಲಕೇತನ ಮನೆತನದ ಕಲಿವಿಟ ನಾಗಿರಬಹುದು ಎಂದು ಎಪಿಗ್ರಾಫಿಯಾ ಕರ್ನಾಟಿಕಾದ ಪೀಠಿಕೆಯಲ್ಲಿ ಹೇಳಲಾಗಿದೆ.
23. ಎಕ 2(ಪ): ಶ್ರಬೆ 476
24. ಎಕ 2(ಪ): ಶ್ರಬೆ 477
25. ಎಕ 2(ಪ): ಶ್ರಬೆ 481 ಇದು ಇದೇ ಸಂಪುಟದ 476ರ ಶಾಸನದ ಸಂಸ್ಕೃತ ರೂಪಾಂತರವಾಗಿದೆ.
26. ಎಕ 2(ಪ): ಶ್ರಬೆ 572
27. ಎಕ 2(ಪ), ಶ್ರಬೆ 278
28. ಎಕ 2(ಪ): ಶ್ರಬೆ 223
29. ಎಕ 2(ಪ): ಶ್ರಬೆ 275
30. ಎಕ 2(ಪ): ಶ್ರಬೆ 71
31. ಎಕ 4(ಪ): ಚಾಮ 2
32. ಎಕ 24(ಪ): ಚಿನಾ 104
33. ಎಕ 24(ಪ): ಚಿನಾ 104
34. ಎಕ 9: ಬೇ 342
35. ಶ್ರೀನಿವಾಸ ರಿತ್ತಿ ಮತ್ತು ಬಾ. ರಾ. ಗೋಪಾಲ್(ಸಂ): ಇನ್ಸ್ಕ್ರಿಪ್ಶನ್ಸ್ ಆಫ್ ವಿಜಯನಗರ ರೂಲರ್ಸ್ : ಐ.ಸಿ.ಹೆಚ್.ಆರ್: ನವದೆಹಲಿ: ಸಂಕಪುಟ 1, ಭಾಗ 2, ಸಂ 45
36. ವಸಂತಲಕ್ಷ್ಮಿ ಕೆ: 2010: ಸಖರಾಯಪಟ್ಟಣದ ಅಪ್ರಕಟಿತ ನಿಷಿದಿ ಶಾಸನ: ಇತಿಹಾಸ ದರ್ಶನ 25: ಪುಟ 33–36
37. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ 2(ಕೊಪ್ಪಳ ಜಿಲ್ಲೆ) ಗಂಗಾವತಿ 21
38. ಏಪಿಗ್ರಾಫಿಯಾ ಇಂಡಿಕಾ: ಸಂಪುಟ 7: ಪುಟ 115–116
39. ಎಸ್.ಐ.ಐ. ಸಂಪುಟ 9: ಭಾಗ 2: ಸಂ 142
40. ಎ.ಆರ್.ಐ.ಈ 1970–71, ಸಂ 210
41. ಕ.ವಿ.ಶಾ.ಸಂ 3, ಹಂಪಿ
42. ಎಕ 15(ಪ): ಹೊನ 114

43. ಎಕ 11(ಪ): ಶೃ 26
44. ಎಕ 24(ಪ) ತುಮ 61
45. ಎಕ 11(ಪ): ಮೂ21
46. ಎಕ 5 (ಪ): ತಿನ 281
47. ಎಕ 10(ಪ): ಅಕೆ 22
48. ಎಕ 8(ಪ): ಹಾ 66
49. ಎಕ 8(ರೈ): ಶಿಮ 99
50. ಎಕ 12(ಪ): ಕ 95
51. ಎಕ 12(ಪ): ತಕೆ 56
52. ಎಕ 10 (ಪ): ಅಕೆ 86
53. ಡೇವಿಡ್ ಎನ್. ಲಾರೆಂಜೆನ್, ಕನ್ನಡಾನುವಾದ ವಿರೂಪಾಕ್ಷಿ ಕುಲಕರ್ಣಿ: 2005: ಕಾಪಾಲಿಕರು ಮತ್ತು ಕಾಳಾಮುಖರು: ಕನ್ನಡ ಪುಸ್ತಕ ಪ್ರಾಧಿಕಾರ: ಬೆಂಗಳೂರು
54. ಎಕ 12(ಪ): ಕ 178
55. ಎಕ 24(ಪ): ಚಿನಾ 37
56. ಅದೇ : ಚಿನಾ 32
57. ಅದೇ : ಚಿನಾ 17
58. ಎಕ 10(ಪ): ಅಕೆ 95
59. ಎಕ 10(ಪ): ಅಕೆ 95
60. ಎಕ 24 (ಪ) : ಚಿನಾ 58
61. ಅದೇ: ಚಿನಾ 95
62. ಅದೇ: ಚಿನಾ 95
63. ಅದೇ: ಚಿನಾ 58
64. ಅದೇ: ಚಿನಾ 111
65. ಅದೇ: ಚಿನಾ 77
66. ಎಕ 10(ಪ): ಅಕೆ 84
67. ಅದೇ: 82
68. ಎಕ 12(ಪ): ಕ 179
69. ಎಕ 24(ಪ): ಚಿನಾ 40
70. ಎಕ 12(ಪ): ಕ 38
71. ಅದೇ: ಕ 35
72. ಅದೇ: ಕ 205
73. ಎಕ 24(ಪ): ತು 11
74. ಎಕ 10(ಪ): ಅಕೆ, 128
75. ಎಕ 9(ಪ): ಬೇ, 409,410
76. ದೇವರಾಜ್ ಡಿ. ವಿ : 1994: ಹಿಸ್ಟರಿ ಆಫ್ ಸೋಮನಾಥಪುರ ಟೆಂಪಲ್ ಕಾಂಪ್ಲೆಕ್ಸ್: ಡೈರಕ್ಟರೇಟ್ ಆಫ್ ಮ್ಯೂಸಿಯಮ್ಸ್ ಇನ್ ಕರ್ನಾಟಕ: ಬೆಂಗಳೂರು : ಪುಟ 6
77. ಎಕ 9(ರೈ): ಬೆಂ 133
78. ಎಂ.ಎ.ಆರ್. 1933, ಶೃಂ 2
79. ಎಕ 10(ರೈ) ಮಾ 28
80. ಎಕ 10(ರೈ): ಕೋ 82
81. ಅದೇ
82. ಎಕ 10(ರೈ): ಕೋ 71
83. ಅದೇ: ಕೋ 201
84. ಅದೇ : ಕೋ 70
85. ಅದೇ: 71
86. ಎಕ 4 (ಪ): ಚಾನ 263
87. ಅದೇ: ಚಾನ 275, 276, 277, 278

88. ಎಕ 8(ಪ): ಹಾ 25
89. ಎ.ಆರ್.ಐ.ಇ 1928–29, ಸಂ 497, 499
90. ಎಕ 12(ರೈ): ತಿಪ 4
91. ಎಕ 3(ಪ): ತಿನ 97
92. ಎಕ 3(ಪ): ತಿನ 101
93. ಎಕ 6(ಪ): ಪಾಪು 58
94. ಎಕ 6(ಪ): ಪಾಪು 64
95. ಎಕ 6(ಪ): ಪಾಪು 74
96. ಎಕ 6(ಪ): ಪಾಪು 73
97. ಎಕ 6(ಪ): ಪಾಪು 79
98. ಎಕ 6(ಪ): ಪಾಪು 63
99. ಎಕ 6(ಪ): ಪಾಪು 80
100. ಎಕ 6(ಪ): ಪಾಪು 88
101. ಬಾ.ರಾ. ಗೋಪಾಲ: 1984: ಕರ್ನಾಟಕದಲ್ಲಿ ರಾಮಾನುಜಾಚಾರ್ಯರು: ಮೈಸೂರು ವಿಶ್ವ ವಿದ್ಯಾಲಯ: ಮೈಸೂರು
102. ಎಕ.10 (ರೈ) ಮಾ, 12, 13
103. ಎಕ. 9 (ರೈ) ಹೊಸ 50
104. ಎಕ. 6, (ರೈ) ತಕೆ, 88
105. ಎಕ 3 (ಪ), ಗುಂ 152
106. ಎಕ 6(ಪ): ಪಾಪು, 154
107. ಎಕ 3(ಪ): ನಂಗೂ 347
108. ಎಕ 3(ಪ): ಗುಪೇ 223
109. ಎಕ 4(ಪ): ಚಾನ 235
110. ಎಕ 4(ಪ): ಚಾನ 263
111. ಎಕ 4(ಪ): ಚಾನ 306
112. ಎಕ 6(ಪ): ಪಾಪು 181
113. ಎಕ 4(ಪ): ಕೊಗಾ 30
114. ಎಕ 6(ಪ): ಪಾಪು 222
115. ಅದೇ : ಪಾಪು 212
116. ಅದೇ: ಪಾಪು 73, 76
117. ಎಕ 8(ಪ): ಹಾ 75
118. ಎಕ 5(ಪ): ತಿನ 7
119. ಎಕ 10(ಪ): ಚರಾ 48
120. ಅದೇ: ಚರಾ 296
121. ಎಕ 7(ಪ): ನಾಮಂ 74
122. ಎಕ 9(ರೈ): ಬೆಂ 23
123. ಎಕ 9(ಪ): ಬೇ, 565
124. ಎಕ 9(ಪ): ಬೇ 8
125. ಅದೇ: ಬೇ 53
126. ಎಕ 3(ಪ): ತಿನ 97
127. ಎಕ 7(ಪ): ಮಂ 29, 30
128. ಎಕ 3 (ಪ): ತಿನ 101
129. ಎಕ 9 (ರೈ): ಆನೇ 84
130. ಎಕ 5 (ರೈ): ಬೇ 66
131. ಎಕ 9(ರೈ): ಚಪ 65
132. ಎಕ 8(ಪ): ಹೊನ 1
133. ಎಕ 9(ರೈ): ಬೆಂ 133

134. ಎಕ 4(ಪ): ಕೊಗಾ 30
135. ಎಕ 10(ಪ): ಅಕೆ 82
136. ಹೊನ್ನತ್ತಿ, ರಾಣೆಬೆನ್ನೂರು, ಧಾರವಾಡ : 12–28–1197 No 194 B.K. NO 93 OF 1933-34
137. ಎಕ 10(ಪ): ಅಕೆ 33
138. ಎಕ 9(ಪ): ಬೇ 281
139. ಕೆ. ವಿ. ರಮೇಶ್ ಮತ್ತು ಶರ್ಮಾ ಎಂ.ಜೆ: ತುಳುನಾಡಿನ ಶಾಸನಗಳು : ಶಾ. ಸಂ 47
140. ಎಕ 4(ಪ): ಯಳ 89
141. ಎಕ 10(ಪ): ಅಕೆ 24
142. ಎಕ 9(ಪ): ಬೇ 54
143. ಶ್ರೀಕಂಠಶಾಸ್ತ್ರಿ ಎಸ್. ಹೊಯ್ಸಳ ವಾಸ್ತುಶಿಲ್ಪ: ಮೈಸೂರು ವಿಶ್ವವಿದ್ಯಾಲಯ: ಮೈಸೂರು
144. ಎಕ 10(ರೈ): ಮಾ 1
145. ಎಕ 10(ರೈ): ಮಾ 1
146. ಎಕ 3(ಪ): ಹೆಕೋ 47

# ಅಧ್ಯಾಯ 8

## ಸಮಾರೋಪ ಮತ್ತು ಸಂಶೋಧನ ಫಲಿತಗಳು

"ಸ್ಥಳೀಯ ಸಾಹಿತ್ಯ –ಸಂಸ್ಕೃತಿ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು" ಎಂಬ ಪ್ರಕೃತ ಪಿಎಚ್.ಡಿ ಮಹಾಪ್ರಬಂಧವು ಅತ್ಯಂತ ಗಂಭೀರವಾಗಿ ಹೊಯ್ಸಳ ಮಹಾಮಂಡಲೇಶ್ವರರು ತಾವು ಆಳಿದ ಪ್ರದೇಶಗಳಲ್ಲಿ ಹೇಗೆ ಸ್ಥಳೀಯವಾಗಿ ಸಂಸ್ಕೃತಿಯನ್ನು ಕಟ್ಟಿದರು ಮತ್ತು ಬೆಳೆಸಿದರು ಹಾಗೂ ಸಮಕಾಲೀನ ಸಮಾಜದ ಗತಿಬಿಂಬವಾಗಿ ಸಾಹಿತ್ಯವನ್ನು ಪ್ರೋತ್ಸಾಹಿಸಿದರು ಎಂಬುದನ್ನು ವಿಶ್ಲೇಷಣಾತ್ಮಕವಾಗಿ ಅಧ್ಯಯನವನ್ನು ಒಳಗೊಂಡಿದೆ.

ಸಾಮಾನ್ಯವಾಗಿ ಕನ್ನಡ ಸಂಶೋಧನೆಗಳು ಇದುವರೆಗೂ ಹೊಯ್ಸಳ ಅರಸರನ್ನು, ಹೊಯ್ಸಳ ವಾಸ್ತುಶಿಲ್ಪವನ್ನು ಕುರಿತು ಚಿಂತಿಸಿದಷ್ಟು ಅರಸರ ನಂತರದ ಅಧಿಕಾರಿ ವರ್ಗದವರಾದ ಮಹಾಮಂಡಳೇಶ್ವರರು, ದಂಡನಾಯಕರು, ಅಧಿಕಾರಿಗಳ ಬಗ್ಗೆ ಹೆಚ್ಚು ತಲೆ ಕೆಡೆಸಿಕೊಂಡಿರಲಿಲ್ಲ. ಸಾಮಾನ್ಯವಾಗಿ ಅರಸೊತ್ತಿಗೆಯನ್ನು ವಿರೋಧಿಸುವ ಎಡಪಂಥೀಯ ಚಿಂತಕರೂ ಸಹ ಸಾಮಾಜಿಕ ಅಧ್ಯಯನಗಳಿಗೆ ಆದ್ಯತೆಯನ್ನು ನೀಡಿದರಾದರೂ ಈ ಸಾಮಾಜಿಕತೆಯನ್ನು ರೂಪಿಸಿದ ಬಹಳ ಮುಖ್ಯವಾದ ಅರಸರಿಗೂ ಪ್ರಜೆಗಳಿಗೂ ನಡುವಿನ ಕೊಂಡಿಯಂತಿದ್ದ ಈ ಅಧಿಕಾರಿ ವರ್ಗವನ್ನ ಕಡೆಗಣಿಸಿತ್ತು. ಪ್ರಾಸಂಗಿಕವಾದ ಉಲ್ಲೇಖಗಳನ್ನು ಹೊರತುಪಡಿಸಿದರೆ ಹೊಯ್ಸಳ ಮಹಾಮಂಡಳೇಶ್ವರರ ಬಗ್ಗೆ ಸಮಗ್ರವಾದ ಅಧ್ಯಯನವು ಇದುವರೆಗೂ ನಡೆದಿರಲಿಲ್ಲ. ಆ ಕೊರತೆಯನ್ನು ಲಭ್ಯವಾದ ಎಲ್ಲಾ ಆಕರಗಳನ್ನು ಸಮಗ್ರವಾಗಿ ಉಪಯೋಗಿಸಿಕೊಂಡು ನಡೆಸಿದ ಪ್ರಾಮಾಣಿಕವಾದ ಸಂಶೋಧನೆ ಇದಾಗಿದೆ ಎನ್ನುವುದು ಈ ನಿಬಂಧದ ಹೆಚ್ಚುಗಾರಿಕೆಯಗಿದೆ ಎಂದು ವಿನಮ್ರತೆಯಿಂದ ಹೇಳದೇ ವಿಧಿಯಿಲ್ಲ,

ಇನ್ನೊಂದು ಮುಖ್ಯವಾದ ವಿಷಯವೆಂದರೆ ಬಹುತೇಕ ನಿಬಂಧಗಳು ಈಗಾಗಲೇ ನಡೆಸಲಾಗಿರುವ ಅಧ್ಯಯನಗಳನ್ನು ಅಂದರೆ ಆನುಷಂಗಿಕ ಆಕರಗಳು ಅಥವಾ ದ್ವಿತೀಯ ಆಕರಗಳನ್ನು ಕೇಂದ್ರವಾಗಿ ಇಟ್ಟುಕೊಂಡು ನಡೆಸುವ ಅಧ್ಯಯನಗಳಾಗಿರುವ ಈ ಹೊತ್ತಿನಲ್ಲಿ ಪ್ರಮುಖವಾದ ಮೂಲ ಆಕರಗಳನ್ನು ಇಟ್ಟುಕೊಂಡು ನಡೆಸಿರುವ ಅಧ್ಯಯನ ಇದಾಗಿದೆ. ಇಲ್ಲಿ ಮೂಲತಃ ಶಾಸನಗಳ ಮೂಲಪಠ್ಯಗಳೊಂದಿಗೆ ಪ್ರಸ್ತುತ ನಿಬಂಧವು ಅನುಸಂಧಾನ ನಡೆಸಿರುವುದರಲ್ಲಿ ಯಾವುದೇ ಅನುಮಾನಗಳಿಲ್ಲ. ಶಾಸನಗಳೊಂದಿಗೆ ಆ ಕಾಲದ ಬಹಳ ಮುಖ್ಯವಾದ ಸಾಹಿತ್ಯ ಕೃತಿಗಳಲ್ಲಿರುವ ಅಂಶಗಳತ್ತಲೂ ಗಮನ ಸೆಳೆಯಲಾಗಿದೆ. ಆದ್ದರಿಂದ ಇಲ್ಲಿ ಶಾಸನಗಳನ್ನು ಸಾಹಿತ್ಯಕೃತಿಗಳನ್ನು ಪ್ರಧಾನ ಆಕರಗಳನ್ನಾಗಿ ಪ್ರಾಮಾಣಿಕವಾಗಿ ಬಳಸಿಕೊಳ್ಳುವುದರ ಮೂಲಕ ಹೊಯ್ಸಳ ಸಾಮ್ರಾಜ್ಯದ ಅವಧಿಯಲ್ಲಿ ನಿಜವಾಗಿಯೂ ಸಾಂಸ್ಕೃತಿಕ ಸಂವರ್ಧನೆಯನ್ನು ಮಾಡಿದವರು ಅರಸರು ಮಾತ್ರವೇ ಅಲ್ಲ; ಆಡಳಿತಾಧಿಕಾರಿಗಳಾದ ಈ ಮಹಾಮಂಡಳೇಶ್ವರರು ಎಂಬುದನ್ನು ಅನಾವರಣಗೊಳಿಸಲಾಗಿದೆ.

ಈ ನಿಬಂಧದ ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ ಮತ್ತು ಆಕರಗಳು ಎಂಬುದಾಗಿದ್ದು ಸಾಮಾನ್ಯವಾಗಿ ಈ ನಿಬಂಧದ ಅಧ್ಯಯನದ ಉದ್ದೇಶವನ್ನು ಈ ನಿಬಂಧವು ಪಡೆದುಕೊಳ್ಳುವ ಸ್ವರೂಪವನ್ನು ಹಾಗೂ ವ್ಯಾಪ್ತಿಯನ್ನು ಒಳಗೊಂಡಿದೆ. ಈ ನಿಬಂಧದ ಉದ್ದೇಶವು ಕನ್ನಡ ನಾಡಿನ 10ರಿಂದ 12ನೆಯ ಶತಮಾನದ ಇತಿಹಾಸವೆಂದರೆ ಕೇವಲ ಅರಸರ ಇತಿಹಾಸವಲ್ಲ. ಬದಲಿಗೆ ಅವರ ಅಧೀನ ಅಧಿಕಾರಿಗಳಾದ ಮಹಾಮಂಡಳೇಶ್ವರರ ಇತಿಹಾಸವೇ ಹೇಗೆ ಆಗಿತ್ತು ಎಂದು ಸೋದಾಹರಣವಾಗಿ ಉದಾಹರಿಸುವುದೇ ಆಗಿತ್ತು. ವ್ಯಾಪ್ತಿಯಂತೂ ಕೇವಲ ಹೊಯ್ಸಳ ಶಾಸನಗಳಿಗೆ ಸೀಮಿತವಾಗಿದ್ದರೂ ಪ್ರಾಸಂಗಿಕವಾಗಿ ಹೊಯ್ಸಳ ಮಹಾಮಂಡಳೇಶ್ವರರ ಬಗ್ಗೆ ಮಾಹಿತಿ ಒದಗಿಸುವ ಕಲ್ಯಾಣದ ಚಾಲುಕ್ಯರು, ಚೋಳರು, ಕಳಚುರಿಗಳು, ಸೇಉಣರು, ಸಾಂತರರು ಮುಂತಾದ ಅರಸುಮನೆತನಗಳ ಶಾಸನಗಳನ್ನು ಕೂಡ ಬಳಸಿಕೊಳ್ಳಲಾಗಿದೆ. ಹಾಗೂ ಅವರ ಬಗ್ಗೆ ನಡೆದಿರುವ ಅಧ್ಯಯನಗಳನ್ನು ಕೂಡ ಗಮನಿಸಲಾಗಿದೆ.

ಇನ್ನು ಎರಡನೆಯ ಅಧ್ಯಾಯವು ಮೊದಲನೆಯ ಅಧ್ಯಾಯದ ಮುಂದುವರೆದ ಅಂಶಗಳನ್ನು ವಿವೇಚಿಸಿವೆ. ಇದು ಅಧ್ಯಯನದ ವೈಧಾನಿಕತೆ ಹಾಗೂ ಈವರೆಗಿನ ಅಧ್ಯಯನಗಳ ಸಮೀಕ್ಷೆಯನ್ನು ಕುರಿತದ್ದಾಗಿದೆ. ಇದರಲ್ಲಿ ಪ್ರಸ್ತುತ ಸಂಶೋಧನೆಯನ್ನು ಸಾಹಿತ್ಯ ಸಂಶೋಧನೆಯ ವಿಧಾನದಲ್ಲಿ ರೂಪುಗೊಂಡಿದೆ ಎಂದು ತಿಳಿಸುತ್ತದೆ. ಹಾಗೂ ಇದುವರೆಗೆ ಈ ಕ್ಷೇತ್ರದಲ್ಲಿ ನಡೆದಿರುವ ಅಧ್ಯಯನಗಳನ್ನು ಇಲ್ಲಿ ಪರಿಚಯಿಸಲಾಗಿದೆ.

ಮೂರನೆಯ ಅಧ್ಯಾಯವು "ಸ್ಥಳೀಯ ಆಡಳಿತದ ಸುಭಗತೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು" ಆಗಿದ್ದು ಈ ಅಧ್ಯಾಯದಲ್ಲಿ ಮಹಾಂಡಳೇಶ್ವರರ ರಾಜಕೀಯ ಚರಿತ್ರೆಯನ್ನು ಕಟಿಕೊಡಲಾಗಿದೆ. ಇಡೀ ನಿಬಂಧದಲ್ಲಿ ಮತ್ತೆ ಮತ್ತೆ ಮಹಾಮಂಡಳೇಶ್ವರರ ವಿವಿಧ ರೀತಿಯ ಕೊಡುಗೆಗಳನ್ನು ಕಟ್ಟಿಕೊಡುವಾಗ ಗೊಂದಲಗಳು ಆಗಬಾರದು ಎಂಬ ಉದ್ದೇಶದಿಂದ ಮಹಾಮಂಡಳೇಶ್ವರರ ಸಂಪೂರ್ಣವಾದ ಇತಿವೃತ್ತವನ್ನು ಸಂಕ್ಷಿಪ್ತವಾಗಿ ಕಟ್ಟಿಕೊಡಲಾಗಿದೆ.

ನಾಲ್ಕನೆಯ ಅಧ್ಯಾಯವು ಈ ನಿಬಂಧದ ಅತ್ಯಂತ ಮುಖ್ಯವಾದ ಅಧ್ಯಾಯವಾಗಿದೆ. ಇತಿಹಾಸ ಮತ್ತು ಸಾಹಿತ್ಯದ ಸಹಸಂಬಂಧವನ್ನು ಇಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. "ಕನ್ನಡ ಭಾಷೆ, ಸಾಹಿತ್ಯ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು" ಎಂಬ ಅಧ್ಯಾಯದಲ್ಲಿ ಈ ನಿಬಂಧದ ಬಹಳ ಮುಖ್ಯವಾದ ಸಾಹಿತ್ಯ ಮತ್ತು ಸ್ಥಳೀಯ ಸಾಹಿತ್ಯದ ಬಹಳ ಮುಖ್ಯವಾದ ವಿಷಯಗಳನ್ನು ಪ್ರಸ್ತಾಪಿಸಲಾಗಿದೆ. ಬಹಳ ಮುಖ್ಯವಾಗಿ ಹೊಯ್ಸಳ ಮಹಾಮಂಡಳೇಶ್ವರರ ಕಾಲದ ಶಾಸನ ಲಿಪಿಯನ್ನು ಕುರಿತು ಖಚಿತವಾದ ಗುಣಲಕ್ಷಣಗಳನ್ನು ಗುರುತಿಸಲಾಗಿದೆ. ಹೊಯ್ಸಳ ಮಹಾಮಂಡಳೇಶ್ವರರ

ಪೋಷಣೆಯಲ್ಲಿ ಸಾಹಿತ್ಯವನ್ನು ರಚಿಸಿದ ಕವಿಗಳಾದ ರುದ್ರಭಟ್ಟನ ಜಗನ್ನಾಥ ವಿಜಯ, ರಾಜಾದಿತ್ಯನ ವ್ಯವಹಾರ ಗಣಿತ, ಆಚಣ್ಣನ ವರ್ಧಮಾನ ಪುರಾಣ, ಜನ್ನ ಕವಿಯ ಕೃತಿಗಳಾದ ಅನಂತನಾಥ ಪುರಾಣ, ಯಶೋಧರ ಚರಿತೆ, ಕೆರೆಯ ಪದ್ಮರಸನ ದೀಕ್ಷಾಭೋದೆ, ಪದ್ಮಣಾಂಕನ ಪದ್ಮರಾಜ ಪುರಾಣಂ, ನೇಮಿಚಂದ್ರನ ಲೀಲಾವತಿ ಹಾಗೂ ನೇಮಿನಾಥ ಪುರಾಣ ಮುಂತಾದ ಕಾವ್ಯಗಳು ಕಟ್ಟಿಕೊಡುವ ಸಾಮಾಜಿಕ ವಿಷಯಗಳನ್ನು ಮುನ್ನಲೆಗೆ ತರಲಾಗಿದೆ. ಹೊಯ್ಸಳ ಮಹಾಮಂಡಳೇಶ್ವರರು ಸಂವರ್ಧಿಸಿದ ಶಾಸನಕವಿಗಳು ಎಂಬ ಭಾಗದಲ್ಲಿ ಶಾಸನ ಕವಿಗಳನ್ನು ಕುರಿತು ಮತ್ತು ಅವರ ವ್ಯುತ್ಪತ್ತಿ ಪ್ರತಿಭೆಯನ್ನು ಚರ್ಚಿಸಲಾಗಿದೆ. ಸಾಹಿತ್ಯವೆಂದರೆ ಕೇವಲ ಶಾಸ್ತ್ರಕೃತಿಗಳಷ್ಟೇ ಅಲ್ಲದೇ ಶಾಸನ ಸಾಹಿತ್ಯವೂ ಹೊಯ್ಸಳ ಮಹಾಮಂಡಳೇಶ್ವರರಿಂದ ಪ್ರವರ್ಧಮಾನಕ್ಕೆ ಬಂದಿತು. ಹಲವಾರು ಶಾಸನ ಕವಿಗಳನ್ನು ಪೋಷಿಸಿದ್ದು ಕೂಡ ಈ ಕಾಳದ ಬಹಳ ಮುಖ್ಯವಾದ ಸಾಧನೆಯಾಗಿದೆ.

ಐದನೆಯ "ಕುಶಲಕಲೆಗಳ ಅಭಿವೃದ್ಧಿ ಮತ್ತು ಸ್ಥಳೀಯ ಆರ್ಥಿಕ ಸಂವರ್ಧನೆ" ಎಂಬ ಅಧ್ಯಾಯವು ಮಹಾಮಂಡಳೇಶ್ವರರು ಯಾವ ರೀತಿ ವ್ಯಾಪಾರ ವ್ಯವಹಾರಗಳಿಗೆ ಬೆಂಬಲವಾಗಿ ನಿಂತರು ಎಂಬುದನ್ನು ತಿಳಿಸುತ್ತದೆ. ಬಹಳ ಮುಖ್ಯವಾಗಿ ಕೃಷಿಯೇತರ ಭೂಮಿಗಳ ಪರಿವರ್ತನಾ ಪ್ರಕ್ರಿಯೆಗಳು, ತೆರಿಗೆಯ ಸ್ವರೂಪ, ಭೂಮಾಲೀಕತ್ವ ಮತ್ತು ಕೃಷಿ ಕಾರ್ಮಿಕರು, ಉತ್ಪಾದನಾ ಸಂವರ್ಧನೆ, ಊಳಿಗಮಾನ್ಯತೆ, ಸಾಮಂತ ಅರಸರ ಪ್ರಾಬಲ್ಯ, ರಾಜಕೀಯ ಪ್ರೇರಿತ ನೂತನ ಸಂಬಂಧಗಳು, ಭೂದಾನಗಳು, ನಗರೀಕರಣದ ಮುನ್ನುಡಿ, ವರ್ತಕರು ಮತ್ತು ವರ್ತಕ ಸಂಘಗಳು, ಕೈಗಾರಿಕೆಯ ವಿಷಯಗಳನ್ನು ಚರ್ಚಿಸಲಾಗಿದೆ.

ಆರನೆಯ ಅಧ್ಯಾಯವು ವಿಶಿಷ್ಟವಾದ ಅಧ್ಯಯನವಾಗಿದೆ. ಯಾಕೆಂದರೆ ಬಹುತೇಕ ಇದುವರೆಗೆ ಸಾಮಾಜಿಕ ಸಂಕಥನವು ಬಹುತೇಕ ಸಾಂಸ್ಕೃತಿಕ ಹಿನ್ನೆಲೆಯಿಂದಲೇ ನೋಡಲಾಗುತ್ತಿತ್ತು. ಆದರೆ ಇದೇ ಮೊದಲ ಬಾರಿಗೆ ಶಾಸನ ಶಾಸ್ತ್ರ ವಿಷಯದ ಆಧಾರದ ಮೇಲೆ ನಿರ್ಮಾಣವಾಗಿರುವ ನಿಬಂಧವೊಂದರಲ್ಲಿ ಸಮಾಜಶಾಸ್ತ್ರೀಯ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಸಾಮಾಜಿಕ ಸಂಗತಿಗಳನ್ನು ಗಮನಿಸಿರುವುದು ವಿಶಿಷ್ಟವೆನಿಸುತ್ತದೆ. ಈ ಅಧ್ಯಾಯದ ಶೀರ್ಷಿಕೆ "ಜನಸಮುದಾಯಗಳ ಅಭ್ಯುದಯ ಮತ್ತು ಸ್ಥಳೀಯ ನವಸಮಾಜದ ಮಹಾ ಕನಸುಗಳು" ಈ ಅಧ್ಯಾಯದಲ್ಲಿ 5 ಉಪಶೀರ್ಷಿಕೆಗಳನ್ನು ಪ್ರಧಾನವಾಗಿ ಮುನ್ನಲೆಗ ತರಲಾಗಿದೆ. ಅದರಲ್ಲಿ ಸಮಾಜ ರಚನೆಯನ್ನು ರೂಪಿಸಿದ ಲಕ್ಷಣಗಳು, ಸಮುದಾಯ–ಸಾಮುದಾಯಿಕ ಮೂಲಾಂಶಗಳು, ಸಾಮಾಜಿಕ ಅಂತಃಕ್ರಿಯೆ, ಸಾಮಾಜಿಕ ನಿಯಂತ್ರಣ, ಸಮಾಜದ ಪ್ರಭಾವಳಿ –ಸಂಸ್ಕೃತಿ ಪರಿಸೂಚಿ ಎಂಬ ಬಹುಮುಖ್ಯವಾದ ಸಾಮಾಜಿಕ ಪರಿಭಾಷೆಗಳ ಮೂಲಕ ವಿಶಿಷ್ಟವಾಗಿ ಸಮಾಜವನ್ನು ಚರ್ಚಿಸಲಾಗಿದೆ.

ಸಮಾಜ ರಚನೆಯನ್ನು ರೂಪಿಸಿದ ಲಕ್ಷಣಗಳಲ್ಲಿ ಮುಖ್ಯವಾಗಿ ಅಂತಃಸಂಬಂಧಗಳು, ಹೋಲಿಕೆ ಅಥವಾ ಸಾಮ್ಯತೆಯ ಮೇಲಿನ ಅವಲಂಬನೆ, ಭಿನ್ನತೆ ಮತ್ತು ವ್ಯತ್ಯಾಸ, ಶ್ರಮವಿಭಜನೆ ಎಂಬ ವಿಚಾರಗಳನ್ನು ಸೋದಾಹರಣವಾಗಿ ವಿವೇಚಿಸಲಾಗಿದೆ

ಸಮಾಜಶಾಸ್ತ್ರೀಯ ಪರಿಭಾಷೆಗಳಲ್ಲಿ ಸಮುದಾಯ-ಸಾಮುದಾಯಿಕ ಮೂಲಾಂಶಗಳು ಎನ್ನುವುದಕ್ಕೆ ವಿಶೇಷವಾದ ಮರ್ಯಾದೆಯಿದೆ. ಇದನ್ನು ಇಲ್ಲಿ ವಿವೇಚನಾಪೂರ್ಣವಾಗಿ ಉಪಯೋಗಿಸಲಾಗಿದೆ. ಇದರಲ್ಲಿ ಮುಖ್ಯ ಮೂಲಾಂಶವಾಗಿ ಸ್ಥಾನೀಯತೆ, ಸಾಪೇಕ್ಷ ಶಾಶ್ವತತೆ ಅಥವಾ ಸ್ಥಿರತೆ, ಸಂಘ, ಸಂಸ್ಥೆಗಳನ್ನು ಚರ್ಚಿಸಲಾಗಿದೆ. ಈ ಸಂಸ್ಥೆ ಎನ್ನುವುದು ಸಮಾಜಶಾಸ್ತ್ರದಲ್ಲಿ ವಿಶೇಷವಾದದ್ದು. ಇದರಲ್ಲಿ ವರ್ಣವ್ಯವಸ್ಥೆ, ಕುಲಕಟ್ಟಳೆಗಳು, ವಿಶಿಷ್ಟವಾದ ಕುಲಗಳು, ಕುಲಕೇಂದ್ರಿತ ನಿರ್ಮಿತಿಗಳು ಕುಟುಂಬ : ಅನೌಪಚಾರಿಕ ನಿಯೋಗಿಯಾಗಿ ಕುಟುಂಬ : ಸ್ತ್ರೀಯರು: ಸ್ಥಳೀಯ ಸಮಾಜದಲ್ಲಿನ ಅಸ್ಮಿತೆಯ ಆಯಾಮಗಳು, ನಾಯಕತ್ವ ಮತ್ತು ಸಾಮಾಜಿಕ ಅಸ್ಮಿತೆಯ ಕಾರ್ಯ ಕಾರಣಗಳು, ಮಹಾಮಂಡಳೇಶ್ವರರ ಮಡದಿಯರ ಆಡಳಿತ ಮತ್ತು ಅದರ ಸಾಮಾಜಿಕ ಪರಿಣಾಮಗಳು, ಮಹಿಳೆಯರ ಆತ್ಮಬಲದ ವಿಶಿಷ್ಟ ಮಾದರಿಗಳು, ಸೂಳೆಯರು : ಸ್ಥಳೀಯ ಸಮಾಜದ ಪ್ರಭಾವಿಗಳು, ಕುಟುಂಬದ ಆಸ್ತಿಯ ವ್ಯವಸ್ಥಿತ ನಿರ್ವಹಣೆ ಮತ್ತು ಸ್ಥಳೀಯ ವಿನಿಯೋಗ, ಔಪಚಾರಿಕ ನಿಯೋಗಿಯಾಗಿ ಶಿಕ್ಷಣ : ಸ್ಥಳೀಯ ಸಮಾಜ ಮೌಲ್ಯ ಗಳನ್ನು ಸಂವರ್ಧಿಸಿದ ಸಾಂಸ್ಥಿಕತೆ, ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳು, ಮಠಗಳು, ದೇವಾಲಯಗಳು, ಅನೌಪಚಾರಿಕ ಶಿಕ್ಷಣ ಧಾರ್ಮಿಕ ಶಿಕ್ಷಣ, ಸಾಮೂಹಿಕ ಶಿಕ್ಷಣ, ಶಾರೀರಿಕಶಿಕ್ಷಣ, ಶೈಕ್ಷಣಿಕ ಸಾಧನಗಳು

ಸಾಮಾಜಿಕ ಅಂತಃಕ್ರಿಯೆಯಲ್ಲಿ ಸಾಮಾಜಿಕ ಅಂತಃಕ್ರಿಯೆಯ ಮೂಲಾಂಶಗಳು: ಸಂಪರ್ಕ ಮತ್ತು ಸಮೂಹ ಮತ್ತು ಸಾಮಾಜಿಕ ಪ್ರಕ್ರಿಯೆ ಎಂಬ ಎರಡು ಉಪಘಟಕಗಳ ಅಡಿಯಲ್ಲಿ ವಿಶಿಷ್ಟವಾಗಿ ಚರ್ಚಿಸಲಾಗಿದೆ.ಸಾಮಾಜಿಕ ಪ್ರಕ್ರಿಯೆಯಲ್ಲಿ ಸಹಕಾರ, ಸ್ಪರ್ಧೆ, ಸಂಘರ್ಷ, ಹೊಂದಾಣಿಕೆ, ಸ್ವಾಂಗೀಕರಣ:

ಸಾಮಾಜಿಕ ನಿಯಂತ್ರಣ ಎಂಬ ಉಪಶೀರ್ಷಿಕೆಯಲ್ಲಿ ಸ್ಥಳೀಯ ಸಮಾಜದಲ್ಲಿನ ನಿಯಂತ್ರಣ ಪ್ರಕ್ರಿಯೆ ಮತ್ತು ಸಾಮಾಜಿಕ ಅನುವರ್ತನೆ, ಸಮಾಜದ ಪ್ರಭಾವಳಿ –ಸಂಸ್ಕೃತಿ ಪರಿಸೂಚಿಯಲ್ಲಿ ಮುಖ್ಯವಾಗಿ ಮೂರು ಪರಿಭಾಷೆಗಳನ್ನು ಚರ್ಚಿಸಲಾಗಿದೆ. ಅವುಗಳೆಂದರೆ ಭೌತ ಸಂಸ್ಕೃತಿ –ಸಾಮಾಜಿಕ ಅಸ್ಮಿತೆ ಮತ್ತು ಸ್ಥಳೀಯ ಸಾಮುದಾಯಿಕ ನಿರ್ಮಿತಿಗಳು, ಅಭೌತ ಸಂಸ್ಕೃತಿ, ಭೌತ ಮತ್ತು ಅಭೌತ ಸಂಸ್ಕೃತಿಗಳ ಸಮ್ಮಿಲನ : ಮರಣಪದ್ದತಿಗಳು

ಕರ್ನಾಟಕದ ಬಹುತೇಕ ಸ್ಥಳೀಯ ಅಧ್ಯಯನಗಳಲ್ಲಿ ವೀರ ಹಾಗೂ ಮಾಸ್ತಿ ಪರಂಪರೆಗೆ ವಿಶೇಷ ಒತ್ತನ್ನು ಕೊಟ್ಟು ಗಮನಿಸಿ ಬರಲಾಗುತ್ತಿದೆ. ಆದರೆ ಪ್ರಸ್ತುತ ನಿಬಂಧದಲ್ಲಿ ಇದನ್ನು ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ಗಮನಿಸಲಾಗಿದೆ. ವೀರ ಪರಂಪರೆಯಲ್ಲಿ ಬಲಿದಾನ ಮರಣ ಪದ್ದತಿ

ಮತ್ತು ವೀರಗಲ್ಲುಗಳನ್ನು ಕುರಿತು ಚರ್ಚಿಸಿದ್ದು ಇದೇ ಮೊದಲ ಬಾರಿಗೆ ಗರುಡಪದ್ಧತಿಯನ್ನು ಕುರಿತು ಕೆಲವು ಹೊಸ ಸಂಗತಿಗಳನ್ನು ಹೇಳಲಾಗಿದೆ. ಹಾಗೂ ಊರಳಿವು, ತುರುಗೋಳ್, ಪೆಣ್ಬುಯ್ಯಲ್, ಸತಿ ಸಹಗಮನ ಪದ್ಧತಿ ಮತ್ತು ಮಾಸ್ತಿಕಲ್ಲುಗಳು, ಸಮಾಧಿ ಮರಣ ಮೊದಲಾದ ಮರಣ ಪದ್ಧತಿಗಳನ್ನು ಸ್ಥೂಲವಾಗಿಯೂ ಮತ್ತು ಸೂಕ್ಷ್ಮವಾಗಿಯೂ ವಿವೇಚಿಸಲಾಗಿದೆ.

ಕಡೆಯದಾದ ಏಳನೆಯ ಅಧ್ಯಾಯವು **"ಯುಗಪ್ರವರ್ತಕ ಸಾಂಸ್ಥಿಕ ಪರಿಷ್ಕರಣೆಗಳು ಮತ್ತು ಧಾರ್ಮಿಕ ಸಂವರ್ಧನೆ"** ಎಂಬ ಅಧ್ಯಾಯವು ಬಹತೇಕ ಇನ್ನಿತರ ನಿಬಂಧಗಳಂತೆ ಕೇವಲ ಧಾರ್ಮಿಕ ವಿವರಗಳನ್ನು ಮಾತ್ರ ಒದಗಿಸದೇ ಬೌದ್ಧ ಧರ್ಮ, ಜೈನಧರ್ಮ, ಶೈವಧರ್ಮ ಮತ್ತು ಅದರೊಳಗೆ ಪಾಶುಪತ–ಲಕುಳೀಶ ಪಂಥ, ಕಾಪಾಲಿಕ ಪಂಥ, ಕಾಳಾಮುಖ ಪಂಥಗಳನ್ನು , ವೈಷ್ಣವ ಧರ್ಮದ ಒಳಗೆ ವೈಷ್ಣವ ಧರ್ಮ, ರಾಮಾನುಜ ಪಂಥ ಅಥವಾ ಶ್ರೀವೈಷ್ಣವಮತ, ರಾಮಾನುಜ ಪಂಥವೆಂಬ ಶ್ರೀವೈಷ್ಣವ ಧರ್ಮಗಳನ್ನು ಚರ್ಚಿಸುತ್ತಲೇ ಬಹಳ ವಿಶಿಷ್ಟವಾದ ಹಲವಾರು ಸಂಗತಿಗಳಿರುವ ಧಾರ್ಮಿಕ ಪ್ರಭುತ್ವದ ಬಗ್ಗೆ ಚರ್ಚಿಸಲಾಗಿದೆ. ಧಾರ್ಮಿಕ ಪ್ರಭುತ್ವದಲ್ಲಿ ದೇಗುಲ ನಿರ್ಮಾಣ ಪ್ರಕ್ರಿಯೆಗಳು, ದೇಗುಲ ನಿರ್ವಹಣೆ, ಸ್ಮಾರಕಗಳು ಮೂಲಕ ಸ್ಥಳೀಯ ಸಂವರ್ಧನೆಗಳನ್ನು ಚರ್ಚಿಸಲಾಗಿದೆ.

ಇಡೀ ಅಧ್ಯಯನದಿಂದ ಕಂಡುಕೊಂಡ ಫಲಿತಗಳು ಅನನ್ಯವಾದವು. ಹಾಗೇ ನೋಡಿದರೆ ಅಧ್ಯಯನವೇ ಒಂದು ವಿಶೇಷ ಸಂಶೋಧನಾ ಫಲಿತವಾಗಿದೆ. ಜೊತೆಗೆ ಇನ್ನು ಹತ್ತು ಹಲವು ಪ್ರಖರವಾದ ಫಲಿತಗಳನ್ನು ಈ ಕೆಳಕಂಡಂತೆ ದಾಖಲಿಸಬಹುದು–

- ✓ ಈಗಾಗಲೇ ನಮ್ಮಲ್ಲಿ ಎರಡು ಮಾದರಿಯ ಅಧ್ಯಯನಗಳು ಚಲಾವಣೆಯಲ್ಲಿ ಇದ್ದವು. ಒಂದು ವ್ಯವಸ್ಥಿತವಾದ ಆಕರಗಳ ಮೂಲಮಾತೃಕೆಗಳನ್ನು ಜೋಡಿಸಿ ಕೇವಲ ಅಂಕಿ–ಅಂಶಗಳನ್ನು ಡೇಟಾ ಮಾದರಿಯಲ್ಲಿ ಒದಗಿಸುವುದು. ಹಾಗೂ ಅರಸೊತ್ತಿಗೆಯನ್ನು ಒಪ್ಪಿಕೊಂಡು ಎಲ್ಲಾ ರೀತಿಯ ಪ್ರಗತಿಯನ್ನೂ ರಾಜತ್ವದ ಹಿನ್ನೆಲೆಯಲ್ಲಿಯೇ ಗಮನಿಸುವ ಕ್ರಮ ಒಂದಾದರೆ, ಇನ್ನೊಂದು ಎಡಪಂಥೀಯ ನಿಲುವಿನಲ್ಲಿ ಅರಸೊತ್ತಿಗೆಯನ್ನು ನಿರಾಕರಿಸುವ ಸಾಮಾಜಿಕ ಆಯಾಮಗಳ ಅಧ್ಯಯನಗಳು. ಈ ಎರಡೂ ಅತಿಗಳಿಗೆ ಪ್ರಸ್ತುತ ಅಧ್ಯಯನವು ಹೊರತಾಗಿದ್ದು ಎಂದು ಖಚಿತವಾಗಿ ಮತ್ತು ಗಟ್ಟಿಯಾಗಿ ಸಾಧಿಸುತ್ತಿದ್ದೇನೆ.
- ✓ ಅಂದು ವಿಶಾಲ ಕನ್ನಡ ನಾಡಿನಲ್ಲಿ ( ಅಂದರೆ ಇಂದಿನ ತಮಿಳುನಾಡು, ಆಂದ್ರಪ್ರದೇಶ, ತೆಲಂಗಾಣದ ಬಹುಭಾಗಗಳನ್ನು ಒಳಗೊಂಡ ಕನ್ನಡ ಪ್ರದೇಶಗಳು)ಅಧಿಪತ್ಯ ಸಾಧಿಸಿಕೊಂಡಿದ್ದ ಹೊಯ್ಸಳ ಸಾಮ್ರಾಜ್ಯದಾದ್ಯಂತ ಆಯಕಟ್ಟಿನ ಪ್ರದೇಶಗಳನ್ನು ಮತ್ತು ಅದರೊಂದಿಗೆ ಹೊಂದಿಕೊಂಡಂತಿದ್ದ ವ್ಯಾಪಾರಿ ಮಾರ್ಗಗಳನ್ನು ಹಿಡಿತದಲ್ಲಿಟ್ಟುಕೊಂಡಿದ್ದ ಹೊಯ್ಸಳ ಮಹಾಮಂಡಳೇಶ್ವರರೆಂಬ ಆಡಳಿತಾಧಿಕಾರಿಗಳ 600ಕ್ಕೂ ಹೆಚ್ಚು ಶಾಸನಗಳನ್ನು ಮತ್ತು ಅವರ ಆಶ್ರಯದಲ್ಲಿದ್ದ ಕವಿಗಳ ಹಾಗೂ ಸ್ವತಃ ಮಹಾಮಂಡಳೇಶ್ವರರೇ ವಿರಚಿಸಿದ ಸಾಹಿತ್ಯಕೃತಿಗಳನ್ನು

ಒಂದು ಕಡೆ ಕಲೆಹಾಕಿ ಸೂಕ್ಷ್ಮವಾದ ಅಧ್ಯಯನಕ್ಕೆ ಒಳಗುಮಾಡಲಾಗಿದೆ. ಈ ಬಗೆಯ ಅಧ್ಯಯನ ಕ್ರಮವು ಹಿಡಿಯಾಗಿ ಹೊಯ್ಸಳ ಮಹಾಮಂಡಳೇಶ್ವರರ ಸಾಂಸ್ಕೃತಿಕ ಸಂವರ್ಧನೆಯಲ್ಲಿ ಅವರ ಪ್ರಾಮುಖ್ಯತೆಯನ್ನು ಮತ್ತು ಅವರ ಅನನ್ಯತೆಯನ್ನು ಎತ್ತಿಹಿಡಿಯುವಲ್ಲಿ ಸಹಕಾರಿಯಾಗಿದೆ.

✓ ಸೋಮಯದಂಡನಾಯಕ, ಮಾಧವದಂಡನಾಯಕ, ಬೈಚಯದಂಡನಾಯಕ, ಗೋವಿದೇವ, ಗಂಗರಾಜ, ಕಾಮಯ್ಯದಂಡನಾಯಕ ಮೊದಲಾದ ಸೇನಾಧಿಪತಿಗಳು ಮಹಾಪ್ರಧಾನಿ, ಮಹಾಪಸಾಯತ, ಸಂಧಿವಿಗ್ರಹಿ, ಮಹಾಮಂಡಳೇಶ್ವರರೂ ಆಗಿ ಕಾಲಕ್ರಮದಲ್ಲಿ ಪದೋನ್ನತಿಯನ್ನು ಪಡೆದಿರುವುದನ್ನು ಆಧಾರಸಹಿತವಾಗಿ ದಾಖಲಿಸಲಾಗಿದೆ. ಜೊತೆಗೆ ಒಬ್ಬೊಬ್ಬ ಮಹಾಮಂಡಳೇಶ್ವರನು ಹೊಯ್ಸಳರ ವೈರಿಬಲವನ್ನು ಮಟ್ಟ ಹಾಕಿ ಆಳರಸನ ಘನತೆ, ಗೌರವ, ಸಾರ್ವಭೌಮತ್ವಗಳ ರಕ್ಷಣೆಯಲ್ಲಿ ಮಹೋನ್ನತ ಸಾಧನೆ ಮಾಡಿತೋರಿಸಿರುವನ್ನು ಈ ಅಧ್ಯಯನದಲ್ಲಿ ನಿಚ್ಚಳಗೊಳಿಸಲಾಗಿದೆ.

✓ ಪ್ರತಿಯೊಬ್ಬ ಮಹಾಮಂಡಳೇಶ್ವರರ ವಂಶಾವಳಿಯನ್ನೂ ಆದಷ್ಟೂ ಲಭ್ಯ ಶಾಸನಗಳ ಆಧಾರದಿಂದ ಸಮಗ್ರ ಎನ್ನಿಸುವಷ್ಟರ ಮಟ್ಟಿಗೆ ವಿಸ್ತಿರಿಸಿ ನೀಡಲಾಗಿದೆ. ಇದರಿಂದ ಆ ವಂಶೀಯರ ಸಮಗ್ರ ಸಾಧನೆಗಳು ಒಂದೆಡೆ ಲಭ್ಯವಾಗುವಂತೆ ನೋಡಿಕೊಳ್ಳಲಾಗಿದೆ.

✓ ಹೊಯ್ಸಳ ಮಹಾಮಂಡಳೇಶ್ವರರ ಕೆಲವು ಮನೆತನದವರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ನಂತರವೂ ಆ ವಂಶೀಯರು ಆಡಳಿತದಲ್ಲಿ ಮುಂದುವರೆದಿರುವುದನ್ನು ಇದೇ ಮೊದಲ ಬಾರಿಗೆ ಗುರುತಿಸಲಾಗಿದೆ. ಉದಾಹರಣೆಗೆ ಮೊದಲನೆಯ ಬೈಚಯ ದಂಡನಾಯಕನು ಹೊಯ್ಸಳ ದೊರೆ ಮೂರನೇ ಬಲ್ಲಾಳನ ಕೈಕೆಳಗಿನ ಅಧಿಕಾರಿಯಾಗಿದ್ದವನು ನಂತರ ಅವನು ಮತ್ತು ಅವನ ಮಗನಾದ ಮೊದಲನೇ ಇರುಗಪ್ಪ ದಂಡನಾಯಕನು ಸಂಗಮ ದೊರೆಗಳ ಜೊತೆ ಇದೇ ಪದವಿಯಲ್ಲಿ ಮುಂದುವರೆದ ವಿಷಯ ಮುನ್ನಲೆಗೆ ಬಂದಿದೆ,

✓ ಹೊಯ್ಸಳ ಮಹಾಸಾಮಂತನಾಗಿದ್ದ ಗೋವಿದೇವ ಮತ್ತು ಅವನ ವಂಶೀಯರು ರಾಜಕೀಯವಾಗಿ ಹೇಗೆ ವರ್ಗವಾಗುವುದರ ಮೂಲಕ ಸಧೃಢವಾದ ಮಹಾಮಂಡಲಗಳನ್ನು ಹೇಗೆ ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಿದ್ದರು ಎಂದು ಇಲ್ಲಿ ಗುರುತಿಸಲಾಗಿದೆ.

✓ ಹಿಂದಿನಿಂದಲೂ ಗಂಗರ ಕಾಲದಿಂದ ಮುನ್ನಲೆಯಲ್ಲದ್ದ ಮಗರೆ ನಾಡು ಹೊಯ್ಸಳ ಮಹಾಮಂಡಳೇಶ್ವರರ ಸಾಂಸ್ಕೃತಿಕ ಸಾಧನೆಯಿಂದ ಹೇಗೆ ಪ್ರವರ್ಧಮಾನಕ್ಕೆ ಬಂದಿತು ಎಂದು ವಿವರಿಸಲಾಗಿದೆ.

✓ ಮಹಾಕವಿಗಳಿಗೆ ಪೋಷಣೆಯನ್ನು ಒದಗಿಸುವುದು ಕೇವಲ ಚಕ್ರವರ್ತಿಗಳ ಹಿರಿಮೆ ಎಂದು ಇದುವರೆಗೂ ಅಧ್ಯಯನ ಪ್ರಪಂಚ ಭಾವಿಸಿದಂತಿತ್ತು. ಆದರೆ ಇದೇ ಮೊದಲ ಬಾರಿಗೆ ಹಲವು ಕವಿಗಳಿಗೆ ಪ್ರೋತ್ಸಾಹವನ್ನು ನೀಡಿದ್ದು ಚಕ್ರವರ್ತಿಗಳು ಮಾತ್ರವೇ ಅಲ್ಲ ಮಹಾಮಂಡಳೇಶ್ವರರೂ ಈ

ಕೆಲಸವನ್ನು ಅಧ್ಭುತವಾಗಿ ಮಾಡಿದ್ದಾರೆ ಎಂಬುದನ್ನು ಉದಾಹರಣೆಗಳ ಮೂಲಕ ಇಲ್ಲಿ ಸಾಧಿಸಲಾಗಿದೆ.

✓ ನಾಡಿನ ಲಿಪಿಯ ವಿನ್ಯಾಸದಲ್ಲಿ ನಡೆಯಲಾಗುತ್ತಿದ್ದ ಬೆಳವಣಿಗೆಗಳನ್ನು ಆಳರಸರ ತಲೆಗೆ ಕಟ್ಟಲಾಗುತ್ತಿತ್ತು. ಆದರೆ ಆಳರಸರ ಪರವಾಗಿ ಶಾಸನಗಳನ್ನು ಹಾಕಿಸುತ್ತಿದ್ದವರು ಅಧೀನ ಅಧಿಕಾರಿಗಳೇ ಆಗಿದ್ದುದರಿಂದ ಲಿಪಿಯ ಬೆಳವಣಿಗೆಯಲ್ಲೂ ಹಾಗೂ ಲಿಪಿಯ ಸ್ಥಿರೀಕರಣದಲ್ಲೂ ಯಾವ ರೀತಿ ಮಹಾಮಂಡಳೇಶ್ವರರು ತೊಡಗಿಸಿಕೊಂಡಿದ್ದರು ಎಂದು ಇದೇ ಮೊದಲ ಬಾರಿಗೆ ಗುರುತಿಸಲಾಗಿದೆ.

✓ 'ಜಗನ್ನಾಥವಿಜಯ'ದ ಕರ್ತೃವೂ, ಕವಿಶ್ರೇಷ್ಠರಲ್ಲೊಬ್ಬನಾದ ರುದ್ರಭಟ್ಟನು ಹೊಯ್ಸಳ ಅರಸ ವೀರಬಲ್ಲಾಳನ ಕಾಲದಲ್ಲಿದ್ದು ಅವನ ಆಸ್ಥಾನಕವಿಗಳಲ್ಲೊಬ್ಬನಾದ ನೇಮಿಚಂದ್ರನ ಸಮಕಾಲೀನನಾಗಿದ್ದನು ಎಂದೇ ಇದುವರೆಗೂ ನಂಬಿಕೊಂಡು ಬರಲಾಗಿತ್ತು. ಆದರೆ ರುದ್ರಭಟ್ಟನು ತನ್ನ ಕೃತಿಯನ್ನು ಕುರಿತು "ಚಂದ್ರಮೌಳಿಪ್ರಮುಖನಿಖಿಲವಿದ್ವಜ್ಜನಂ ಮೆಚ್ಚೆ ಪೇಳ್ದೆಂ" ಎಂದು ಹೇಳಿಕೊಂಡಿರುವುದನ್ನು ಚರ್ಚಿಸಿ ಹೊಯ್ಸಳ ವೀರಬಲ್ಲಾಳನ ಮಂತ್ರಿಯಾಗಿದ್ದ ಚಂದ್ರಮೌಳಿ ದಂಡನಾಯಕನ ಪ್ರೋತ್ಸಾಹದಿಂದಲೇ ರುದ್ರಭಟ್ಟನು ಜಗನ್ನಾಥ ವಿಜಯವನ್ನು ಬರೆದನು ಎಂಬುದನ್ನು ಇಲ್ಲಿ ಮುನ್ನಲೆಗೆ ತರಲಾಗಿದೆ. ಇದಕ್ಕೆ ಪೋಷಕವಾಗಿ ೧೧೮೧ರಲ್ಲಿ ಬರೆಯಲ್ಪಟ್ಟ ಶ್ರವಣಬೆಳ್ಗೊಳದ ೩೨೭ನೆಯ ಶಾಸನವನ್ನೂ ಸಹ ಆಧರಿಸಲಾಗಿದೆ

✓ ವಿಷ್ಣುವರ್ಧನ ಅರಸನನ್ನು ಅನೇಕ ಬಾರಿ ಸ್ತುತಿಸುವ ಕನ್ನಡದ ಮೊಟ್ಟಮೊದಲ ಗಣಿತಶಾಸ್ತ್ರಜ್ಞನಾದ ರಾಜಾದಿತ್ಯನಿಗೆ ಆಶ್ರಯವನ್ನು ನೀಡಿದವರು ವಿಷ್ಣುವರ್ಧನನ ಅಧೀನವಾಗಿ ಮಹಾಮಂಡಳೇಶ್ವರರಾಗಿದ್ದ ಭರತಿಮಯ್ಯ ಹಾಗು ಬಾಹುಬಲಿ ದಂಡನಾಯಕರು ಎಂಬುದನ್ನು ತಿಳಿಸಲಾಗಿದೆ.

✓ ಆಚಣ್ಣನು ತನ್ನ ವರ್ಧಮಾನ ಪುರಾಣದಲ್ಲಿ ತನ್ನ ವಿಭುವಾದ ರೇಚಣನನ್ನು ಮನಸಾರೆ ಹಾಡಿ ಹೊಗಳಿರುವನು. ರೇಚಣನಿಗೆ ರೆಚಿಮಯ್ಯ, ರೇಚರಸ, ರೇಚಚಮೂಪತಿ ಎಂದು ಕರೆಯಲಾಗುತ್ತಿತ್ತು. ಈತನನ್ನು ಜಿನೇಂದ್ರಮತಾಮ ಬ್ಜಭಾನು ಪುಣ್ಯಾಕರಂ, ಅರ್ಥಿಕಲ್ಪತರು, ಭೋಗಪುರಂದರಂ, ಭೀಕರ ವೈರವಾರಣ ವದಾರಣಕೇಸರಿ ಎಂದು ಮೊದಲಾಗಿ ಹೊಗಳಿರುವನು. ರೇಚಣನು ಕಲಚೂರ್ಯ ಆಹವಮಲ್ಲ (೧೧೮೦–೧೧೮೩)ನ ಲಕ್ಷಣ, ರೇಚಣ, ಚಂದಣ, ಸೋವಣ, ಕಾವಣ ಎಂಬ ಐದು ಪ್ರಖ್ಯಾತ ಮಂತ್ರಿಗಳಲ್ಲೊಬ್ಬನಾಗಿರುವನು. ಹೊಯ್ಸಳ ವೀರಬಲ್ಲಾಳನು ಕಲಚುರ್ಯರ ರಾಜ್ಯವನ್ನು ವಶಪಡಿಸಿಕೊಂಡ ನಂತರ ರೇಚಣನು ಹೊಯ್ಸಳ ಅರಸರ ಆಶ್ರಯವನ್ನು ಪಡೆದಂತೆ ತೋರುವುದು. ರೇಚರಸನು ಕ್ರಿ.ಶ ೧೨೨೦ರಲ್ಲಿ ದಕ್ಷಿಣದ ಐಹೊಳೆಯೆಂದು ಪ್ರಸಿದ್ಧಿಯನ್ನು ಪಡೆದ ಅರಸಿಕೆರೆಯಲ್ಲಿ ಸಹಸ್ರಕೂಟ ಜಿನಾಲಯವನ್ನು ಕಟ್ಟಿಸಿ ಅದಕ್ಕೆ ಹೊಯ್ಸಳ ದೊರೆಯಾದ ಬಲ್ಲಾಳನ ಅನುಮತಿಯಂತೆ ದತ್ತಿಯನ್ನು ನೀಡಿದುದಾಗಿ

ಶಾಸನದಿಂದ ತಿಳಿಯುವುದು.[೩೬] ಅಲ್ಲದೆ ಶ್ರವಣಬೆಳಗೊಳದಿಂದ ಅನತಿದೂರದಲ್ಲಿರುವ ಜಿನನಾಥಪುರದಲ್ಲಿರುವ ಶಾಂತಿನಾಥ ಜಿನನ ವಿಗ್ರಹವನ್ನು ಪ್ರತಿಷ್ಠಾಪಿಸಿದುದಾಗಿ ತಿಳಿದುಬರುವುದು. ಇದೆಲ್ಲವನ್ನೂ ಪರಿಗಣಿಸಿ ಹಿಂದೆ ಕಲಚುರ್ಯರ ಆಶ್ರಯದಲ್ಲಿದ್ದ ಆಚಣ್ಣನನ್ನು ಹೊಯ್ಸಳರು ಕಲಚುರ್ಯರನ್ನು ಗೆದ್ದನಂತರ ರೇಚರಸ ದಂಡನಾಯಕರ ಅಧೀನದಲ್ಲಿದ್ದನು ನಂತರವೇ ಆತನು ವರ್ಧಮಾನ ಪುರಾಣವನ್ನು ಬರೆದನು ಎಂದು ಪ್ರಸ್ತುತ ಪ್ರಬಂಧದಲ್ಲಿ ಪ್ರತಿಪಾದಿಸಲಾಗಿದೆ.

✓ ಹೊಯ್ಸಳ ಮಹಾಮಂಡಳೇಶ್ವರರ ಪೋಷಣೆಯಲ್ಲಿದ್ದ ಕವಿಗಳನ್ನು ಮತ್ತು ಕೃತಿಗಳನ್ನು ಚರ್ಚಿಸುತ್ತಲೇ ಹಲವು ಸ್ಥಳೀಯ ಸಂಗತಿಗಳನ್ನು ಸಾಧಾರವಾಗಿ ಮುನ್ನಲೆಗೆ ತರಲಾಗಿದೆ.

✓ ಮಧ್ಯಕಾಲೀನ ಕರ್ನಾಟಕದಲ್ಲಿ ಒಂದೆಡೆ ಶೈವ–ವೀರಶೈವ ಪರಂಪರೆಗಳು, ಮತ್ತೊಂದೆಡೆ ಭಕ್ತಿಪಂಥದ ಮೇಲ್ಮೈ, ಮಗದೊಂದೆಡೆ ವೈಷ್ಣವ ಸಂಪ್ರದಾಯದ ಪ್ರಚುರತೆ, ಇನ್ನೊಂದೆಡೆ ಮಹಾರಾಷ್ಟ್ರದ ವಾರಕರಿ ಸಂಪ್ರದಾಯದ ಬೆಳವಣಿಗೆ –ಹೀಗೆ ನಾನಾ ರೀತಿಯಲ್ಲಿ ಸಾಂಸ್ಕೃತಿಕತೆಯು ಮೇಳೈಸಿದ್ದಿತು. ಇಂಥ ಚಾರಿತ್ರಿಕ ಕಾಲಘಟ್ಟದಲ್ಲಿ ಕನ್ನಡ, ತಮಿಳು, ತೆಲುಗು ಭಾಷೆಗಳಲ್ಲಿ ಸೃಜನಶೀಲ ಬರವಣಿಗೆಗಳು ಹೆಚ್ಚಾಗಿದ್ದವು. ಈ ಎಲ್ಲ ಸಂದಿಗ್ಧತೆಗಳ ನಡುವೆ ಇರುಗಪ್ಪ ದಂಡನಾಯಕನು ಒಂದು ನಿಘಂಟನ್ನು ಸಂಸ್ಕೃತದಲ್ಲಿ ಬರೆಯುವುದರ ಕಾರಣವೇನು? ಸೃಜನೇತರ ಬರಹವಾದ ನಿಘಂಟನ್ನು ಬರೆಯುವ ಮೂಲಕ ವಿಶೇಷ ಅಸ್ಮಿತೆಯನ್ನು ಮತ್ತು ಸೃಜನಶೀಲ ಬರಹಗಳಿಗೆ ಸಹಾಯವಾಗಲಿ ಎಂಬ ಸದುದ್ದೇಶವನ್ನು ಆತ ಸಾಧಿಸಲು ಈ ನಿಘಂಟನ್ನು ಬರೆದಿರಬಹುದು. ಎಂದು ಮೊದಲಬಾರಿಗೆ ಇಲ್ಲಿ ಪರಿಚಯಿಸಲಾಗಿದೆ. ಹಾಗೂ ಇರುಗಪ್ಪದಂಡನಾಯಕನ "ನಾನಾರ್ಥ ರತ್ನಮಾಲಾ" ಎಂಬ ನಿಘಂಟು ಸಂಸ್ಕೃತದಲ್ಲಿದ್ದರೂ ಕನ್ನಡ ಪರಿಸರಕ್ಕೆ ಅತ್ಯಂತ ಉಪಯೋಗಿ ನಿಘಂಟೆಂದು ಇಲ್ಲಿ ನಿರೂಪಿಸಲಾಗಿದೆ.

✓ ಶಾಸನಕವಿಗಳ ಬಗ್ಗೆ ಹೇಳುವಾಗ ಇದುವರೆಗೂ ಯಾರೂ ಗುರುತಿಸಲಾಗದ ಒಂದು ಅಂಶದ ಕಡೆ ನನ್ನ ಗಮನವನ್ನು ಕೇಂದ್ರೀಕರಿಸಿದ್ದೇನೆ. ಕವಿಗಳು ಶಾಸ್ತ್ರಕಾರರಾದ ಗುರುಗಳಿಂದ ವಿದ್ಯಾಭ್ಯಾಸವನ್ನು ಪಡೆದು ತಾವು ಕವಿಗಳಾಗಲು ಒಂದು ಅಭ್ಯಾಸದಂತೆ ಶಾಸನಗಳನ್ನು ರಚಿಸಿದ್ದಿರಬೇಕು. ಹಾಗಾಗಿಯೇ ಬಂಧವನ್ನು ತೊರೆಯದ ಹಾಗೆ ಈ ಕವಿಗಳು ಕನ್ನಡ ಕಾವ್ಯಲಕ್ಷಣಗಳನ್ನು ಶಾಸನಗಳ ಮೂಲಕ ಕಟ್ಟುವ ಅಭ್ಯಾಸಿಗಳಾಗಿದ್ದರು ಎಂದು ಇಲ್ಲಿ ಸಾಧಿಸಿ ತೋರಿಸಲಾಗಿದೆ.

✓ ಕೆಲವು ವಿದ್ವಾಂಸರು ಕೇವಲ ಸಾಹಿತ್ಯ ಕೃತಿಗಳನ್ನು ನೋಡಿ ಕನ್ನಡ ಸಾಹಿತ್ಯದಲ್ಲಿ ವಿರಳವೆಂದು ಭಾವಿಸಿದದರು. ಆದರೆ ವ್ಯಕ್ತಿಚಿತ್ರಗಳು ಶಾಸನ ಸಾಹಿತ್ಯದಲ್ಲಿ ವಿಪುಲವಾಗಿ ದೊರೆಯುತ್ತದೆ. ಕನ್ನಡ ಶಾಸನಕಾವ್ಯಗಳನ್ನು ತೆಗೆದುಕೊಂಡರೆ ಪ್ರತಿಯೊಂದು ಶಾಸನವೂ ಸಹ ಅನೇಕ ವ್ಯಕ್ತಿಗಳನ್ನು ಹೀಗೆ ವರ್ಣಿಸುತ್ತವೆ. ಹೀಗೆ ವರ್ಣಿಸುತ್ತಲೇ ತಮ್ಮ ಕಾಲದ ಅನೇಕ ಮಹತ್ವದ ಸಂಗತಿಗಳನ್ನು ಕಟ್ಟಿಕೊಡುತ್ತವೆ. ಹೀಗೆ ಕಟ್ಟಿಕೊಡುವಾಗ ಹುಟ್ಟುವ ಎಲ್ಲಾ ಲೀಲೆಗಳು ಸ್ಥಳೀಯತೆಗೆ ವಿಶೇಷವಾದ

ಒತ್ತನ್ನು ನೀಡುತ್ತದೆ. ಹೀಗೆ ಶಾಸನಕಾವ್ಯಗಳು ಐತಿಹಾಸಿಕವಾದರೂ ಸಾಹಿತ್ಯ ಮತ್ತು ಸಾಂಸ್ಕೃತಿಕತೆಯನ್ನು ಪ್ರತಿಬಿಂಬಿಸುತ್ತವೆ ಎಂಬುದನ್ನು ತೋರಿಸಿಕೊಡಲಾಗಿದೆ.

✓ ಹೊಯ್ಸಳ ಸಾಮ್ರಾಜ್ಯದ ನಿಜವಾದ ಹೆಚ್ಚುಗಾರಿಕೆಯೆಂದರೆ ಕೃಷಿ ಮತ್ತು ವ್ಯಾಪಾರದಲ್ಲಿ ನಡೆಸಿದ ಮಹಾನ್ ಪರಿಷ್ಕರಣೆಗಳು. ಇದಕ್ಕೆ ನಿಜವಾದ ಕಾರಣರೆಂದರೆ ಮಹಾಮಂಡಳೇಶ್ವರರು. ಇವರು ಕೆರೆಗಳನ್ನು ನಿರ್ಮಿಸುವುದರ ಮೂಲಕ, ಕೃಷಿ ಭೂಮಿಯನ್ನು ಪರಿವರ್ತಿಸುವುದರ ಮೂಲಕ, ಸಂತೆ ಪೇಟೆಗಳನ್ನು ನಿರ್ಮಿಸುವುದರ ಮೂಲಕ ನಾಡಿನ ಆರ್ಥಿಕತೆಗೆ ಹೇಗೆ ಸಹಾಯಕಾರಿಯಾದ ವಾತಾವರಣವನ್ನು ಸೃಷ್ಟಿಸಿದರು ಎಂದು ಹಲವಾರು ಉದಾಹರಣೆಗಳ ಮೂಲಕ ಗುರುತಿಸಲಾಗಿದೆ.

✓ ಸ್ಥಳೀಯ ಸಣ್ಣ–ದೊಡ್ಡ ಕೈಗಾರಿಕೆಗಳನ್ನು ಸಬಲಗೊಳಿಸುವುದು ಮತ್ತು ನಗರ ವ್ಯವಸ್ಥೆಯ ಸೂಕ್ತವಾದ ನಿರ್ವಹಣೆಗಳ ಮೂಲಕ ಉತ್ಪಾದನೆ ಮತ್ತು ವ್ಯವಹಾರಗಳ ಸಂವರ್ಧನೆಗೆ ಅನುವು ಮಾಡಿಕೊಟ್ಟಿರುವುದನ್ನು ಅನೇಕ ಉದಾಹರಣೆಗಳ ಮೂಲಕ ಸಾಕ್ಷೀಕರಿಸಲಾಗಿದೆ.

✓ ಮಧ್ಯಕಾಲೀನ ಕರ್ನಾಟಕದಲ್ಲಿ ಹಲವಾರು ದೇವಾಲಯಗಳು ತಮಗೆ ಬಂದ ದಾನಗಳನ್ನು ಸಮರ್ಪಕವಾಗಿ ನಿರ್ವಹಿಸಲು ಮಹಾಜನರ ಮುಖಾಂತರ ಬಹಳ ಮುಖ್ಯವಾದ ಸಂಘಟನೆಯೊಂದನ್ನು ಕಟ್ಟಿಕೊಂಡಿತು. ದೇಗುಲಗಳಿಗೆ ಬರುತ್ತಿದ್ದ ದಾನ–ದತ್ತಿಗಳನ್ನು ಇದರ ಮೂಲಕ ಹೆಚ್ಚಿಸಿಕೊಳ್ಳಲಾಗುತ್ತಿತ್ತು. ದೇವಾಲಯಗಳಲ್ಲಿ ಇಂದಿನ ಬ್ಯಾಂಕಿಂಗ್ ವ್ಯವಸ್ಥೆಗೆ ಸಮೀಪದಲ್ಲಿದ್ದ ವಿನಿಮಯ ವ್ಯವಸ್ಥೆಯನ್ನು ನಡೆಸಲಾಯಿತು. ಇದನ್ನು ಶ್ರೀ ಭಂಡಾರ, ದೇಗುಲದ ಭಂಡಾರ, ದೇವ ಭಂಡಾರ ಎಂದು ಕರೆಯಲಾಗುತ್ತಿತ್ತು. ಈ ಭಂಡಾರ ಎನ್ನುವ ಬ್ಯಾಂಕಿಂಗ್ ಮಹಾಜನರು ನಿಯಂತ್ರಕರಾಗಿಯೂ ವ್ಯಾಪಾರಿಗಳು ಪೋಷಕರಾಗಿಯೂ ಇರುತ್ತಿದ್ದು, ಇದರಿಂದ ದೇವಾಲಯದ ನಿರ್ವಹಣೆಗಾಗಿ ಅನೇಕರಿಂದ ಪುದುವಟ್ಟುಗಳನ್ನು ಸಂಗ್ರಹಿಸಿ ಅದನ್ನು ಇನ್ನಿತರರಿಗೆ ಬಡ್ಡಿಗೆ ಹಣವನ್ನು ಸಾಲವಾಗಿ ನೀಡುತ್ತಿತ್ತು. ಆ ಬಡ್ಡಿಯನ್ನು ದೇವಾಲಯಗಳ ನಿರ್ವಹಣೆಗೆ ಬಳಸಲಾಗುತ್ತಿತ್ತು. ಇವುಗಳ ನಿರ್ವಹಣೆಗೆ ಮಹಾಜನರಿಗೆ ಬೆನ್ನೆಲುಬಾಗಿ ಈ ವ್ಯವಸ್ಥೆಯನ್ನು ರೂಪಿಸಿದವರು ಮಾತ್ರ ಮಹಾಮಂಡಳೇಶ್ವರರು ಎನ್ನುವ ಅಂಶವನ್ನು ಮುನ್ನೆಲೆಗೆ ತರಲಾಗಿದೆ.

✓ ಸಾಮಾಜಿಕ ಅಧ್ಯಯನಕ್ಕೆ ಬಂದಾಗ ಬಹುತೇಕ ಅಧ್ಯಯನಗಳು ಸಾಗುವ ಜಾಡನ್ನು ತೊರೆದು ಸಮಾಜಶಾಸ್ತ್ರೀಯ ಮಾನದಂಡಗಳನ್ನು ಉಪಯೋಗಿಸಿಕೊಂಡು ಅಧ್ಯಯನವನ್ನು ನಡೆಸಲಾಗಿದೆ. ಈ ವಿಷಯದಲ್ಲಿ ಈ ಪ್ರಬಂಧವು ಮಾದರಿ ಪ್ರಬಂಧವಾಗಿದೆ.

✓ ಹೊಯ್ಸಳ ಮಹಾಮಂಡಳೇಶ್ವರರ ಕಾಲಘಟ್ಟದಲ್ಲಿದ್ದ ಸ್ಥಳೀಯ ಸಮಾಜದ ರಚನೆ, ಸಾಮುದಾಯಿಕ ಪ್ರಗತಿಗೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕಾರಣವಾಗಿದ್ದ ಕುಟುಂಬ ಮತ್ತು ಶಿಕ್ಷಣದ ಪಾತ್ರವನ್ನು ಸವಿವರವಾಗಿ ಚಿತ್ರಿಸಲಾಗಿದೆ.

✓ ಹೊಯ್ಸಳ ಮಹಾಮಂಡಳೇಶ್ವರರ ಆಳ್ವಿಕೆಯ ಪ್ರದೇಶಗಳಲ್ಲಿ ಅಸ್ತಿತ್ವದಲ್ಲಿದ್ದ ಸಾಮಾಜಿಕ ಪ್ರಕ್ರಿಯೆಗಳಾದ ಸ್ವಾಂಗೀಕರಣ, ಸಂಘರ್ಷ, ಸಹಕಾರ ಇತ್ಯಾದಿಗಳನ್ನು ಪರಿಕಲ್ಪನಾತ್ಮಕವಾಗಿ ವಿಶದೀಕರಿಸಲಾಗಿದೆ.

✓ ಸಾಂಸ್ಕೃತಿಕ ಪ್ರಭಾವಳಿಯಲ್ಲಿ ಎದ್ದು ಕಾಣುವ ಮರಣಪದ್ಧತಿಗಳಾದ ವೀರಪರಂಪರೆ ಸಹಗಮನ ಮತ್ತು ಸಮಾಧಿ ಮರಣ ಪದ್ಧತಿಗಳನ್ನು ಮೊಟ್ಟಮೊದಲ ಬಾರಿಗೆ ಭೌತ ಮತ್ತು ಅಭೌತ ಸಂಸ್ಕೃತಿಗಳ ಸಮ್ಮಿಲನವೆಂಬಂತೆ ಬಗೆಯಲಾಗಿದೆ.

✓ ವೀರಮರಣಗಳ ಪರಂಪರೆಯಲ್ಲಿ ಬರುವ ಗರುಡರ ಬಗ್ಗೆ ಇದೇಮೊದಲ ಬಾರಿಗೆ ಕೆಲವು ಹೊಸ ವಿಷಯಗಳನ್ನು ವಿವರಿಸಲಾಗಿದೆ. ಇದುವರೆಗೂ ಎಂ ಎಂ ಕಲಬುರ್ಗಿ ಅವರಾದಿಯಾಗಿ ಅನೇಕ ವಿದ್ವಾಂಸರು ಗರುಡರು "ಆಜುಬಾರಿ ಗರುಡನನನ್ನು ಅಪ್ಪಿ" ಎಂಬ ವಿಷಯವನ್ನು ಹಾಗೂ "ಕನ್ನಡಿಗ ಮನೆತನಯಾಳ್ತನಗೈವರು" ಎನ್ನುವ ಪಾರಿಭಾಷಿಕಗಳನ್ನು ಬಿಡಿಸುವ ಪ್ರಯತ್ನವನ್ನು ಮಾಡಲಾಗದೇ ಇದ್ದ ಸಂಗತಿಗಳನ್ನು ಯಶಸ್ವಿಯಾಗಿ ಅಧಿಕೃತವಾದ ರೀತಿಯಲ್ಲಿ ವಿಶ್ಲೇಷಿಸಿರುವುದು ಪ್ರಸ್ತುತ ಪ್ರಬಂಧದ ಸಂಶೋಧನ ಫಲಿತಗಳಲ್ಲಿ ಉತ್ತಮವಾದುದು ಎನ್ನುವ ಸಮಾಧಾನ ಈ ಪ್ರಬಂಧದ್ದು.

✓ ಘಟಿಕಾಸ್ಥಾನಗಳ ವಿಷಯ ಬಂದಾಗ ಹೆಂಜೇರೇ ಏಕೆ ಬಹಳ ಮುಖ್ಯ ಘಟಿಕಾಸ್ಥಾನವಾಗಿತ್ತು ಎಂಬ ಪ್ರಶ್ನೆಯನ್ನು ಇಟ್ಟುಕೊಂಡು ಅಲ್ಲಿ ಉನ್ನತ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವಂತಹ ವಾತಾವರಣವಿತ್ತು. ಹಾಗೂ ಇಲ್ಲಿ ಅತ್ಯಂತ ಮುಂದುವರೆದ ಶಿಕ್ಷಣಪಠ್ಯಗಳು ಇದ್ದವು. ಇದಕ್ಕೆ ಕಾರಣ ಇಲ್ಲಿನ ಶೈವಯತಿಗಳು ಎಂಬುದನ್ನು ಮುನ್ನೆಲೆಗೆ ತರಲಾಗಿದೆ.

✓ ನಗರೀಕರಣಕ್ಕೂ ಹಾಗೂ ವ್ಯಾಪಾರೋದ್ಯಮಕ್ಕೂ ಬೆಳಗೊಳತೀರ್ಥವು ಇಂಬಾಗುವುದಕ್ಕೆ ನಿಜವಾದ ಕಾರಣ ಗಂಗರಾಜನೆಂದು ಪ್ರಸ್ತುತ ಪ್ರಬಂಧವು ಗಾಢವಾಗಿ ಪ್ರತಿಪಾದಿಸುತ್ತದೆ. ಗೋವಿದೇವನ ವಿಷಯದಲ್ಲಿ ಪುಟ್ಟ ತೊಡಕು ಸೃಷ್ಟಿಯಾಗಿತ್ತು. ಅದೇನೆಂದರೆ, ಗೋವಿದೇವನಿಗಿರುವ "ಶ್ರೀ ಜೈನಮಾರ್ಗ ಸ್ಥಗಿತ ಗುಣಕಳಾಳಾಪನುದ್ಯತ್ಪ್ರತಾಪಂ" ಎಂಬ ಅಭಿದಾನವನ್ನು ಆತ ಜೈನಧರ್ಮದ ಬೆಳವಣಿಗೆಗೆ ತಡೆಹಾಕಿ ಶೈವಧರ್ಮ ಮೆರೆಯಲು ಅವಕಾಶ ಮಾಡಿಕೊಟ್ಟಿದ್ದರಿಂದ ಸಂದಿದೆ ಎಂದು ಕೆಲವು ವಿದ್ವಾಂಸರು ಅರ್ಥೈಸಿದ್ದಾರೆ. ಇದನ್ನು ಮೊದಲ ಬಾರಿಗೆ ಈ ನಿಬಂಧವು ತಿರಸ್ಕರಿಸಿದ್ದು ಲಭ್ಯವಾದ ಆಕರಗಳನ್ನು ಸಮರ್ಥವಾಗಿ ದುಡಿಸಿಕೊಂಡು ಇದನ್ನು ನಿರಾಕರಿಸಲಾಗಿದೆ. ಗೋವಿದೇವನು ಜೈನಮತಕ್ಕೆ ಅಪರಿಮಿತವಾದ ಕೊಡುಗೆಗಳನ್ನು ನೀಡಿದ ಅಧಿಕಾರಿಯಾಗಿದ್ದನು. ಗೋವಿಯ ಮಡದಿ ಶ್ರಿಯಾದೇವಿ, ಮಹಾದೇವಿಯರು ಜೈನರಾಗಿದ್ದರು. ಚಾಂದ್ರಾಯಣ ಮುನಿಯ ಪ್ರತಿಮೆಯನ್ನು ಹುಳಿಯಾರಿನಲ್ಲಿ ಶ್ರಿಯಾದೇವಿಯು ಮಾಡಿಸಿದುದನ್ನು ತಿಳಿಸುವ ಶಾಸನದಲ್ಲಿ ಗೋವಿದೇವನನ್ನು "ಶ್ರೀಚಾನ್ದ್ರಾಯಣ ದೇವರಗುಡ್ಡ" ಎಂದು ಕರೆಯಲಾಗಿದೆ. ತನ್ನ ಸತಿ ಮಹಾದೇವಿಯು ಮರಣವನ್ನಪ್ಪಿದಾಗ ಅವಳಿಗೆ ಪರೋಕ್ಷ

ವಿನಯವಾಗಿ ಗುಣಚಂದ್ರಸಿದ್ಧಾಂತದೇವರ ಶಿಷ್ಯರಾದ ಶ್ರೀಮಾಣಿಕನಂದಿಸಿದ್ಧಾಂತದೇವರಿಗೆ ಹೆಗ್ಗರೆಯಲ್ಲಿ ಚನ್ನಪಾರ್ಶ್ವದೇವರ ಬಸದಿಯನ್ನು ನಿರ್ಮಿಸಿದನು. ಅಲ್ಲದೆ ಇವನ ಆಡಳಿತ ವ್ಯಾಪ್ತಿಯಾದಂತಹ ಮಗರೆನಾಡಿನಲ್ಲಿ ಮೊದಲಿನಿಂದಲೂ ಜೈನಧರ್ಮವು ಪ್ರವರ್ಧಮಾನದಲ್ಲಿದ್ದುದಕ್ಕೆ ಈ ನಾಡಿನ ಶಾಸನಗಳು, ಜೈನಬಸದಿಗಳು ಸಾಕ್ಷಿಯಾಗಿವೆ. ಹಾಗಾಗಿ 'ಜೈನಮಾರ್ಗವನ್ನು ಬೆಳವಣಿಗೆ ಹೊಂದಲು ತಡೆಹಾಕಿದ' ಎಂದು ಅರ್ಥೈಸಿರುವುದು ಸರಿಯಲ್ಲ. ಬದಲಿಗೆ **"ಶ್ರೀಜೈನಮಾರ್ಗ ಸ್ಥಗಿತ ಗುಣಕಳಾಳಾಪ"** ಎಂಬುದನ್ನು ತನ್ನ ಆಡಳಿತಾತ್ಮಕ ಪ್ರದೇಶದಲ್ಲಿ, ತನ್ನ ಆಳ್ವಿಕೆಯ ಸಂದರ್ಭದಲ್ಲಿ ಗೋವಿದೇವನು ಜೈನಧರ್ಮವನ್ನು 'ನಿಲ್ಲಿಸಿದ' ಅಂದರೆ ಅಳಿದುಹೋಗುತ್ತಿದ್ದ ಧರ್ಮವನ್ನು ಉಳಿಸಿದ; ಸ್ಥಾಪಿಸಿದ ಎಂದು ಅರ್ಥಾನ್ವಯ ಮಾಡುವುದು ಯುಕ್ತವೆಂದು ತೋರುತ್ತದೆ ಎಂದು ನಿರ್ಧರಿಸಿದ್ದು ಈ ಪ್ರಬಂಧದ ಸಾರ್ಥಕ ಫಲಿತಗಳಲ್ಲಿ ಒಂದು.

✓ ಎಲ್ಲಕ್ಕಿಂತ ಹೆಚ್ಚಾಗಿ ಇದುವರೆಗೂ ಅನೇಕರಿಂದ ಕಡೆಗಣನೆಗೆ ಒಳಪಟ್ಟ ಮಹಿಳೆಯರ ಕೊಡುಗೆಗಳನ್ನು ಉದಾಹರಣೆಗಳ ಮೂಲಕ ಈ ಪ್ರಬಂಧದುದ್ದಕ್ಕೂ ಪ್ರತಿಯೊಂದು ವಿಷಯದಲ್ಲಿಯೂ ಹೆಚ್ಚಾಗಿ ಬಳಸಲಾಗಿದೆ. ಪುರುಷರಿಗಿಂತಲೂ ಮಹಿಳೆಯರ ಬಗೆಗಿನ ಉದಾಹರಣೆಗಳನ್ನು ಹೆಚ್ಚಿಗೆ ಉಪಯೋಗಿಸಿರುವುದು ಕೂಡ ಈ ನಿಬಂಧದ ಹೆಚ್ಚುಗಾರಿಕೆಯಾಗಿದೆ.

# ಗ್ರಂಥಸೂಚಿ

## ಶಾಸನ ಸಂಪುಟಗಳು ಮತ್ತು ಶಾಸನ ಸಂಬಂಧಿ ನಿಯತಕಾಲಿಕೆಗಳು


01. **ಎಪಿಗ್ರಾಫಿಯಾ ಕರ್ನಾಟಿಕಾ :** ಬಿ.ಎಲ್.ರೈಸ್ ಸಂಪಾದಿತ: 1ರಿಂದ 12 ಸಂಪುಟಗಳು
02. **ಎಪಿಗ್ರಾಫಿಯಾ ಕರ್ನಾಟಿಕಾ:** ಮೈಸೂರು ವಿಶ್ವವಿದ್ಯಾಲಯದಿಂದ ಪರಿಷ್ಕೃತಗೊಂಡು ಬಿಡುಗಡೆಯಾದ ಸಂಪುಟಗಳ – 1ರಿಂದ 13, 15, 24
03. **ಎಪಿಗ್ರಾಫಿಯಾ ಇಂಡಿಕಾ** ಸಂಪುಟಗಳು
04. **ಸೌತ್ ಇಂಡಿಯನ್ ಇನ್ಸ್ಕ್ರಿಪ್ಶನ್ಸ್** ಸಂಪುಟಗಳು
05. **ಹಂಪಿ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು**
06. **ಎಪಿಗ್ರಾಫಿಯಾ ಆಂಧ್ರಿಕಾ** ಸಂಪುಟಗಳು
07. **ಇನ್ಸ್ಕ್ರಿಪ್ಶನ್ಸ್ ಆಫ್ ಆಂಧ್ರಪ್ರದೇಶ** ಸಂಪುಟಗಳು
08. **ಆನುಯಲ್ ರಿಪೋರ್ಟ್ ಆಫ್ ಮೈಸೂರು ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟ್** 1886–1905: ಸಂ ಬಿ. ಎಲ್. ರೈಸ್
09. **ಆನುಯಲ್ ರಿಪೋರ್ಟ್ ಆಫ್ ಮೈಸೂರು ಆರ್ಕಿಯಾಲಜಿಕಲ್ ಡಿಪಾರ್ಟ್‌ಮೆಂಟ್** 1906–14 ಸಂ: ಆರ್. ನರಸಿಂಹಾಚಾರ್
10. **ಆನುಯಲ್ ರಿಪೋರ್ಟ್ ಆಫ್ ಮೈಸೂರು ಆರ್ಕಿಯಾಲಜಿಕಲ್ ಡಿಪಾರ್ಟ್‌ಮೆಂಟ್** 1915–56
11. **ಎಂ ಎ ಆರ್ ಸ್ಟಡಿ:** 3 ಸಂಪುಟಗಳು ಸಂ: ಷ. ಶೆಟ್ಟರ್
12. **ತಿರುಮಲ ತಿರುಪತಿ ಇನ್ಸ್ಕ್ರಿಪ್ಶನ್ಸ್ :** 8 ಸಂಪುಟಗಳು: ತಿರುಮಲ ತಿರುಪತಿ ದೇವಸ್ಥಾನಮ್ ಪ್ರಕಾಶನ: ತಿರುಪತಿ
13. ಜರ್ನಲ್ ಆಫ್ **"ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ"** ಸಂಪುಟಗಳು


## ಪ್ರಾಚೀನ ಸಾಹಿತ್ಯ ಕೃತಿಗಳು


01. ಕುಲಕರ್ಣಿ. ಬಿ. ಎಸ್. (ಸಂ): 1968 : ನೇಮಿಚಂದ್ರನ **ನೇಮಿನಾಥಪುರಾಣಂ: ಪ್ರಸಾರಾಂಗ:** ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ
02. ಕುಲಕರ್ಣಿ. ಬಿ. ಎಸ್. (ಸಂ): 1958: ಬ್ರಹ್ಮಶಿವನ **ಸಮಯಪರೀಕ್ಷೆ:** ಕನ್ನಡ ಸಂಶೋಧನ ಸಂಸ್ಥೆ: ಧಾರವಾಡ
03. ಕೃಷ್ಣಕುಮಾರ್ ಸಿ ಪಿ (ಸಂ) : 2007: **ಜನ್ನ ಸಂಪುಟ** {ಸಮಗ್ರ ಕನ್ನಡ ಜೈನ ಸಾಹಿತ್ಯ ಮಾಲೆ 13} ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ : ಹಂಪಿ
04. ಗೋಪಾಲಕೃಷ್ಣ ತೆಕ್ಕುಂಜೆ (ಸಂ): 1976: **ಜನ್ನನ ಯಶೋಧರಚರಿತೆ,** ಕನ್ನಡ ಸಾಹಿತ್ಯ ಪರಿಷತ್ತು: ಬೆಂಗಳೂರು
05. ಜವರೇಗೌಡ ದೇ. (ಸಂ): 1969: **ಆಂಡಯ್ಯನ ಕಬ್ಬಿಗರ ಕಾವಂ:** ಶಾರದಾ ಮಂದಿರ: ಮೈಸೂರು
06. ದೇವೀರಪ್ಪ ಎಚ್ ಮತ್ತು ಪದ್ಮನಾಭ ಶರ್ಮಾ ಎಂ.ಸಿ (ಸಂ): 1972: **ಜನ್ನನ ಅನಂತನಾಥಪುರಾಣಂ:** ಪ್ರಸಾರಾಂಗ ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು
07. ನರಸಿಂಹಾಚಾರ್ ಡಿ. ಎಲ್: 1959: **ಶಬ್ದಮಣಿದರ್ಪಣ:** ಶಾರದಾಮಂದಿರ: ಮೈಸೂರು
08. ಬಸಪ್ಪ. ಎಸ್ : 1975: **ಸಾನಂದ ಚರಿತೆ** : ಪ್ರಸಾರಾಂಗ: ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿವಿ: ಮೈಸೂರು
09. ಬೆಳ್ಳಿಕೋಟೆ ರಾಮಚಂದ್ರಶರ್ಮ : 1954: **ನಾನಾರ್ಥ ರತ್ನಮಾಲಾ ಆಫ್ ಇರುಗಪ್ಪ ದಂಡನಾಥ:** ಡೆಕ್ಕನ್ ಕಾಲೇಜ್: ಪೂನಾ

10. ಮಂಜುನಾಥನ್ ಜಿ ಜಿ:(ಸಂ): 1996: **ಜಗನ್ನಾಥ ವಿಜಯ:** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ: ಬೆಂಗಳೂರು
11. ಮಂಜುನಾಥನ್. ಜಿ. ಜಿ: 2007: **ಆಚಣ್ಣ–ಅಗ್ಗಳ ಸಂಪುಟ** {ಸಮಗ್ರ ಕನ್ನಡ ಜೈನ ಸಾಹಿತ್ಯ ಮಾಲೆ 12} ಕನ್ನಡ ವಿಶ್ವವಿದ್ಯಾಳಯ : ಹಂಪಿ ಮತ್ತು **"ಶ್ರೀಪದಾಶೀತಿ"** ಮಂಜುನಾಥನ್. ಜಿ. ಜಿ: 2007: ಆಚಣ್ಣ–ಅಗ್ಗಳ ಸಂಪುಟ {ಸಮಗ್ರ ಕನ್ನಡ ಜೈನ ಸಾಹಿತ್ಯ ಮಾಲೆ 12} ಕನ್ನಡ ವಿಶ್ವವಿದ್ಯಾಲಯ : ಹಂಪಿ
12. ಮರಿಯಪ್ಪ ಭಟ್ಟ ಎಂ: 1924: **ವ್ಯವಹಾರಗಣಿತ** : ಪ್ರಸಾರಾಂಗ ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿಶ್ವವಿದ್ಯಾನಿಲಯ : ಮೈಸೂರು
13. ಮಹೀಶವಾಡಿ (ಸಂ): 1975 : ಜನ್ನನ **ಅನಂತನಾಥಪುರಾಣಂ:** ಪ್ರಸಾರಾಂಗ: ಕರ್ನಾಟಕ ವಿಶ್ವವಿದ್ಯಾಲಯ: ಧಾರವಾಡ
14. ಮಾಳವಾಡ. ಸ. ಸ: 1954: **ರಾಘವಾಂಕ ಚಾರಿತ್ರ್ಯ:** ಮುರುಘಾಮಠ: ಧಾರವಾಡ
15. ರಾಘವಾಚಾರ್. ಕ. ವೆಂ.(ಸಂ): 1969: **ಜನ್ನನ ಯಶೋಧರ ಚರಿತೆ:** ಶಾರದಾ ಮಂದಿರ: ಮೈಸೂರು
16. ವೆಂಕಟರಾಮಪ್ಪ (ಗದ್ಯಾನುವಾದ): 1977: **ಧರ್ಮಾಮೃತಂ:** ಕನ್ನಡ ಸಾಹಿತ್ಯ ಪರಿಷತ್ತು: ಬೆಂಗಳೂರು
17. ವೆಂಕಟರಾವ್ (ಸಂ): **ಇಮ್ಮಡಿ ನಾಗವರ್ಮನ ಅಭಿದಾನ ರತ್ನಮಾಲಾ ಕರ್ಣಾಟಕ ಟೀಕೆ:** ಮದರಾಸು ವಿಶ್ವವಿದ್ಯಾಲಯ: ಮದರಾಸು
18. ಶಾಮರಾಯ.ತ.ಸು (ಸಂ) : 1975: **ಆಚಣ್ಣನ ವರ್ಧಮಾನ ಪುರಾಣಂ:** ಕೇಂದ್ರ ಸಾಹಿತ್ಯ ಅಕಾಡೆಮಿ: ನವದೆಹಲಿ
19. ಶ್ಯಾಮಾಶಾಸ್ತ್ರಿ. ಆರ್. (ಡಾ) : 1923: **ರುದ್ರಭಟ್ಟ ವಿರಚಿತಮಾದ ಜಗನ್ನಾಥ ವಿಜಯ**: ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್ : ಮೈಸೂರು
20. ಶ್ಯಾಮಾಶಾಸ್ತ್ರಿ (ಸಂ): 1926: **ಅಭಿಲಷಿತಾರ್ಥ ಚಿಂತಾಮಣಿ:** ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್: ಮೈಸೂರು
21. ಕಲಬುರ್ಗಿ ಎಂ ಎಂ: ಮಾನಸೋಲ್ಲಾಸ: 1998 : ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ: ಧಾರವಾಡ
22. ಶಿವಮೂರ್ತಿಶಾಸ್ತ್ರಿ ಬಿ: 1966: **ವೀರೇಶಚರಿತೆ:** ಶಾರದಾ ಮಂದಿರ: ಮೈಸೂರು
23. ಸಣ್ಣಯ್ಯ ಬಿ. ಎಸ್. (ಸಂ): 1988 : **ದೇವಚಂದ್ರನ ರಾಜಾವಳಿ ಕಥಾಸಾರ;** ಪ್ರಸಾರಾಂಗ: ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿ.ವಿ: ಮೈಸೂರು
24. ಸಣ್ಣಯ್ಯ ಬಿ. ಎಸ್. (ಸಂ): 1974 : **ಬಂಧುವರ್ಮನ ಹರಿವಂಶಾಭ್ಯುದಯಂ** ; ಪ್ರಸಾರಾಂಗ ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿ.ವಿ: ಮೈಸೂರು
25. ಸುಬ್ರಹ್ಮಣ್ಯ ಶಾಸ್ತ್ರಿ ಎಂ.ಎಸ್. (ಸಂ): 1956: **ಜನ್ನನ ಅನುಭವಮುಕರ**: ಕನ್ನಡ ಸಾಹಿತ್ಯ ಪರಿಷತ್ತು: ಬೆಂಗಳೂರು
26. ಹಿರೇಮಠ ಆರ್.ಸಿ: 1971: **ಪದ್ಮಣಾಂಕನ ಪದ್ಮರಾಜ ಪುರಾಣ**: ಪ್ರಸಾರಾಂಗ: ಕರ್ನಾಟಕ ವಿಶ್ವವಿದ್ಯಾಲಯ: ಧಾರವಾಡ
27. ಹಿರೇಮಠ. ಆರ್. ಸಿ. : 1958: **ಪದ್ಮರಾಜ ಪುರಾಣ**: ಶ್ರೀಮೃತ್ಯುಂಜಯ ಮಹಾಸ್ವಾಮಿಗಳು, ಧಾರವಾಡ
28. ಹೆಂಡಿ. ಬಿ. ಬಿ. (ಸಂ) : 1973: **ಕೆರೆಯ ಪದ್ಮರಸನ ದೀಕ್ಷಾಬೋಧೆ,** ಪ್ರಸಾರಾಂಗ: ಕರ್ನಾಟಕ ವಿಶ್ವವಿದ್ಯಾಲಯ: ಧಾರವಾಡ

**ನಿಘಂಟುಗಳು**

01. ಗುಂಜಾಳ ಎಸ್ ಆರ್ ಮತ್ತು ಮಡಿವಾಳಸ್ವಾಮಿ: 1973 : **ಬಸವಣ್ಣನವರ ವಚನ ಪದಪ್ರಯೋಗ ಕೋಶ** ,ಅಕ್ಕಮಹಾದೇವಿಯ ಆಶ್ರಮ ,ಧಾರವಾಡ
02. ಚಕ್ರವರ್ತಿ.ಜಿ.ಎನ್. 2006: **ಸಂಸ್ಕೃತ –ಕನ್ನಡ ನಿಘಂಟು;** ಗೀತಾ ಬುಕ್ ಹೌಸ್, ಮೈಸೂರು
03. ನಾಗಭೂಷಣಸ್ವಾಮಿ ಓ ಎಲ್:1998(ಪರಿಷ್ಕೃತ) **ವಿಮರ್ಶೆಯ ಪರಿಭಾಷೆ:** ಅಂಕಿತ ಪ್ರಕಾಶನ: ಬೆಂಗಳೂರು

04. ನಾಗೇಗೌಡ ಎಚ್. ಎಲ್: 1998 **ಕನ್ನಡ ಜಾನಪದ ಕೋಶ:** ಕರ್ನಾಟಕ ಜಾನಪದ ಪರಿಷತ್ತು: ಬೆಂಗಳೂರು
05. ಬಸವರಾಧ್ಯ ಎನ್. 1976: **ಹಳಗನ್ನಡ ನಿಘಂಟು;** ಡಿ.ವಿ.ಕೆ ಮೂರ್ತಿ ಪ್ರಕಾಶಕರು, ಮೈಸೂರು
06. ಮಲ್ಲೇಪುರಂ ಜಿ.ವೆಂಕಟೇಶ್: 2000 : **ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ,** ಪ್ರಸಾರಾಂಗ : ಕನ್ನಡ ವಿಶ್ವವಿದ್ಯಾಲಯ: ಹಂಪಿ
07. ವಿಜಯಕುಮಾರ್ ಹ.ನಂ: 1982 : **ಅಲ್ಲಮನ ವಚನ ಪದಪ್ರಯೋಗ ಕೋಶ:** ಬೆಂಗಳೂರು ವಿಶ್ವವಿದ್ಯಾಲಯ: ಬೆಂಗಳೂರು
08. ವಿದ್ಯಾಶಂಕರ ಎಸ್: 1993: **ವಚನ ಪರಿಭಾಷಾಕೋಶ:** (ಸಮಗ್ರ ವಚನಸಾಹಿತ್ಯ ಸಂಪುಟಗಳ ಕೊನೆಯ ಅನುಬಂಧ ಸಂಪುಟ): ಕನ್ನಡ ಮತ್ತು ಸಂಸ್ಕೃತಿ ಇಲಾಖೆ: ಬೆಂಗಳೂರು
09. ವಿದ್ಯಾಶಂಕರ ಎಸ್: 2000: **ವೀರಶೈವ ಪಾರಿಭಾಷಿಕ ಕೋಶ:** ಬಸವ ಸಮಿತಿ: ಬೆಂಗಳೂರು
10. ವೆಂಕಟಾಚಲಶಾಸ್ತ್ರಿ ಟಿ.ವಿ: 2009 : **ಶ್ರೀವತ್ಸ ನಿಘಂಟು:** ಕನ್ನಡ ಪುಸ್ತಕ ಪ್ರಾಧಿಕಾರ: ಬೆಂಗಳೂರು
11. ವೆಂಕಟಾಚಲಶಾಸ್ತ್ರಿ ಟಿ.ವಿ: 2011 : **ಕನ್ನಡ ಛಂದಕೋಶ,** ಡಿವಿಕೆ ಮೂರ್ತಿ ಪ್ರಕಾಶನ: ಮೈಸೂರು
12. ಶಾಮರಾಯ ತ.ಸು. ಮತ್ತು ಪ.ನಾಗರಾಜಯ್ಯ: 1981: **ಜೈನ ಪರಿಭಾಷಾ ರತ್ನಕೋಶ,** ಕನ್ನಡ ಸಾಹಿತ್ಯ ಪರಿಷತ್ತು : ಬೆಂಗಳೂರು
13. ಶಿವರುದ್ರಪ್ಪ ಜಿ.ಎಸ್. ಮತ್ತು ಕೆ.ವಿ.ನಾರಾಯಣ: 1980 : **ಕಾವ್ಯಾರ್ಥ ಪದಕೋಶ:** ಪ್ರಸಾರಾಂಗ: ಬೆಂಗಳೂರು ವಿಶ್ವವಿದ್ಯಾಲಯ: ಬೆಂಗಳೂರು
14. ಸಂಗಮೇಶ ಸವದತ್ತಿಮಠ : 2009 : **ವರ್ಣನಾತ್ಮಕ ವಚನ ಪದಕೋಶ,** ರೂಪರಶ್ಮಿ ಪ್ರಕಾಶನ : ಧಾರವಾಡ

## ಸಾಹಿತ್ಯ ಚರಿತ್ರೆಗಳು

01. ನರಸಿಂಹಾಚಾರ್ಯ. ಆರ್: 1929: **ಕರ್ನಾಟಕ ಕವಿಚರಿತೆ (3ಸಂಪುಟಗಳು)**; ಕ.ಸಾ.ಪ, ಬೆಂಗಳೂರು
02. ನಾಯಕ ಹಾ. ಮಾ: (ಪ್ರ. ಸಂ), ವೆಂಕಟಾಚಲಶಾಸ್ತ್ರಿ ಟಿ. ವಿ. (ಸಂ): **ಕನ್ನಡ ಸಾಹಿತ್ಯ ಚರಿತ್ರೆ ಸಂಪುಟಗಳು:** ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು
03. ಮುಗಳಿ ರಂ. ಶ್ರೀ: 1971: **ಕನ್ನಡ ಸಾಹಿತ್ಯ ಚರಿತ್ರೆ:** ಉಷಾ ಸಾಹಿತ್ಯ ಮಾಲೆ: ಮೈಸೂರು
04. ಶಾಮರಾಯ ತ. ಸು: 1980: **ಕನ್ನಡ ಸಾಹಿತ್ಯ ಚರಿತ್ರೆ ಒಂದು ಸಮೀಕ್ಷೆ:** ಪುಸ್ತಕಾಲಯ ಪ್ರಕಾಶನ: ಮೈಸೂರು
05. ಶಿವರುದ್ರಪ್ಪ ಜಿ.ಎಸ್(ಸಂ): 1975: **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ:** ಬೆಂಗಳೂರು ವಿಶ್ವವಿದ್ಯಾಲಯ: ಬೆಂಗಳೂರು
06. ಶ್ರೀನಿವಾಸ ಅಯ್ಯಂಗಾರ್ ಎಂ. ಎನ್ : 1982: **ಸಂಸ್ಕೃತ ಕವಿ ಚರಿತ್ರೆ ಸಂಪುಟ 2:** ಸಂಸ್ಕೃತ ಕವಿತೆ ಪ್ರಕಾಶನ: ಬೆಂಗಳೂರು

## ಅಭಿನಂದನ ಗ್ರಂಥಗಳು

01. ಕೃಷ್ಣಮೂರ್ತಿ ಪಿ.ವಿ, ಸ್ಮಿತಾರೆಡ್ಡಿ. ಡಿ, ತಮಿಳ್ ಸೆಲ್ವಿ: 2010: **ಗುಣಮಧುರ** (ಡಾ. ದೇವರಕೊಂಡಾರೆಡ್ಡಿ ಅಭಿನಂದನ ಗ್ರಂಥ): ಡಾ. ದೇವರಕೊಂಡಾರೆಡ್ಡಿ ಅಭಿನಂದನ ಸಮಿತಿ: ಬೆಂಗಳೂರು
02. ಕೃಷ್ಣಮೂರ್ತಿ ಪಿ. ವಿ, ವಸಂತಲಕ್ಷ್ಮಿ ಕೋ: 2000: **ಸೂರ್ಯಕೀರ್ತಿ** (ಡಾ. ಸೂರ್ಯನಾಥ ಕಾಮತ್ ಅಭಿನಂದನ ಗ್ರಂಥ): ಡಾ. ಸೂರ್ಯನಾಥ ಕಾಮತ್ ಅಭಿನಂದನ ಸಮಿತಿ
03. ಗೋಪಾಲರಾವ್ ಎಚ್ ಎಸ್(ಸಂ): 1994: **ನಾಗಾಭಿನಂದನ** (ಎಂ.ಜಿ. ನಾಗರಾಜ್ ಅಭಿನಂದನ ಗ್ರಂಥ) ಎಂ.ಜಿ. ನಾಗರಾಜ್ ಅಭಿನಂದನ ಸಮಿತಿ: ಬೆಂಗಳೂರು

04. ಗೋಪಾಲರಾವ್ ಎಚ್ ಎಸ್ ಮತ್ತು ಶ್ರೀನಿವಾಸಮೂರ್ತಿ ಎಸ್ ಎಲ್ : 2018: **ವಿಶೇಷ:** (ಡಾ. ಆರ್ ಶೇಷಶಾಸ್ತ್ರಿ ಅಭಿನಂದನ ಸಂಪುಟ): ಡಾ. ಆರ್ ಶೇಷಶಾಸ್ತ್ರಿ ಅಭಿನಂದನ ಸಮಿತಿ: ಕುಪ್ಪಂ
05. ಗೋವರ್ಧನ ಸುಂಕಂ (ಸಂ): 2020: **ಅಕ್ಷರಮೇರು** (ಡಾ. ಪಿ.ವಿ.ಕೃಷ್ಣಮೂರ್ತಿ ಅಭಿನಂದನ ಗ್ರಂಥ): ಡಾ. ಪಿ.ವಿ.ಕೃಷ್ಣಮೂರ್ತಿ ಅಭಿನಂದನ ಸಮಿತಿ: ಬೆಂಗಳೂರು
06. ತೆಲಗಾವಿ ಲಕ್ಷ್ಮಣ (ಸಂ): 1991: **ಸಂಶೋಧನ:** (ಡಾ. ಎಂ. ಚಿದಾನಂದ ಮೂರ್ತಿ ಅಭಿನಂದನ ಗ್ರಂಥ): ಡಾ. ಡಾ. ಎಂ. ಚಿದಾನಂದ ಮೂರ್ತಿ ಅಭಿನಂದನ ಸಮಿತಿ: ಬೆಂಗಳೂರು
07. ತೆಲಗಾವಿ ಲಕ್ಷ್ಮಣ (ಸಂ): 1991: **ಹರತಿಸಿರಿ:** (ಹೆಚ್ ವಿ ಹರತಿ ನೆನಪಿನ ಸಂಪುಟ): ವಾಲ್ಮೀಕಿ ಸಾಹಿತ್ಯ ಸಂಪದ
08. ನಾಗೇಶ್ ಎಚ್. ವಿ: (ಪ್ರ.ಸಂ): 1996: **ಬರಹ ಬಾಗಿನ** (ಹಂ.ಪ.ನಾ ಷಷ್ಟ್ಯಬ್ದ ಗೌರವ ಗ್ರಂಥ) ಸಹನಾ ಪ್ರಕಾಶನ: ಶಿವಮೊಗ್ಗ:
09. ಭಾರತಿ ಬಿ ಆರ್, ಸುಂಕಂ ಗೋವರ್ಧನ, ದೇವರಾಜಸ್ವಾಮಿ: 2012: **ಕೈದಾಳ** (ಡಾ. ಕೆ.ಆರ್. ಗಣೇಶ ಅಭಿನಂದನ ಗ್ರಂಥ): ಡಾ. ಕೆ.ಆರ್. ಗಣೇಶ ಅಭಿನಂದನ ಸಮಿತಿ
10. ರಿತ್ತಿ ಶ್ರೀನಿವಾಸ, ಕೆ.ವಿ.ರಮೇಶ್: 1998: **ಸುದರ್ಶನ** (ಡಾ. ಬಾ.ರಾ. ಗೋಪಾಲ ಅಭಿನಂದನ ಗ್ರಂಥ) ಡಾ. ಬಾ.ರಾ. ಗೋಪಾಲ ಅಭಿನಂದನ ಸಮಿತಿ: ಧಾರವಾಡ

## ಆಕರ ಗ್ರಂಥಗಳು

01. ಅಣ್ಣಿಗೇರಿ ಎ ಎಂ, ಮೇವುಂಡಿ ಮಲ್ಲಾರಿ(ಸಂ): 1961: **ಶಾಸನ ಸಾಹಿತ್ಯ ಸಂಚಯ:** ಕರ್ನಾಟಕ ಸಂಶೋಧನಾ ಸಂಸ್ಥೆ : ಧಾರವಾಡ
02. ಅಣ್ಣಿಗೇರಿ ಎ ಎಂ, ಶೇಷಶಾಸ್ತ್ರಿ ಆರ್ (ಸಂ): 1961: **ಶಾಸನ ಸಂಗ್ರಹ** : ಕನ್ನಡ ಸಾಹಿತ್ಯ ಪರಿಷತ್ತು : ಬೆಂಗಳೂರು
03. ಎಲಿಗಾರ್ ಚೆನ್ನಕ್ಕ: 1990: **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ:** ಪ್ರಸಾರಾಂಗ: ಕರ್ನಾಟಕ ವಿಶ್ವವಿದ್ಯಾಲಯ: ಧಾರವಾಡ
04. ಎಲಿಗಾರ್ ಚೆನ್ನಕ್ಕ: 1987: **ಪ್ರಾಚೀನ ಕರ್ನಾಟಕದ ರಾಣಿಯರು:** ಚನ್ನಗಂಗಾ ಪ್ರಕಾಶನ: ಧಾರವಾಡ
05. ಕಪಟರಾಳ ಕೃಷ್ಣರಾವ್: 1955: **ಕರ್ನಾಟಕದ ಲಾಕುಳ ಶೈವರ ಇತಿಹಾಸ:** ಕರ್ನಾಟಕ ಇತಿಹಾಸ ಅಕಾಡೆಮಿ: ಧಾರವಾಡ
06. ಕರುಣಾ ವಿಜಯೇಂದ್ರ: 2008: **ಕರ್ನಾಟಕ ದೇವಾಲಯಗಳಲ್ಲಿ ರಂಗಭೋಗ:** ಭಾರತ ಇತಿಹಾಸ ಮಂಡಳ: ಧಾರವಾಡ
07. ಕಲಬುರ್ಗಿ ಎಂ ಎಂ: 1980: **ಸಮಾಧಿ ಬಲಿದಾನ ವೀರಮರಣ:** ಐ ಬಿ ಹೆಚ್ ಪ್ರಕಾಶನ: ಬೆಂಗಳೂರು
08. ಕಲ್ಲುಡಿ ಬಸವರಾಜ್: 1985: **ಮಹಾಸತಿ ಆಚರಣೆ ಒಂದು ಅಧ್ಯಯನ;** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ:
09. ಕಾಮತ್ ಜ್ಯೋತ್ಸ್ನಾ: 1988: **ಕರ್ನಾಟಕದ ಶಿಕ್ಷಣ ಪರಂಪರೆ:** ಮುಂಬೈ ವಿಶ್ವವಿದ್ಯಾಲಯ: ಮುಂಬೈ
10. ಕಾಮತ್ ಜ್ಯೋತ್ಸ್ನಾ: 2008: **ಕರುನಾಡಿನ ಜನಜೀವನ:** ಕರ್ನಾಟಕ ಇತಿಹಾಸ ಮಂಡಳ: ಧಾರವಾಡ
11. ಕಾಮತ್ ಜ್ಯೋತ್ಸ್ನಾ: 2008: **ಕೈಗನ್ನಡಿಯಲ್ಲಿ ಕನ್ನಡತಿ:** ಕರ್ನಾಟಕ ಇತಿಹಾಸ ಮಂಡಳ: ಧಾರವಾಡ
12. ಕಾಮತ್ ಸೂರ್ಯನಾಥ್: 1999:(ಪ.ಮು): **ಕರ್ನಾಟಕದ ಸಂಕ್ಷಿಪ್ತ ಇತಿಹಾಸ:** ಜೂಪಿಟರ್ ಬುಕ್ಸ್: ಬೆಂಗಳೂರು
13. ಕೃಷ್ಣಮೂರ್ತಿ.ಪಿ.ವಿ: 2011 : **ಶಾಸನ ಇತಿಹಾಸ ಮಂಥನ** ::ತುಮಕೂರು ವಿಶ್ವವಿದ್ಯಾಲಯ: ತುಮಕೂರು
14. ಕೃಷ್ಣಮೂರ್ತಿ.ಪಿ.ವಿ: 2011 : **ಶಾಸನ ಮಂಥನ** : ತುಮಕೂರು ವಿಶ್ವವಿದ್ಯಾಲಯ: ತುಮಕೂರು
15. ಕೃಷ್ಣಮೂರ್ತಿ.ಪಿ.ವಿ: 2019 (ಪರಿಷ್ಕೃತ) : **ತಮಿಳುನಾಡಿನ ಕನ್ನಡ ಶಾಸನಗಳು** : ಕನ್ನಡ ಸಾಹಿತ್ಯ ಪರಿಷತ್ತು: ಬೆಂಗಳೂರು
16. ಕೃಷ್ಣಶರ್ಮಾ ಬೆಟಗೇರಿ: 1971: **ಕರ್ನಾಟಕದ ಜನಜೀವನ:** ಸಮಾಜ ಪುಸ್ತಕಾಲಯ: ಧಾರವಾಡ

17. ಖಾದ್ರಿ ಎಸ್. ಅಚ್ಯುತನ್ (ಪ್ರ. ಸಂ): 2017: **ಶ್ರೀ ರಾಮಾನುಜ ಸಹಸ್ರಮಾನ ಸ್ಮರಣ ಸಂಚಿಕೆ:** ಶ್ರೀ ಯದುಗಿರಿ ಯತಿರಾಜ ಮಠ : ಮಲ್ಲೇಶ್ವರಂ : ಬೆಂಗಳೂರು.
18. ಗಣೇಶ್ ಕೆ ಆರ್: 1996: **ಆಂಧ್ರಪ್ರದೇಶದ ಕನ್ನಡ ಶಾಸನಗಳು–ಒಂದು ಅಧ್ಯಯನ:** ಕನ್ನಡ ಸಾಹಿತ್ಯ ಪರಿಷತ್ತು: ಬೆಂಗಳೂರು
19. ಗಣೇಶ ಕೈದಾಳ ರಾಮಸ್ವಾಮಿ: 2008: **ಶಾಸನ ಸರಸ್ವತಿ:** ಕರ್ನಾಟಕ ಇತಿಹಾಸ ಸಂಶೋಧನ ಮಂಡಳ: ಧಾರವಾಡ
20. ಗೀತಾಚಾರ್ಯ. ನಾ (ಸಂ): **ಹರಿದಾಸರು ಕಂಡ ರಾಮಾನುಜ ದರ್ಶನ :** ನಾರಾಯಣ ಶರ್ಮ ಸಂಸ್ಕೃತಿ ಕೇಂದ್ರ : ಬೆಂಗಳೂರು.
21. ಗೋಪಾಲ್. ಬಾ.ರಾ: 1984: **ಕರ್ನಾಟಕದಲ್ಲಿ ಶ್ರೀ ರಾಮಾನುಜಾಚಾರ್ಯರು** : ಮೈಸೂರು ವಿಶ್ವವಿದ್ಯಾನಿಲಯ: ಮೈಸೂರು
22. ಗೋಪಾಲ ರಾವ್ ಎಚ್. ಎಸ್: 2000: **ಚೆಂಗಾಳ್ವರು:** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ: ಹಂಪಿ
23. ಗೋಪಾಲ ರಾವ್ ಎಚ್ ಎಸ್: 2010: **ಇತಿಹಾಸ ಇಣುಕುನೋಟ** : ಪ್ರಶಾಂತ ಪ್ರಕಾಶನ: ಬೆಂಗಳೂರು
24. ಚಿದಾನಂದ ಮೂರ್ತಿ ಎಂ: 1979: **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ:** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ: ಮೈಸೂರು.
25. ಚಿದಾನಂದ ಮೂರ್ತಿ ಎಂ: 1984: **ಮಾಸ್ತಿಕಲ್ಲು ವೀರಗಲ್ಲು:** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ: ಬೆಂಗಳೂರು
26. ಚಿದಾನಂದಮೂರ್ತಿ ಎಂ (ಸಂ): 1975: **ನರಸಿಂಹಾಚಾರ್ಯ.ಆರ್ ಶಾಸನ ಪದ್ಯ ಮಂಜರಿ,** ಬೆಂಗಳೂರು
27. ಜಯಮ್ಮ ಕರಿಯಣ್ಣ: 2008: **ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ:** ಕರ್ನಾಟಕ ಇತಿಹಾಸ ಸಂಶೋಧನ ಮಂಡಳ: ಧಾರವಾಡ
28. ತರೀಕೆರೆ ರಹಮತ್:2004: **ಸಾಂಸ್ಕೃತಿಕ ಅಧ್ಯಯನ:** ಸಾಹಿತ್ಯ ಅಕಾಡೆಮಿ: ಬೆಂಗಳೂರು
29. ತೆಲಗಾವಿ ಲಕ್ಷ್ಮಣ ಮತ್ತು ಶ್ರೀನಿವಾಸ್ ಎಂ. ವಿ (ಸಂ); 1976: **ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು;** ಹುಲ್ಲೂರು ಶ್ರೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ ; ಚಿತ್ರದುರ್ಗ
30. ತೆಲಗಾವಿ ಲಕ್ಷ್ಮಣ ಮತ್ತು ಶ್ರೀನಿವಾಸ್ ಎಂ. ವಿ (ಸಂ) ; 1995 : **ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು** ಹುಲ್ಲೂರು ಶ್ರೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ ; ಚಿತ್ರದುರ್ಗ
31. ತೆಲಗಾವಿ ಲಕ್ಷ್ಮಣ : **ಶ್ರೀ ರಾಮಾನುಜ ಕೂಟಗಳು :** ಕನ್ನಡ ವಿಶ್ವವಿದ್ಯಾಲಯ : ಹಂಪಿ
32. ದೀಕ್ಷಿತ್, ಜಿ.ಎಸ್: 1970: **ಪ್ರಾಚೀನ ಕರ್ನಾಟಕದ ಶಿಕ್ಷಣ ಕ್ರಮ:** ಕರ್ನಾಟಕ ವಿಶ್ವವಿದ್ಯಾಲಯ: ಧಾರವಾಡ
33. ದೀಕ್ಷಿತ್.ಜಿ.ಎಸ್. ಮತ್ತಿತರರು: 2000: **ಕರ್ನಾಟಕದಲ್ಲಿ ಕೆರೆ ನೀರಾವರಿ,** ಕನ್ನಡ ವಿಶ್ವವಿದ್ಯಾಲಯ: ಹಂಪಿ
34. ದೇವದೇವನ್ ವಿ ಮನು: 2009: **ಪೃಥ್ವಿಯಲ್ಲೊದಗಿದ ಘಟವು ಕರ್ನಾಟಕದ ನೆನ್ನೆಗಳು**: ಅಕ್ಷರ ಪ್ರಕಾಶನ: ಹೆಗ್ಗೋಡು
35. ದೇವರಕೊಂಡಾರೆಡ್ಡಿ: **ಶ್ರವಣಬೆಳಗೊಳದ ಬಸದಿಗಳ ವಾಸ್ತುಶಿಲ್ಪ:** ಚಂದ್ರಗುಪ್ತ ಗ್ರಂಥಮಾಲೆ: ಶ್ರವಣಬೆಳಗೊಳ
36. ನಂಜುಂಡಸ್ವಾಮಿ ಎಸ್: 1998: **ಹೊಯ್ಸಳ ಇತಿಹಾಸ:** ಸಮಾಜ ಪುಸ್ತಕಾಲಯ: ಧಾರವಾಡ
37. ನರಸಿಂಹ ಮೂರ್ತಿ ಎ ವಿ: 2010: **ಕರ್ನಾಟಕದ ಸೇವುಣರ ಇತಿಹಾಸ:** ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ: ಮೈಸೂರು
38. ನರಸಿಂಹ ಮೂರ್ತಿ ಎ ವಿ: 2010: **ಕರ್ನಾಟಕ ಪುರಾತತ್ವ ಕೆಲವು ಅಧ್ಯಯನಗಳು:** ಪ್ರಸಾರಾಂಗ: ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ: ಮೈಸೂರು
39. ನಾಗರಾಜಯ್ಯ ಹಂ.ಪ: 1997: **ಚಂದ್ರಕೊಡೆ:** ಪ್ರಸಾರಾಂಗ : ಕನ್ನಡ ವಿಶ್ವವಿದ್ಯಾಲಯ: ಹಂಪಿ
40. ನಾಗರಾಜಯ್ಯ ಹಂ.ಪ: 1999: **ಯಾಪನೀಯ ಸಂಘ** : ಪ್ರಸಾರಾಂಗ : ಕನ್ನಡ ವಿಶ್ವವಿದ್ಯಾಲಯ: ಹಂಪಿ
41. ನಾಗರಾಜಯ್ಯ ಹಂ.ಪ ಮತ್ತು ಎಂ. ಜಿ. ಮಂಜುನಾಥ: 1997: **ಹೊಂಬುಜ ಶಾಸನಗಳು:** ಶ್ರೀ ಹೊಂಬುಜ ಜೈನಮಠ: ಹೊಂಬುಜ: ಹೊಸನಗರ ತಾಲ್ಲೂಕು: ಶಿವಮೊಗ್ಗ ಜಿಲ್ಲೆ
42. ನಾಗರಾಜು.ಎಚ್.ಎಂ ; 1999: **ವಿಜಯನಗರದ ಇಮ್ಮಡಿ ದೇವರಾಯ** ; ಸಂವಹನ ; ಮೈಸೂರು

43. ನಾಗೇಶ್ ಹಾ ವೆಂ: 1986: **ಭಾರತೀಯ ಗ್ರಾಮ:** ಕನ್ನಡ ಅಧ್ಯಯನ ಸಂಸ್ಥೆ: ಮೈಸೂರು ವಿಶ್ವವಿದ್ಯಾಲಯ: ಮೈಸೂರು
44. ನಾರಾಯಣ ಕೆ. ವಿ ಮತ್ತು ಕೃಷ್ಣಮೂರ್ತಿ ಬಿ: 1992: **ಅನ್ಯಜ್ಞಾನ ಶಿಸ್ತುಗಳ ಮೂಲಕ ಕನ್ನಡ ಸಾಹಿತ್ಯ:** ಕರ್ನಾಟಕ ಸಾಹಿತ್ಯ ಅಕಾಡೆಮಿ: ಬೆಂಗಳೂರು
45. ಪರಮಶಿವಮೂರ್ತಿ. ಡಿ.ವಿ: 1994: **ಶಾಸನ ಸಂಶೋಧನೆ:** ಗುಣನಿಧಿ ಪ್ರಕಾಶನ: ಬೆಂಗಳೂರು
46. ಪರಮಶಿವಮೂರ್ತಿ. ಡಿ.ವಿ : 1999: **ಕನ್ನಡ ಶಾಸನ ಶಿಲ್ಪ ,** ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ
47. ಪರಮಶಿವಮೂರ್ತಿ ಡಿ. ವಿ: 2010: **ಪೆಣ್ಬುಯ್ಯಲ್:** ಕನ್ನಡ ವಿಶ್ವವಿದ್ಯಾಲಯ : ಹಂಪಿ
48. ಪಾಟೀಲ್ ಭೋಜರಾಜ್ : 1995: **ನಾಗರಖಂಡ ಎಪ್ಪತ್ತು:** ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ: ಶ್ರೀ ಮುರುಘರಾಜೇಂದ್ರ ಮಠ: ಆನಂದಪುರ: ಶಿವಮೊಗ್ಗ ಜಿಲ್ಲೆ
49. ಪಾವಟೆ ಚೆನ್ನಕ್ಕ: 2008: **ಕರ್ನಾಟಕದ ಶಾಸನೋಕ್ತ ಮಹಿಳೆ ಸಮೀಕ್ಷೆ–ಸಂಸ್ಕೃತಿ:** ಭಾರತ ಇತಿಹಾಸ ಮಂಡಳ: ಧಾರವಾಡ
50. ಫಿಲಿಯೋಜಾ ವಸುಂಧರಾ: 1978: **ವಿಜಯನಗರ ಸಾಮ್ರಾಜ್ಯ ಸ್ಥಾಪನೆ:** ಕನ್ನಡ ಸಾಹಿತ್ಯ ಪರಿಷತ್: ಬೆಂಗಳೂರು
51. ಬ್ರಹ್ಮಪ್ಪ ಜಿ: 1988: **ಶ್ರವಣಬೆಳಗೊಳದ ಶಾಸನಗಳು:** ಚಂದ್ರಗುಪ್ತ ಗ್ರಂಥಮಾಲೆ: ಶ್ರವಣಬೆಳಗೊಳ
52. ಮಂಜುನಾಥ್. ಸಿ.ಯು ; 2016: **ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ ;** ಚಿತ್ಕಲಾ ಪ್ರಕಾಶನ: ಕುಪ್ಪಂ
53. ಮಹದೇವ ಸಿ: **ಕರ್ನಾಟಕ ಪುರಾತತ್ವ ಶೋಧ:** ಶ್ರೀಲಕ್ಷ್ಮಿ ಪ್ರಕಾಶನ: ಶ್ರೀರಂಗಪಟ್ಟಣ
54. ಮಹದೇವಸ್ವಾಮಿ ಕೆ ಎಂ: **ಹೊಯ್ಸಳರ ಕಾಲದ ಮುಖ್ಯ ನಗರ ಕೇಂದ್ರಗಳು ಮತ್ತು ನಗರೀಕರಣ:**
55. ಮೇವುಂಡಿ ಮಲ್ಲಾರಿ: 1974; **ಕನ್ನಡ ನಾಡಿನ ಶಾಸನ ಕವಿಗಳು,** ಧಾರವಾಡ
56. ಮೋಹನ ಕೃಷ್ಣ ರೈ: 2004: **ಪ್ರಭುತ್ವ ಮತ್ತು ಜನತೆ:** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ: ಹಂಪಿ
57. ಯಾಮುನಾಚಾರ್ಯ ಪ್ರೊ. : 1962: **ಆಚಾರ್ಯ ರಾಮಾನುಜರು:** ಮಿಂಚಿನಬಳ್ಳಿ ಕಾರ್ಯಾಲಯ : ಧಾರವಾಡ.
58. ಯೋಗೀಶ್ವರಪ್ಪ ಡಿ ಎನ್: 2012: **ಕಲ್ಪಶೋಧ(ತುಮಕೂರು ಜಿಲ್ಲೆಯ ಸಂಶೋಧನಾ ಲೇಖನಗಳು):** ಪ್ರಗತಿ ಗ್ರಾಫಿಕ್ಸ್ : ಬೆಂಗಳೂರು
59. ರಮೇಶ್ .ಕೆ.ವಿ ; 1968 : **ತುಳುನಾಡಿನ ಇತಿಹಾಸ ;** ಗೀತಾ ಬುಕ್ ಹೌಸ್ ;ಮೈಸೂರು
60. ರಾಗೌ: 2010(ದ್ವಿತೀಯ ಮುದ್ರಣ): **ಕನ್ನಡ ಸಾಹಿತ್ಯದಲ್ಲಿ ಐತಿಹಾಸಿಕ ವಿಚಾರಗಳು:** ಜಯಶ್ರೀ ಎಲೆಕ್ಟ್ರಿಕಲ್ಸ್ ಅಂಡ್ ಪಬ್ಲಿಷರ್ಸ್: ಮೈಸೂರು
61. ಲಕ್ಷ್ಮಣಗೌಡ ಮೇಕನಗದ್ದೆ(ಸಂ): 2004: **ಕೊಪ್ಪ ತಾಲ್ಲೂಕಿನ ಹೊಸ ಶಾಸನಗಳು:** ಓಣಿಮನೆ ಪ್ರಕಾಶನ: ಚಿಕ್ಕಮಗಳೂರು
62. ಲಲಿತಾಂಬ ಎನ್. ಆರ್: 2011: **ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ:** ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್: ಬೆಂಗಳೂರು
63. ವಸಂತಕುಮಾರ್ ಮಳಲಿ: 1996: **ಹೊಯ್ಸಳ ಸಂಪದ:** ಅಖಿಲ ಭಾರತ 65ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ: ಕನ್ನಡ ಸಾಹಿತ್ಯ ಪರಿಷತ್ತು: ಹಾಸನ
64. ವಸಂತಲಕ್ಷ್ಮಿ ಕೆ : 2006: **ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು:** ಸುಮುಖ ಪ್ರಕಾಶನ: ಬೆಂಗಳೂರು
65. ವಸುಂಧರಾ ಫಿಲಿಯೋಜಾ ; 1999: **ವಿಜಯನಗರ ಸಾಮ್ರಾಜ್ಯ ಸ್ಥಾಪನೆ ;** ಕನ್ನಡ ಸಾಹಿತ್ಯ ಪರಿಷತ್ತು ; ಬೆಂಗಳೂರು
66. ವಸುಂಧರಾ ಫಿಲಿಯೋಜಾ : 2003 : **ಕರ್ನಾಟಕದಲ್ಲಿ ಲಾಕುಳ ಶೈವ ಜಕ್ಕಣಾಚಾರ್ಯರು :** ಕನ್ನಡ ಸಂಶೋಧನಾ ಸಂಸ್ಥೆ : ಕರ್ನಾಟಕ ವಿಶ್ವವಿದ್ಯಾನಿಲಯ : ಧಾರವಾಡ
67. ವೀರಪ್ಪ ಎನ್ ಎಸ್: 1984: **ಭಾರತೀಯ ಶಿಕ್ಷಣದ ಇತಿಹಾಸ(ಕ್ರಿ.ಪೂ 800ರಿಂದ ಕ್ರಿ.ಶ. 1948):** ಪ್ರಸಾರಾಂಗ: ಮೈಸೂರು ವಿಶ್ವವಿದ್ಯಾಲಯ: ಮೈಸೂರು
68. ಶರ್ಮಾ ಕೆ.ಎಸ್: 1984: **ಮಾರ್ಕ್ಸ್ ಮತ್ತು ಮಾರ್ಕ್ಸ್‌ವಾದ:** ಪುರೋಗಾಮಿ ಸಾಹಿತ್ಯ ಪ್ರಕಾಶನ: ಬೆಂಗಳೂರು

69. ಶಂಕರನಾರಾಯಣರಾವ್ ಎಚ್ ಎಂ : 2016 : ಶ್ರೀ ಹರಿಹರ ದೇವಾಲಯ : ಪ್ರಕಾಶ ಸಾಹಿತ್ಯ : ಬೆಂಗಳೂರು
70. ಶಿವರುದ್ರಪ್ಪ ಜಿ ಎಸ್ (ಸಂ): 2004: **ಶ್ರವಣಬೆಳಗೊಳ, ಒಂದು ಸಮೀಕ್ಷೆ:** ಪ್ರಸಾರಾಂಗ: ಬೆಂಗಳೂರು ವಿಶ್ವವಿದ್ಯಾಲಯ: ಬೆಂಗಳೂರು
71. ಶ್ರೀಕಂಠಶಾಸ್ತ್ರಿ ಎಸ್: 1965: **ಹೊಯ್ಸಳ ವಾಸ್ತುಶಿಲ್ಪ:** ಪ್ರಸಾರಾಂಗ : ಮೈಸೂರು ವಿಶ್ವವಿದ್ಯಾನಿಲಯ: ಮೈಸೂರು
72. ಶ್ರೀಕಂಠಶಾಸ್ತ್ರಿ: 1956: **ಭಾರತೀಯ ಸಂಸ್ಕೃತಿ:** ಪ್ರಸಾರಾಂಗ : ಮೈಸೂರು ವಿಶ್ವವಿದ್ಯಾನಿಲಯ: ಮೈಸೂರು
73. ಶ್ರೀಧರ ಎಚ್ ಜಿ: 2002: **ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ:** ಶಿವರಾಮ ಕಾರಂತ ಅಧ್ಯಯನ ಕೇಂದ್ರ: ಪುತ್ತೂರು
74. ಶೆಟ್ಟರ್ ಷ: 1981: **ಶ್ರವಣಬೆಳಗೊಳ:** ರೂವಾರಿ ಪ್ರಕಾಶನ:ಧಾರವಾಡ
75. ಶೆಟ್ಟರ್.ಷ: (ಅನುವಾದ= ಸದಾನಂದ ಕನವಳ್ಳಿ): 2004: **ಸಾವಿಗೆ ಆಹ್ವಾನ:** ಕನ್ನಡ ಪುಸ್ತಕ ಪ್ರಾಧಿಕಾರ: ಬೆಂಗಳೂರು
76. ಶೇಠೆ ಎನ್: 1991: **ಕರ್ನಾಟಕದಲ್ಲಿ ಸತಿ ಪದ್ಧತಿ:** ವೀರಶೈವ ಅಧ್ಯಯನ ಅಕಾಡೆಮಿ: ನಾಗನೂರು ರುದ್ರಾಕ್ಷಿ ಮಠ: ಬೆಳಗಾವಿ
77. ಶೇಷಶಾಸ್ತ್ರಿ.ಆರ್: 1982: **ಕರ್ನಾಟಕದ ವೀರಗಲ್ಲುಗಳು:** ಕನ್ನಡ ಸಾಹಿತ್ಯ ಪರಿಷತ್ತು: ಬೆಂಗಳೂರು
78. ಸಕಲೇಶ ಮ : 2002: **ಹೊಯ್ಸಳೋದಯ ಸಂಶೋಧನ:** ಹಿಮಶೈಲ ಪ್ರಕಾಶನ: ಶಿವಮೊಗ್ಗ
79. ಸಬರದ ಬಿ :2003: **ಶಾಸನಗಳು : ಪ್ರಭುತ್ವ ಮತ್ತು ಜನತೆ:** ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ಹಂಪಿ
80. ಹರದಗಟ್ಟಿ ಎಸ್.ಎಂ: 1985: **ಕವಿರಾಘವಾಂಕ ಮತ್ತು ಅವನ ಕೃತಿಗಳು:** ಪ್ರಸಾರಾಂಗ : ಕರ್ನಾಟಕ ವಿಶ್ವವಿದ್ಯಾಲಯ : ಧಾರವಾಡ
81. ಹಿರೇಮಠ ಬಿ ಆರ್: 1986: **ಶಾಸನಗಳಲ್ಲಿ ಕರ್ನಾಟಕದ ವರ್ತಕರು:** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ: ಧಾರವಾಡ
82. ಹೆಗಡೆ ರಾಜಾರಾಮ: 2001: **ಲೌಕಿಕ–ಅಲೌಕಿಕ :** ಆನಂದಕಂದ ಗ್ರಂಥಮಾಲೆ: ಮಲ್ಲಾಡಿಹಳ್ಳಿ
83. ಹೆಗಡೆ ರಾಜಾರಾಮ: 2005: **ಗತ–ಕಥನ:** ಆನಂದಕಂದ ಗ್ರಂಥಮಾಲೆ: ಮಲ್ಲಾಡಿಹಳ್ಳಿ

## ಸಂಶೋಧನ ವಿದ್ವತ್ ಪತ್ರಿಕೆಗಳು

01. **ಕ್ಯೂ.ಜೆ.ಎಂ.ಎಸ್:** 1909ರಿಂದ 2009ರವರೆಗಿನ ಸಂಚಿಕೆಗಳು, ಮಿಥಿಕ್ ಸೊಸೈಟಿ : ಬೆಂಗಳೂರು
02. **ಕರ್ನಾಟಕ ಲೋಚನ :** ಸಂಪುಟ 28, 2014,ಬಿ.ಎಂ.ಶ್ರೀ ಪ್ರತಿಷ್ಠಾನ: ಬೆಂಗಳೂರು
03. **ಶಾಸನ ಅಧ್ಯಯನ :** ಸಂಪುಟ 1ರಿಂದ9 (2003–2012) ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ಹಂಪಿ
04. **ಚರಿತ್ರೆ ಅಧ್ಯಯನ :** ಸಂಪುಟ 1ರಿಂದ 10(2005–2018) ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ಹಂಪಿ
05. **ಸಮಾಜ ಅಧ್ಯಯನ :** ಸಂಪುಟ 1,2(2014–2015)ಪ್ರಸಾರಾಂಗ: ಕನ್ನಡ ವಿಶ್ವವಿದ್ಯಾಲಯ: ಹಂಪಿ
**06. ಇತಿಹಾಸ ದರ್ಪಣ :** ಪುಸ್ತಕ 1ರಿಂದ 41(2009–2019) ಸಂ, ರಾಜೇಶ್ ಹಂ. ಗು: ಇತಿಹಾಸ ದರ್ಪಣ ಪ್ರಕಾಶನ: ಬೆಂಗಳೂರು
07. **ಚಿಂತನ ಬಯಲು:** ಸಂಪುಟ 1ರಿಂದ 8(2012–2019)ಸಂ : ರೇಷ್ಮಾ ಜಿ ಭಟ್: ಚಿಂತನ ಬಯಲು ಪ್ರಕಾಶನ: ಮೊಡಂಕಾಪು: ದಕ್ಷಿಣ ಕನ್ನಡ
**08. ಸಾಧನೆ:** ಸಂಪುಟ 6,ಪ್ರಸಾರಾಂಗ : ಬೆಂಗಳೂರು ವಿಶ್ವವಿದ್ಯಾಲಯ: ಬೆಂಗಳೂರು
09. **ಶೋಧ:** ಸಂಪುಟ 4ರಿಂದ 7(2015–2018)ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು: ಉಜಿರೆ

(ಈ ಮೇಲ್ಕಂಡ ಸಂಶೋಧನ ವಿದ್ವತ್ ಪತ್ರಿಕೆಗಳ ಎಲ್ಲ ಸಂಚಿಕೆಗಳನ್ನು ಅಧ್ಯಯನ ಸಂದರ್ಭದಲ್ಲಿ ಗಮನಿಸಲಾಗಿದೆ.)

# ಸ್ಥಳೀಯ ಸಾಹಿತ್ಯ - ಸಂಸ್ಕೃತಿ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಲೇಶ್ವರರು

**ಪಿಎಚ್.ಡಿ ಪದವಿಗಾಗಿ ತುಮಕೂರು ವಿಶ್ವವಿದ್ಯಾನಿಲಯದ**

**ಡಾ.ಡಿ.ವಿ.ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ**


ಸಂಶೋಧನೆ
ಎಸ್. ಗಂಗಾಂಬಿಕೆ
ನೋಂದಣಿ ಸಂಖ್ಯೆ
15 ಕೆಎ 006

ಮಾರ್ಗದರ್ಶನ
ಡಾ. ಡಿ. ವಿ. ಪರಮಶಿವಮೂರ್ತಿ
ಪ್ರಾಧ್ಯಾಪಕರು






ಡಾ.ಡಿ.ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರ ಮತ್ತು ಸಂಶೋಧನಾ ಕೇಂದ್ರ

ಕಲಾನಿಕಾಯ

ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು

2020

# ಅಧ್ಯಾಯ 8

## ಸಮಾರೋಪ ಮತ್ತು ಸಂಶೋಧನ ಫಲಿತಗಳು

"ಸ್ಥಳೀಯ ಸಾಹಿತ್ಯ –ಸಂಸ್ಕೃತಿ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು" ಎಂಬ ಪ್ರಕೃತ ಪಿಎಚ್.ಡಿ ಮಹಾಪ್ರಬಂಧವು ಅತ್ಯಂತ ಗಂಭೀರವಾಗಿ ಹೊಯ್ಸಳ ಮಹಾಮಂಡಲೇಶ್ವರರು ತಾವು ಆಳಿದ ಪ್ರದೇಶಗಳಲ್ಲಿ ಹೇಗೆ ಸ್ಥಳೀಯವಾಗಿ ಸಂಸ್ಕೃತಿಯನ್ನು ಕಟ್ಟಿದರು ಮತ್ತು ಬೆಳೆಸಿದರು ಹಾಗೂ ಸಮಕಾಲೀನ ಸಮಾಜದ ಗತಿಬಿಂಬವಾಗಿ ಸಾಹಿತ್ಯವನ್ನು ಪ್ರೋತ್ಸಾಹಿಸಿದರು ಎಂಬುದನ್ನು ವಿಶ್ಲೇಷಣಾತ್ಮಕವಾಗಿ ಅಧ್ಯಯನವನ್ನು ಒಳಗೊಂಡಿದೆ.

ಸಾಮಾನ್ಯವಾಗಿ ಕನ್ನಡ ಸಂಶೋಧನೆಗಳು ಇದುವರೆಗೂ ಹೊಯ್ಸಳ ಅರಸರನ್ನು, ಹೊಯ್ಸಳ ವಾಸ್ತುಶಿಲ್ಪವನ್ನು ಕುರಿತು ಚಿಂತಿಸಿದಷ್ಟು ಅರಸರ ನಂತರದ ಅಧಿಕಾರಿ ವರ್ಗದವರಾದ ಮಹಾಮಂಡಳೇಶ್ವರರು, ದಂಡನಾಯಕರು, ಅಧಿಕಾರಿಗಳ ಬಗ್ಗೆ ಹೆಚ್ಚು ತಲೆ ಕೆಡೆಸಿಕೊಂಡಿರಲಿಲ್ಲ. ಸಾಮಾನ್ಯವಾಗಿ ಅರಸೊತ್ತಿಗೆಯನ್ನು ವಿರೋಧಿಸುವ ಎಡಪಂಥೀಯ ಚಿಂತಕರೂ ಸಹ ಸಾಮಾಜಿಕ ಅಧ್ಯಯನಗಳಿಗೆ ಆದ್ಯತೆಯನ್ನು ನೀಡಿದರಾದರೂ ಈ ಸಾಮಾಜಿಕತೆಯನ್ನು ರೂಪಿಸಿದ ಬಹಳ ಮುಖ್ಯವಾದ ಅರಸರಿಗೂ ಪ್ರಜೆಗಳಿಗೂ ನಡುವಿನ ಕೊಂಡಿಯಂತಿದ್ದ ಈ ಅಧಿಕಾರಿ ವರ್ಗವನ್ನ ಕಡೆಗಣಿಸಿತ್ತು. ಪ್ರಾಸಂಗಿಕವಾದ ಉಲ್ಲೇಖಗಳನ್ನು ಹೊರತುಪಡಿಸಿದರೆ ಹೊಯ್ಸಳ ಮಹಾಮಂಡಳೇಶ್ವರರ ಬಗ್ಗೆ ಸಮಗ್ರವಾದ ಅಧ್ಯಯನವು ಇದುವರೆಗೂ ನಡೆದಿರಲಿಲ್ಲ. ಆ ಕೊರತೆಯನ್ನು ಲಭ್ಯವಾದ ಎಲ್ಲಾ ಆಕರಗಳನ್ನು ಸಮಗ್ರವಾಗಿ ಉಪಯೋಗಿಸಿಕೊಂಡು ನಡೆಸಿದ ಪ್ರಾಮಾಣಿಕವಾದ ಸಂಶೋಧನೆ ಇದಾಗಿದೆ ಎನ್ನುವುದು ಈ ನಿಬಂಧದ ಹೆಚ್ಚುಗಾರಿಕೆಯಗಿದೆ ಎಂದು ವಿನಮ್ರತೆಯಿಂದ ಹೇಳದೇ ವಿಧಿಯಿಲ್ಲ,

ಇನ್ನೊಂದು ಮುಖ್ಯವಾದ ವಿಷಯವೆಂದರೆ ಬಹುತೇಕ ನಿಬಂಧಗಳು ಈಗಾಗಲೇ ನಡೆಸಲಾಗಿರುವ ಅಧ್ಯಯನಗಳನ್ನು ಅಂದರೆ ಆನುಷಂಗಿಕ ಆಕರಗಳು ಅಥವಾ ದ್ವಿತೀಯ ಆಕರಗಳನ್ನು ಕೇಂದ್ರವಾಗಿ ಇಟ್ಟುಕೊಂಡು ನಡೆಸುವ ಅಧ್ಯಯನಗಳಾಗಿರುವ ಈ ಹೊತ್ತಿನಲ್ಲಿ ಪ್ರಮುಖವಾದ ಮೂಲ ಆಕರಗಳನ್ನು ಇಟ್ಟುಕೊಂಡು ನಡೆಸಿರುವ ಅಧ್ಯಯನ ಇದಾಗಿದೆ. ಇಲ್ಲಿ ಮೂಲತಃ ಶಾಸನಗಳ ಮೂಲಪತ್ಯಗಳೊಂದಿಗೆ ಪ್ರಸ್ತುತ ನಿಬಂಧವು ಅನುಸಂಧಾನ ನಡೆಸಿರುವುದರಲ್ಲಿ ಯಾವುದೇ ಅನುಮಾನಗಳಿಲ್ಲ. ಶಾಸನಗಳೊಂದಿಗೆ ಆ ಕಾಲದ ಬಹಳ ಮುಖ್ಯವಾದ ಸಾಹಿತ್ಯ ಕೃತಿಗಳಲ್ಲಿರುವ ಅಂಶಗಳತ್ತಲೂ ಗಮನ ಸೆಳೆಯಲಾಗಿದೆ. ಆದ್ದರಿಂದ ಇಲ್ಲಿ ಶಾಸನಗಳನ್ನು ಸಾಹಿತ್ಯಕೃತಿಗಳನ್ನು ಪ್ರಧಾನ ಆಕರಗಳನ್ನಾಗಿ ಪ್ರಾಮಾಣಿಕವಾಗಿ ಬಳಸಿಕೊಳ್ಳುವುದರ ಮೂಲಕ ಹೊಯ್ಸಳ ಸಾಮ್ರಾಜ್ಯದ ಅವಧಿಯಲ್ಲಿ ನಿಜವಾಗಿಯೂ ಸಾಂಸ್ಕೃತಿಕ ಸಂವರ್ಧನೆಯನ್ನು ಮಾಡಿದವರು ಅರಸರು ಮಾತ್ರವೇ ಅಲ್ಲ; ಆಡಳಿತಾಧಿಕಾರಿಗಳಾದ ಈ ಮಹಾಮಂಡಳೇಶ್ವರರು ಎಂಬುದನ್ನು ಅನಾವರಣಗೊಳಿಸಲಾಗಿದೆ.

ಈ ನಿಬಂಧದ ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ ಮತ್ತು ಆಕರಗಳು ಎಂಬುದಾಗಿದ್ದು ಸಾಮಾನ್ಯವಾಗಿ ಈ ನಿಬಂಧದ ಅಧ್ಯಯನದ ಉದ್ದೇಶವನ್ನು ಈ ನಿಬಂಧವು ಪಡೆದುಕೊಳ್ಳುವ ಸ್ವರೂಪವನ್ನು ಹಾಗೂ ವ್ಯಾಪ್ತಿಯನ್ನು ಒಳಗೊಂಡಿದೆ. ಈ ನಿಬಂಧದ ಉದ್ದೇಶವು ಕನ್ನಡ ನಾಡಿನ 10ರಿಂದ 12ನೆಯ ಶತಮಾನದ ಇತಿಹಾಸವೆಂದರೆ ಕೇವಲ ಅರಸರ ಇತಿಹಾಸವಲ್ಲ. ಬದಲಿಗೆ ಅವರ ಅಧೀನ ಅಧಿಕಾರಿಗಳಾದ ಮಹಾಮಂಡಳೇಶ್ವರರ ಇತಿಹಾಸವೇ ಹೇಗೆ ಆಗಿತ್ತು ಎಂದು ಸೋದಾಹರಣವಾಗಿ ಉದಾಹರಿಸುವುದೇ ಆಗಿತ್ತು. ವ್ಯಾಪ್ತಿಯಂತೂ ಕೇವಲ ಹೊಯ್ಸಳ ಶಾಸನಗಳಿಗೆ ಸೀಮಿತವಾಗಿದ್ದರೂ ಪ್ರಾಸಂಗಿಕವಾಗಿ ಹೊಯ್ಸಳ ಮಹಾಮಂಡಳೇಶ್ವರರ ಬಗ್ಗೆ ಮಾಹಿತಿ ಒದಗಿಸುವ ಕಲ್ಯಾಣದ ಚಾಲುಕ್ಯರು, ಚೋಳರು, ಕಳಚುರಿಗಳು, ಸೇಉಣರು, ಸಾಂತರರು ಮುಂತಾದ ಅರಸುಮನೆತನಗಳ ಶಾಸನಗಳನ್ನು ಕೂಡ ಬಳಸಿಕೊಳ್ಳಲಾಗಿದೆ. ಹಾಗೂ ಅವರ ಬಗ್ಗೆ ನಡೆದಿರುವ ಅಧ್ಯಯನಗಳನ್ನು ಕೂಡ ಗಮನಿಸಲಾಗಿದೆ.

ಇನ್ನು ಎರಡನೆಯ ಅಧ್ಯಾಯವು ಮೊದಲನೆಯ ಅಧ್ಯಾಯದ ಮುಂದುವರೆದ ಅಂಶಗಳನ್ನು ವಿವೇಚಿಸಿವೆ. ಇದು ಅಧ್ಯಯನದ ವೈಧಾನಿಕತೆ ಹಾಗೂ ಈವರೆಗಿನ ಅಧ್ಯಯನಗಳ ಸಮೀಕ್ಷೆಯನ್ನು ಕುರಿತದ್ದಾಗಿದೆ. ಇದರಲ್ಲಿ ಪ್ರಸ್ತುತ ಸಂಶೋಧನೆಯನ್ನು ಸಾಹಿತ್ಯ ಸಂಶೋಧನೆಯ ವಿಧಾನದಲ್ಲಿ ರೂಪುಗೊಂಡಿದೆ ಎಂದು ತಿಳಿಸುತ್ತದೆ. ಹಾಗೂ ಇದುವರೆಗೆ ಈ ಕ್ಷೇತ್ರದಲ್ಲಿ ನಡೆದಿರುವ ಅಧ್ಯಯನಗಳನ್ನು ಇಲ್ಲಿ ಪರಿಚಯಿಸಲಾಗಿದೆ.

ಮೂರನೆಯ ಅಧ್ಯಾಯವು "ಸ್ಥಳೀಯ ಆಡಳಿತದ ಸುಭಗತೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು" ಆಗಿದ್ದು ಈ ಅಧ್ಯಾಯದಲ್ಲಿ ಮಹಾಂಡಳೇಶ್ವರರ ರಾಜಕೀಯ ಚರಿತ್ರೆಯನ್ನು ಕಟಿಕೊಡಲಾಗಿದೆ. ಇಡೀ ನಿಬಂಧದಲ್ಲಿ ಮತ್ತೆ ಮತ್ತೆ ಮಹಾಮಂಡಳೇಶ್ವರರ ವಿವಿಧ ರೀತಿಯ ಕೊಡುಗೆಗಳನ್ನು ಕಟ್ಟಿಕೊಡುವಾಗ ಗೊಂದಲಗಳು ಆಗಬಾರದು ಎಂಬ ಉದ್ದೇಶದಿಂದ ಮಹಾಮಂಡಳೇಶ್ವರರ ಸಂಪೂರ್ಣವಾದ ಇತಿವೃತ್ತವನ್ನು ಸಂಕ್ಷಿಪ್ತವಾಗಿ ಕಟ್ಟಿಕೊಡಲಾಗಿದೆ.

ನಾಲ್ಕನೆಯ ಅಧ್ಯಾಯವು ಈ ನಿಬಂಧದ ಅತ್ಯಂತ ಮುಖ್ಯವಾದ ಅಧ್ಯಾಯವಾಗಿದೆ. ಇತಿಹಾಸ ಮತ್ತು ಸಾಹಿತ್ಯದ ಸಹಸಂಬಂಧವನ್ನು ಇಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. "ಕನ್ನಡ ಭಾಷೆ, ಸಾಹಿತ್ಯ ಸಂವರ್ಧನೆ ಮತ್ತು ಹೊಯ್ಸಳ ಮಹಾಮಂಡಳೇಶ್ವರರು" ಎಂಬ ಅಧ್ಯಾಯದಲ್ಲಿ ಈ ನಿಬಂಧದ ಬಹಳ ಮುಖ್ಯವಾದ ಸಾಹಿತ್ಯ ಮತ್ತು ಸ್ಥಳೀಯ ಸಾಹಿತ್ಯದ ಬಹಳ ಮುಖ್ಯವಾದ ವಿಷಯಗಳನ್ನು ಪ್ರಸ್ತಾಪಿಸಲಾಗಿದೆ. ಬಹಳ ಮುಖ್ಯವಾಗಿ ಹೊಯ್ಸಳ ಮಹಾಮಂಡಳೇಶ್ವರರ ಕಾಲದ ಶಾಸನ ಲಿಪಿಯನ್ನು ಕುರಿತು ಖಚಿತವಾದ ಗುಣಲಕ್ಷಣಗಳನ್ನು ಗುರುತಿಸಲಾಗಿದೆ. ಹೊಯ್ಸಳ ಮಹಾಮಂಡಳೇಶ್ವರರ

ಪೋಷಣೆಯಲ್ಲಿ ಸಾಹಿತ್ಯವನ್ನು ರಚಿಸಿದ ಕವಿಗಳಾದ ರುದ್ರಭಟ್ಟನ ಜಗನ್ನಾಥ ವಿಜಯ, ರಾಜಾದಿತ್ಯನ ವ್ಯವಹಾರ ಗಣಿತ, ಆಚಣ್ಣನ ವರ್ಧಮಾನ ಪುರಾಣ, ಜನ್ನ ಕವಿಯ  ಕೃತಿಗಳಾದ ಅನಂತನಾಥ ಪುರಾಣ, ಯಶೋಧರ ಚರಿತೆ, ಕೆರೆಯ ಪದ್ಮರಸನ ದೀಕ್ಷಾಭೋದೆ, ಪದ್ಮಣಾಂಕನ ಪದ್ಮರಾಜ ಪುರಾಣಂ, ನೇಮಿಚಂದ್ರನ ಲೀಲಾವತಿ ಹಾಗೂ ನೇಮಿನಾಥ ಪುರಾಣ ಮುಂತಾದ ಕಾವ್ಯಗಳು ಕಟ್ಟಿಕೊಡುವ ಸಾಮಾಜಿಕ ವಿಷಯಗಳನ್ನು ಮುನ್ನಲೆಗೆ ತರಲಾಗಿದೆ. ಹೊಯ್ಸಳ ಮಹಾಮಂಡಳೇಶ್ವರರು ಸಂವರ್ಧಿಸಿದ ಶಾಸನಕವಿಗಳು ಎಂಬ ಭಾಗದಲ್ಲಿ ಶಾಸನ ಕವಿಗಳನ್ನು ಕುರಿತು ಮತ್ತು ಅವರ ವ್ಯತ್ಪತ್ತಿ ಪ್ರತಿಭೆಯನ್ನು ಚರ್ಚಿಸಲಾಗಿದೆ. ಸಾಹಿತ್ಯವೆಂದರೆ ಕೇವಲ ಶಾಸ್ತ್ರಕೃತಿಗಳಷ್ಟೇ ಅಲ್ಲದೇ ಶಾಸನ ಸಾಹಿತ್ಯವೂ ಹೊಯ್ಸಳ ಮಹಾಮಂಡಳೇಶ್ವರರಿಂದ ಪ್ರವರ್ಧಮಾನಕ್ಕೆ ಬಂದಿತು. ಹಲವಾರು ಶಾಸನ ಕವಿಗಳನ್ನು ಪೋಷಿಸಿದ್ದು ಕೂಡ ಈ ಕಾಳದ ಬಹಳ ಮುಖ್ಯವಾದ ಸಾಧನೆಯಾಗಿದೆ.

ಐದನೆಯ "ಕುಶಲಕಲೆಗಳ ಅಭಿವೃದ್ಧಿ ಮತ್ತು ಸ್ಥಳೀಯ ಆರ್ಥಿಕ ಸಂವರ್ಧನೆ" ಎಂಬ ಅಧ್ಯಾಯವು ಮಹಾಮಂಡಳೇಶ್ವರರು ಯಾವ ರೀತಿ ವ್ಯಾಪಾರ ವ್ಯವಹಾರಗಳಿಗೆ ಬೆಂಬಲವಾಗಿ ನಿಂತರು ಎಂಬುದನ್ನು ತಿಳಿಸುತ್ತದೆ. ಬಹಳ ಮುಖ್ಯವಾಗಿ ಕೃಷಿಯೇತರ ಭೂಮಿಗಳ ಪರಿವರ್ತನಾ ಪ್ರಕ್ರಿಯೆಗಳು, ತೆರಿಗೆಯ ಸ್ವರೂಪ, ಭೂಮಾಲೀಕತ್ವ ಮತ್ತು ಕೃಷಿ ಕಾರ್ಮಿಕರು, ಉತ್ಪಾದನಾ ಸಂವರ್ಧನೆ, ಊಳಿಗಮಾನ್ಯತೆ, ಸಾಮಂತ ಅರಸರ ಪ್ರಾಬಲ್ಯ, ರಾಜಕೀಯ ಪ್ರೇರಿತ ನೂತನ ಸಂಬಂಧಗಳು, ಭೂದಾನಗಳು, ನಗರೀಕರಣದ ಮುನ್ನುಡಿ, ವರ್ತಕರು ಮತ್ತು ವರ್ತಕ ಸಂಘಗಳು, ಕೈಗಾರಿಕೆಯ ವಿಷಯಗಳನ್ನು ಚರ್ಚಿಸಲಾಗಿದೆ.

ಆರನೆಯ ಅಧ್ಯಾಯವು ವಿಶಿಷ್ಟವಾದ ಅಧ್ಯಯನವಾಗಿದೆ. ಯಾಕೆಂದರೆ ಬಹುತೇಕ ಇದುವರೆಗೆ ಸಾಮಾಜಿಕ ಸಂಕಥನವು ಬಹುತೇಕ ಸಾಂಸ್ಕೃತಿಕ ಹಿನ್ನೆಲೆಯಿಂದಲೇ ನೋಡಲಾಗುತ್ತಿತ್ತು. ಆದರೆ ಇದೇ ಮೊದಲ ಬಾರಿಗೆ ಶಾಸನ ಶಾಸ್ತ್ರ ವಿಷಯದ ಆಧಾರದ ಮೇಲೆ ನಿರ್ಮಾಣವಾಗಿರುವ ನಿಬಂಧವೊಂದರಲ್ಲಿ ಸಮಾಜಶಾಸ್ತ್ರೀಯ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಸಾಮಾಜಿಕ ಸಂಗತಿಗಳನ್ನು ಗಮನಿಸಿರುವುದು ವಿಶಿಷ್ಟವೆನಿಸುತ್ತದೆ. ಈ ಅಧ್ಯಾಯದ ಶೀರ್ಷಿಕೆ "ಜನಸಮುದಾಯಗಳ ಅಭ್ಯುದಯ ಮತ್ತು ಸ್ಥಳೀಯ ನವಸಮಾಜದ ಮಹಾ ಕನಸುಗಳು" ಈ ಅಧ್ಯಾಯದಲ್ಲಿ 5 ಉಪಶೀರ್ಷಿಕೆಗಳನ್ನು ಪ್ರಧಾನವಾಗಿ ಮುನ್ನಲೆಗ ತರಲಾಗಿದೆ. ಅದರಲ್ಲಿ ಸಮಾಜ ರಚನೆಯನ್ನು ರೂಪಿಸಿದ ಲಕ್ಷಣಗಳು, ಸಮುದಾಯ–ಸಾಮುದಾಯಿಕ ಮೂಲಾಂಶಗಳು, ಸಾಮಾಜಿಕ ಅಂತಃಕ್ರಿಯೆ, ಸಾಮಾಜಿಕ ನಿಯಂತ್ರಣ, ಸಮಾಜದ ಪ್ರಭಾವಳಿ –ಸಂಸ್ಕೃತಿ ಪರಿಸೂಚಿ ಎಂಬ ಬಹುಮುಖ್ಯವಾದ ಸಾಮಾಜಿಕ ಪರಿಭಾಷೆಗಳ ಮೂಲಕ ವಿಶಿಷ್ಟವಾಗಿ ಸಮಾಜವನ್ನು ಚರ್ಚಿಸಲಾಗಿದೆ.

ಸಮಾಜ ರಚನೆಯನ್ನು ರೂಪಿಸಿದ ಲಕ್ಷಣಗಳಲ್ಲಿ ಮುಖ್ಯವಾಗಿ ಅಂತಃಸಂಬಂಧಗಳು, ಹೋಲಿಕೆ ಅಥವಾ ಸಾಮ್ಯತೆಯ ಮೇಲಿನ ಅವಲಂಬನೆ, ಭಿನ್ನತೆ ಮತ್ತು ವ್ಯತ್ಯಾಸ, ಶ್ರಮವಿಭಜನೆ ಎಂಬ ವಿಚಾರಗಳನ್ನು ಸೋದಾಹರಣವಾಗಿ ವಿವೇಚಿಸಲಾಗಿದೆ

ಸಮಾಜಶಾಸ್ತ್ರೀಯ ಪರಿಭಾಷೆಗಳಲ್ಲಿ ಸಮುದಾಯ–ಸಾಮುದಾಯಿಕ ಮೂಲಾಂಶಗಳು ಎನ್ನುವುದಕ್ಕೆ ವಿಶೇಷವಾದ ಮರ್ಯಾದೆಯಿದೆ. ಇದನ್ನು ಇಲ್ಲಿ ವಿವೇಚನಾಪೂರ್ಣವಾಗಿ ಉಪಯೋಗಿಸಲಾಗಿದೆ. ಇದರಲ್ಲಿ ಮುಖ್ಯ ಮೂಲಾಂಶವಾಗಿ ಸ್ಥಾನೀಯತೆ, ಸಾಪೇಕ್ಷ ಶಾಶ್ವತತೆ ಅಥವಾ ಸ್ಥಿರತೆ, ಸಂಘ, ಸಂಸ್ಥೆಗಳನ್ನು ಚರ್ಚಿಸಲಾಗಿದೆ. ಈ ಸಂಸ್ಥೆ ಎನ್ನುವುದು ಸಮಾಜಶಾಸ್ತ್ರದಲ್ಲಿ ವಿಶೇಷವಾದದ್ದು. ಇದರಲ್ಲಿ ವರ್ಣವ್ಯವಸ್ಥೆ, ಕುಲಕಟ್ಟಳೆಗಳು, ವಿಶಿಷ್ಟವಾದ ಕುಲಗಳು, ಕುಲಕೇಂದ್ರಿತ ನಿರ್ಮಿತಿಗಳು ಕುಟುಂಬ : ಅನೌಪಚಾರಿಕ ನಿಯೋಗಿಯಾಗಿ ಕುಟುಂಬ : ಸ್ತ್ರೀಯರು: ಸ್ಥಳೀಯ ಸಮಾಜದಲ್ಲಿನ ಅಸ್ಮಿತೆಯ ಆಯಾಮಗಳು, ನಾಯಕತ್ವ ಮತ್ತು ಸಾಮಾಜಿಕ ಅಸ್ಮಿತೆಯ ಕಾರ್ಯ ಕಾರಣಗಳು, ಮಹಾಮಂಡಳೇಶ್ವರರ ಮಡದಿಯರ ಆಡಳಿತ ಮತ್ತು ಅದರ ಸಾಮಾಜಿಕ ಪರಿಣಾಮಗಳು, ಮಹಿಳೆಯರ ಆತ್ಮಬಲದ ವಿಶಿಷ್ಟ ಮಾದರಿಗಳು, ಸೂಳೆಯರು : ಸ್ಥಳೀಯ ಸಮಾಜದ ಪ್ರಭಾವಿಗಳು, ಕುಟುಂಬದ ಆಸ್ತಿಯ ವ್ಯವಸ್ಥಿತ ನಿರ್ವಹಣೆ ಮತ್ತು ಸ್ಥಳೀಯ ವಿನಿಯೋಗ, ಔಪಚಾರಿಕ ನಿಯೋಗಿಯಾಗಿ ಶಿಕ್ಷಣ : ಸ್ಥಳೀಯ ಸಮಾಜ ಮೌಲ್ಯ ಗಳನ್ನು ಸಂವರ್ಧಿಸಿದ ಸಾಂಸ್ಥಿಕತೆ, ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳು, ಮಠಗಳು, ದೇವಾಲಯಗಳು, ಅನೌಪಚಾರಿಕ ಶಿಕ್ಷಣ ಧಾರ್ಮಿಕ ಶಿಕ್ಷಣ, ಸಾಮೂಹಿಕ ಶಿಕ್ಷಣ, ಶಾರೀರಿಕಶಿಕ್ಷಣ, ಶೈಕ್ಷಣಿಕ ಸಾಧನಗಳು

ಸಾಮಾಜಿಕ ಅಂತಃಕ್ರಿಯೆಯಲ್ಲಿ ಸಾಮಾಜಿಕ ಅಂತಃಕ್ರಿಯೆಯ ಮೂಲಾಂಶಗಳು: ಸಂಪರ್ಕ ಮತ್ತು ಸಮೂಹ ಮತ್ತು ಸಾಮಾಜಿಕ ಪ್ರಕ್ರಿಯೆ ಎಂಬ ಎರಡು ಉಪಘಟಕಗಳ ಅಡಿಯಲ್ಲಿ ವಿಶಿಷ್ಟವಾಗಿ ಚರ್ಚಿಸಲಾಗಿದೆ.ಸಾಮಾಜಿಕ ಪ್ರಕ್ರಿಯೆಯಲ್ಲಿ ಸಹಕಾರ, ಸ್ಪರ್ಧೆ, ಸಂಘರ್ಷ, ಹೊಂದಾಣಿಕೆ, ಸ್ವಾಂಗೀಕರಣ:

ಸಾಮಾಜಿಕ ನಿಯಂತ್ರಣ ಎಂಬ ಉಪಶೀರ್ಷಿಕೆಯಲ್ಲಿ ಸ್ಥಳೀಯ ಸಮಾಜದಲ್ಲಿನ ನಿಯಂತ್ರಣ ಪ್ರಕ್ರಿಯೆ ಮತ್ತು ಸಾಮಾಜಿಕ ಅನುವರ್ತನೆ, ಸಮಾಜದ ಪ್ರಭಾವಳಿ –ಸಂಸ್ಕೃತಿ ಪರಿಸೂಚಿಯಲ್ಲಿ ಮುಖ್ಯವಾಗಿ ಮೂರು ಪರಿಭಾಷೆಗಳನ್ನು ಚರ್ಚಿಸಲಾಗಿದೆ. ಅವುಗಳೆಂದರೆ ಭೌತ ಸಂಸ್ಕೃತಿ –ಸಾಮಾಜಿಕ ಅಸ್ಮಿತೆ ಮತ್ತು ಸ್ಥಳೀಯ ಸಾಮುದಾಯಿಕ ನಿರ್ಮಿತಿಗಳು, ಅಭೌತ ಸಂಸ್ಕೃತಿ, ಭೌತ ಮತ್ತು ಅಭೌತ ಸಂಸ್ಕೃತಿಗಳ ಸಮ್ಮಿಲನ : ಮರಣಪದ್ದತಿಗಳು

ಕರ್ನಾಟಕದ ಬಹುತೇಕ ಸ್ಥಳೀಯ ಅಧ್ಯಯನಗಳಲ್ಲಿ ವೀರ ಹಾಗೂ ಮಾಸ್ತಿ ಪರಂಪರೆಗೆ ವಿಶೇಷ ಒತ್ತನ್ನು ಕೊಟ್ಟು ಗಮನಿಸಿ ಬರಲಾಗುತ್ತಿದೆ. ಆದರೆ ಪ್ರಸ್ತುತ ನಿಬಂಧದಲ್ಲಿ ಇದನ್ನು ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ಗಮನಿಸಲಾಗಿದೆ. ವೀರ ಪರಂಪರೆಯಲ್ಲಿ ಬಲಿದಾನ ಮರಣ ಪದ್ದತಿ

ಮತ್ತು ವೀರಗಲ್ಲುಗಳನ್ನು ಕುರಿತು ಚರ್ಚಿಸಿದ್ದು ಇದೇ ಮೊದಲ ಬಾರಿಗೆ ಗರುಡಪದ್ದತಿಯನ್ನು ಕುರಿತು ಕೆಲವು ಹೊಸ ಸಂಗತಿಗಳನ್ನು ಹೇಳಲಾಗಿದೆ. ಹಾಗೂ ಊರಳಿವು, ತುರುಗೋಳ್, ಪೆಣ್ಬುಯ್ಯಲ್, ಸತಿ ಸಹಗಮನ ಪದ್ದತಿ ಮತ್ತು ಮಾಸ್ತಿಕಲ್ಲುಗಳು, ಸಮಾಧಿ ಮರಣ ಮೊದಲಾದ ಮರಣ ಪದ್ದತಿಗಳನ್ನು ಸ್ಥೂಲವಾಗಿಯೂ ಮತ್ತು ಸೂಕ್ಷ್ಮವಾಗಿಯೂ ವಿವೇಚಿಸಲಾಗಿದೆ.

ಕಡೆಯದಾದ ಏಳನೆಯ ಅಧ್ಯಾಯವು **"ಯುಗಪ್ರವರ್ತಕ ಸಾಂಸ್ಥಿಕ ಪರಿಷ್ಕರಣೆಗಳು ಮತ್ತು ಧಾರ್ಮಿಕ ಸಂವರ್ಧನೆ"** ಎಂಬ ಅಧ್ಯಾಯವು ಬಹತೇಕ ಇನ್ನಿತರ ನಿಬಂಧಗಳಂತೆ ಕೇವಲ ಧಾರ್ಮಿಕ ವಿವರಗಳನ್ನು ಮಾತ್ರ ಒದಗಿಸದೇ ಬೌದ್ಧ ಧರ್ಮ, ಜೈನಧರ್ಮ, ಶೈವಧರ್ಮ ಮತ್ತು ಅದರೊಳಗೆ ಪಾಶುಪತ–ಲಕುಳೀಶ ಪಂಥ, ಕಾಪಾಲಿಕ ಪಂಥ, ಕಾಳಾಮುಖ ಪಂಥಗಳನ್ನು , ವೈಷ್ಣವ ಧರ್ಮದ ಒಳಗೆ ವೈಷ್ಣವ ಧರ್ಮ, ರಾಮಾನುಜ ಪಂಥ ಅಥವಾ ಶ್ರೀವೈಷ್ಣವಮತ, ರಾಮಾನುಜ ಪಂಥವೆಂಬ ಶ್ರೀವೈಷ್ಣವ ಧರ್ಮಗಳನ್ನು ಚರ್ಚಿಸುತ್ತಲೇ ಬಹಳ ವಿಶಿಷ್ಟವಾದ ಹಲವಾರು ಸಂಗತಿಗಳಿರುವ ಧಾರ್ಮಿಕ ಪ್ರಭುತ್ವದ ಬಗ್ಗೆ ಚರ್ಚಿಸಲಾಗಿದೆ. ಧಾರ್ಮಿಕ ಪ್ರಭುತ್ವದಲ್ಲಿ ದೇಗುಲ ನಿರ್ಮಾಣ ಪ್ರಕ್ರಿಯೆಗಳು, ದೇಗುಲ ನಿರ್ವಹಣೆ, ಸ್ಮಾರಕಗಳು ಮೂಲಕ ಸ್ಥಳೀಯ ಸಂವರ್ಧನೆಗಳನ್ನು ಚರ್ಚಿಸಲಾಗಿದೆ.

ಇಡೀ ಅಧ್ಯಯನದಿಂದ ಕಂಡುಕೊಂಡ ಫಲಿತಗಳು ಅನನ್ಯವಾದವು. ಹಾಗೇ ನೋಡಿದರೆ ಅಧ್ಯಯನವೇ ಒಂದು ವಿಶೇಷ ಸಂಶೋಧನಾ ಫಲಿತವಾಗಿದೆ. ಜೊತೆಗೆ ಇನ್ನು ಹತ್ತು ಹಲವು ಪ್ರಖರವಾದ ಫಲಿತಗಳನ್ನು ಈ ಕೆಳಕಂಡಂತೆ ದಾಖಲಿಸಬಹುದು–

- ✓ ಈಗಾಗಲೇ ನಮ್ಮಲ್ಲಿ ಎರಡು ಮಾದರಿಯ ಅಧ್ಯಯನಗಳು ಚಲಾವಣೆಯಲ್ಲಿ ಇದ್ದವು. ಒಂದು ವ್ಯವಸ್ಥಿತವಾದ ಆಕರಗಳ ಮೂಲಮಾತೃಕೆಗಳನ್ನು ಜೋಡಿಸಿ ಕೇವಲ ಅಂಕಿ–ಅಂಶಗಳನ್ನು ಡೇಟಾ ಮಾದರಿಯಲ್ಲಿ ಒದಗಿಸುವುದು. ಹಾಗೂ ಅರಸೊತ್ತಿಗೆಯನ್ನು ಒಪ್ಪಿಕೊಂಡು ಎಲ್ಲಾ ರೀತಿಯ ಪ್ರಗತಿಯನ್ನೂ ರಾಜತ್ವದ ಹಿನ್ನೆಲೆಯಲ್ಲಿಯೇ ಗಮನಿಸುವ ಕ್ರಮ ಒಂದಾದರೆ, ಇನ್ನೊಂದು ಎಡಪಂಥೀಯ ನಿಲುವಿನಲ್ಲಿ ಅರಸೊತ್ತಿಗೆಯನ್ನು ನಿರಾಕರಿಸುವ ಸಾಮಾಜಿಕ ಆಯಾಮಗಳ ಅಧ್ಯಯನಗಳು. ಈ ಎರಡೂ ಅತಿಗಳಿಗೆ ಪ್ರಸ್ತುತ ಅಧ್ಯಯನವು ಹೊರತಾಗಿದ್ದು ಎಂದು ಖಚಿತವಾಗಿ ಮತ್ತು ಗಟ್ಟಿಯಾಗಿ ಸಾಧಿಸುತ್ತಿದ್ದೇನೆ.
- ✓ ಅಂದು ವಿಶಾಲ ಕನ್ನಡ ನಾಡಿನಲ್ಲಿ ( ಅಂದರೆ ಇಂದಿನ ತಮಿಳುನಾಡು, ಆಂದ್ರಪ್ರದೇಶ, ತೆಲಂಗಾಣದ ಬಹುಭಾಗಗಳನ್ನು ಒಳಗೊಂಡ ಕನ್ನಡ ಪ್ರದೇಶಗಳು)ಅಧಿಪತ್ಯ ಸಾಧಿಸಿಕೊಂಡಿದ್ದ ಹೊಯ್ಸಳ ಸಾಮ್ರಾಜ್ಯದಾದ್ಯಂತ ಆಯಕಟ್ಟಿನ ಪ್ರದೇಶಗಳನ್ನು ಮತ್ತು ಅದರೊಂದಿಗೆ ಹೊಂದಿಕೊಂಡಂತಿದ್ದ ವ್ಯಾಪಾರಿ ಮಾರ್ಗಗಳನ್ನು ಹಿಡಿತದಲ್ಲಿಟ್ಟುಕೊಂಡಿದ್ದ ಹೊಯ್ಸಳ ಮಹಾಮಂಡಳೇಶ್ವರರೆಂಬ ಆಡಳಿತಾಧಿಕಾರಿಗಳ 600ಕ್ಕೂ ಹೆಚ್ಚು ಶಾಸನಗಳನ್ನು ಮತ್ತು ಅವರ ಆಶ್ರಯದಲ್ಲಿದ್ದ ಕವಿಗಳ ಹಾಗೂ ಸ್ವತಃ ಮಹಾಮಂಡಳೇಶ್ವರರೇ ವಿರಚಿಸಿದ ಸಾಹಿತ್ಯಕೃತಿಗಳನ್ನು

ಒಂದು ಕಡೆ ಕಲೆಹಾಕಿ ಸೂಕ್ಷ್ಮವಾದ ಅಧ್ಯಯನಕ್ಕೆ ಒಳಗುಮಾಡಲಾಗಿದೆ. ಈ ಬಗೆಯ ಅಧ್ಯಯನ ಕ್ರಮವು ಹಿಡಿಯಾಗಿ ಹೊಯ್ಸಳ ಮಹಾಮಂಡಳೇಶ್ವರರ ಸಾಂಸ್ಕೃತಿಕ ಸಂವರ್ಧನೆಯಲ್ಲಿ ಅವರ ಪ್ರಾಮುಖ್ಯತೆಯನ್ನು ಮತ್ತು ಅವರ ಅನನ್ಯತೆಯನ್ನು ಎತ್ತಿಹಿಡಿಯುವಲ್ಲಿ ಸಹಕಾರಿಯಾಗಿದೆ.

✓ ಸೋಮಯದಂಡನಾಯಕ, ಮಾಧವದಂಡನಾಯಕ, ಬೈಚಯದಂಡನಾಯಕ, ಗೋವಿದೇವ, ಗಂಗರಾಜ, ಕಾಮಯ್ಯದಂಡನಾಯಕ ಮೊದಲಾದ ಸೇನಾಧಿಪತಿಗಳು ಮಹಾಪ್ರಧಾನಿ, ಮಹಾಪಸಾಯತ, ಸಂಧಿವಿಗ್ರಹಿ, ಮಹಾಮಂಡಳೇಶ್ವರರೂ ಆಗಿ ಕಾಲಕ್ರಮದಲ್ಲಿ ಪದೋನ್ನತಿಯನ್ನು ಪಡೆದಿರುವುದನ್ನು ಆಧಾರಸಹಿತವಾಗಿ ದಾಖಲಿಸಲಾಗಿದೆ. ಜೊತೆಗೆ ಒಬ್ಬೊಬ್ಬ ಮಹಾಮಂಡಳೇಶ್ವರನು ಹೊಯ್ಸಳರ ವೈರಿಬಲವನ್ನು ಮಟ್ಟ ಹಾಕಿ ಆಳರಸನ ಘನತೆ, ಗೌರವ, ಸಾರ್ವಭೌಮತ್ವಗಳ ರಕ್ಷಣೆಯಲ್ಲಿ ಮಹೋನ್ನತ ಸಾಧನೆ ಮಾಡಿತೋರಿಸಿರುವನ್ನು ಈ ಅಧ್ಯಯನದಲ್ಲಿ ನಿಚ್ಚಳಗೊಳಿಸಲಾಗಿದೆ.

✓ ಪ್ರತಿಯೊಬ್ಬ ಮಹಾಮಂಡಳೇಶ್ವರರ ವಂಶಾವಳಿಯನ್ನೂ ಆದಷ್ಟೂ ಲಭ್ಯ ಶಾಸನಗಳ ಆಧಾರದಿಂದ ಸಮಗ್ರ ಎನ್ನಿಸುವಷ್ಟರ ಮಟ್ಟಿಗೆ ವಿಸ್ತಿರಿಸಿ ನೀಡಲಾಗಿದೆ. ಇದರಿಂದ ಆ ವಂಶೀಯರ ಸಮಗ್ರ ಸಾಧನೆಗಳು ಒಂದೆಡೆ ಲಭ್ಯವಾಗುವಂತೆ ನೋಡಿಕೊಳ್ಳಲಾಗಿದೆ.

✓ ಹೊಯ್ಸಳ ಮಹಾಮಂಡಳೇಶ್ವರರ ಕೆಲವು ಮನೆತನದವರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ನಂತರವೂ ಆ ವಂಶೀಯರು ಆಡಳಿತದಲ್ಲಿ ಮುಂದುವರೆದಿರುವುದನ್ನು ಇದೇ ಮೊದಲ ಬಾರಿಗೆ ಗುರುತಿಸಲಾಗಿದೆ. ಉದಾಹರಣೆಗೆ ಮೊದಲನೆಯ ಬೈಚಯ ದಂಡನಾಯಕನು ಹೊಯ್ಸಳ ದೊರೆ ಮೂರನೇ ಬಲ್ಲಾಳನ ಕೈಕೆಳಗಿನ ಅಧಿಕಾರಿಯಾಗಿದ್ದವನು ನಂತರ ಅವನು ಮತ್ತು ಅವನ ಮಗನಾದ ಮೊದಲನೇ ಇರುಗಪ್ಪ ದಂಡನಾಯಕನು ಸಂಗಮ ದೊರೆಗಳ ಜೊತೆ ಇದೇ ಪದವಿಯಲ್ಲಿ ಮುಂದುವರೆದ ವಿಷಯ ಮುನ್ನಲೆಗೆ ಬಂದಿದೆ,

✓ ಹೊಯ್ಸಳ ಮಹಾಸಾಮಂತನಾಗಿದ್ದ ಗೋವಿದೇವ ಮತ್ತು ಅವನ ವಂಶೀಯರು ರಾಜಕೀಯವಾಗಿ ಹೇಗೆ ವರ್ಗವಾಗುವುದರ ಮೂಲಕ ಸಧೃಢವಾದ ಮಹಾಮಂಡಲಗಳನ್ನು ಹೇಗೆ ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಿದ್ದರು ಎಂದು ಇಲ್ಲಿ ಗುರುತಿಸಲಾಗಿದೆ.

✓ ಹಿಂದಿನಿಂದಲೂ ಗಂಗರ ಕಾಲದಿಂದ ಮುನ್ನಲೆಯಲ್ಲದ್ದ ಮಗರೆ ನಾಡು ಹೊಯ್ಸಳ ಮಹಾಮಂಡಳೇಶ್ವರರ ಸಾಂಸ್ಕೃತಿಕ ಸಾಧನೆಯಿಂದ ಹೇಗೆ ಪ್ರವರ್ಧಮಾನಕ್ಕೆ ಬಂದಿತು ಎಂದು ವಿವರಿಸಲಾಗಿದೆ.

✓ ಮಹಾಕವಿಗಳಿಗೆ ಪೋಷಣೆಯನ್ನು ಒದಗಿಸುವುದು ಕೇವಲ ಚಕ್ರವರ್ತಿಗಳ ಹಿರಿಮೆ ಎಂದು ಇದುವರೆಗೂ ಅಧ್ಯಯನ ಪ್ರಪಂಚ ಭಾವಿಸಿದಂತಿತ್ತು. ಆದರೆ ಇದೇ ಮೊದಲ ಬಾರಿಗೆ ಹಲವು ಕವಿಗಳಿಗೆ ಪ್ರೋತ್ಸಾಹವನ್ನು ನೀಡಿದ್ದು ಚಕ್ರವರ್ತಿಗಳು ಮಾತ್ರವೇ ಅಲ್ಲ ಮಹಾಮಂಡಳೇಶ್ವರರೂ ಈ

ಕೆಲಸವನ್ನು ಅಧ್ಭುತವಾಗಿ ಮಾಡಿದ್ದಾರೆ ಎಂಬುದನ್ನು ಉದಾಹರಣೆಗಳ ಮೂಲಕ ಇಲ್ಲಿ ಸಾಧಿಸಲಾಗಿದೆ.

✓ ನಾಡಿನ ಲಿಪಿಯ ವಿನ್ಯಾಸದಲ್ಲಿ ನಡೆಯಲಾಗುತ್ತಿದ್ದ ಬೆಳವಣಿಗೆಗಳನ್ನು ಆಳರಸರ ತಲೆಗೆ ಕಟ್ಟಲಾಗುತ್ತಿತ್ತು. ಆದರೆ ಆಳರಸರ ಪರವಾಗಿ ಶಾಸನಗಳನ್ನು ಹಾಕಿಸುತ್ತಿದ್ದವರು ಅಧೀನ ಅಧಿಕಾರಿಗಳೇ ಆಗಿದ್ದುದರಿಂದ ಲಿಪಿಯ ಬೆಳವಣಿಗೆಯಲ್ಲೂ ಹಾಗೂ ಲಿಪಿಯ ಸ್ಥಿರೀಕರಣದಲ್ಲೂ ಯಾವ ರೀತಿ ಮಹಾಮಂಡಳೇಶ್ವರರು ತೊಡಗಿಸಿಕೊಂಡಿದ್ದರು ಎಂದು ಇದೇ ಮೊದಲ ಬಾರಿಗೆ ಗುರುತಿಸಲಾಗಿದೆ.

✓ 'ಜಗನ್ನಾಥವಿಜಯ'ದ ಕರ್ತೃವೂ, ಕವಿಶ್ರೇಷ್ಠರಲ್ಲೊಬ್ಬನಾದ ರುದ್ರಭಟ್ಟನು ಹೊಯ್ಸಳ ಅರಸ ವೀರಬಲ್ಲಾಳನ ಕಾಲದಲ್ಲಿದ್ದು ಅವನ ಆಸ್ಥಾನಕವಿಗಳಲ್ಲೊಬ್ಬನಾದ ನೇಮಿಚಂದ್ರನ ಸಮಕಾಲೀನನಾಗಿದ್ದನು ಎಂದೇ ಇದುವರೆಗೂ ನಂಬಿಕೊಂಡು ಬರಲಾಗಿತ್ತು. ಆದರೆ ರುದ್ರಭಟ್ಟನು ತನ್ನ ಕೃತಿಯನ್ನು ಕುರಿತು "ಚಂದ್ರಮೌಳಿಪ್ರಮುಖನಿಖಿಲವದ್ವಜ್ಜನಂ ಮೆಚ್ಚೆ ಪೇಳ್ದೆಂ" ಎಂದು ಹೇಳಿಕೊಂಡಿರುವುದನ್ನು ಚರ್ಚಿಸಿ ಹೊಯ್ಸಳ ವೀರಬಲ್ಲಾಳನ ಮಂತ್ರಿಯಾಗಿದ್ದ ಚಂದ್ರಮೌಳಿ ದಂಡನಾಯಕನ ಪ್ರೋತ್ಸಾಹದಿಂದಲೇ ರುದ್ರಭಟ್ಟನು ಜಗನ್ನಾಥ ವಿಜಯವನ್ನು ಬರೆದನು ಎಂಬುದನ್ನು ಇಲ್ಲಿ ಮುನ್ನಲೆಗೆ ತರಲಾಗಿದೆ. ಇದಕ್ಕೆ ಪೋಷಕವಾಗಿ ೧೧೮೧ರಲ್ಲಿ ಬರೆಯಲ್ಪಟ್ಟ ಶ್ರವಣಬೆಳ್ಗೊಳದ ೩೨೭ನೆಯ ಶಾಸನವನ್ನೂ ಸಹ ಆಧರಿಸಲಾಗಿದೆ

✓ ವಿಷ್ಣುವರ್ಧನ ಅರಸನನ್ನು ಅನೇಕ ಬಾರಿ ಸ್ತುತಿಸುವ ಕನ್ನಡದ ಮೊಟ್ಟಮೊದಲ ಗಣಿತಶಾಸ್ತ್ರಜ್ಞನಾದ ರಾಜಾದಿತ್ಯನಿಗೆ ಆಶ್ರಯವನ್ನು ನೀಡಿದವರು ವಿಷ್ಣುವರ್ಧನನ ಅಧೀನವಾಗಿ ಮಹಾಮಂಡಳೇಶ್ವರರಾಗಿದ್ದ ಭರತಿಮಯ್ಯ ಹಾಗು ಬಾಹುಬಲಿ ದಂಡನಾಯಕರು ಎಂಬುದನ್ನು ತಿಳಿಸಲಾಗಿದೆ.

✓ ಆಚಣ್ಣನು ತನ್ನ ವರ್ಧಮಾನ ಪುರಾಣದಲ್ಲಿ ತನ್ನ ವಿಭುವಾದ ರೇಚಣನನ್ನು ಮನಸಾರೆ ಹಾಡಿ ಹೊಗಳಿರುವನು. ರೇಚಣನಿಗೆ ರೆಚಿಮಯ್ಯ, ರೇಚರಸ, ರೇಚಚಮೂಪತಿ ಎಂದು ಕರೆಯಲಾಗುತ್ತಿತ್ತು. ಈತನನ್ನು ಜಿನೇಂದ್ರಮತಾಮ ಬ್ಜಭಾನು ಪುಣ್ಯಾಕರಂ, ಅರ್ಥಿಕಲ್ಪತರು, ಭೋಗಪುರಂದರಂ, ಭೀಕರ ವೈರವಾರಣ ವದಾರಣಕೇಸರಿ ಎಂದು ಮೊದಲಾಗಿ ಹೊಗಳಿರುವನು. ರೇಚಣನು ಕಲಚೂರ್ಯ ಆಹವಮಲ್ಲ (೧೧೮೦–೧೧೮೩)ನ ಲಕ್ಷಣ, ರೇಚಣ, ಚಂದಣ, ಸೋವಣ, ಕಾವಣ ಎಂಬ ಐದು ಪ್ರಖ್ಯಾತ ಮಂತ್ರಿಗಳಲ್ಲೊಬ್ಬನಾಗಿರುವನು. ಹೊಯ್ಸಳ ವೀರಬಲ್ಲಾಳನು ಕಲಚುರ್ಯರ ರಾಜ್ಯವನ್ನು ವಶಪಡಿಸಿಕೊಂಡ ನಂತರ ರೇಚಣನು ಹೊಯ್ಸಳ ಅರಸರ ಆಶ್ರಯವನ್ನು ಪಡೆದಂತೆ ತೋರುವುದು. ರೇಚರಸನು ಕ್ರಿ.ಶ ೧೨೨೦ರಲ್ಲಿ ದಕ್ಷಿಣದ ಐಹೊಳೆಯೆಂದು ಪ್ರಸಿದ್ದಿಯನ್ನು ಪಡೆದ ಅರಸಿಕೆರೆಯಲ್ಲಿ ಸಹಸ್ರಕೂಟ ಜಿನಾಲಯವನ್ನು ಕಟ್ಟಿಸಿ ಅದಕ್ಕೆ ಹೊಯ್ಸಳ ದೊರೆಯಾದ ಬಲ್ಲಾಳನ ಅನುಮತಿಯಂತೆ ದತ್ತಿಯನ್ನು ನೀಡಿದುದಾಗಿ

ಶಾಸನದಿಂದ ತಿಳಿಯುವುದು.[೩೬] ಅಲ್ಲದೆ ಶ್ರವಣಬೆಳಗೊಳದಿಂದ ಅನತಿದೂರದಲ್ಲಿರುವ ಜಿನನಾಥಪುರದಲ್ಲಿರುವ ಶಾಂತಿನಾಥ ಜಿನನ ವಿಗ್ರಹವನ್ನು ಪ್ರತಿಷ್ಠಾಪಿಸಿದುದಾಗಿ ತಿಳಿದುಬರುವುದು. ಇದೆಲ್ಲವನ್ನೂ ಪರಿಗಣಿಸಿ ಹಿಂದೆ ಕಲಚುರ್ಯರ ಆಶ್ರಯದಲ್ಲಿದ್ದ ಆಚಣ್ಣನನ್ನು ಹೊಯ್ಸಳರು ಕಲಚುರ್ಯರನ್ನು ಗೆದ್ದನಂತರ ರೇಚರಸ ದಂಡನಾಯಕರ ಅಧೀನದಲ್ಲಿದ್ದನು ನಂತರವೇ ಆತನು ವರ್ಧಮಾನ ಪುರಾಣವನ್ನು ಬರೆದನು ಎಂದು ಪ್ರಸ್ತುತ ಪ್ರಬಂಧದಲ್ಲಿ ಪ್ರತಿಪಾದಿಸಲಾಗಿದೆ.

✓ ಹೊಯ್ಸಳ ಮಹಾಮಂಡಳೇಶ್ವರರ ಪೋಷಣೆಯಲ್ಲಿದ್ದ ಕವಿಗಳನ್ನು ಮತ್ತು ಕೃತಿಗಳನ್ನು ಚರ್ಚಿಸುತ್ತಲೇ ಹಲವು ಸ್ಥಳೀಯ ಸಂಗತಿಗಳನ್ನು ಸಾಧಾರವಾಗಿ ಮುನ್ನಲೆಗೆ ತರಲಾಗಿದೆ.

✓ ಮಧ್ಯಕಾಲೀನ ಕರ್ನಾಟಕದಲ್ಲಿ ಒಂದೆಡೆ ಶೈವ–ವೀರಶೈವ ಪರಂಪರೆಗಳು, ಮತ್ತೊಂದೆಡೆ ಭಕ್ತಿಪಂಥದ ಮೇಲ್ಮೈ, ಮಗದೊಂದೆಡೆ ವೈಷ್ಣವ ಸಂಪ್ರದಾಯದ ಪ್ರಚುರತೆ, ಇನ್ನೊಂದೆಡೆ ಮಹಾರಾಷ್ಟ್ರದ ವಾರಕರಿ ಸಂಪ್ರದಾಯದ ಬೆಳವಣಿಗೆ –ಹೀಗೆ ನಾನಾ ರೀತಿಯಲ್ಲಿ ಸಾಂಸ್ಕೃತಿಕತೆಯು ಮೇಳೈಸಿದ್ದಿತು. ಇಂಥ ಚಾರಿತ್ರಿಕ ಕಾಲಘಟ್ಟದಲ್ಲಿ ಕನ್ನಡ, ತಮಿಳು, ತೆಲುಗು ಭಾಷೆಗಳಲ್ಲಿ ಸೃಜನಶೀಲ ಬರವಣಿಗೆಗಳು ಹೆಚ್ಚಾಗಿದ್ದವು. ಈ ಎಲ್ಲ ಸಂದಿಗ್ಧತೆಗಳ ನಡುವೆ ಇರುಗಪ್ಪ ದಂಡನಾಯಕನು ಒಂದು ನಿಘಂಟನ್ನು ಸಂಸ್ಕೃತದಲ್ಲಿ ಬರೆಯುವುದರ ಕಾರಣವೇನು? ಸೃಜನೇತರ ಬರಹವಾದ ನಿಘಂಟನ್ನು ಬರೆಯುವ ಮೂಲಕ ವಿಶೇಷ ಅಸ್ಮಿತೆಯನ್ನು ಮತ್ತು ಸೃಜನಶೀಲ ಬರಹಗಳಿಗೆ ಸಹಾಯವಾಗಲಿ ಎಂಬ ಸದುದ್ದೇಶವನ್ನು ಆತ ಸಾಧಿಸಲು ಈ ನಿಘಂಟನ್ನು ಬರೆದಿರಬಹುದು. ಎಂದು ಮೊದಲಬಾರಿಗೆ ಇಲ್ಲಿ ಪರಿಚಯಿಸಲಾಗಿದೆ. ಹಾಗೂ ಇರುಗಪ್ಪದಂಡನಾಯಕನ "ನಾನಾರ್ಥ ರತ್ನಮಾಲಾ" ಎಂಬ ನಿಘಂಟು ಸಂಸ್ಕೃತದಲ್ಲಿದ್ದರೂ ಕನ್ನಡ ಪರಿಸರಕ್ಕೆ ಅತ್ಯಂತ ಉಪಯೋಗಿ ನಿಘಂಟೆಂದು ಇಲ್ಲಿ ನಿರೂಪಿಸಲಾಗಿದೆ.

✓ ಶಾಸನಕವಿಗಳ ಬಗ್ಗೆ ಹೇಳುವಾಗ ಇದುವರೆಗೂ ಯಾರೂ ಗುರುತಿಸಲಾಗದ ಒಂದು ಅಂಶದ ಕಡೆ ನನ್ನ ಗಮನವನ್ನು ಕೇಂದ್ರೀಕರಿಸಿದ್ದೇನೆ. ಕವಿಗಳು ಶಾಸ್ತ್ರಕಾರರಾದ ಗುರುಗಳಿಂದ ವಿದ್ಯಾಭ್ಯಾಸವನ್ನು ಪಡೆದು ತಾವು ಕವಿಗಳಾಗಲು ಒಂದು ಅಭ್ಯಾಸದಂತೆ ಶಾಸನಗಳನ್ನು ರಚಿಸಿದ್ದಿರಬೇಕು. ಹಾಗಾಗಿಯೇ ಬಂಧವನ್ನು ತೊರೆಯದ ಹಾಗೆ ಈ ಕವಿಗಳು ಕನ್ನಡ ಕಾವ್ಯಲಕ್ಷಣಗಳನ್ನು ಶಾಸನಗಳ ಮೂಲಕ ಕಟ್ಟುವ ಅಭ್ಯಾಸಿಗಳಾಗಿದ್ದರು ಎಂದು ಇಲ್ಲಿ ಸಾಧಿಸಿ ತೋರಿಸಲಾಗಿದೆ.

✓ ಕೆಲವು ವಿದ್ವಾಂಸರು ಕೇವಲ ಸಾಹಿತ್ಯ ಕೃತಿಗಳನ್ನು ನೋಡಿ ಕನ್ನಡ ಸಾಹಿತ್ಯದಲ್ಲಿ ವಿರಳವೆಂದು ಭಾವಿಸಿದದರು. ಆದರೆ ವ್ಯಕ್ತಿಚಿತ್ರಗಳು ಶಾಸನ ಸಾಹಿತ್ಯದಲ್ಲಿ ವಿಪುಲವಾಗಿ ದೊರೆಯುತ್ತದೆ. ಕನ್ನಡ ಶಾಸನಕಾವ್ಯಗಳನ್ನು ತೆಗೆದುಕೊಂಡರೆ ಪ್ರತಿಯೊಂದು ಶಾಸನವೂ ಸಹ ಅನೇಕ ವ್ಯಕ್ತಿಗಳನ್ನು ಹೀಗೆ ವರ್ಣಿಸುತ್ತವೆ. ಹೀಗೆ ವರ್ಣಿಸುತ್ತಲೇ ತಮ್ಮ ಕಾಲದ ಅನೇಕ ಮಹತ್ವದ ಸಂಗತಿಗಳನ್ನು ಕಟ್ಟಿಕೊಡುತ್ತವೆ. ಹೀಗೆ ಕಟ್ಟಿಕೊಡುವಾಗ ಹುಟ್ಟುವ ಎಲ್ಲಾ ಲೀಲೆಗಳು ಸ್ಥಳೀಯತೆಗೆ ವಿಶೇಷವಾದ

ಒತ್ತನ್ನು ನೀಡುತ್ತದೆ. ಹೀಗೆ ಶಾಸನಕಾವ್ಯಗಳು ಐತಿಹಾಸಿಕವಾದರೂ ಸಾಹಿತ್ಯ ಮತ್ತು ಸಾಂಸ್ಕೃತಿಕತೆಯನ್ನು ಪ್ರತಿಬಿಂಬಿಸುತ್ತವೆ ಎಂಬುದನ್ನು ತೋರಿಸಿಕೊಡಲಾಗಿದೆ.

✓ ಹೊಯ್ಸಳ ಸಾಮ್ರಾಜ್ಯದ ನಿಜವಾದ ಹೆಚ್ಚುಗಾರಿಕೆಯೆಂದರೆ ಕೃಷಿ ಮತ್ತು ವ್ಯಾಪಾರದಲ್ಲಿ ನಡೆಸಿದ ಮಹಾನ್ ಪರಿಷ್ಕರಣೆಗಳು. ಇದಕ್ಕೆ ನಿಜವಾದ ಕಾರಣರೆಂದರೆ ಮಹಾಮಂಡಳೇಶ್ವರರು. ಇವರು ಕೆರೆಗಳನ್ನು ನಿರ್ಮಿಸುವುದರ ಮೂಲಕ, ಕೃಷಿ ಭೂಮಿಯನ್ನು ಪರಿವರ್ತಿಸುವುದರ ಮೂಲಕ, ಸಂತೆ ಪೇಟೆಗಳನ್ನು ನಿರ್ಮಿಸುವುದರ ಮೂಲಕ ನಾಡಿನ ಆರ್ಥಿಕತೆಗೆ ಹೇಗೆ ಸಹಾಯಕಾರಿಯಾದ ವಾತಾವರಣವನ್ನು ಸೃಷ್ಟಿಸಿದರು ಎಂದು ಹಲವಾರು ಉದಾಹರಣೆಗಳ ಮೂಲಕ ಗುರುತಿಸಲಾಗಿದೆ.

✓ ಸ್ಥಳೀಯ ಸಣ್ಣ–ದೊಡ್ಡ ಕೈಗಾರಿಕೆಗಳನ್ನು ಸಬಲಗೊಳಿಸುವುದು ಮತ್ತು ನಗರ ವ್ಯವಸ್ಥೆಯ ಸೂಕ್ತವಾದ ನಿರ್ವಹಣೆಗಳ ಮೂಲಕ ಉತ್ಪಾದನೆ ಮತ್ತು ವ್ಯವಹಾರಗಳ ಸಂವರ್ಧನೆಗೆ ಅನುವು ಮಾಡಿಕೊಟ್ಟಿರುವುದನ್ನು ಅನೇಕ ಉದಾಹರಣೆಗಳ ಮೂಲಕ ಸಾಕ್ಷೀಕರಿಸಲಾಗಿದೆ.

✓ ಮಧ್ಯಕಾಲೀನ ಕರ್ನಾಟಕದಲ್ಲಿ ಹಲವಾರು ದೇವಾಲಯಗಳು ತಮಗೆ ಬಂದ ದಾನಗಳನ್ನು ಸಮರ್ಪಕವಾಗಿ ನಿರ್ವಹಿಸಲು ಮಹಾಜನರ ಮುಖಾಂತರ ಬಹಳ ಮುಖ್ಯವಾದ ಸಂಘಟನೆಯೊಂದನ್ನು ಕಟ್ಟಿಕೊಂಡಿತು. ದೇಗುಲಗಳಿಗೆ ಬರುತ್ತಿದ್ದ ದಾನ–ದತ್ತಿಗಳನ್ನು ಇದರ ಮೂಲಕ ಹೆಚ್ಚಿಸಿಕೊಳ್ಳಲಾಗುತ್ತಿತ್ತು. ದೇವಾಲಯಗಳಲ್ಲಿ ಇಂದಿನ ಬ್ಯಾಂಕಿಂಗ್ ವ್ಯವಸ್ಥೆಗೆ ಸಮೀಪದಲ್ಲಿದ್ದ ವಿನಿಮಯ ವ್ಯವಸ್ಥೆಯನ್ನು ನಡೆಸಲಾಯಿತು. ಇದನ್ನು ಶ್ರೀ ಭಂಡಾರ, ದೇಗುಲದ ಭಂಡಾರ, ದೇವ ಭಂಡಾರ ಎಂದು ಕರೆಯಲಾಗುತ್ತಿತ್ತು. ಈ ಭಂಡಾರ ಎನ್ನುವ ಬ್ಯಾಂಕಿಂಗ್ ಮಹಾಜನರು ನಿಯಂತ್ರಕರಾಗಿಯೂ ವ್ಯಾಪಾರಿಗಳು ಪೋಷಕರಾಗಿಯೂ ಇರುತ್ತಿದ್ದು, ಇದರಿಂದ ದೇವಾಲಯದ ನಿರ್ವಹಣೆಗಾಗಿ ಅನೇಕರಿಂದ ಪುದುವಟ್ಟುಗಳನ್ನು ಸಂಗ್ರಹಿಸಿ ಅದನ್ನು ಇನ್ನಿತರರಿಗೆ ಬಡ್ಡಿಗೆ ಹಣವನ್ನು ಸಾಲವಾಗಿ ನೀಡುತ್ತಿತ್ತು. ಆ ಬಡ್ಡಿಯನ್ನು ದೇವಾಲಯಗಳ ನಿರ್ವಹಣೆಗೆ ಬಳಸಲಾಗುತ್ತಿತ್ತು. ಇವುಗಳ ನಿರ್ವಹಣೆಗೆ ಮಹಾಜನರಿಗೆ ಬೆನ್ನೆಲುಬಾಗಿ ಈ ವ್ಯವಸ್ಥೆಯನ್ನು ರೂಪಿಸಿದವರು ಮಾತ್ರ ಮಹಾಮಂಡಳೇಶ್ವರರು ಎನ್ನುವ ಅಂಶವನ್ನು ಮುನ್ನೆಲೆಗೆ ತರಲಾಗಿದೆ.

✓ ಸಾಮಾಜಿಕ ಅಧ್ಯಯನಕ್ಕೆ ಬಂದಾಗ ಬಹುತೇಕ ಅಧ್ಯಯನಗಳು ಸಾಗುವ ಜಾಡನ್ನು ತೊರೆದು ಸಮಾಜಶಾಸ್ತ್ರೀಯ ಮಾನದಂಡಗಳನ್ನು ಉಪಯೋಗಿಸಿಕೊಂಡು ಅಧ್ಯಯನವನ್ನು ನಡೆಸಲಾಗಿದೆ. ಈ ವಿಷಯದಲ್ಲಿ ಈ ಪ್ರಬಂಧವು ಮಾದರಿ ಪ್ರಬಂಧವಾಗಿದೆ.

✓ ಹೊಯ್ಸಳ ಮಹಾಮಂಡಳೇಶ್ವರರ ಕಾಲಘಟ್ಟದಲ್ಲಿದ್ದ ಸ್ಥಳೀಯ ಸಮಾಜದ ರಚನೆ, ಸಾಮುದಾಯಿಕ ಪ್ರಗತಿಗೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕಾರಣವಾಗಿದ್ದ ಕುಟುಂಬ ಮತ್ತು ಶಿಕ್ಷಣದ ಪಾತ್ರವನ್ನು ಸವಿವರವಾಗಿ ಚಿತ್ರಿಸಲಾಗಿದೆ.

✓ ಹೊಯ್ಸಳ ಮಹಾಮಂಡಳೇಶ್ವರರ ಆಳ್ವಿಕೆಯ ಪ್ರದೇಶಗಳಲ್ಲಿ ಅಸ್ತಿತ್ವದಲ್ಲಿದ್ದ ಸಾಮಾಜಿಕ ಪ್ರಕ್ರಿಯೆಗಳಾದ ಸ್ವಾಂಗೀಕರಣ, ಸಂಘರ್ಷ, ಸಹಕಾರ ಇತ್ಯಾದಿಗಳನ್ನು ಪರಿಕಲ್ಪನಾತ್ಮಕವಾಗಿ ವಿಶದೀಕರಿಸಲಾಗಿದೆ.

✓ ಸಾಂಸ್ಕೃತಿಕ ಪ್ರಭಾವಳಿಯಲ್ಲಿ ಎದ್ದು ಕಾಣುವ ಮರಣಪದ್ದತಿಗಳಾದ ವೀರಪರಂಪರೆ ಸಹಗಮನ ಮತ್ತು ಸಮಾಧಿ ಮರಣ ಪದ್ದತಿಗಳನ್ನು ಮೊಟ್ಟಮೊದಲ ಬಾರಿಗೆ ಭೌತ ಮತ್ತು ಅಭೌತ ಸಂಸ್ಕೃತಿಗಳ ಸಮ್ಮಿಲನವೆಂಬಂತೆ ಬಗೆಯಲಾಗಿದೆ.

✓ ವೀರಮರಣಗಳ ಪರಂಪರೆಯಲ್ಲಿ ಬರುವ ಗರುಡರ ಬಗ್ಗೆ ಇದೇಮೊದಲ ಬಾರಿಗೆ ಕೆಲವು ಹೊಸ ವಿಷಯಗಳನ್ನು ವಿವರಿಸಲಾಗಿದೆ. ಇದುವರೆಗೂ ಎಂ ಎಂ ಕಲಬುರ್ಗಿ ಅವರಾದಿಯಾಗಿ ಅನೇಕ ವಿದ್ವಾಂಸರು ಗರುಡರು "ಆಱುಬಾರಿ ಗರುಡನನನ್ನು ಅಪ್ಪಿ" ಎಂಬ ವಿಷಯವನ್ನು ಹಾಗೂ "ಕನ್ನಡಿಗ ಮನೆತನಯಾಳ್ತನಗೈವರು" ಎನ್ನುವ ಪಾರಿಭಾಷಿಕಗಳನ್ನು ಬಿಡಿಸುವ ಪ್ರಯತ್ನವನ್ನು ಮಾಡಲಾಗದೇ ಇದ್ದ ಸಂಗತಿಗಳನ್ನು ಯಶಸ್ವಿಯಾಗಿ ಅಧಿಕೃತವಾದ ರೀತಿಯಲ್ಲಿ ವಿಶ್ಲೇಷಿಸಿರುವುದು ಪ್ರಸ್ತುತ ಪ್ರಬಂಧದ ಸಂಶೋಧನ ಫಲಿತಗಳಲ್ಲಿ ಉತ್ತಮವಾದುದು ಎನ್ನುವ ಸಮಾಧಾನ ಈ ಪ್ರಬಂಧದ್ದು.

✓ ಘಟಿಕಾಸ್ಥಾನಗಳ ವಿಷಯ ಬಂದಾಗ ಹೆಂಜೇರೇ ಏಕೆ ಬಹಳ ಮುಖ್ಯ ಘಟಿಕಾಸ್ಥಾನವಾಗಿತ್ತು ಎಂಬ ಪ್ರಶ್ನೆಯನ್ನು ಇಟ್ಟುಕೊಂಡು ಅಲ್ಲಿ ಉನ್ನತ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವಂತಹ ವಾತಾವರಣವಿತ್ತು. ಹಾಗೂ ಇಲ್ಲಿ ಅತ್ಯಂತ ಮುಂದುವರೆದ ಶಿಕ್ಷಣಪಠ್ಯಗಳು ಇದ್ದವು. ಇದಕ್ಕೆ ಕಾರಣ ಇಲ್ಲಿನ ಶೈವಯತಿಗಳು ಎಂಬುದನ್ನು ಮುನ್ನೆಲೆಗೆ ತರಲಾಗಿದೆ.

✓ ನಗರೀಕರಣಕ್ಕೂ ಹಾಗೂ ವ್ಯಾಪಾರೋದ್ಯಮಕ್ಕೂ ಬೆಳಗೊಳತೀರ್ಥವು ಇಂಬಾಗುವುದಕ್ಕೆ ನಿಜವಾದ ಕಾರಣ ಗಂಗರಾಜನೆಂದು ಪ್ರಸ್ತುತ ಪ್ರಬಂಧವು ಗಾಢವಾಗಿ ಪ್ರತಿಪಾದಿಸುತ್ತದೆ. ಗೋವಿದೇವನ ವಿಷಯದಲ್ಲಿ ಪುಟ್ಟ ತೊಡಕು ಸೃಷ್ಟಿಯಾಗಿತ್ತು. ಅದೇನೆಂದರೆ, ಗೋವಿದೇವನಿಗಿರುವ "ಶ್ರೀ ಜೈನಮಾರ್ಗ ಸ್ಥಗಿತ ಗುಣಕಳಾಳಾಪನುದ್ಯತ್ಪ್ರತಾಪಂ" ಎಂಬ ಅಭಿದಾನವನ್ನು ಆತ ಜೈನಧರ್ಮದ ಬೆಳವಣಿಗೆಗೆ ತಡೆಹಾಕಿ ಶೈವಧರ್ಮ ಮೆರೆಯಲು ಅವಕಾಶ ಮಾಡಿಕೊಟ್ಟಿದ್ದರಿಂದ ಸಂದಿದೆ ಎಂದು ಕೆಲವು ವಿದ್ವಾಂಸರು ಅರ್ಥೈಸಿದ್ದಾರೆ. ಇದನ್ನು ಮೊದಲ ಬಾರಿಗೆ ಈ ನಿಬಂಧವು ತಿರಸ್ಕರಿಸಿದ್ದು ಲಭ್ಯವಾದ ಆಕರಗಳನ್ನು ಸಮರ್ಥವಾಗಿ ದುಡಿಸಿಕೊಂಡು ಇದನ್ನು ನಿರಾಕರಿಸಲಾಗಿದೆ. ಗೋವಿದೇವನು ಜೈನಮತಕ್ಕೆ ಅಪರಿಮಿತವಾದ ಕೊಡುಗೆಗಳನ್ನು ನೀಡಿದ ಅಧಿಕಾರಿಯಾಗಿದ್ದನು. ಗೋವಿಯ ಮಡದಿ ಶ್ರಿಯಾದೇವಿ, ಮಹಾದೇವಿಯರು ಜೈನರಾಗಿದ್ದರು. ಚಾಂದ್ರಾಯಣ ಮುನಿಯ ಪ್ರತಿಮೆಯನ್ನು ಹುಳಿಯಾರಿನಲ್ಲಿ ಶ್ರಿಯಾದೇವಿಯು ಮಾಡಿಸಿದುದನ್ನು ತಿಳಿಸುವ ಶಾಸನದಲ್ಲಿ ಗೋವಿದೇವನನ್ನು "ಶ್ರೀಚಾನ್ದ್ರಾಯಣ ದೇವರಗುಡ್ಡ" ಎಂದು ಕರೆಯಲಾಗಿದೆ. ತನ್ನ ಸತಿ ಮಹಾದೇವಿಯು ಮರಣವನ್ನಪ್ಪಿದಾಗ ಅವಳಿಗೆ ಪರೋಕ್ಷ

ವಿನಯವಾಗಿ ಗುಣಚಂದ್ರಸಿದ್ಧಾಂತದೇವರ ಶಿಷ್ಯರಾದ ಶ್ರೀಮಾಣಿಕನಂದಿಸಿದ್ಧಾಂತದೇವರಿಗೆ ಹೆಗ್ಗರೆಯಲ್ಲಿ ಚನ್ನಪಾರ್ಶ್ವದೇವರ ಬಸದಿಯನ್ನು ನಿರ್ಮಿಸಿದನು. ಅಲ್ಲದೆ ಇವನ ಆಡಳಿತ ವ್ಯಾಪ್ತಿಯಾದಂತಹ ಮಗರೆನಾಡಿನಲ್ಲಿ ಮೊದಲಿನಿಂದಲೂ ಜೈನಧರ್ಮವು ಪ್ರವರ್ಧಮಾನದಲ್ಲಿದ್ದುದಕ್ಕೆ ಈ ನಾಡಿನ ಶಾಸನಗಳು, ಜೈನಬಸದಿಗಳು ಸಾಕ್ಷಿಯಾಗಿವೆ. ಹಾಗಾಗಿ 'ಜೈನಮಾರ್ಗವನ್ನು ಬೆಳವಣಿಗೆ ಹೊಂದಲು ತಡೆಹಾಕಿದ' ಎಂದು ಅರ್ಥೈಸಿರುವುದು ಸರಿಯಲ್ಲ. ಬದಲಿಗೆ **"ಶ್ರೀಜೈನಮಾರ್ಗ ಸ್ಥಗಿತ ಗುಣಕಳಾಳಾಪ"** ಎಂಬುದನ್ನು ತನ್ನ ಆಡಳಿತಾತ್ಮಕ ಪ್ರದೇಶದಲ್ಲಿ, ತನ್ನ ಆಳ್ವಿಕೆಯ ಸಂದರ್ಭದಲ್ಲಿ ಗೋವಿದೇವನು ಜೈನಧರ್ಮವನ್ನು **'ನಿಲ್ಲಿಸಿದ'** ಅಂದರೆ ಅಳಿದುಹೋಗುತ್ತಿದ್ದ ಧರ್ಮವನ್ನು ಉಳಿಸಿದ; ಸ್ಥಾಪಿಸಿದ ಎಂದು ಅರ್ಥಾನ್ವಯ ಮಾಡುವುದು ಯುಕ್ತವೆಂದು ತೋರುತ್ತದೆ ಎಂದು ನಿರ್ಧರಿಸಿದ್ದು ಈ ಪ್ರಬಂಧದ ಸಾರ್ಥಕ ಫಲಿತಗಳಲ್ಲಿ ಒಂದು.

✓ ಎಲ್ಲಕ್ಕಿಂತ ಹೆಚ್ಚಾಗಿ ಇದುವರೆಗೂ ಅನೇಕರಿಂದ ಕಡೆಗಣನೆಗೆ ಒಳಪಟ್ಟ ಮಹಿಳೆಯರ ಕೊಡುಗೆಗಳನ್ನು ಉದಾಹರಣೆಗಳ ಮೂಲಕ ಈ ಪ್ರಬಂಧದುದ್ದಕ್ಕೂ ಪ್ರತಿಯೊಂದು ವಿಷಯದಲ್ಲಿಯೂ ಹೆಚ್ಚಾಗಿ ಬಳಸಲಾಗಿದೆ. ಪುರುಷರಿಗಿಂತಲೂ ಮಹಿಳೆಯರ ಬಗೆಗಿನ ಉದಾಹರಣೆಗಳನ್ನು ಹೆಚ್ಚಿಗೆ ಉಪಯೋಗಿಸಿರುವುದು ಕೂಡ ಈ ನಿಬಂಧದ ಹೆಚ್ಚುಗಾರಿಕೆಯಾಗಿದೆ.